SHIKARI: A Novel in Kannada by Shri Yeshwant Chittal, Publised by K. Jayacharya, K.A.S., Additional Director, Directorate of Kannada and Culture(Vishwa Kannada Sammelana) 14/3 A, Nrupathunga Road, Bangalore 560002.





Third Edition

ಬೆಲೆ ರೂ. 3-00

ಮುದ್ರಕರು:

ವೆಸ್ಲಿ ಪ್ರೆಸ್, ಮೈಸೂರು.

ಆರ್. ಗುಂಡೂರಾವ್ | ವಿಧಾನಸೌಧ
ಮುಖ್ಯಮಂತ್ರಿ | ಬೆಂಗಳೂರು

ದಿನಾಂಕ ೧೮-೯-೧೯೮೨

ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲ ಚಿತ್ರಿಸಿ ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ

ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡುರಾವ್

ಮುಖ್ಯಮಂತ್ರಿಗಳು

## ಅಧ್ಯಾಯ ಒಂದು

ಹೇಳದೇ ಕೇಳದೇ ಎಂಬಂತೆ ಉದ್ಭವಿಸಿ, ಧುತ್ ಎಂದು ಕಣ್ಣೆದುರಿಗೆ ಹಾಜರಾದ ಪರಿಸ್ಥಿತಿಯ ಅರ್ಥ ನಿಚ್ಚಳವಾಗುತ್ತ ಹೋದ ಹಾಗೆ ನಾಗಪ್ಪನಿಗೆ ತಾನು ಬಹಳ ವರ್ಷಗಳ ಹಿಂದೆ ಓದಿದ ಕಾಫ್ಕಾನ 'ಟ್ರಾಯಲ್' ಕಾದಂಬರಿಯ ನಾಯಕ 'ಕೇ' ನೆನಪಿಗೆ ಬರಹತ್ತಿದ: ಅವನ ಹಾಗೇ ತನ್ನ ಬಗೆಗೂ ಯಾರೋ ಚಾಡಿ ಹೇಳುತ್ತಿರಬೇಕು. ಇಲ್ಲವಾದರೆ, ಇದ್ದಕ್ಕಿದ್ದಂತೆ ನಿನ್ನ ಬೆಳಿಗ್ಗೆ, ಆಫೀಸಿಗೆ ಹೋಗುವ ತಯಾರಿ ಮಾಡುತ್ತಿದ್ದ ಹೊತ್ತಿನಲ್ಲೇ ಕಂಪನಿಯ ಪರ್ಸೊನೆಲ್ ಆಂಡ್ ಎಡ್ಮಿನಿಸ್ಟ್ರೇಶನ್- ಮ್ಯಾನೇಜರರಿಂದ ಆ ದುಷ್ಟ ಆದೇಶ ಬರುತ್ತಿರಲಿಲ್ಲವೇನೋ ಎಂದೆನ್ನಿಸಿದಾಗ ಸಣ್ಣಗೆ ನಡುಗಿದ: ಒಂದು ಗಂಭೀರ ಆಪಾದನೆಯ ಕಾರಣದಿಂದ ನಿಮ್ಮನ್ನು ಕೂಡಲೆ ಕೆಲಸದಿಂದ ಸಸ್ಪೆಂಡ್ ಮಾಡಬೇಕಾಗಿ ಬಂದಿದೆ. ಯಾಕೆ ಎನ್ನುವದನ್ನು ಆದಷ್ಟು ಬೇಗ ತಿಳಿಸುತ್ತೇವೆ. ಆ ವರೆಗೆ ಆಫೀಸಿಗೆ ಬರಕೂಡದು ಎನ್ನುವದು ಆದೇಶದ ಮಜಕೂರಾಗಿತ್ತು. ಜತೆಗೆ ಒಂದು ಸಲಹೆ ಕೂಡ: ಆರೋಪ ಸುಳ್ಳಾದ ಪಕ್ಷದಲ್ಲಿ ನಿಮಗೆ ಯಾವುದೇ ರೀತಿಯಿಂದ ಹಾನಿಯಾಗಬಾರದು ಎಂಬ ದೃಷ್ಟಿಯಿಂದ ಕೂಡಲೇ ಒಂದು ತಿಂಗಳ ರಜೆಯ ಬಗ್ಗೆ ಅರ್ಜಿ ಮಾಡುವದು ಒಳ್ಳೆಯದು.

ಅರ್ಜಿಯನ್ನೇನೋ ಕಳಿಸಿದ್ದ: ಇದ್ದಕ್ಕಿದ್ದ ಹಾಗೆ ಕೆಲಸಕ್ಕೆ ಹೋಗುವದನ್ನು ನಿಲ್ಲಿಸಿ ತಾನು ಮನೆಯಲ್ಲಿ ಇರಬೇಕಾಗಿ ಬಂದದ್ದರ ಹಿಂದಿನ ರಹಸ್ಯವನ್ನು ಕಾಪಾಡಿಕೊಳ್ಳುವ ಬೇರೆ ಉಪಾಯ ತಕ್ಷಣ ಹೊಳೆಯದೆ ಇದ್ದುದರಿಂದ. ಆದರೆ ತನಗೆ ಬೇಡವಾದ ರಜೆಗೆ ಕಾರಣವಾದದ್ದರ ಬಗ್ಗೆ ಎಷ್ಟೆಲ್ಲ ರೀತಿಯಿಂದ ವಿಚಾರ ಮಾಡಿ ತಲೆ ಕೆಡಿಸಿಕೊಂಡರೂ ಯಾವುದೂ ಬಗೆಹರಿಯಲಿಲ್ಲ. ಈ ವಿಪತ್ತು ಎರಗಿದ್ದು ತನ್ನ ಮೇಲೇ ತಾನೆ ಎನ್ನುವುದರ ಬಗ್ಗೆ ಕೂಡ ಕೂಡಲೇ ವಿಶ್ವಾಸ ಮೂಡಲಿಲ್ಲ. ಯಾಕೆಂದರೆ, ಇನ್ನು ಒಂದೆರಡು ತಿಂಗಳಲ್ಲಷ್ಟೇ, ಹೆಚ್ಚಿನ ತರಬೇತಿಗಾಗಿ ಅಮೇರಿಕೆ ಹೋಗುವ ಅವನ ಇಷ್ಟು ವರ್ಷಗಳ ಕನಸು ನಿಜವಾಗುವ ಹವಣಿಕೆಯಲ್ಲಿತ್ತು. ಅವನು ಸದ್ಯ ಬಹಳ ಖುಷಿಯಿಂದ ತೊಡಗಿಸಿಕೊಂಡದ್ದೇ ಈ ಪ್ರಯಾಣದ ಸಿದ್ಧತೆಯಲ್ಲಾಗಿತ್ತು. ತನ್ನ ಪ್ರಯಾಣದ

ಸಿದ್ಧತೆಯೇ ಈ ಆಪತ್ತಿನ ಉದ್ಭವಕ್ಕೆ ಕಾರಣವಾಗಿರಲಿಕ್ಕಿಲ್ಲ ತಾನೇ ಎಂದು ಥಟ್ಟನೆ ಹೊಳೆದ ಒಂದು ವಿಚಾರ ಎಡೆಮಾಡಿಕೊಟ್ಟ ಅನುಮನ, ಹೊತ್ತು ಹೋದ ಹಾಗೆ ಗಟ್ಟಿಯಾಗಹತ್ತಿತು. ಕೊನೆಗೂ ಫಿರೋಜ್ ತನ್ನ ಬಗೆಗಿನ ವೈರವನ್ನು ಬಿಟ್ಟು ಕೊಟ್ಟಿಲ್ಲ ಹಾಗಾದರೆ: ಧೂರ್ತ ರಾಜಕಾರಣಿಯಾದ ಈ ದುಷ್ಟ ಒಂದೂ ಮಗನೇ ಹೂಡಿದ ಒಳಸಂಚಿನ ಅಂಗವಿದು. ಆರೋಪವಾದರೂ ಏನು ಎನ್ನುವದು ಗೊತ್ತಾದರೆ ಎಲ್ಲವೂ ಸ್ಪಷ್ಟವಾಗಬಹುದಿತ್ತು. ಆದರೆ ಅದು ಗೊತ್ತಾಗಲು ಪರ್ಸೊನೆಲ್-ಮ್ಯಾನೇಜರರು ಕಳಿಸುತ್ತೇನೆಂದೆ ಪತ್ರದ ದಾರಿಯನ್ನು ಕಾಯುವುದು ಬಿಟ್ಟು ಬೇರೆ ಗತಿಯಿರಲಿಲ್ಲ. ಆದರೆ ಕಾಯುವದೇ ಅಸಾಧ್ಯವಾದಾಗ ನಾಗಪ್ಪನಿಗೆ ಯಾವುದೋ ಸೈಕಾಲಾಜೀ ಪುಸ್ತಕವೊಂದರಲ್ಲಿ ಓದಿದ್ದು ನೆನಪಾಗಹತ್ತಿತು: One of the greatest problems of the human mind is the structuring of Time. ಆಫೀಸಿನ ಕೆಲಸದಲ್ಲಿ ತೊಡಗಿದ್ದಾಗ ಕಾಡಿರದ ಪ್ರಶ್ನೆ ಈಗ ಕೆಲಸವಿಲ್ಲದೇ ರಿಕಾಮಿ ಕುಳಿತವನ ಅರಿವಿನಲ್ಲಿ ಹಠಾತ್ತನೆ ಮೂಡಿಬಂದು ತಲ್ಲಣಗೊಳಿಸಹತ್ತಿತು. ಹಾಗೆಂದೇ, ಈ ಆಯಆಕಾರಗಳಿಲ್ಲದ, ಗೊತ್ತು-ಗುರಿಯಿಲ್ಲದ ಹೊತ್ತಿಗೆ ಶಿಲ್ಪ ಕಡೆಯುವ, ಒಳಗಿನಿಂದ ಎದ್ದೆದ್ದು ಬರುತ್ತಿದ್ದ ವಿದ್ರೂಪ ಭಯಕ್ಕೆ ರೂಪ ಮೂಡಿಸುವ ಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಂಡ. ಬೆಳಗಿನಿಂದ ರಾತ್ರಿಯ ತನಕ ಕ್ಷಣದಿಂದ ಕ್ಷಣಕ್ಕೆ ಬದಲಾಗುತ್ತ ನಡೆದ ಮೂಡಿನಲ್ಲಿ; ಅದು ದಾಖಲೆಯಾಗುತ್ತಿದ್ದ ಮಾತಿನ ಧಾಟಿಯಲ್ಲಿ ಒಳಗಿನ ನಡುಕವನ್ನು ಅಡಗಿಸುವ ಹೋರಾಟದ್ದೇ ಮೇಲುಗೈಯಾದಂತಿತ್ತು:

"ಟಿಪ್ಪಣಿ ಒಂದು: ಕೆಲಸಕ್ಕೆ ಹೋಗುವದನ್ನು ನಿಲ್ಲಿಸಿದ ಎರಡನೇ ದಿನ. ನಸುಕಿನಲ್ಲಿ ಬೆಳಕು ಚಿಳಿ-ಮಿಳಿ ಕಣ್ಣುಬಿಡುತ್ತ ಹೊಸತೇ ಒಂದು ದಿನ ಹುಟ್ಟಿಬರುತ್ತಿದ್ದುದನ್ನು ನೋಡುತ್ತಿದ್ದ ಮುಹೂರ್ತದಲ್ಲಿ ಒಡಮೂಡಿದ್ದು: ನಾನು ಹೀಗೇ ವಿಚಾರಮಾಡುತ್ತ ಹೋದಲ್ಲಿ ಒಂದೇ ಹುಚ್ಚರ ಆಸ್ಪತ್ರೆಯಲ್ಲಿ ಇಲ್ಲವೇ ಆತ್ಮಹತ್ಯೆಯಲ್ಲಿ ಕೊನೆಗೊಳ್ಳಬಹುದು. ಇವು ಎರಡೂ ಬದುಕಿಗೆ ಎರವಾಗುವ ರೀತಿಗಳೇ. ಬದುಕಿಗೆ ಅರ್ಥವೇನು ಎಂದು ಕೇಳುತ್ತ ಕೂಡ್ರುವದು ಏನು ಹುಡುಕಾಟದ ಲಕ್ಷಣವೊ, ಇಲ್ಲ, ಬದುಕಿನಲ್ಲಿ ವಿಶ್ವಾಸ ಕಳಕೊಂಡದ್ದರ ಲಕ್ಷಣವೋ? ತುಂಬ, ಲವಲವಿಕೆಯಿಂದ, ಆನಂದದಿಂದ, ಆಸ್ಥೆಯಿಂದ ಬದುಕುವದು, ಬದುಕಬೇಕು ಅನ್ನಿಸುವದು ಎಲ್ಲ ಜೀವಕ್ರಿಯೆಯ ಗುಣಧರ್ಮ

ಅಲ್ಲವೆ? ಜೀವಿಸುವುದರಲ್ಲೇ ಅದಮ್ಯ ಉತ್ಸಾಹ ಇಟ್ಟುಕೊಂಡ ಉಳಿದ ಜೀವ ಕೋಟಿಗಳಲ್ಲಿ ಏಳದ ಪ್ರಶ್ನೆ ನನ್ನ ಬದುಕಿನಲ್ಲೇ ಏಳುವುದಕ್ಕೆ ಮುಖ್ಯ ಕಾರಣ ನಾನು ಇಷ್ಟು ದಿನ ಜಂಭ ಕೊಚ್ಚಿಕೊಂಡಂತೆ ನನ್ನ ದಾರ್ಶನಿಕ ದೃಷ್ಟಿಯಾಗಿರದೆ, ಬದುಕಿಗೆ, ಜೀವಕ್ರಿಯೆಗೆ ಮೂಲ ಸೆಲೆಯಾದ ಉತ್ಸಾಹದ ಅಭಾವವಾಗಿರಬಹುದು, ಬದುಕಿನಲ್ಲಿ ಅರ್ಥ ಹುಡುಕುವದೇ ತಪ್ಪೇನೋ. ಅರ್ಥ ಇದ್ದರಲ್ಲವೇ ಹುಡುಕುವದು. ಅದು ನಾವು ಹುಟ್ಟಿಸಿಕೊಂಡದ್ದು. ಉತ್ಸಾಹವೇ ಇಲ್ಲದಿದ್ದಲ್ಲಿ ಸೃಜನಶೀಲತೆ ಹೇಗೆ ಸಾಧ್ಯ? ಸೃಷ್ಟಿಕಾರ್ಯ ಹೇಗೆ ಸಾಧ್ಯ? ಅರ್ಥ ಹೇಗೆ ಹುಟ್ಟಬೇಕು...."

"ಟಿಪ್ಪಣಿ ಎರಡು: ಬೆಳಗಿನ ಉಪಾಹಾರ ಮುಗಿಸಿಬಂದು ವಿರಾಮ-ಖುರ್ಚಿಯಲ್ಲಿ ಮೈ ಚಲ್ಲಿ ವಿರಮಿಸುವಾಗ ಹೊಳೆದದ್ದು: ಜೀವಶಕ್ತಿಯ ಮೂಲ ಸೆಲೆಗಳಲ್ಲಿ ಕಾಮಕ್ಕಿಂತ ಹೆಚ್ಚು ಬಲಶಾಲಿಯಾದದ್ದು ತನ್ನ ಪ್ರಭುತ್ವಕ್ಕೆ ಅಧೀನವಾದ ಒಂದು ಭೌಗೋಲಿಕ ಪ್ರದೇಶದ ಆವಶ್ಯಕತೆಯೆಂದು ನಿಸರ್ಗ-ವಿಜ್ಞಾನಿಗಳಿಂದ ಈಗ ಗೊತ್ತಾಗಿದೆ. ಎಲ್ಲ ಪ್ರಾಣಿವರ್ಗಗಳಲ್ಲಿ-ಪಶು, ಪಕ್ಷಿ, ಜಲಚರಗಳಲ್ಲಿ ಕೂಡ-ಈ 'ಪ್ರದೇಶ-ಪ್ರವೃತ್ತಿ' ಸ್ಪಷ್ಟವಾಗಿ ಕಂಡುಬಂದಿದೆಯಂತೆ. ಮಾನವನಲ್ಲೂ ಈ ಮೂಲಪ್ರವೃತ್ತಿಯೇ ಆಸ್ತಿಯ ಪ್ರೀತಿಯಾಗಿ, ಪ್ರಾಂತದೇಶಗಳ ಪ್ರೀತಿಯಾಗಿ ವ್ಯಕ್ತಗೊಂಡಿದೆ ಎಂದು ಈ ತಜ್ಞರ ಊಹೆ. ಇರಬಹುದೇನೋ. ಆದರೆ ನನ್ನ ಈ ವರೆಗಿನ ಆಯುಷ್ಯದಲ್ಲಿ ಬಂದ ಅನುಭವಗಳನ್ನೇ ನಂಬಿ ಹೇಳುವುದಾದರೆ ಆಸ್ತಿಗಿಂತ ಹೆಚ್ಚು ಪ್ರಭಾವಶಾಲಿಯಾದ ಪ್ರೇರಕಶಕ್ತಿಯೆಂದರೆ - ಪ್ರತಿಯೊಬ್ಬ ವ್ಯಕ್ತಿಗೆ ತನ್ನಲ್ಲಿಯ ಕರ್ತೃತ್ವಶಕ್ತಿಯ ಪುರುಷಾರ್ಥದ ಅಭಿವ್ಯಕ್ತಿಗೆ ಬೇಕೆನ್ನಿಸುವ ಕಾರ್ಯಕ್ಷೇತ್ರವೇ-field of action. ಈ ಕಾರ್ಯಕ್ಷೇತ್ರದಲ್ಲಿ, ಅದು ಎಷ್ಟೇ ಸೀಮಿತವಾದದ್ದಿರಲೊಲ್ಲದೇಕೆ, ತನ್ನ ಪ್ರತಿಭೆಯಿಂದ ಬೆಳಕು ಬೀರುವ, ಬೆಳಗಿ ನಿಲ್ಲುವ, ಪ್ರಭುತ್ವ ಪಡೆಯುವ ಅಭಿಲಾಷೆ. ಇದುವೇ ಮಾನವನ ಎಲ್ಲ ಚಟುವಟಿಕೆಗಳ ಹಿಂದಿನ ಮೂಲಪ್ರವೃತ್ತಿಯ ಬಲವಿದ್ದ ಪ್ರೇರಣೆಯೆಂದು ನಾನು ನಂಬುತ್ತೇನೆ..."

"ಟಿಪ್ಪಣಿ ಮೂರು: ಮಧ್ಯಾಹ್ನದ ಊಟದ ನಂತರ ಸಣ್ಣ ನಿದ್ದೆಯಾದ ಮೇಲೆ ಚಹದ ದಾರಿ ಕಾಯುತ್ತ ಕೂತಿದ್ದಾಗ ಅನ್ನಿಸಿದ್ದು: ನನ್ನೆಲ್ಲ ಕರ್ತೃತ್ವಶಕ್ತಿಯನ್ನು ನಾನು ಸದ್ಯ ಕೆಲಸ ಮಾಡುತ್ತಿದ್ದ ಈ ಕಂಪನಿಯನ್ನು ಕಟ್ಟುವುದರಲ್ಲಿ ತೊಡಗಿಸದೇ

ಇದ್ದಲ್ಲಿ, ಇಲ್ಲವೇ ಹಾಗೇ ಕಟ್ಟಿ ಅದನ್ನು ಇಂದಿನ ಭರಭರಾಟಿಯ ಸ್ಥಿತಿಗೆ ತರುವುದರಲ್ಲಿ ನಾನು ಬಹು ದೊಡ್ಡ ಭಾಗ ವಹಿಸಿದ್ದೇನೆ ಎಂಬ ಭ್ರಮೆಯನ್ನು ನಾನು ಮೊದಲಿನಿಂದಲೂ ಇಟ್ಟುಕೊಳ್ಳದೇ ಇದ್ದಲ್ಲಿ, ಇಂದಿನ ಈ ದುಃಖದಾಯಕ ಸ್ಥಿತಿಗೆ ಬರುತ್ತಿರಲಿಲ್ಲವೇನೋ.... ಈ ರೀತಿಯ ವಿಚಾರಕ್ಕೆ ಕೊನೆಯೆಲ್ಲಿ? ಮನುಷ್ಯ, ದಾರಿಗಳ ಕೂಟಸ್ಥಾನದಲ್ಲಿ ನಿಂತಾಗ ಇದಿರು ತೆರೆದು ನಿಂತವುಗಳಲ್ಲಿ ಯಾವುದನ್ನು ಬೇಕಾದರೂ ಹಿಡಿದು ನಡೆಯುವ ಆಯ್ಕೆ ತನಗಿದೆ, ಆಯ್ಕೆಯ ಸ್ವಾತಂತ್ರ್ಯ ತನಗಿದೆ ಎಂಬ ಭಾವನೆಯನ್ನು ಆಂತರ್ಯದಲ್ಲಿ ಹುಟ್ಟಿಸಿಕೊಂಡಿರುವಾಗಲೂ ಕೊನೆಯಲ್ಲಿ ಅವನು ಹಿಡಿಯುವದು, ಹಾಗೆ ಹಡಿಯುವ ಸಾಧ್ಯತೆ ಅವನಿಗಿರುವದು ಒಂದೇ ಒಂದನ್ನು ಮಾತ್ರ. ಮತ್ತು ಹಾಗೆ ಪ್ರತ್ಯಕ್ಷವಾಗಿ ಹಿಡಿಯುವ ಕ್ರಿಯೆಯೇ ಅವನ ವ್ಯಕ್ತಿತ್ವವನ್ನೂ ನಿಶ್ಚಯಿಸುತ್ತದೆ. ನಮ್ಮ ಆಯ್ಕೆ ಬಾಹ್ಯ-ಪ್ರೇರಣೆಗೆ ನಾವು ಕೊಟ್ಟ ಜವಾಬು ಅಲ್ಲ. ತದ್ವಿರುದ್ಧವಾಗಿ, ನಾವು ಕೊಟ್ಟ ಜವಾಬು ನಮಗಾದ ಪ್ರೇರಣೆಗೆ, ತನ್ಮೂಲಕ ನಮ್ಮ ವ್ಯಕ್ತಿತ್ವದ ಸಾಧ್ಯತೆಗಳಿಗೆ ಆಕಾರ ಕೊಡುತ್ತದೆ ಎನ್ನಬೇಕು. ಟಾಲ್ಸ್ಟಾಯ್ ಅವರ Death of Ivan Ilych ಎಂಬ ಸಣ್ಣ ಕತೆಯಲ್ಲಿ ಕ್ಯಾನ್ಸರ್ ಲ ಬದುಕುವ ಭರವಸೆ ಇಲ್ಲದೇ ಹಾಸಿಗೆ ಹಿಡಿದ ಇಲ್ಲಿಚ್ ತನ್ನ ಈವರೆಗಿನ ಆಯುಷ್ಯವನ್ನು ವಿಮರ್ಶಿಸಿಕೊಂಡಾಗ ಅದನ್ನು ಬೇರೊಂದು ರೀತಿಯಲ್ಲಿ ತಾನು ಬದುಕಬಹುದಾಗಿತ್ತಲ್ಲ ಎಂಬ ಹಳಹಳಿ ತುಂಬಿದ ನಿಲುಗಡೆಗೆ ಬರುತ್ತಾನೆ. ಕ್ಯಾನ್ಸರಿನಿಂದಾಗಿ ನಿಶ್ಚಿತವಾಗಿ ಬರಲಿದ್ದ ಸಾವಿಗಿಂತ ಹೀಗೆ ಆಯುಷ್ಯದ ಕೊನೆಯ ಗಳಿಗೆಯಲ್ಲಿ ಹುಟ್ಟುವ ಇಂತಹ ಭಾವನೆ ಹೆಚ್ಚು ದಾರುಣವಾದದ್ದೆಂದು ಟಾಲ್ಸ್ಟಾಯ್ ಅವರಿಗೆ ಸೂಚಿಸುವುದಿತ್ತೆಂಬಂತೆ ನೆನಪು...."

"ಟಿಪ್ಪಣಿ ನಾಲ್ಕು: ಮೂರುಸಂಜೆಯಲ್ಲಿ ಮಬ್ಬುಗತ್ತಲೆ ಕವಿಯುತ್ತಿರುವಾಗ ಅಮ್ಮನ ನೆನಪಿನಿಂದ ತುಂಬಿಬರುತ್ತಿದ್ದ ಕಣ್ಣುಗಳಿಂದ ಕಂಡದ್ದು: ಪ್ರತಿ ಕ್ಷಣ ಇಟ್ಟ ಹೆಜ್ಜೆಯನ್ನು ಹಿಂತೆಗೆದುಕೊಳ್ಳುವದು ಶಕ್ಯವಿಲ್ಲದ ರೀತಿಯಲ್ಲೇ ಬಾಳಿನ ಹಾದಿಯನ್ನು ಸವಿಯುತ್ತೇವೆ. ಬಾಳಿನ ಹಾದಿ ಎಂದೆಂದೂ ಒಮ್ಮುಖವಾದದ್ದೇ? ಒಮ್ಮೊಮ್ಮೆ ಹೀಗೂ ಅನ್ನಿಸಿದ್ದುಂಟು: ನಾವು ದಾರಿಗಳ ಕೂಟಸ್ಥಾನಕ್ಕೆ ಬರುವ ಮೊದಲೇ ನಮ್ಮನ್ನು ಪಥಿಕರನ್ನಾಗಿ ಸ್ವೀಕರಿಸಿದ ದಾರಿ ನಮ್ಮ ಬರವಿನ ಹಾದಿಯನ್ನೇ ಕಾಯುತ್ತಿರುತ್ತದೆ. ನಾನು ಈಗಿನ ಕಂಪನಿಯನ್ನು ಬಿಟ್ಟು ಬೇರೆ ಕಂಪನಿಯಲ್ಲಿ ಕೆಲಸ ಹಿಡಿದಿದ್ದರೆ? ಇಲ್ಲ, ಕಂಪನಿಯ ಕೆಲಸವನ್ನು ಬಿಟ್ಟು

ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದರೆ? ಈ ದೇಶದಲ್ಲೇ ಹುಟ್ಟಿರದಿದ್ದರೆ? ಒಬ್ಬಂಟಿಗನಾಗಿರುವ ಬದಲು ಮದುವೆಯಾಗಿ ಸಂಸಾರ ಹೂಡಿ ಮಕ್ಕಳನ್ನು ಹಡೆದಿದ್ದರೆ? ಅಥವಾ, ನನ್ನಂತೆ ನನ್ನ ಅಪ್ಪನಾದವನೇ ಮದುವೆಯಾಗಿರದಿದ್ದರೆ? ಅಥವಾ, ನಾನು ಈಗಿನ. ಅಪ್ಪ-ಅಮ್ಮಂದಿರ ಬದಲು ಬೇರೆ ತಂದೆ-ತಾಯಿಗಳ ಮಗನಾಗಿ ಹುಟ್ಟಿದ್ದರೆ?.... ಹಾಸ್ಯಾಸ್ಪದ ವಿಚಾರವಲ್ಲವೆ? ಈಗ ಅಪ್ಪನಾದವನಿಗೆ ಬೇರೆ ಹೆಣ್ಣು ಹೆಂಡತಿಯಾಗಬಹುದಿತ್ತು. ಹಾಗೇ ಈಗ ಅಮ್ಮನಾಗಿದ್ದವಳಿಗೆ ಬೇರೆ ಗಂಡಸು ಗಂಡನಾಗಬಹುದಿತ್ತು. ಆದರೆ ನನ್ನ ಹುಟ್ಟು ಮಾತ್ರ ಈ ಅಪ್ಪ ಈ ಅಮ್ಮ ಮದುವೆಯಾದುದರಿಂದಲೇ ಸಾಧ್ಯವಾಯಿತು ಎನ್ನುವುದನ್ನು ಗಮನಿಸಿದಾಗ; ಅಷ್ಟೇ ಏಕೆ, ನನ್ನ ಹುಟ್ಟಿಗೆ ಕಾರಣವಾದ ಗರ್ಭಧಾರಣೆಯ ಕ್ಷಣ ಕೂಡ ಒಂದು ತಪ್ಪಿ ಇನ್ನೊಂದಾಗಿದ್ದರೆ ನನ್ನ ಪಿಂಡವನ್ನು ನಿಶ್ಚಯಿಸಿದ ಬೀಜಾಣುಗಳೇ ಬೇರೆಯಾಗಿ ನನ್ನ ಬದಲು ಬೇರೆಯೇ ಒಂದು ಜೀವ ಹುಟ್ಟಬಹುದಿತ್ತಲ್ಲ ಎಂಬುದನ್ನು ನೆನೆದರೆ ಆಯ್ಕೆಯ ಮುಕ್ತತೆಯಲ್ಲಿದ್ದ ನಂಬುಗೆ ಸಡಿಲವಾಗಿ ಉಸಿರುಗಟ್ಟಿದಂತಾಗುತ್ತದೆ: ಕೋಟ್ಯಾನುಕೋಟಿ ಪುರುಷ ರೇತ್ರಾಣುಗಳಲ್ಲಿ ಒಂದೇ ಒಂದು ಹಾಗೂ ಒಂದೇ ಒಂದು ಸ್ತ್ರೀ-ಅಂಡಾಣು-ಒಂದೆಡೆ ಬಂದ ದಿವ್ಯಕ್ಷಣದಲ್ಲೇ ನಿಶ್ಚಿತವಾಯಿತಲ್ಲವೇ, ಉತ್ಕ್ರಾಂತಿಕ್ರಮದಲ್ಲಿ ಬದುಕುವ ರೀತಿಗಳೊಂದಿಗೆ ನಿಸರ್ಗ ನಡೆಸುವ ಅಬ್ಜ ಅಬ್ಜ ಪ್ರಯೋಗಗಳಲ್ಲಿ ಒಂದು ಅನನ್ಯ ಪ್ರಯೋಗದ ಪ್ರತಿನಿಧಿಯಾಗಿ ನನ್ನ ಬದುಕಿನ ಆಯ್ಕೆ? ಆದ್ದರಿಂದಲೇ-ಕೌಂಡಿಣ್ಯಗೋತ್ರೋತ್ಪನ್ನ ಕೃಷ್ಣಶರ್ಮಣಃ ಜ್ಯೇಷ್ಠಪುತ್ರ ಸಾಂತಯ್ಯಶರ್ಮಣಃ ದ್ವಿತೀಯ ಪುತ್ರನಾದ ಈ ದಿವ್ಯ ಪಿಂಡ ನಾಗಪ್ಪನ ಹುಟ್ಟಿನ ಆಯ್ಕೆ? ವಿಜ್ಞಾನದ ವಿದ್ಯಾರ್ಥಿಯಾದದ್ದಕ್ಕೆ ಸಾರ್ಥಕವಾಯಿತೋ ನಾಗಪ್ಪಾ. ನಿನ್ನ ಆ ದಿವ್ಯಭವ್ಯ ವಿಕಾಸವಾದಕ್ಕೇ ಇನ್ನು ಜಯವಾಗಲಿ.... ನಗುವುದನ್ನು ಕಲಿಯೋ ಬೋಳೀಮಗನೇ-ಯಾವಾಗಲೂ ಮುಖಕ್ಕೆ ಗಂಟಿಕ್ಕೇ ಕೂಡ್ರಬೇಡ, ಅಂತಹ ಮಹಾ ಅನಾಹುತವೇನೂ ಘಟಿಸಿಲ್ಲ ಈಗ. ನಿನ್ನ ಆ ಮಹಾಮ್ಮಾಯಿ ನಿಸರ್ಗ ನಡೆಸುವ ಅಬ್ಜ ಅಬ್ಜ ಪ್ರಯೋಗಗಳಲ್ಲಿ ಕೆಲವಾದರೂ ವಿಫಲವಾಗದೇ, ಸೋಲದೇ ಉಳಿದಾವೇ...."

"ಟಿಪ್ಪಣಿ ಐದು: ರಾತ್ರಿ ಹಾಸಿಗೆ ಸೇರುವ ಮೊದಲು ಕಣ್ಣುಗಳು ನಿದ್ದೆಯಿಂದ ಬಾಡುತ್ತಿದ್ದಾಗ. ಧೇನಿಸಿದ್ದು: ವಿಷ್ಣು ಸಹಸ್ರನಾಮಗಳನ್ನು ದಿನವೂ ಪಠಿಸುತ್ತಿದ್ದ ಅಪ್ಪ ಎಲ್ಲ ಬಿಟ್ಟು ಈ ಹೆಸರನ್ನೇ ನನಗಾಗಿ ಹೇಗೆ ಆರಿಸಿದನೊ. ಸ್ವತಃ

ಅವನ ಹೆಸರಾದರೂ ಏನು ಮತ್ತೆ! ಈ ಸಂಗತಿಯೂ ನನ್ನ ನೋವಿನ ಇತಿಹಾಸದಲ್ಲಿ ವಹಿಸಿದ ಪಾತ್ರವನ್ನು ನೆನೆದರೆ....

ಎಂತಹ ಕ್ಷುಲ್ಲಕ ಸಂಗತಿಗಳೂ ನನ್ನ ಜೀವನದ ಎಂತಹ ಮಹತ್ವದ ಘಟನೆಗಳಿಗೆ ಕಾರಣಗಳಾಗಿವೆ ಎಂಬುದನ್ನು ನೆನೆದರೆ ಆಶ್ಚರ್ಯವಾಗುತ್ತದೆ. ಹತ್ತುವರ್ಷಗಳ ಹಿಂದೆಯೇ ಒಮ್ಮೆ ಕಂಪನಿಯ ಕೆಲಸವನ್ನು ಬಿಟ್ಟು ಇಲ್ಲಿಯದೇ ಕಾಲೇಜೊಂದರಲ್ಲಿ ಪ್ರಾಧ್ಯಾಪಕನ ಕೆಲಸ ಹಿಡಿಯಬೇಕೆಂದು ಮಾಡಿದ ನಿಶ್ಚಯವನ್ನು ಗೆಳೆಯನೊಬ್ಬನ ಇದಿರು ಆಡಿತೋರಿಸಿದಾಗ ಗೆಳೆಯನ ಹೆಂಡತಿ ಗಬಕ್ಕನೆ ಬಾಯಿ ಹಾಕಿ, 'ಯಾಕೆ? ಮ್ಯಾನೇಜರ್ ಆಗುವ ಚಾನ್ಸ್ ತಪ್ಪಿತೆ?' ಎಂದು ಕೇಳಿದ ಪ್ರಶ್ನೆ, ಪ್ರಶ್ನೆಗಿಂತ ಹೆಚ್ಚಾಗಿ ಅದನ್ನು ಕೇಳಿದ ರೀತಿ ಮುಂದಿನದೆಲ್ಲವನ್ನೂ ನಿಶ್ಚಯಿಸಿಬಿಟ್ಟಿತ್ತು. ಪ್ರಾಫೆಸರ್ ಆಗುವ ನಿರ್ಧಾರವನ್ನು ಬಿಟ್ಟುಕೊಟ್ಟಿದ್ದೆ. (ಪ್ರಾಫೆಸರ್ ಎಂಬ ಉಪ-ಪದವಿ ನನ್ನ ಕೊರಳಿಗೆ ಗಂಟುಬಿದ್ದದ್ದು ಮಾತ್ರ ಆಗಿನಿಂದಲೇ ಎಂಬಂತೆ ನೆನಪು).

ಆಶ್ಚರ್ಯ: ಯಾವುದು ಯಾವುದನ್ನು ನಿಶ್ಚಯಿಸಿತ್ತು? ಗೆಳೆಯನ ಹೆಂಡತಿಯ ಮಾತುಗಳಲ್ಲಿ, ಮಾತುಗಳಿಗಿಂತ ಹೆಚ್ಚಾಗಿ ಕಣ್ಣುಗಳಲ್ಲಿ, ಕಣ್ಣುಗಳಿಗಿಂತ ಹೆಚ್ಚಾಗಿ ತುಟಿಗಳ ಮೂಲೆಯಲ್ಲಿ, ತುಟಿಗಳಿಗಿಂತ ಹೆಚ್ಚಾಗಿ ಕೊರಳಿನ ಕೊಂಕಿನಲ್ಲಿ ವ್ಯಕ್ತವಾದ 'ಏನೋ' ನನ್ನ ಕೃತಿಗೆ ಕಾರಣವಾಗಿತ್ತೋ? ಅಥವಾ ನನ್ನ ವ್ಯಕ್ತಿತ್ವದ್ದೇ ಆಪ್ತ ಅಂಗವಾದ ನಿರ್ಧಾರವನ್ನು ಗೆಳೆಯನ ಹೆಂಡತಿಯ ಮಾತುಗಳಿಂದ ಅರ್ಥಮಾಡಿಕೊಂಡಿದ್ದೆನೊ? ಯಾವ ಯಾವುವೋ ಕಾರಣಗಳಿಗಾಗಿ ನಮ್ಮ ಕೈಯಿಂದ ಒದಗುವ ಕೃತಿಗಳ ನಡುವಿನ ಅವಕಾಶದಲ್ಲಿ ಜರಗುವದು ಅರ್ಥದ ಹೆಸರಿನಲ್ಲಿ, ಅರ್ಥಪೂರ್ಣತೆಯ ಹೆಸರಿನಲ್ಲಿ ನಡೆಯುವ ಶಾಬ್ದಿಕವಾದ ಹಲುಬು. ಇದಕ್ಕೇ ಅಲ್ಲವೇ ನಾವು ಕೊಟ್ಟ ದೊಡ್ಡ ಹೆಸರು- ಜೀವನದರ್ಶನ! ನಮ್ಮ ನಮ್ಮ ಕೃತಿಗಳನ್ನು ನಾವೇ ಸಮರ್ಥಿಸಿಕೊಂಡ ನಾಗರಿಕ ರೀತಿ! ಪ್ರಾಫೆಸರ್ ನಾಗನಾಥ್-ಜಿಂದಾಬಾದ್! ಹೇಳಲು ಮರೆತೆ: ಕಂಪನಿಯನ್ನು ಸೇರಿದ ಬಳಿಕ ನನ್ನನ್ನು ತನ್ನ ಕಣ್ಣುಗಳ ಹೊಳಪಿನಿಂದ, ಕಿಲಕಿಲ ನಗುವಿನಿಂದ, ಸೊಂಟದ ಕುಣಿತದಿಂದ ಮರುಳುಮಾಡಲು ಪಣ ತೊಟ್ಟಂತಿದ್ದ- ಎಂ. ಡೀ. ಅವರ ಸೆಕ್ರೆಟರಿಯಾದ—ಮೇರಿಯ ಸಲಹೆಯ ಮೇರೆಗೆ ನನ್ನ ಹೆಸರನ್ನು ಬದಲಿಸಿಕೊಂಡಿದ್ದೆ. ಎಲ್ಲರ ಬಾಯಲ್ಲಿ ನಿಂತ ಹೆಸರು ಮಾತ್ರ ಪ್ರಾಫೆಸರ್ ನಾಗ್...

ಪರಮಾಶ್ಚರ್ಯ: ನನ್ನ ಬದುಕಿನಲ್ಲಿ ಎಷ್ಟೆಲ್ಲ ಕ್ರಾಂತಿಕಾರಕ ಘಟನೆಗಳು ನಡೆದಿರುವಾಗ ಎಲ್ಲ ಬಿಟ್ಟು ಇದೇ ಥಟ್ಟನೆ ನೆನಪಿನಲ್ಲಿ ನಿಂತದ್ದೇಕೆ? ವಿಚಾರಮಾಡಬೇಕು...."

"ಟಿಪ್ಪಣಿ ಆರು: ಕನ್ನಡ ಪ್ರಾಥಮಿಕ ಶಾಲೆಯಲ್ಲಿ ಪರಮ ಮಾಸ್ತರರು ಹಾಜರಿಯ ಹೊತ್ತಿಗೆ ಹೆಸರು ಕರೆಯುವ ರೀತಿಯಲ್ಲಿ ಹೇಳುವುದಾದರೆ ನನ್ನ ಹೆಸರು ನಾಗಪ್ಪಾ ಸಾಂತಯ್ಯಾss. ನಾನು ಹುಟ್ಟಿದ್ದು ಉತ್ತರ ಕನ್ನಡದ ಹನೇಹಳ್ಳಿ ಎಂಬ ಸಣ್ಣ ಹಳ್ಳಿಯಲ್ಲಿ. ಸುಮಾರು ನಲವತ್ತು ವರ್ಷಗಳ ಕೆಳಗೆ. ಬೆಳೆದದ್ದು ಕೋಳಿಗಿರಿಯಣ್ಣನ ಕೇರಿಯಲ್ಲಿ. ನನ್ನ ಬಾಯಲ್ಲಿ ಕಾಯಂ ನಿಂತಿರುವ ಹತ್ತೆಂಟು ಬೈಗುಳಗಳು ಈ ಕೋಳೀಗಿರಿಯಣ್ಣನಿಂದಲೇ ಕೇಳಿ ಕಲಿತವುಗಳು. ಸಂದರ್ಭಕ್ಕೆ ತಕ್ಕಂತೆ ಚೆಂಗನೆ ಬಾಯಲ್ಲಿ ಪುಟಿಯುವ ಇವೆಲ್ಲವುಗಳಲ್ಲಿ ಬೋಳೀಮಗ, ಸೂಳೇಮಗ ಇವು ನನಗೆ ಹೆಚ್ಚು ಪ್ರಿಯವಾದುವುಗಳು: ಸಿಟ್ಟುಮಸ್ತಕಕ್ಕೆ ಏರಿದಾಗ ರಂಡೇಮಗನೇ, ಹಾದರಕ್ಕೆ ಹುಟ್ಟಿದವನೇ ಎನ್ನುವುದೂ ಉಂಟು, ನನ್ನಷ್ಟಕ್ಕೇ-ಎಲ್ಲರ ಮುಂದಲ್ಲ. ಸಿಟ್ಟು ಮಸ್ತಕಕ್ಕೇರುವ ಸಂದರ್ಭಗಳು ಇತ್ತಿತ್ತ ಹೆಚ್ಚಾಗುತ್ತಿವೆಯಾದ್ದರಿಂದ ಈ ಬಯ್ಗಳಿಗೆ ಸಂಖ್ಯೆಗಳ ಖಾಸಗೀ ಭಾಷೆಯೊಂದನ್ನು ನಿರ್ಮಿಸಿಕೊಂಡಿದ್ದೇನೆ. ಉದಾ: ಒಂದೂ ಮಗನೇ ಅಂದರೆ ಬೋಳೇಮಗನೇ. ಎರಡೂ ಮಗನೇ ಅಂದರೆ: ಸೂಳೇಮಗನೇ ಇತ್ಯಾದಿಯಾಗಿ ಹತ್ತೂ ಮಗನೇ ತನಕ. ಇವುಗಳಿಗೆ ನಾನು 'ಸಾಂಖ್ಯದ ಸುಭಾಷಿತಗಳು' ಎಂಬ ಹೆಸರೂ ಕೊಟ್ಟಿದ್ದೇನೆ. ಆಗೀಗ ಭಾವನೆಗಳು ಉಕ್ಕಿ ಬಂದ ಕ್ಷಣಗಳಲ್ಲಿ ಈ ಸಂಕೇತ-ಭಾಷೆ ಕುಸಿದು ಒಳಗಿನ ವಾಸ್ತವದ ದರ್ಶನವಾಗುವದೂ ಉಂಟು! ಆಫೀಸಿನ ಕೆಲಸ ಬಿಟ್ಟರೆ ನನಗೆ ಬಹಳ ಪ್ರಿಯವಾದದ್ದು ಸಾಹಿತ್ಯ. ವಿದ್ಯಾರ್ಥಿದೆಸೆಯಲ್ಲಿ ಕಲಿತದ್ದು ಮಾತ್ರ ವಿಜ್ಞಾನ. ಅಲ್ಲೂ ಕೂಡ ರಸಾಯನಶಾಸ್ತ್ರದ ವಿದ್ಯಾರ್ಥಿಯಾಗಿಯೂ ಆಸ್ಥೆಯಿದ್ದದ್ದು ಡಾರ್ವಿನ್ನನ ವಿಕಾಸವಾದದಲ್ಲಿ; ಫ್ರಾಯ್ಡ್, ಯುಂಗರ ಮನೋವಿಶ್ಲೇಷಣೆಯಲ್ಲಿ. ಮಾರ್ಕ್ಸ್, ರಾಯ್ ಅವರ ಬರವಣಿಗೆಯಲ್ಲಿ. ಲಂಗೋಟಿ ಗೆಳೆಯರೆನ್ನುವಷ್ಟರ ಮಟ್ಟಿಗೆ ಭಾವನಾತ್ಮಕವಾಗಿ ಹತ್ತಿರವಾದವರು ಇವರೆಲ್ಲ. ಸದ್ಯ, ಕೊನ್ರಾಡ್ ಲಾರೆಂಝ್, ಎರಿಕ್ ಬರ್ನ್ ಕೂಡ ಹತ್ತಿರವಾಗುತ್ತಿದ್ದಾರೆ. ನಾನು ಬದುಕಿನಲ್ಲಿ ಬಹಳಷ್ಟಕ್ಕೆ ಆಸೆಪಟ್ಟವನಲ್ಲ. ಹೆದರಿಕೊಂಡವನೂ ಅಲ್ಲ. ಹೆದರಿಕೆಯಾಗುತ್ತಿದ್ದದ್ದು ಮೂರಕ್ಕೆ: ಕಾಯದೆ;

ಪೋಲೀಸು; ಬೆಂಕಿಯ ಅಪಘಾತಗಳಿಗೆ; ಅವು ಸಂಕೇತಿಸುವ ನಿಗೂಢ ವಾಸ್ತವಕ್ಕೆ; ಅದರ ಅರ್ಥವಾಗದ ರಹಸ್ಯಮಯವಾದ ನುಡಿಕಟ್ಟಿಗೆ. ಯಾಕೆ ನಾನು ಹೆದರುತ್ತೇನೆ ಎನ್ನುವದು ಗೊತ್ತಿದೆ, ಗೊತ್ತಿಲ್ಲ. ಬಹಳ ಭಾವುಕನಾಗಿ ಕಣ್ಣು ತುಂಬಿಬರುವದು ನನ್ನ ಅಮ್ಮನನ್ನು ನೆನೆದಾಗ; ಹನೇಹಳ್ಳಿಯ ಮಣ್ಣಿನ ವಾಸನೆ ಮೂಗನ್ನು ಅಡರಿದಾಗ; ಅಲ್ಲಿ ಬೇಲಿ ಗದ್ದೆಗಳ ಹಸಿರು, ಸಂಜೆ ಮುಂಜಾವುಗಳ ಅರಿಸಿಣ ಬಣ್ಣದ ಬಿಸಿಲು ಕಣ್ಣ ಪರದೆಯ ಮೇಲೆ ಮೂಡಿ ನಿಂತಾಗ; ಕಟ್ಟೆಯ ಅಶ್ವತ್ಥದ ಮೇಲೆ, ಗದ್ದೆಯಂಚಿನಲ್ಲಿ ಕೆಂಪಗೆ ಹೂತು ನಿಂತ ಹಂಗರಕದ ಮೇಲೆ ಕಾಗೆಗಳು ಕಲರವ ಎಬ್ಬಿಸಿದ್ದು ಕಿವಿಗಳಲ್ಲಿ ಮೊಳಗಿದಾಗ; ಇನ್ನೂ ಕಂಡಿರದ ಅಣ್ಣ, ಕಳೆದುಹೋದ ತಂಗಿ ಅಚಾನಕವಾಗಿ ಬಂದು ಮನೆಯ ಕದ ತಟ್ಟುತ್ತಿದ್ದಾರೆ ಎಂದು ಭಾಸವಾದಾಗ. ನನಗೇ ಅರಿವಾಗದ ಹಾಗೆ ಅವುಡುಗಚ್ಚಿದ ರಭಸಕ್ಕೆ ತುಟಿಗಳಿಂದ ರಕ್ತ ಚಿಮ್ಮುವ ಭಯವಾಗುವಷ್ಟರ ಮಟ್ಟಿಗೆ ಸಿಟ್ಟುಬರುತ್ತಿದ್ದದ್ದು ಅಪ್ಪನ ಹೇಡಿತನವನ್ನು ನೆನೆದಾಗ….”

ಅರ್ಥಕ್ಕೇ ಏಕೆ ತಡೆದೆಯೋ ಎರಡೂ ಮಗನೇ? ಆಪ್ಪ ಹೇಡಿಯಾಗಿದ್ದ ಎನ್ನುವುದನ್ನು ಒಪ್ಪಿಕೊಳ್ಳಲು ಇನ್ನೂ ನಿನಗೆ ಧೈರ್ಯವಾಗುತ್ತಿಲ್ಲವೇನೋ? ನಿದ್ದೆ ಬಂತೇನೋ? ಮಲಗಿಕೋ ಮಗೂ. ನಾಳೆ ಪರ್ಸೊನೆಲ್ ಮ್ಯಾನೇಜರರ ಪತ್ರ ಕಂಡಾಗ ನಿನ್ನ ನೀರಿನ ನಿಜವಾದ ಗುಣ ಗೊತ್ತಾದೀತು. ಕಾದಿರು.

## ಅಧ್ಯಾಯ ಎರಡು

ನಾಗಪ್ಪ ಹೀಗೆಲ್ಲ ಯೋಚಿಸುತ್ತ, ಆಗೀಗ ಮನಸ್ಸು ಬಂದರೆ ಟಿಪ್ಪಣಿ ಮಾಡುತ್ತ ಕೂತದ್ದು ಚಿಕ್ಕಂದಿನಿಂದಲೂ ತನ್ನ ಪ್ರತಿಸ್ಪರ್ಧಿಯಾಗಿದ್ದ ಶ್ರೀನಿವಾಸನ—ಈಗ ಶ್ರೀನಿವಾಸರಾವ್ ಆದವನ—ಶಿವಾಜೀಪಾರ್ಕಿನ ಮನೆಯಲ್ಲಿ. ನಾಲ್ಕು-ಬೆಡ್‌ರೂಮುಗಳುಳ್ಳ ದೊಡ್ಡ ಫ್ಲ್ಯಾಟಿನಲ್ಲಿ ಅವನಿಗಾಗಿಯೇ ವ್ಯವಸ್ಥೆಮಾಡಿಕೊಟ್ಟ ಕೋಣೆಯಲ್ಲಿ. ಬೆಳಗ್ಗೆ ಎದ್ದವನೇ ನಿನ್ನೆ ತಾನು ಬರೆದದ್ದನ್ನು ಓದಿ ನೋಡಿದ. ವ್ಯಂಗ್ಯವಾಗಿ ಮುಗುಳುನಗುತ್ತ ಈ ಒಂದೂ ಮಗ ಬಹಳಷ್ಟಕ್ಕೆ ಹೆದರಿಕೊಂಡವನಲ್ಲವಂತೆ ಎಂದುಕೊಳ್ಳುತ್ತ ತನ್ನ ವಹಿ ಮುಚ್ಚಿ ಕಿಡಕಿಗೆ ಬಂದ. ಇದಿರಿಗೇ ಸಮುದ್ರ. ದಂಡೆಯಲ್ಲಿ, ಮನೆಯ ಕಂಪೌಂಡಿನಲ್ಲಿ ಊರಿನ ನೆನಪು ತರುತ್ತಿದ್ದ ಗಾಳಿ-ಮರಗಳು; ಸಬದೂಲಿ, ಗೊಂಡೆ-ಹೂವಿನ ಗಿಡಗಳು; ಬಸಲೆಯ ಹಂದರ, ಬಾಳೆಯ ಹಿಂಡು, ಒಂದೆರಡು ಅಡಕೆಯ ಸಸಿಗಳು, ಹೋದಲ್ಲೆಲ್ಲ ಹಳ್ಳಿಯನ್ನೇ ಎದ್ದು ನಿಲ್ಲಿಸುತ್ತಾನೆ, ಎರಡೂ ಮಗ. ದಿನವೂ ಪ್ರೆಸ್ಸಿಗೆ ಹೋಗುವ ಮೊದಲು ಗಂಜೀ ಊಟ ಮಾಡಿಯೇ ಹೋಗುತ್ತೇನೆಂದು ಅಭಿಮಾನದಿಂದಲೇ ಹೇಳುತ್ತಾನೆ ಮತ್ತೆ!

ಎಲ್ಲರನ್ನು ಬಿಟ್ಟು ಶ್ರೀನಿವಾಸನ ಮನೆಯಲ್ಲಿ ತಳವೂರಿದ್ದು ಸ್ವತಃ ನಾಗಪ್ಪನಿಗೇ ಆಶ್ಚರ್ಯ-ಕಳೆದ ೨೦ ವರ್ಷಗಳಿಗೂ ಮಿಕ್ಕಿದ ಕಾಲದಿಂದ ಅವನ ಬಗ್ಗೆ ತಳೆಯುತ್ತ ಬಂದ ದ್ವೇಷಕ್ಕೆ ಹತ್ತಿರವಾದ ಅಸಡ್ಡೆಯನ್ನೂ ಮರೆತು: 'ನಿನ್ನ ಆಫೀಸು-ಗೀಫೀಸು ಎಲ್ಲಾ ಮರೆತುಬಿಟ್ಟು, ಸುಖವಾಗಿ ಇಲ್ಲಿ ಬಂದು ಒಂದು ತಿಂಗಳು ಇದ್ದು ಬಿಡು. ಹೇಗಾದರೂ ರಜೆ ತೆಗೆದುಕೊಂಡಿದ್ದೀಯಲ್ಲ. ಮಹಾಬಲೇಶ್ವರ್, ಮಾಥೇರಾನ್ ಅಲ್ಲದಿದ್ದರೂ ಮುಂಬಯಿಯ ಸೆಖೆ ನಿನ್ನನ್ನು ಇಲ್ಲಿ ಬಾಧಿಸದು. ಹೊಸ ಕಾದಂಬರಿಯನ್ನೇನೋ ಬರೆಯಲು ಹಿಡಿದಿದ್ದೀಯಂತಲ್ಲ-ನನ್ನ ಬಗ್ಗೆ. ಬರೆ ಬರೆ. ಎಂತಹ ಭಿಡೆಯೂ ಬೇಡ. ಅಮ್ಮನ ಬಗ್ಗೆ ನೀನು ಬರೆದದ್ದನ್ನು ಓದಿದೆ—ನೀನೇ ಅದರ ಪತ್ತೆಹತ್ತಗೊಡದಿದ್ದರೂ, ಅಡ್ಡಿಯಿಲ್ಲ, ಬರೆಯುವ ಕಲೆ ನಿನಗಿದೆ. ನಾವೇನಪ್ಪಾ ಸಾಹಿತ್ಯದ ಗಂಧಗಾಳಿಯಿಲ್ಲದ ದಡ್ಡರು. ಬೇರೆಯವರು ಬರೆದದ್ದನ್ನು ಛಾಪಿಸುವಷ್ಟರ ಮಟ್ಟಿಗೇ ಶಬ್ದಗಳ ಸಂಬಂಧ. ಕನ್ನಡ ಕಲಿತದ್ದು

ಮ್ಯಾಟ್ರಿಕ್‌ವರೆಗಾದರೂ ಈಗ ಅದಕ್ಕೆ ಜಂಗುಹಿಡಿದಿದೆ. ನಮ್ಮಲ್ಲಿ ಕನ್ನಡ ಟೈಪ್ಸ್‌ಗಳಿದ್ದರೆ ನಿನ್ನ ಪುಸ್ತಕವನ್ನು ನಮ್ಮಲ್ಲೇ ಛಾಪಿಸಬಹುದಿತ್ತು. ಏನಲ್ಲದಿದ್ದರೂ ನಿನ್ನ ಪುಸ್ತಕದ ಜ್ಯಾಕೆಟ್ಟನ್ನಾದರೂ ನಮ್ಮಲ್ಲೇ ಮಾಡಿಸೋಣ. ನಾಲ್ಕು ನಾಲ್ಕು ಬಣ್ಣಗಳಲ್ಲಿ ಮುದ್ರಿಸುವ ಬೇಕಾದರೆ, ಅದಕ್ಕೇನಂತೆ... ಇದರಲ್ಲಿ ಪ್ರಾಮಾಣಿಕವಾಗಿ ಅನ್ನಿಸಿದ್ದೆಷ್ಟು, ತನ್ನನ್ನು ಕೆಣಕಲೆಂದೇ ಆಡಿದ್ದೆಷ್ಟು ಎಂದು ನಾಗಪ್ಪನಿಗೆ ಖಚಿತವಾಗಿ ತಿಳಿಯಲಿಲ್ಲ. ಅವನ ಅಮ್ಮನ ಬಗ್ಗೆ ತಾನು ಬರೆದ ಕತೆ ಓದಿದ ದಿನ ಸಿಟ್ಟಿನಿಂದ ಧಿಮಿ ಧಿಮಿ ಕುಣಿದುಬಿಟ್ಟಿದ್ದನೆಂದು ಸೀತಾರಾಮನಿಂದ ತಿಳಿದಿತ್ತು. ಬಹುಶಃ ಕಾದಂಬರಿಯ ವಿಷಯವನ್ನು ಸೀತಾರಾಮನೇ ಇವನಿಗೆ ಹೇಳಿರಬೇಕು. ಇಂಥ ಕಿಡಿಗೇಡಿತನದಲ್ಲಿ ಅವನು ನಿಷ್ಣಾತ.'

ಶ್ರೀನಿವಾಸ ಕಾದಂಬರಿ ಬರೆ ಎಂದು ಹೇಳಿದ್ದರಲ್ಲಿ ಪ್ರೋತ್ಸಾಹಕ್ಕಿಂತ ಹೆಚ್ಚಾಗಿ ತನ್ನ ಬಾಯನ್ನು ಮುಚ್ಚಿಸುವ ಹಿಕ್ಮತಿಯೇ ಅಡಗಿರಲಿಕ್ಕಿಲ್ಲ ತಾನೆ ಎಂಬ ಶಂಕೆ ಮೂಡಿತ್ತು, ನಾಗಪ್ಪನಲ್ಲಿ. ಆದರೂ ತಲೆ ತಿನ್ನುತ್ತಿದ್ದ, ತನ್ನ ಸೃಜನಶೀಲತೆಯನ್ನು ಹಿಂಡಿ ಹಾಕುತ್ತಿದ್ದ ಆಫೀಸಿನ ಸದ್ಯದ ರಾಜಕಾರಣದಿಂದ ಕೆಲವು ದಿನ ದೂರ ಉಳಿಯುವದು, ದೂರ ಉಳಿದು ಕಂಪನಿಯ ಕೆಲಸಕ್ಕೆ ತನ್ನ ತಾತ್ವಿಕ ನಿಲುವು ಏನೆನ್ನುವುದನ್ನು ನಿಶ್ಚಯಿಸಿಕೊಳ್ಳುವದು ಅವಶ್ಯವೆನಿಸಿದ ತನಗೆ ಅನಿರೀಕ್ಷಿತವಾಗಿ ಬಂದ ಈ ಆಹ್ವಾನವನ್ನು ನಿರಾಕರಿಸಬೇಕೆನ್ನಿಸಲಿಲ್ಲ. ಅಷ್ಟೇಕೆ-ಇಷ್ಟು ವರ್ಷ ಶ್ರೀನಿವಾಸನನ್ನು ನೇರವಾಗಿ ಸಂಧಿಸುವುದನ್ನು ತಪ್ಪಿಸುತ್ತ ಬಂದ ತಾನು-ಈಗ ಅವನು ಕರೆಯುವುದನ್ನೇ ಕಾಯುತ್ತ ಕುಳಿತವನ ಹಾಗೆ, ತುಂಬ ಹುರುಪಿನಿಂದಲೇ ಅವನ ಜತೆ ಹೋಗಲು ಒಪ್ಪಿಕೊಂಡಾಗ ಆಶ್ಚರ್ಯದಂತೆ ಸಂತೋಷವೂ ಆಗಿತ್ತು. ಸಹಜಸ್ಫೂರ್ತಿಯಿಂದ ನಡೆದ ಈ ಸ್ವೀಕಾರದ ಹಿಂದಿನ ಪ್ರೇರಣೆಯನ್ನು ಹುಡುಕುವ ಆತುರ ಕೂಡ ಅವನಿಗೆ ಆಗಲಿಲ್ಲ. ಮಹತ್ವದ ಸಂಗತಿಯೆಂದರೆ ಅವನಿಗೆ ಸದ್ಯ ಬರಬೇಕಾದದ್ದು ಶ್ರೀನಿವಾಸನನ್ನು ಅಂದರೆ ಶ್ರೀನಿವಾಸ ಹಾಗೂ ತನ್ನ ಸಂಬಂಧವನ್ನು – ಕುರಿತು ಅವನು ಬಹಳ ಹಿಂದೆ ಯೋಚಿಸಿದ ಕಾದಂಬರಿಯಾಗಿರಲೇ ಇಲ್ಲ. ಈಗ ಬರೆಯಬೇಕಾದದ್ದು ತನ್ನ ಆಫೀಸನ್ನು ಕುರಿತೇ, ತನ್ನನ್ನು ಕುರಿತೇ. ಈ ರಾಜಕಾರಣದಿಂದಾಗಿ ಇಷ್ಟೊಂದು. ಯಾತನೆಯನ್ನು ಯಾಕೆ ಅನುಭವಿಸುತ್ತಿದ್ದೇನೆ? ಯಾತನೆಯ ಬೇರುಗಳ ವರೆಗೆ ಇಳಿದು ನೋಡಬೇಕು...

ಅವನಿಗೆ ಅರಿಯಬೇಕಾದದ್ದು ತನ್ನ ಆಫೀಸಿನ ಕೆಲವು ವ್ಯಕ್ತಿಗಳೊಡನೆಯ ಸಂಬಂಧಗಳನ್ನು. ಮುಖ್ಯವಾಗಿ ಫಿರೋಜ್ ಬಂದೂಕವಾಲಾನೊಡನೆಯ ಸಂಬಂಧವನ್ನು. ಈ ಅಂತರ್ವೈಯಕ್ತಿಕ ಸಂಬಂಧಗಳಲ್ಲಿ ಪ್ರತಿಸಲ ತೆರೆದುಕೊಳ್ಳುತ್ತಿದ್ದದ್ದು ತನ್ನ ವ್ಯಕ್ತಿತ್ವ ರೂಪಗೊಂಡದ್ದರ ಇತಿಹಾಸವೇ ಎಂಬ ಸಂಶಯ ಇತ್ತೀಚೆಗೆ ಬಲವಾಗಹತ್ತಿದೆ-ಮುಖ್ಯತಃ ಎರಿಕ್ ಬರ್ನ್‌ನ 'ಟ್ರೆನ್ಸೆಕ್ಷನಲ್' ಎನೆಲಿಸಿಸ್ ಅಭ್ಯಾಸ ಮಾಡಿದಂದಿನಿಂದ: ನೀನು ತಲೆ ಉಬ್ಬಿಸಿಕೊಳ್ಳಬೇಡವೋ ಎರಿಕ್. ಇದು ಬರೀ ನನ್ನೊಳಗಿನ ಪ್ರಾಫೆಸರ್ ಮಾತನಾಡುವ ರೀತಿ ಅಷ್ಟೇ. ನನ್ನ ಅನುಭವದಲ್ಲಿ ಹುಟ್ಟಿದ್ದನ್ನೇ ನಿನ್ನ ಶಬ್ದಗಳಲ್ಲಿ ಎರಕಹೊಯ್ದೆನಷ್ಟೇ. ನನ್ನ ಲಂಗೋಟೀ ಗೆಳೆಯನೆಂಬಂತೆ ಮಾತನಾಡುತ್ತಿದ್ದೇನಲ್ಲವೆ? ನನ್ನನ್ನು ದೂರಬೇಡ, ದೂರು ಈ ಸಮುದ್ರವನ್ನು. ಎಲ್ಲ ನೋವನ್ನೂ ಕ್ಷುಲ್ಲಕಗೊಳಿಸುವ ಅದರ ಉಲ್ಲಾಸದ ಉದ್ಘೋಷವನ್ನು...

ಫಿರೋಜ್ ಮನಸ್ಸು ತುಂಬಿದ್ದರಿಂದಲೋ ಏನೋ ಶ್ರೀನಿವಾಸನಲ್ಲಿಯೂ ಅವನಲ್ಲಿಯೂ ಇದ್ದ ದೈಹಿಕ ಹೋಲಿಕೆ ಲಕ್ಷ್ಯಕ್ಕೆ ಬಂದು ಅಸ್ವಸ್ಥನಾದ. ಎಲ್ಲರೂ ಒಪ್ಪಿಕೊಳ್ಳುವಂತಹ ಹೋಲಿಕೆಯಲ್ಲ; ತನಗಷ್ಟೇ ಒಂದು ಅನಪೇಕ್ಷಿತ ರೀತಿಯಲ್ಲಿ, ಅನಪೇಕ್ಷಿತ ಕ್ಷಣದಲ್ಲಿ ಥಟ್ಟನೆ ಹೊಳೆದುಬಿಟ್ಟದ್ದು: ಯಾವುದೋ ಸಿನೇಮಾದಲ್ಲೊ, ನಾಟಕದಲ್ಲೋ ನೋಡಿದಂತಿದ್ದ ಕೊಲೆಯ ಆರೋಪಿಯ ನೆನಪು ತರುವಂತಹಹದೇನನ್ನೋ ಕಂಡಂತೆ ಆಗಿ ಮೈ ಜುಮ್ ಎಂದಿತ್ತು. ಈ ಅನ್ನಿಸಿಕೆ ಯಾರಿಂದಾಗಿ ಹುಟ್ಟಿ ಯಾರನ್ನು ಒಳಗೊಂಡಿತ್ತು ಎನ್ನುವದು ಈಗ ಖಚಿತವಾಗಿ ಗೊತ್ತುಹಿಡಿಯುವುದು ಕಠಿಣವಾಗಿ ತೋರಿದರೂ ಫಿರೋಜನೇ ಇದಕ್ಕೆ ಮೂಲವಿರಬಹುದು ಎಂಬ ಸಂಶಯ ಮನಸ್ಸಿಗೆ ಹೆಚ್ಚು ಸಮಾಧಾನಕರವಾಗಿ ತೋರಿತು: ಬರೆಯಬೇಕು. ದಿನವೂ ಇಷ್ಟಿಷ್ಟನ್ನು. ಅದು ಯಾರನ್ನೂ ನಿಂದೆಗಾಗಲೀ ಆರೋಪಕ್ಕಾಗಲೀ ಗುರಿಪಡಿಸಲಲ್ಲ. ಇವರೊಡನೆಯ ಈ ಸಂಬಂಧಗಳನ್ನು ಅರಿಯುವುದರ ಮೂಲಕ ನನ್ನನ್ನು ನಾನೇ ಅರಿತುಕೊಳ್ಳಲು.

"ಟಿಪ್ಪಣೆ ಏಳು: "ನಿನ್ನೆ ಒಂದು ಮೋಜಿನ ಸಂಗತಿ ನಡೆಯಿತು..."

ತನ್ನನ್ನು ತಾನೇ ಅರಿತುಕೊಳ್ಳಬೇಕೆಂದು ಬರೆಯಲು ಹಿಡಿದ ಈ ಅಂತರ್ವೈಯಕ್ತಿಕ ಸಂಬಂಧಗಳ ಇತಿಹಾಸದಲ್ಲಿ ಮೂಲಯೋಜನೆಯ ಪ್ರಕಾರ

ನಿನ್ನೆಮೊನ್ನೆಯ ಘಟನೆಗಳಿಗೆ ಆಸ್ಪದವಿರಲಿಲ್ಲ. ಆದರೆ ತನಗೇ ಗೊತ್ತಾಗದಂತೆ ಯೋಜನೆಯಲ್ಲಿ ಆದ ಬದಲಿನ ಅರಿವು ನಾಗಪ್ಪನಿಗೆ ಬಂದದ್ದೂ ಇಂದು ಬರೆಯಲು ಆರಂಭಿಸಿದ ಮೇಲೇ. ಏಕೋ ನಿನ್ನೆಯ ಅನುಭವವನ್ನು ಕುರಿತು ಬರೆಯುವ ಕುತೂಹಲ ಈಗ ಅನಾವರವಾಗಹತ್ತಿತು: ಯಾರು ಬಲ್ಲರು? ಈ ಅನುಭವಗಳನ್ನು ನಿರ್ದಿಷ್ಟ ಕಾಲಖಂಡಗಳಲ್ಲಿ ವಿಂಗಡಿಸುವದೇ ತಪ್ಪೇನೋ. ಸದ್ಯದ ಅನುಭವವೂ ನಾನು ಅನುಭವವನ್ನು ಸ್ವೀಕರಿಸುತ್ತ ಬಂದ ರೀತಿಯ ಮೇಲೆ ಬೆಳಕು ಚೆಲ್ಲಬಹುದೇನೋ. ಆದ್ದರಿಂದ ನಾನು ಇನ್ನು ಮುಂದೆ ಹಿಡಿಯಬೇಕಾದ ಹಾದಿಯ ಮೇಲೆ, ಬದುಕಿಗೆ ವಿಮುಖನಾಗುವದು ಹೇಡಿತನ. ಉತ್ಕ್ರಾಂತಿಕ್ರಮ ನನ್ನ ಬದುಕಿನ ರೀತಿಯ ಮುಖಾಂತರ ನಡೆಸುತ್ತಿದ್ದ ಪ್ರಯೋಗವನ್ನು ವಿಫಲಗೊಳ್ಳಲು ಬಿಡಲಾರೆ...ದೇವರೆ, ಇದೇಕೆ ನಾನು ಹೀಗೆ ನಡುಗುತ್ತಿದ್ದೇನೆ? ನಾವು ಬೇಡಿಬಂದಿರುವ ಹುಟ್ಟು-ಸಾವುಗಳ ನಡುವಿನ ಬದುಕು ಮಾತ್ರ ನಮ್ಮ ವೈಯಕ್ತಿಕ ಜವಾಬ್ದಾರಿಯದು ಎಂಬ ಅರಿವಿಗೇ ಮೂಲಭೂತವಾದ ಭಯವೇ ಇದು?

ಶಿವಾಜೀಪಾರ್ಕಿನ ಸಮುದ್ರತೀರ. ಬರೆದು, ಓದಿ ಬೇಸರ ಬಂದದ್ದರಿಂದ ಮಳಲು—ದಂಡೆಯ ಮೇಲೆ ಬಂದು ಕುಳಿತಿದ್ದೆ, ನಿನ್ನೆ-ನಾನೊಬ್ಬನೇ. ಸದ್ಯ ಓದಲು ಹಿಡಿದ ಕೊನ್ರಾಡ್ ಲಾರೆಂಝ್ ತಲೆ ತುಂಬಿದ್ದ. [We do not know of a single animal which is capable of personal friendship and which lacks aggression] ಓದುವಾಗ ಮಾತ್ರ ಫಿರೋಜ್ ಹಾಗೂ ಶ್ರೀನಿವಾಸ ತಿರುತಿರುಗಿ ಓದಿಗೆ ಅಡ್ಡ ಬಂದದ್ದು ನೆನಪಿಗೆ ಬಂದು ಕಿರಿಕಿರಿಯಾಗುತ್ತದೆ. ಶ್ರೀನಿವಾಸನ ಹೆಂಡತಿ ಇಷ್ಟೊಂದು ಸುಂದರಳೆಂಬ ಕಲ್ಪನೆಯೇ ನನಗಿರಲಿಲ್ಲ ಎಂಬ ವಿಚಾರ ಮನಸ್ಸನ್ನು ತಟ್ಟಿಹೋಗುತ್ತದೆ. ಸುಖಪುರುಷ ಬೋಳೀಮಗ ಅನ್ನಿಸಿತು. ಶ್ರೀನಿವಾಸನ ಇಡೀ ಇತಿಹಾಸವನ್ನು ಸ್ವಲ್ಪದರಲ್ಲಿ ಹಿಡಿಯುವುದಾದರೆ ಚಿಕ್ಕಂದಿನಲ್ಲಿ ಬಡತನದಿಂದಾಗಿ ಪಟ್ಟ ಅಪಮಾನಗಳನ್ನೆಲ್ಲ ಮರೆಯಲು ಮಾಡಿದ ಪ್ರಚಂಡ ಹೋರಾಟ. ಅದೊಂದು ದೊಡ್ಡ ಸಾಹಸದ ಕತೆ. ಎಲ್ಲೋ ಒಂದು ಗೊತ್ತಾಗದ ಜಾಗದಲ್ಲಿ, ಗೊತ್ತಾಗದ ರೀತಿಯಲ್ಲಿ ಆತ ನನ್ನನ್ನು ಆಹ್ವಾನಿಸುತ್ತಾನೆ.

ದಂಡೆಯ ಮೇಲೆ ಕುಳಿತ ನಿಂತ ಓಡಾಡುತ್ತಿದ್ದ ಅಪರಿಚಿತ ಜನರಲ್ಲಿ ಒಬ್ಬ ಮುದುಕ ಅಥವಾ ಮುದುಕನಂತೆ ಕಾಣುವ ಒಬ್ಬ ವ್ಯಕ್ತಿ ನನ್ನ ಲಕ್ಷ್ಯ ಸೆಳೆದಿದ್ದ.

ಧೋತರ, ನಿರಿಗೆಗಟ್ಟಿದ ಅಂಗಿ, ಮನೆಯಲ್ಲೇ ಒಗೆದು ಇಸ್ತ್ರಿ ಮಾಡುವ ಮೊದಲೇ ಹಾಕಿಕೊಂಡಂತಿದ್ದ ಹತ್ತಿಬಟ್ಟೆಯ ಕೋಟು, ತಲೆಯ ಮೇಲೆ ಕರಿಯ ಟೊಪ್ಪಿಗೆ. ಕಾಣದಿದ್ದರೂ ಟೊಪ್ಪಿಗೆಯ ಒಳಗೆ ಚಂಡಿಕೆ ಇದ್ದೀತು ಎಂಬ ಅನುಮಾನದಿಂದಲೇ ಇರಬೇಕು. ಮುದುಕನನ್ನು ನೋಡ ನೋಡುತ್ತ ನನಗೆ ಅರಿವಾಗುವ ಮೊದಲೇ ನನ್ನ ಮೋರೆಯ ಮೇಲೆ ಮುಗುಳುನಗೆ ಮೂಡಿತ್ತು. ಹಾಗೆ ಮೂಡಿದ್ದರ ಅರಿವು ಬಂದದ್ದು ನನ್ನನ್ನೇ ನೋಡುತ್ತಿದ್ದ ಮುದುಕ ಏಕಾಏಕೀ ಗಲಿಬಿಲಿಗೊಂಡಾಗ. ಅದನ್ನು ಕಂಡು ನಾನು ನನ್ನ ಮೋರೆಯನ್ನು ಇನ್ನೊಂದೆಡೆ ತಿರುವಿದ್ದೇ ಸರಕ್ಕನೆ ಹೊಳೆದು ಹೋಗಿತ್ತು: ಅರೆ! ನಾನು ಈ ವ್ಯಕ್ತಿಯನ್ನು ಈ ಮೊದಲು ಎಲ್ಲಿಯೋ ಕಂಡಿದ್ದೇನೆ ಎನ್ನುವುದು. ಎಲಾ ಇದರ. ಶ್ರೀನಿವಾಸನ ಮನೆಯಲ್ಲೇ? ಇದೀಗ ಇಲ್ಲಿ ಬರುವಾಗ ಯಾರೋ ಹಿಂಬಾಲಿಸುತ್ತಿದ್ದಾರೆ ಎಂಬ ಅನುಮಾನ ಬಂದು ಹಿಂತಿರುಗಿ ನೋಡಿದಾಗ ಕಳ್ಳತನದಿಂದ ನನ್ನತ್ತ ಬೆನ್ನುತಿರುವಿ ನಿಂತ ವ್ಯಕ್ತಿ ಇವನೇ ಇದ್ದಿರಬಹುದೇ? ಧೋತರ ಉಟ್ಟಿದ್ದನೇ? ಕೋಟು ಟೊಪ್ಪಿಗೆ ಹಾಕಿಕೊಂಡಿದ್ದನೇ? ಯಾವುದೂ ನೆನಪಿಲ್ಲ, ನನ್ನ ಜಗತ್ತಿನಲ್ಲೇ ಮಗ್ನನಾದ ನಾನು ಯಾವುದನ್ನೂ ಸರಿಯಾಗಿ ಲಕ್ಷ್ಯಕ್ಕೆ ತಂದುಕೊಂಡಂತಿರಲಿಲ್ಲ. ಹೊರಗೆ ಬರಬೇಕು ಅನ್ನಿಸಿತು. ಮರುಗಳಿಗೆ ವೋಮೂನ ನೆನಪಾಯಿತು: ಚೋಟುದ್ದದ ಹುಡುಗ. ಬಂಡಾಯಗಾರ. ಅದು ಅವನ ವಯಸ್ಸಿನ ಗುಣ. ನನಗೆ ತುಂಬ ಮೆಚ್ಚಿಕೆಯಾದದ್ದು ಅವನ ಆರೋಗ್ಯ. ಬರೆಯಬೇಕು ಒಂದು ದಿನ ವೋಮೂನ ಬಗ್ಗೆ. "ಸರ್," ಎಂದಿದ್ದ ಒಂದು ದಿನ. "ನಿಮ್ಮ ಮೋರೆ ನೋಡಿದರೇನೇ ಗೊತ್ತಾಗಿಬಿಡುತ್ತದೆ-ನೀವು ಯಾವಾಗಲೂ ನಿಮ್ಮ ಬಗ್ಗೇ ವಿಚಾರಮಾಡ್ತಾ ಇರುತ್ತೀರಿ. ಅದು ಆರೋಗ್ಯಕ್ಕೆ ಒಳ್ಳೆಯದಲ್ಲ." ಎಲಾ ಒಂದೂ ಮಗನೇ ಅಂದುಕೊಂಡೆ. ಪರಿಚಯವಾಗಿ ಹತ್ತು ದಿನಗಳೂ ಆಗಿರಲಿಲ್ಲ, ಆಗ ವೋಮೂಗೆ ತನ್ನ ಮರಾಠಿ ಭಾಷೆಯ ಬಗ್ಗೆ ತುಂಬ ಅಭಿಮಾನವಿದ್ದಂತಿತ್ತು. ನಿಜ ಒಪ್ಪಿಕೊಳ್ಳಲೇ? ನನಗೆ, ಆ ಮಾತುಗಳಿಂದ ಬಹಳ ಸುಖವೆನಿಸಿತ್ತು. ಅದೇ ಭೇಟಿಯಲ್ಲೇ ಎಂದು ತೋರುತ್ತದೆ, 'ವೋಮೂ, ನಿನ್ನ ಹೆಸರನ್ನೇಕೆ ನೀನು ಬದಲಿಸಿಕೊಳ್ಳಬಾರದು?' ಎಂದು ಕೇಳುವ ಹುಚ್ಚು ತನದ ಉಪದ್ವ್ಯಾಪ ಮಾಡಿದ್ದೆ. 'ಯಾಕೆ? ಈಗ ಇದ್ದ ಹೆಸರು ನನ್ನನ್ನು ಕರೆಯಲು ಸಾಲದೆ?' ಎಂದಿದ್ದ. ವೋಮೂನ ಉತ್ತರದಲ್ಲಿ ಸಿಟ್ಟಿಗಿಂತ ಹೆಚ್ಚಾಗಿ ಆತ್ಮವಿಶ್ವಾಸವಿತ್ತು ಎಂಬುದು ಈಗಿನ ಅನ್ನಿಸಿಕೆ. ಆಗ, ನಮ್ಮ

ಪರಿಚಯವಾದ ಮೊದಲಲ್ಲಿ ಮಾತ್ರ ಐತಿಹಾಸಿಕ. ಪರಿಸ್ಥಿತಿಯ ಜೋರಿನ ಮೇಲೆ ಮಾತನಾಡುತ್ತಿದ್ದಾನೆ ಒಂದೂ ಮಗ ಅನ್ನಿಸಿತ್ತು. ನಾಳೆ ಅವನ ಆಫೀಸಿಗೆ ಫೋನ್ ಮಾಡಿ ಕರೆಯಬೇಕು. ವ್ಹೋಮೂ ಹರಿಜನರ ಹುಡುಗ ಎಂದು ಗೊತ್ತಾದಾಗ ಈ ಮನೆಯವರ ಪ್ರತಿಕ್ರಿಯೆ, ಏನಾಗುತ್ತದೋ ನೋಡಬೇಕು...

ತಿರುಗಿ ಮುದುಕನಿದ್ದ ಜಾಗದ ಕಡೆಗೆ ನೋಡಿದಾಗ ಅದೃಶ್ಯನಾಗಿದ್ದ: ನನ್ನ ಸಂಶಯ ಗಟ್ಟಿಯಾಯಿತು. ಅವನನ್ನು ಶ್ರೀನಿವಾಸನಲ್ಲೇ ನೋಡಿರಬೇಕು. ನನ್ನನ್ನು ಬೇಕೆಂದೇ ಹಿಂಬಾಲಿಸಿರಬೇಕು. ರಾತ್ರಿ ಶ್ರೀನಿವಾಸನನ್ನು ಕೇಳಬೇಕು. ಎಂದುಕೊಂಡು ಸಮುದ್ರದತ್ತ ಕಣ್ಣುಹಾಯಿಸಿದೆ. ಸೂರ್ಯಾಸ್ತವನ್ನು ಇದೇ ಮೊದಲೊಮ್ಮೆ ನೋಡುತ್ತಿದ್ದೇನೆ ಎನ್ನುವ ರೀತಿಯಲ್ಲಿ ಪುಳಕಿತನಾಗಿ ಕಣ್ಣರಳಿಸಿದೆ. ಮರುಕ್ಷಣ, ಮತ್ತೆ ಆ ಮುದುಕ ಮನಸ್ಸಿನಲ್ಲಿ ಎಂತಹುದೋ ಅಸ್ಪಷ್ಟ ಭಯಕ್ಕೆ ಕಾರಣನಾಗುತ್ತಿದ್ದಾನೆ ಎನ್ನುವ ಅನ್ನಿಸಿಕೆಯಿಂದ ಅಸ್ವಸ್ಥಗೊಂಡು ನನಗರಿವಾಗುವ ಮೊದಲೇ ಧಡಕ್ಕನೆ ಕುಳಿತಲ್ಲಿಂದ ಎದ್ದೇ ನಿಂತೆ. ಮುಟ್ಟಿ ನೋಡಿದರೆ, ಕಡಲು-ತೀರದ ತಂಪುಗಾಳಿಯಲ್ಲೂ ಶರ್ಟಿನ ಕಾಲರ್ ಒದ್ದೆಯಾಗುತ್ತಿದ್ದ ಭಾವನೆ ಬಂತು. ಯಾವುದನ್ನೂ, ಸಹಜ ಸ್ಫೂರ್ತಿಯಿಂದ ಅನುಭವಿಸಿ ಸಂತೋಷಿಸುವ ಸಾಮರ್ಥ್ಯವನ್ನೇ ಕಳೆದುಕೊಂಡೆನೆ?- ಅದೇ ಏಳುತ್ತಿದ್ದ ಅನ್ನಿಸಿಕೆಯನ್ನು ಹತ್ತಿಕ್ಕಿ ಆ ಮುದುಕ ಯಾರು ಎನ್ನುವುದನ್ನು ಈಗಿಂದೀಗ ಪತ್ತೆಹಚ್ಚಲೇಬೇಕು ಎನ್ನುವ ಜರೂರಿಯಿಂದ ಅಲ್ಲಿಂದ ಹೊರಟುಸೀದ ಶ್ರೀನಿವಾಸನ ಮನೆಯತ್ತ ಹೆಜ್ಜೆ ಇಡಹತ್ತಿದೆ. ದೃಷ್ಟಿಗೆ ಬಿದ್ದ ಪ್ರತಿ ಹೊಸ ವಸ್ತು, ಸಂಧಿಸಿದ ಪ್ರತಿ ಹೊಸ ವ್ಯಕ್ತಿ ಹೀಗೇಕೆ ಒಮ್ಮಿಂದೊಮ್ಮೆಲೇ ಭಯಕ್ಕೆ ಕಾರಣವಾಗುತ್ತಿವೆ ಅನ್ನಿಸಿ ಕೊರಳ ಮೇಲಿನ ಬೆವರನ್ನೊರಸಿಕೊಂಡೆ: ನಾಲ್ಕು ದಿನ ಕ್ಷೌರ ಕಂಡಿರದ ಗಡ್ಡ. ಬಾಯಿ ತೆರೆದಾಗ ತಪ್ಪದೇ ಜಗ್ ಎಂದು ಕಣ್ಣಿಗೆ ಬಿದ್ದ ಕಪ್ಪುಗಟ್ಟಿದ ಹಲ್ಲು ಉಳಿದ ಹಲ್ಲುಗಳಿಂದ ತುಸು ಹೊರಗೆ ಚಾಚಿತ್ತು. ಕನ್ನಡಕದ ಹಿಂದೆ ಗುಳಿಬಿದ್ದ ಕಣ್ಣುಗಳು. ಅವಸರ ಅವಸರವಾಗಿ ಶ್ರೀನಿವಾಸನ ಮನೆಯತ್ತ ಹೆಜ್ಜೆ ಇಡಹತ್ತಿದೆ. ಆ ಮುದುಕನೇ ನನ್ನ ಬೆನ್ನು ಹತ್ತಿದ್ದಾನೆ, ನಾನು ಅವನಿಂದ ತಪ್ಪಿಸಿಕೊಳ್ಳುತ್ತಿದ್ದೇನೆ ಎನ್ನುವ ಹಾಗೆ ಎದೆ ಡವಗುಟ್ಟುತ್ತಿತ್ತು. ಸಮುದ್ರ ದಂಡೆಯನ್ನು ಬಿಟ್ಟು ಟಾರ್-ರಸ್ತೆಗೆ ಬಂದು ಶ್ರೀನಿವಾಸನ ಮನೆಯತ್ತ ಹೊರಳುವ ಓಣಿಯವರೆಗೂ ಕಣ್ಣುಹಾಯಿಸಿದೆ. ಮುದುಕ ಕಾಣಲಿಲ್ಲ. ಇದೀಗ ಓಣಿಯನ್ನು ಹೊಕ್ಕು ಕಣ್ಮರೆಯಾದವನು ಅವನೇ

ಎಂಬ ಭರವಸೆಯಿಂದ ಫುಟ್-ಪಾಥಿನ ಮೇಲಿನ ಜನರ ಪರವೆ ಇಲ್ಲದೆ ಓಡೋಡಿಯೇ ಓಣಿಯನ್ನು ತಲುಪಿ, ಓಣಿಯ ಆ ತುದಿಯ ಮೇಲೆ ದೃಷ್ಟಿ ಚೆಲ್ಲುವಷ್ಟರಲ್ಲಿ, ಅದೇ ಆ ಕ್ಷಣದಲ್ಲೇ ಅವನು ಮತ್ತೆ ಅಡ್ಡಬೀದಿಯನ್ನು ಸೇರಿದ್ದ ಅನುಮಾನ ಬಂದಾಗ ಯಾವ ಭಿಡೆಯೂ ಇಲ್ಲದೇ ಓಡಹತ್ತಿದೆ. ಮುದುಕ ಕೊನೆಗೂ ಭೆಟ್ಟಿಯಾಗಲೇ ಇಲ್ಲ. ನಾನು ಓಡೋಡಿ ಬರುತ್ತಿದ್ದುದನ್ನು ಶ್ರೀನಿವಾಸನ ಮನೆಯಿದ್ದ ಆರು ಮಜಲೆಯ ಕಟ್ಟಡದಲ್ಲಿಯ ಅನೇಕ ಜನರು ನನ್ನನ್ನು ಕಂಡದ್ದು ಲಕ್ಷ್ಯಕ್ಕೆ ಬಂದಾಗ ಗೊಂದಲಿಸಿ ಕಳ್ಳನಂತೆ ಕಂಪೌಡಿನ ಗೇಟು ನೂಕಿ ಒಳಹೊಕ್ಕೆ. ಕೋಣೆ ಸೇರಿದಾಗ ಧಾರಾಳವಾಗಿ ಬೆವೆತಿದ್ದೆ. ದಣಿದು ಮಂಚದ ಮೇಲೆ ಅಡ್ಡವಾದಲ್ಲೇ ಬೆಳಗ್ಗೆ ಬರೆಯಲು ಕೂತಾಗ ಬಾವಿಯಲ್ಲಿ ಮುಳುಗಿಸಿದ ಕೊಡಪಾನ ಎಬ್ಬಿಸುವ ನೀರಗುಳ್ಳೆಯಂತೆ ಗುಳುಗುಳು ಸದ್ದುಮಾಡಿದ ಪ್ರಶ್ನೆ ಹಠಾತ್ತನೆ ಎದ್ದುಬಂತು: ನಾನು ಯಾತರಿಂದ ಓಡುತ್ತಿದ್ದೇನೆ? ಪರಾರಿಯಾಗುತ್ತಿದ್ದೇನೆ? ಶ್ರೀನಿವಾಸನ ಇತಿಹಾಸವನ್ನು ಸಂಕ್ಷಿಪ್ತಗೊಳಿಸಿ ಹೇಳಿದಂತೆ ನನ್ನದನ್ನೂ ಹೇಳಬಹುದೇ? ಯಾಕೆ ಧೈರ್ಯವಾಗುವದಿಲ್ಲ?

ಯಾರೋ ಕದದ ಮೇಲೆ ಬಡೆದ ಸದ್ದು ಕೇಳಿ ಹಾಸಿಗೆಯಿಂದ ಎದ್ದು ದೀಪ ಹಾಕಿ ಕದ ತೆರೆದರೆ ಸ್ವಚ್ಛ ಹಲ್ಲು ತೋರಿಸಿ, ಒಂದು ಗಲ್ಲದಲ್ಲಿ ಗುಳಿ ಮೂಡಿಸಿ ಮೋಹಕವಾಗಿ ನಗುತ್ತ ನಿಂತ ಶ್ರೀನಿವಾಸನ ಎರಡನೆಯ ಮಗಳು-ಚೇತನಾ. ಕಂಡದ್ದೇ ತುಂಬ ತುಂಬ ಹರ್ಷಿತನಾದೆ. ಕೆಲ ಹೊತ್ತಿನ ಮೊದಲಷ್ಟೇ ಕಳಕೊಂಡ ಪ್ರಬುದ್ಧತೆಯನ್ನು ತಿರುಗಿ ಪಡೆದವನ ಹಾಗೆ ಸುಖವಾಗಿ ನಗುತ್ತ 'ಬಾ ಚೇತನಾ ಬಾ' ಎಂದು ಅವಳನ್ನು ಒಳಗೆ ಕರೆದು ಕುರ್ಚಿ ಕೊಟ್ಟೆ. ಬಚ್ಚಲು ಮನೆಗೆ ಹೋಗಿ ತಣ್ಣಗಿನ ನೀರಿನಿಂದ ಮೋರೆ ತೊಳೆದು ಹೊರಗೆ ಬಂದು ಚೇತನಳ ಇದಿರಿನ ಕುರ್ಚಿಯಲ್ಲಿ ಕುಳಿತುಕೊಳ್ಳುವಾಗ ನಾನು ಬೇರೆಯೇ ವ್ಯಕ್ತಿಯಾಗಿದ್ದೆ. ಈಗ ಅರಿವಿಗೆ ಬಂತು: ಗಾಳಿವಿಹಾರಕ್ಕೆಂದು ಹೊರಡುವ ಮೊದಲಷ್ಟೇ ಫಿರೋಜ್ ಬಹಳ ವರ್ಷಗಳ ಹಿಂದೆ ಕೇಳಿದ-ನನ್ನನ್ನು ಮತ್ತೆ ಮತ್ತೆ ಕೆಣಕಿದ-ಪ್ರಶ್ನೆಯೊಂದರ ನೆನಪಿನಿಂದ ನನ್ನೊಳಗೆ ಎಚ್ಚತ್ತ ಕೋಳೀಗಿರಿಯಣ್ಣನ ಕೇರಿಯ ನಾಗಪ್ಪ ನಿದ್ದೆ ಹೋಗಿ, ಪ್ರಾ. ನಾಗನಾಥ ತಿರುಗಿ ಎಚ್ಚರವಾಗಿದ್ದ. ನಗುತ್ತ, ಇದೀಗ ನಡೆದ ಘಟನೆಯನ್ನು ಚೇತನಳಿಗೆ ಹೇಳಿದೆ, ಅದನ್ನು ಕೇಳಲೆಂದೇ ಅವಳು ಬಂದಿದ್ದಳೆಂಬ ಖಾತ್ರಿಯಿಂದ. ಚೇತನಾ ಬಿದ್ದುಬಿದ್ದು ನಕ್ಕಳು. ಬದಿಯ ಕೋಣೆಯ ಬಾಲ್ಕನಿಯಿಂದ ಅವಳೂ

ನೋಡಿದ್ದಳಂತೆ, ನಾನು ಓಡೋಡಿ ಬರುತ್ತಿದ್ದುದನ್ನು. ಅವಳ ಮುಕ್ತಮನಸ್ಸಿನ ನಗುವಿನೊಂದಿಗೆ ನಾನೂ ಒಂದಾಗಿ ನಗುತ್ತಿರುವಾಗ ಚೇತನಾ ಅಂದಳು: "ಕಾಕಾ, ಅವನು ನಮ್ಮ ಅಡಿಗೆಯವನು. ರಜೆಯ ಮೇಲೆ ಊರಿಗೆ ಹೋದವನು ನಿನ್ನೆ ಸಂಜೆಗಷ್ಟೇ ತಿರುಗಿ ಬಂದಿದ್ದಾನೆ."

ನಿನ್ನೆ ನಡೆದ ಈ ಮೋಜಿನ ಸಂಗತಿಯನ್ನು ಕುರಿತು ಬರೆಯಬೇಕೆಂದುಕೊಂಡದ್ದು ವಹಿಯ ಮೇಲೆ ಮೂಡಿರಲೇ ಇಲ್ಲ ಎಂಬದು ಲಕ್ಷ್ಯಕ್ಕೆ ಬಂದು, ನಾಗಪ್ಪ ತನ್ನಷ್ಟಕ್ಕೇ ನಕ್ಕ. ತೆರೆದಿಟ್ಟ ವಹಿ ತೆರೆದೇ ಇತ್ತು. ನೆನಪಿಗೆ ಮೂಲ ಪ್ರಚೋದನೆಯಾದ ಈ ಮೊದಲಿನ ಟಿಪ್ಪಣೆಯನ್ನು ಇನ್ನೊಮ್ಮೆ ಓದಿ ನೋಡಿ ಇದನ್ನು ಯಾವಾಗ ಬರೆದೆ ಎಂದು ಚಕಿತನಾದವನ ಹಾಗೆ ಕಣ್ಣರಳಿಸಿದ. ಬರೆದ:

"ಟಿಪ್ಪಣೆ ಎಂಟು: ಹೊರಗೆ ಬರಲು ಯತ್ನಿಸಿದಷ್ಟೂ ಒಳಗೇ ಜಗ್ಗುತ್ತವೆ ಹಾಳು ನೆನಪುಗಳು. ಬೆನ್ನ ಹಿಂದೆ ಗುಟ್ಟಾಗಿ ಬೀಳುತ್ತಿದ್ದ ಹೆಜ್ಜೆಗಳ ಸುತ್ತ ಎದ್ದುನಿಲ್ಲುತ್ತವೆ ನಿಗೂಢವಾದ ಪುರಾಣಗಳು: ನಾನೇನು ಹೆದರಿ ಓಡುತ್ತಿದ್ದೆನೋ? ಏನು ಓಡುತ್ತಿದ್ದುದರಿಂದಲೇ ಹೆದರಿಕೆಯಾಗುತ್ತದೆಯೋ?...ವಿಲ್ಯಮ್‌ಜೇಮ್ಸನನ್ನು ಇನ್ನೊಮ್ಮೆ ಓದಬೇಕು..."

## ಅಧ್ಯಾಯ ಮೂರು

ಅರ್ಥವಾಗದ, ಒಂದು ತರದ ಅಪರಾಧಭಾವವನ್ನು ಹೋಲುವ ಹಳಹಳಿಯ ಕರಿ ನೆರಳು ಮನಸ್ಸನ್ನು ಕವಿದಾಗಲೂ ಖುಶಿಯ ಗೆರೆಗಳಂತೆ ಝುಗಝುಗಿಸಿ ಸುಖ ಕೊಡುವ ಕಲವು ಕ್ಷಣಗಳೂ ನಾಗಪ್ಪನ ಬದುಕಿನಲ್ಲಿವೆ. ಆಗೊಮ್ಮೆ ಈಗೊಮ್ಮೆ ಯಾವ ಕಾರಣವೂ ಇಲ್ಲದೇನೇ ಮೂಡಿಬಂದಾಗ ಕರುಳಿನ ಒಳಮೈಯೆಲ್ಲ ಬೆಚ್ಚಗೆ ಕಾದ ಭಾವನೆ. ಇವೊತ್ತು ಬೆಳಿಗ್ಗೆ ಹಾಸಿಗೆಯಿಂದೆ ಏಳುವ ಸಿದ್ಧತೆಯಲ್ಲಿದ್ದಾಗಲೇ ಅಮ್ಮನ ನೆನಪು. ಅಮ್ಮ ಸತ್ತು ಈಗ ಎಷ್ಟು ಮುವ್ವತ್ತು ವರ್ಷಗಳ ಮೇಲೆ ಆಗಿರಬೇಕು. ಇತ್ತೀಚೆ, ಬಹಳ ದಿನಗಳಿಂದ ಬಂದಿರದ ನೆನಪು ಇಂದೇ ಏಕೆ ಬಂದಿತೋ: ಅಜ್ಜನ ಮನೆಯದೆಂದು ತೋರುವ ಅಂಗಳದಂಚಿನಲ್ಲಿಯ ಹತ್ತು ಫೂಟು ಎತ್ತರದ ಪಾಗಾರ. ಹೆಬ್ಬಾಗಿಲಲ್ಲಿ ಸೊಂಟದೆತ್ತರದ ಕಬ್ಬಿಣದ ಸರಳಿನ ಕಟಕಟೆ. ಒಂದು ಕೈಯಲ್ಲಿ ತೆಂಗಿನಕಾಯಿ, ಹೂಸರ, ವೀಳ್ಯದೆಲೆ, ಹೂಬತ್ತಿಗಳನ್ನು ಹೊತ್ತ ಹರಿವಾಣವನ್ನೂ ಇನ್ನೊಂದು ಕೈಯಲ್ಲಿ ನಾಲ್ಕು ವರ್ಷದ ತನ್ನ ಕೈಯನ್ನೂ ಹಿಡಿದು ದಾಟುತ್ತಿದ್ದ ಅಮ್ಮನ ಚಿತ್ರ. ಜಾಜೀಹೊವಿನ ಸರದ ವಾಸನೆ ಈಗ ಮತ್ತೆ ಮೂಗಿನಲ್ಲಿ ನಿಂತ ಭಾವನೆ. ಇದಿರಿನ ಮಠದಲ್ಲಿಯ ರಾಮದೇವರಿಗೆ ಆರತಿ ಕೊಡಲು ಹೋಗುತ್ತಿರಬೇಕು. ರಸ್ತೆಯಿಂದಲೇ ಕಾಣುವ ಗರ್ಭಗುಡಿಯಲ್ಲಿ ಹಣತೆ, ತೂಗು-ದೀಪಗಳ ಬೆಳಕಿನಲ್ಲಿ ಬೆಳಗಿತ ಕಪ್ಪಶಿಲೆಯ ರಾಮ-ಸೀತೆಯರ ಈಗಲೂ ಕಣ್ಣಿಗೆ ಕಟ್ಟಿದಂತಹ ಸುಂದರ ಮೂರ್ತಿಗಳು. ಅಮ್ಮನ ನೆನಪಿನೊಂದಿಗೆ ಈ ದೇವರ ಮೂರ್ತಿಗಳ ನೆನಪೂ ಮೂಡಿ ನಿಂತದ್ದು ಇದೇ ಮೊದಲೇನೋ. ಮಲಗಿದಲ್ಲಿಂದ ಏಳಬೇಕೆನ್ನಿಸಲಿಲ್ಲ. ಹಾಗೇ ಬಿದ್ದಿರೋಣ ಅನ್ನಿಸಿತು. ಮನಸ್ಸು ಬಹಳ ಖುಶಿಯಲ್ಲಿತ್ತು. ಈ ಖುಶಿಯ ಬೇರುಗಳಿಂದ ಹುಟ್ಟಿದೂರಿನ ಬಗ್ಗೆ ಬರೆಯಬೇಕು ಅನ್ನಿಸಿತು. ಹೌದು, ಎಲ್ಲವನ್ನೂ ಅಲ್ಲಿಂದಲೇ ಆರಂಭಿಸಬೇಕು. ಬೇರುಗಳಿಂದ, ಬೇರಿಳಿದ ಮಣ್ಣಿನಿಂದ. ಚಿಕ್ಕಂದಿನ ಗೆಳೆಯರಿಂದ. ಗೆಳತಿಯರಿಂದ ತನ್ನ ಆರೋಗ್ಯದ ಆಕರಗಳಾದ ಗಿರಿಯಣ್ಣ, ಹೊನ್ನಪ್ಪ, ಶೇಖಫರೀದ, ಉತ್ತುಮಿ, ಪಾರು, ದಾಮು, ಎಂಕು ಮುರ್ಕುಂಡಿ ದಿನ್ನಿ. ಬಸ್ತ್ಯಾಂವ್, ಕಾಣೇಗೌಡರಿಂದ. ಫಿರೋಜ್ ಶ್ರೀನಿವಾಸರಿಂದ ದೂರವಾದ ಹಳ್ಳಿಯ ಕೊಂಪೆಯಿಂದ. ಶ್ರೀನಿವಾಸನ ಮನೆಯಲ್ಲೇ ಕುಳಿತು ಬರೆಯಬೇಕು.

ಬಿದ್ದಲ್ಲೇ ಹೊಳೆಯಿತು: ತಾನು ಇಲ್ಲಿಗೆ ಬಂದು ಎರಡು ದಿನಗಳಾಗುತ್ತ ಬಂದರೂ ಈ ಮನೆಯಲ್ಲಿ ಶ್ರೀನಿವಾಸ, ಚೇತನರಿಬ್ಬರನ್ನು ಬಿಟ್ಟು ಯಾರ ಒಡನೆಯೂ, ಮಾತನಾಡಿಲ್ಲ. ಮನೆಯಲ್ಲಿ ಯಾರು ಯಾರು ಇದ್ದಾರೆ ಎಂಬುದೂ ಸರಿಯಾಗಿ ಗೊತ್ತಿಲ್ಲ. ಶ್ರೀನಿವಾಸನಿಗೆ ಮೂರು ಮಕ್ಕಳು ಎಂದು ಗೊತ್ತಾದದ್ದೇ ನಿನ್ನೆ ಚೇತನಾ ಬಂದಾಗ. ಈಗ ಸ್ಕೂಲು ಕಾಲೇಜುಗಳಿಗೆ ರಜೆಯಾದ್ದರಿಂದ ಹಿರಿಯ ಮಗಳು ಹಾಗೂ ಕಿರಿಯ ಹುಡುಗ ಇಬ್ಬರೂ ಕುಮಟೆಗೆ ಸೋದರತ್ತೆಯ ಮನೆಗೆ ಹೋಗಿದ್ದಾರಂತೆ. ಶ್ರೀನಿವಾಸ ತಾನಾಗಿಯೇ ಇವರಾರ ಬಗ್ಗೆ ಏನೂ ಹೇಳಿರಲಿಲ್ಲ. ಆಶ್ಚರ್ಯವೆಂದರೆ ತಾನೂ ಏನನ್ನೂ ಕೇಳಿರಲಿಲ್ಲ. ಶ್ರೀನಿವಾಸನ ತಾಯಿ ಇನ್ನೂ ಬದುಕಿದ್ದಾಳೆಯೆ? ಎಲ್ಲಿರುತ್ತಾಳೆ? ಗೋಕರ್ಣದಲ್ಲೇ? ಶ್ರೀನಿವಾಸನ ಆಗ್ರಹಕ್ಕೆ ಒಪ್ಪಿ ಇಲ್ಲಿಗೆ ಬಂದ ದಿನ ಕಟ್ಟಡದಲ್ಲಿಯ ಆನೇಕರ ಕುತೂಹಲಕ್ಕೆ ಕಾರಣನಾಗಿದ್ದೆ. ಒಂದು ಸೂಟ್‌ಕೇಸಿನಲ್ಲಿ ಕೆಲವು ಪುಸ್ತಕಗಳನ್ನು, ಏಳು ದಿನಗಳ ಮಟ್ಟಿಗೆ ಸಾಕಾಗಬಹುದಾದಷ್ಟು ಬಟ್ಟೆಗಳನ್ನು ತಂದಿದ್ದೇನೆ. ಶ್ರೀನಿವಾಸನ ಆಕ್ರಮಣಶೀಲ ಒತ್ತಾಯಕ್ಕೆ ಒಪ್ಪದೇ ಇರುವದು ಸಾಧ್ಯವೇ ಆಗದೆ ಹೊರಟು ಬಂದಿದ್ದರೂ ಎಂಟು ದಿನಗಳಿಂದ ಹೆಚ್ಚಿನ ಕಾಲ ಇಲ್ಲಿರುವ ಮನಸ್ಸಿಲ್ಲ...

ಎಂಟು ದಿನಗಳ ಮಾತಿಗೆ ಬಂದದ್ದರಿಂದಲೇ ಇಲ್ಲಿಯ ಯಾರಲ್ಲೂ ತೊಡಗಿಸಿಕೊಳ್ಳುವ ಮನಸ್ಸಾಗಲಿಲ್ಲವೇನೊ ಎಂದು ಒಂದು ಕ್ಷಣ ತನ್ನ ನಿರಾಸಕ್ತಿಯನ್ನು ಸಮರ್ಥಿಸಿಕೊಂಡ, ನಾಗಪ್ಪ—ಎಂದಿನಂತೆಯೇ. ಅಪರಿಚಿತರ ಬಗ್ಗೆ ತನ್ನ ಸ್ವಭಾವ-ಶಿಲ್ಪದಲ್ಲೇ ನೆಲೆನಿಂತ ಭಯಕ್ಕೆ ಸಮೀಪವಾದ ಮುಜುಗರ, ಸಂಕೋಚಗಳಿಂದಾಗಿ ಹೊಸಬರೊಂದಿಗೆ ಬೆರೆಯುವದೆಂದರೇನೆ ಹಿಂದೆಗೆಯುತ್ತಾನೆ. ಹಾಗೆ ನೋಡಿದರೆ ತನ್ನ ಈ ಸದ್ಯದ ನೌಕರಿ ತನ್ನ ಮೂಲಪ್ರಕೃತಿಗೆ ಒಗ್ಗುವಂತಹದಲ್ಲವೆಂದು ಗೊತ್ತಿದ್ದೂ ಅದಕ್ಕೆ ಅಂಟಿಕೊಂಡಿದ್ದೇನೆ ಎಂಬುದರ ಅರಿವು ನಾಗಪ್ಪನಿಗಿದೆ. ಶ್ರೀನಿವಾಸನ ಮನೆಯವರನ್ನು ಕುರಿತು ಆರಂಭವಾದ ವಿಚಾರ ತನ್ನ ನೌಕರಿಗೆ ಬಂದು ಮುಟ್ಟುವ ಭಯವಾಗಿ ಹಾಸಿಗೆಯಲ್ಲಿ ಎದ್ದೇ ಕುಳಿತ. ಅಡಿಗೆಯವನು ಮಾತ್ರ ತಿರುಗಿ ಕಣ್ಣಿಗೆ ಬಿದ್ದಿರಲೇ ಇಲ್ಲ ಎಂಬುದನ್ನು ನೆನೆದುಕೊಂಡ. ಪಾಪ! ನಿನ್ನೆ ತಾನು ಅವನ ಹಿಂದೆ ಓಡೋಡಿ ಬಂದದ್ದನ್ನು ಕಂಡಿದ್ದರೆ ಅಥವಾ ಹಾಗೆಂದು ಚೇತನಳಿಂದ ಗೊತ್ತಾಗಿದ್ದರೆ ತನ್ನ ಬಗ್ಗೆ ಏನೆಲ್ಲ ಅವನು ಬಗೆಯುತ್ತಾನೊ! ಶ್ರೀನಿವಾಸನ ಹೆಂಡತಿ ತನ್ನನ್ನು ಈ ವರೆಗೆ

ಮಾತನಾಡಿಸಿಲ್ಲ. ಆದರೆ ಮೋರೆ ನೋಡಿದರೆ ತನ್ನ ಬಗ್ಗೆ ಶ್ರೀನಿವಾಸನಿಂದ ಬಹಳಷ್ಟು ತಿಳಿದಿದ್ದಾಳೆ ಎಂಬ ಸಂಶಯ. ಶ್ರೀನಿವಾಸನ ಮದುವೆಗೆ ತಾನು ಹೋಗಿರಲಿಲ್ಲ, ಊರಲ್ಲಿದ್ದೂ. ಶ್ರೀನಿವಾಸ ತನ್ನ ಬಗ್ಗೆ ಏನೇನು ಹೇಳಿರಬಹುದು? ಚೇತನಳ ಕಣ್ಣುಗಳಲ್ಲೂ ಗೊತ್ತಿದೆ ಎಂಬಂತಹ ತುಂಟತನದ ಹೊಳಪಿರಲಿಲ್ಲವೆ? ಮದುವೆಯಾಗದೇ ನೇಪಾಳೀ ಹೆಣ್ಣೊಬ್ಬಳನ್ನು ಇಟ್ಟುಕೊಂಡ ಈ ಬ್ರಹ್ಮಚಾರಿಯ ಬಗ್ಗೆ ಇವರಿಗೆಲ್ಲ ಇದ್ದಿರಬಹುದಾದ ಕುತೂಹಲದಲ್ಲಿ ತಾತ್ಸಾರವೂ ಅಡಗಿರಬಹುದೆ?...

ಹಾಸಿಗೆಯಿಂದ ಎದ್ದು ಕಿಟಕಿಗೆ ಬಂದಾಗ 'ಅಹಾ!' ಎನ್ನಿಸಿತು. ಚುಮು ಚುಮು ಬೆಳಕಿನಲ್ಲಿ ತಂಪಾಗಿ ಕಣ್ಣುಬಿಡುತ್ತಿದ್ದ ಪರಿಸರ: ಸರಿಯಾಗಿ ಕಾಣದಿದ್ದರೂ ಸದ್ದಿನಿಂದಲೇ ತನ್ನ ಇರವನ್ನು ಸ್ಪಷ್ಟಗೊಳಿಸುತ್ತಿದ್ದ ಸಮುದ್ರದ ನೀರು. ಊರಿನ ನೆನಪು ತರುತ್ತಿದ್ದ ಮಳಲು-ದಂಡೆ, ಹಿತ್ತಲು. ಕದ ಬಡೆದ ಸದ್ದು ಕೇಳಿಸಿದ್ದರಿಂದ ಹೋಗಿ ಬಾಗಿಲು ತೆರೆದ. ಚಹದ ಕಪ್ಪನ್ನು ಚಿಕ್ಕ ಟ್ರೇದಲ್ಲಿ ಹಿಡಿದು ನಿಂತ ಅಡಿಗೆಯವನು ಒಳಗೆ ಬಂದು ಟ್ರೇಯನ್ನು ಟೇಬಲ್ಲಿನ ಮೇಲಿಟ್ಟು ಮಾತನಾಡುವ ಕುತೂಹಲವನ್ನು ಕೂಡ ತೋರಿಸದೆ ಹಾಗೇ ಹೊರಟೇಬಿಟ್ಟ. ಗಿಡ್ಡ ಪಂಜೆ, ಬನೀನು, ಹೆಗಲಮೇಲೊಂದು ಹಳತಾದರೂ ಸ್ವಚ್ಛವಾದ ನೆಪ್‌ಕಿನ್. ತಲೆಗೆ ಚಂಡಿಕೆಯಿರಲಿಲ್ಲ ಎಂಬುದು ಚಹ ಕುಡಿಯುವಾಗ ಲಕ್ಷ್ಯಕ್ಕೆ ಬಂದು ಮನಸ್ಸಿನಲ್ಲೇ ನಕ್ಕ...

ಊರಿನ ಬಗ್ಗೆ ಬರೆಯಬೇಕೆಂದು ನಿಶ್ಚಯಿಸಿಕೊಂಡು ಬರೆಯಲು ಕೂತರೆ ಕಾಗದದ ಮೇಲೆ ಮೂಡಹತ್ತಿದ್ದು ತನ್ನ ಮತ್ತು ಫಿರೋಜನ ಮೊದಲ ಭೇಟಿಯ ನೆನಪೇ: ಕಳೆದ ಹದಿನೆಂಟು ವರ್ಷಗಳಿಂದಲೂ ಶನಿಯ ಹಾಗೆ ಕಾಡುತ್ತ ಬಂದ ಈ ವ್ಯಕ್ತಿ ತನ್ನ ಬಗ್ಗೆ ತೋರಿದ ನಿಷ್ಕಾರಣವಾದ ಕ್ರೌರ್ಯಕ್ಕೆ, ನಿಷ್ಠುರವಾದ ತಾತ್ಸಾರಕ್ಕೆ ಕಾರಣ ಹುಡುಕುತ್ತ ಹೋದರೆ ಈ ಮೊದಲ ಭೇಟಿಗೇ ಬಂದು ಮುಟ್ಟಬೇಕೇನೋ. ಹಾಗಾದರೆ ಈಗ ಇದರ ಬಗೆಗೇ ಬರೆಯಲು ಆರಂಭಿಸಿದ್ದಕ್ಕೆ ತನಗರಿವಿಲ್ಲದೇನೇ ತಾನು ತೊಡಗಿಸಿಕೊಂಡ ಈ ಮೂಲದ ಶೋಧವೇ ಕಾರಣವೆ? ಮನುಷ್ಯ ಮೂಲದ ಶೋಧನೆಗೆ ತೊಡಗಿದಾಗ ಅಂತರ್ಮುಖನಾಗುತ್ತಾನೋ ಅಥವಾ ಅಂತರ್ಮುಖನಾದಾಗಲೇ ಮೂಲದ ಶೋಧನೆಗೆ ತೊಡಗುತ್ತಾನೋ? ಇದೋ ಮತ್ತೆ ವಿಲ್ಯಮ್‌ಜೇಮ್ಸ್!...

“ಟಿಪ್ಪಣಿ ಒಂಭತ್ತು: ನನ್ನೆಲ್ಲ ನೋವಿಗೆ ಫಿರೋಜನೇ ಕಾರಣನೆಂದು ತಿಳಿಯುವುದರಲ್ಲೇ ನಾನು ಸಮಾಧಾನಪಡುತ್ತಿಲ್ಲವಷ್ಟೆ? ಯಾಕೋ ಫಿರೋಜನ ಬಗ್ಗೆ ಮಾತೆತ್ತಿದಾಗೆಲ್ಲ ಎಲ್ಲ ನನ್ನದೇ ತಪ್ಪು ಎಂಬ ನಿಲುಗಡೆಗೆ ಬರುತ್ತೇನೆ. ಫಿರೋಜನ ಹಾಗೆ ಮೋರೆಯ ಮೇಲೆ ಯಾವ ಭಾವನೆಗಳನ್ನೂ ಪ್ರಕಟಿಸದೇ, ಉಳಿದವರನ್ನೇ ಮಾತನಾಡಲು ಹಚ್ಚಿ ತಾನು ಮಾತ್ರ ಆಸ್ಥೆಯಿಂದ ಕೇಳುತ್ತಿದ್ದರೂ ನಿರ್ಲಿಪ್ತನಂತೆ ತೋರಿಸಿಕೊಳ್ಳುವ, ಆಗೊಮ್ಮೆ ಈಗೊಮ್ಮೆ ಮಾತನಾಡಿದ್ದೇ ಆದರೆ ಅತ್ಯಂತ ಆಳದಿಂದ ಬಂದ ಜ್ಞಾನವೇ ಹೆಪ್ಪುಗಟ್ಟಿ ಸಿದ್ಧವಾದ ಮುತ್ತುಗಳನ್ನೇ ಉದುರಿಸುತ್ತಾನೋ ಎನ್ನುವ ಮೋಡಿಯಲ್ಲಿ ಮಹದ್‌ಗಾಂಭೀರ್ಯದಲ್ಲಿ ಒಂದೋ ಎರಡೋ ಮಾತುಗಳನ್ನಾಡುವ ತಾನು ಇದೀಗ ಮಾತನಾಡಿದ್ದನ್ನು ಮರುಗಳಿಗೆಯಲ್ಲೇ ಅಲ್ಲಗಳೆದು ಉಳಿದವರನ್ನು ಗೊಂದಲಗೆಡಸಿ ತಾನು ಸದಾ ಅನೂಹ್ಯನಾಗೇ ಉಳಿಯುವ ಈ ನಾಗರಿಕ ಪ್ರಾಣಿಯನ್ನು ಹೊಟ್ಟೆಯೊಳಗಿಂದ ದ್ವೇಷಿಸುತ್ತೇನೆ.

ಫಿರೋಜನ ವ್ಯಕ್ತಿತ್ವದ ವೈಖರಿಯೆಲ್ಲ ಪ್ರಕಟವಾಗುತ್ತಿದ್ದದ್ದು ಅವನು ಸೇದುವ ಪೈಪ್ ಮುಖಾಂತರ. ಎಲ್ಲವನ್ನೂ ಮುಚ್ಚಿಟ್ಟುಕೊಂಡೂ ಎಷ್ಟೆಲ್ಲವನ್ನು ಬಿಚ್ಚಿದನೆಂಬ ಭ್ರಮೆ ಹುಟ್ಟಿಸುವಲ್ಲಿ. ಇವನಿಗೆ ಪೈಪ್ ಬಹಳ ದೊಡ್ಡ ಸಾಧನ. ಬಹಳ ಖೋಟಾ-ಮನುಷ್ಯ ಸೂಳೇಮಗ. ತಂಬಾಕಿನ ಡಬ್ಬಿಯನ್ನು ತೆರೆಯುವ ಠೀವಿಯೇನು! ತಾನು ಸೇದುತ್ತಿದ್ದದ್ದು ಪರದೇಶದಿಂದ ತರಿಸಿದ್ದ Three Nuns ಎಂಬ ಪ್ರಖ್ಯಾತ ಹೊಗೆಸೊಪ್ಪೇ ಎಂಬುದನ್ನು ಪ್ರದರ್ಶಿಸುವ ಆಢ್ಯ ಶೈಲಿಯೇನು! ಪೈಪಿನ ಸೇದುವ ಕೊಳವೆಯಲ್ಲಿ ದಬ್ಬಣದಂತ ಉದ್ದಕಡ್ಡಿಯನ್ನು ಹಾಕಿ ಹಿಂದಕ್ಕೆ ಮುಂದಕ್ಕೆ ಜಗ್ಗಿ (ಹಲ್ಕಟ್ ಸೂಳೇಮಗ!) ಕೊಳವೆಯ ತುದಿಯನ್ನು ತುಟಿಗಳಲ್ಲಿ ಹಿಡಿದು ಗಾಳಿ ಊದಿ ಸ್ವಚ್ಛಮಾಡುವಾಗ ಮೂಗಿನ ಹೊರಳೆಗಳನ್ನು ಅರಳಿಸುತ್ತ, ಕಣ್ಣು ಮಿಟುಕಿಸುತ್ತ, ಈಗ ಸ್ವಚ್ಛವಾಯಿತು ಎಂಬ ಸಮಾಧಾನ ಪ್ರಕಟಿಸಿ ಕಾಜಿನ 'ಎಶ್ ಟ್ರೇ' ದ ಅಂಚಿನ ಮೇಲೆ ಕುಟ್ಟಿ, ತಿರುಗಿ ತುಟಿಗಳಲ್ಲಿ ಹಿಡಿದು ಊದಿ, ಪೈಪ್‌ನ ಬಾಯಲ್ಲಿ ತಂಬಾಕನ್ನು ತುಂಬಿ ಹೆಬ್ಬೆರಳನ್ನು ಹೆಟ್ಟಿ ಅದುಮುವ ಪರಿಯೇನು! ಈ ಎಲ್ಲ ಸಂಭ್ರಮ ನಡೆಯುತ್ತಿರುವಾಗ ನಾವು ಈ ಒಂದೂ ಮಗನ ಚಂದ ಮೂತಿಯನ್ನು ನೋಡುತ್ತ ಕೂಡ್ರಬೇಕು. ಸ್ವತಃ ತಾನೇ ಸಂಪೂರ್ಣ ಮೌನ ಧರಿಸಿರುವಾಗೂ ತನ್ನ ವ್ಯಕ್ತಿತ್ವವೇ: ತನ್ನ ಜೊತೆ ಮಾತನಾಡಲು ಬಂದವರ ಮೇಲೆ

ಮೋಹಿನೀ ಪ್ರಭಾವವನ್ನು ಬೀರುತ್ತಿದೆಯೆಂಬ ರಮ್ಯಕಲ್ಪನೆಯೊಂದಿಗೆ ಸುಂದಾಡುತ್ತ—'ನೀನು ಮಾತನಾಡಲ್ಲ,' ಎಂದು ಆಹ್ವಾನಿಸುವಂತೆ ತನ್ನ ಕಣ್ಣಿ ಮೂಲೆಯಿಂದ ನೋಡುತ್ತಾನೆ. ಯಾಕೋ, ಮಾತನಾಡದ ಮನುಷ್ಯ ನನ್ನನ್ನು ಹೆದರಿಸುತ್ತಾನೆ. ಫಿರೋಜ್ ಕೂಡ ಅಂದು ನನ್ನಲ್ಲಿ ಹೊಕ್ಕುಳ ಸುತ್ತಲೂ ನಿಷ್ಕಾರಣವಾಗಿ ಭಯದ ಅಲೆಗಳನ್ನು ಎಬ್ಬಿಸುತ್ತಿದ್ದ: ನಾನು ತನ್ನ ಪ್ರತಿಸ್ಪರ್ಧಿಯೆಂಬಂತೆ ನನ್ನ ಆಳ-ಅಗಲಗಳನ್ನು ಅಳೆಯುತ್ತ, ಕಾಡು-ಪ್ರಾಣಿಯೊಂದು ತನಗಿದಿರಾದ ಬೇಟೆಯ ಕಣ್ಣುಗಳಲ್ಲೇ ದೃಷ್ಟಿ ನೆಟ್ಟು ಅದು ಮಾಡಲಿದ್ದ ತಪ್ಪು ಚಾಲನೆಯ ಹಾದಿ ಕಾಯುವ ಗತ್ತಿನಲ್ಲಿ ಪ್ರಶ್ನೆಕೇಳಿದ: ಈಗ ಹಿಂತಿರುಗಿ ನೋಡಿದಾಗ ಈಗಿನ ಕಂಪನಿಯಲ್ಲಿ ನನ್ನ ಇಡೀ ಭವಿಷ್ಯವನ್ನೇ ನಿರ್ಧರಿಸಿದ ಅಂತಕ-ಪ್ರಶ್ನೆಯೆಂದು ತೋರುತ್ತದೆ: ನನ್ನ ಅಪ್ಪನನ್ನು ಕುರಿತು, ಅವನ ವೃತ್ತಿಯನ್ನು ಕುರಿತು..."

ನನ್ನ ಹುಟ್ಟಿಗೆ ಕೈಹಾಕಬೇಡವೋ ಬೋಳೀ ಮಗನೇ. ಈ ಕಂಪನಿ ನನ್ನನ್ನು ಕೆಲಸಕ್ಕೆ ಸೇರಿಸಿಕೊಂಡದ್ದು ನನ್ನ ಯೋಗ್ಯತೆಗಳನ್ನು ಗಮನಿಸಿಯೇ ಹೊರತು ಅಪ್ಪನ ಇತಿಹಾಸವನ್ನಲ್ಲ. ನಿನ್ನ ಚರಿತ್ರೆಗೆ ಕೈ ಹಾಕಿದರೆ ಭೂಗೋಳ ಶಾಸ್ತ್ರವೂ ಒಳಗೊಳ್ಳಬೇಕಾಗುತ್ತದೆಯೋ ಭಂಭೋದ್. ಗೊತ್ತಿಲ್ಲವೇನೋ ನಿನ್ನ ಉದ್ದ ಮೂಗಿನ ರಮ್ಯ ಪ್ರವಾಸಕಥನ. ಬಾ. ಪ್ರಸ್ತುತಕ್ಕೆ ಬಾ. ವರ್ತಮಾನಕ್ಕೆ ಬಾ. ಕುಸ್ತಿ ಆಡುವದೇ ಇದ್ದಲ್ಲಿ ಇಲ್ಲೇ ಆಡೋಣ-ಬಿಸಿಲು ಬಿದ್ದ ಈ ಅಂಗಳದಲ್ಲಿ. ಕತ್ತಲೆ ಈ ತುಂಬಿದ ಗುಹೆಗಳಲ್ಲಿ ಬೇಡ... ಇದೇಕೆ ಫಿರೋಜನನ್ನು ಹೀಗೆ ಕಲ್ಪನೆಯಲ್ಲೇ ಆಹ್ವಾನಿಸುತ್ತ ಅವನು ಮಾಡಲಿರುವ ಚಾಲನೆಗಳನ್ನು ಊಹಿಸಿಕೊಳ್ಳುವುದರಲ್ಲೇ ತನ್ನ ಆಯುಷ್ಯವನ್ನೇ ಹಾಳುಮಾಡಿಕೊಳ್ಳುತ್ತಿದ್ದೇನೆ ಎನ್ನುವದು ಗೊತ್ತಾಗದೇ ದಣಿವು ಬಂದಂತೆನಿಸಿ ನಾಗಪ್ಪ ಕುರ್ಚಿ ಬಿಟ್ಟು ಎದ್ದ. ಕೋಣೆಯಲ್ಲಿ ಶತಪಥ ಹಾಕುತ್ತಿರುವಾಗ ಫಿರೋಜನ ಬಗ್ಗೆ ವ್ಯಕ್ತವಾದ ದ್ವೇಷಕ್ಕೆ ಪ್ರತಿಕ್ರಿಯೆ ಶುರುವಾಗಿ ಮನಸ್ಸಿನಲ್ಲಿ ತಪ್ಪಮಾಡಿದ ಭಾವನೆ: ಇದರಡಿಯಲ್ಲಿದ್ದದ್ದು ನನ್ನ ಪುಕ್ಕಲುತನವೇ-ಅಪ್ಪನನ್ನು ಇದಿರಿಸುವ ಪುಕ್ಕಲುತನ. ಶ್ರೀನಿವಾಸನ ಮನೆಯ ಅಡುಗೆಯವನನ್ನು ನೋಡಿದಾಗ ಅನುಭವದ ಆಳದಲ್ಲಿ ಕಣ್ಣುಬಿಟ್ಟದ್ದು ಅಪ್ಪನ ನೆನಪೇ?

ಎಂದೋ ಓದಿದ್ದರ ನೆನಪು: ಅಬ್ಜ ವರ್ಷಗಳ ವಿಕಾಸಕ್ರಮದ ಪರಂಪರೆಯಲ್ಲಿ ಬೆಳೆದು ಬಂದ ದೇಹ: ಗರ್ಭಾವಸ್ಥೆಯಲ್ಲಿ, ಅನಂತರದ

ದೀರ್ಘಕಾಲದ ಶೈಶವದಲ್ಲಿ ಬದುಕಿನ ಬಗ್ಗೆ ಸುತ್ತಲಿನ ಪರಿಸರದ ಬಗ್ಗೆ ಕನಸುಗಳನ್ನು ಕಂಡ ಮನಸ್ಸು-ಇವುಗಳೊಂದಿಗೆ ಸುಸಜ್ಜಿತವಾದ ವ್ಯಕ್ತಿ ಜೀವಂತವಾದ ಒಂದು ಸಮಾಜದಲ್ಲಿ ಕಾಲಿರಿಸುತ್ತದೆ. ಮಾನವನಾಗಿ ಅರಳುತ್ತಾನೋ ಕಾಯಂ ಆಗಿ ಮುರುಟಿಹೋಗುತ್ತಾನೋ ಎನ್ನುವದು ಕೊನೆಯಲ್ಲಿ ಈ ಸಾಮಾಜಿಕ ಸನ್ನಿವೇಶವನ್ನೇ ಅವಲಂಬಿಸಿದ್ದು: ಮಾನವನ ಮೂಲ ಸ್ವಭಾವದಲ್ಲೇ ಇದ್ದ ಯಾವ ಒಂದು ಮೂಲಭೂತ ಶಕ್ತಿಯನ್ನು ಇದಿರಿಸಬೇಕಾಗುತ್ತದೆ ಎನ್ನುವುದರ ಮೇಲೆ ನಿಂತದ್ದು. ಜೀವೋತ್ಕರ್ಷಿಯಾದ ಪ್ರೀತಿಯನ್ನೋ? ಸಾವಿನ ಪ್ರತಿನಿಧಿಯಾದ ದ್ವೇಷವನ್ನೋ? ಮಾನವನ ಸಾಮಾಜಿಕ ಇತಿಹಾಸವನ್ನು ಈ ದೃಷ್ಟಿಕೋನದಿಂದ ಅಭ್ಯಾಸಮಾಡುವದು ಶಕ್ಯವಿದೆ. ಆದರೆ ಸದ್ಯ ನಾನು ಅರಿಯಬೇಕಾದದ್ದು: ಶ್ರೀನಿವಾಸ ಹಾಗೂ ಫಿರೋಜ್ ಇವರು ತನ್ನನ್ನು ಇಷ್ಟೊಂದು ದ್ವೇಷಿಸಲು ಕಾರಣವೇನು? ಹುಡುಕಬೇಕು.

## ಅಧ್ಯಾಯ ನಾಲ್ಕು

ವಿಶಾಲವಾದ ಶಿವಾಜೀಪಾರ್ಕ್ ಮೈದಾನಿನ ಅಂಚಿನಲ್ಲಿ ತೆಂಗಿನಮರಗಳು ಒತ್ತಾಗಿ ಬೆಳೆದ ಹಿತ್ತಿಲೊಂದರಿಂದ ಹೊರಗೆ ಬಿದ್ದ ನಾಗಪ್ಪ ಆ ಹಿತ್ತಿಲು ಹೋಗುವುದರ ಮೊದಲಿಗಿಂತ ಹೆಚ್ಚು ಗಂಭೀರನಾಗಿದ್ದನಷ್ಟೇ ಅಲ್ಲ, ಅವನ ಮೋರೆಯ ಮೇಲಿನ ಗಾಂಭೀರ್ಯದಲ್ಲಿ ಈಗ ಒಂದು ಬಗೆಯ ಮ್ಲಾನತೆ; ಭಯ, ಕಾತರಗಳೂ ಸೇರಿಕೊಂಡಿದ್ದವು. ವಿಚಾರಗಳ ಗುಂಗಿನಲ್ಲಿದ್ದಾಗಲೇ ಅವನು ಮೈದಾನಿನ ಪಶ್ಚಿಮಕ್ಕಿದ್ದ ಕೆಡೆಲ್-ರೋಡಿಗೆ ಬಂದು ರಸ್ತೆಯನ್ನು ದಾಟುವ ಅವಕಾಶಕ್ಕಾಗಿ ಕಾಯಹತ್ತಿದ: ಎಡೆಬಿಡದೆ, ಇದಕ್ಕೆ ಕೊನೆಯೇ ಇಲ್ಲ ಎಂಬಂತೆ ಸಾಗಿದ ವಾಹನಗಳ ಓಡಾಟವನ್ನು ಗಮನಿಸಿಯೂ ಅದರ ಬಗ್ಗೆ ಯಾವುದೇ ರೀತಿಯ ಪ್ರತಿಕ್ರಿಯೆ ತೋರಿಸಲಿಲ್ಲ. ಪುರಸತ್ತು ಸಿಕ್ಕ ಕೂಡಲೇ ಯಾಂತ್ರಿಕವಾಗಿ ಪೆಡೆಸ್ಟ್ರಿಯನ್-ಕ್ರಾಸಿಂಗಿನ ಝೀಬ್ರಾ-ಗೆರೆಗಳ ಮೇಲೆ ಹೆಜ್ಜೆ ಇಡುತ್ತಿದ್ದಾಗ ಅವನ ಗುರುತು ಹಿಡಿದ ವ್ಯಕ್ತಿಯೊಂದು—'ಹಲ್ಲೋ ಹಲ್ಲೋ ನೀವು? ಇಲ್ಲಿ ಮುಂಬಯಿಯಲ್ಲಿ ಹೇಗೆ? ನೀವು ಮೊದಲು ಹೈದ್ರಾಬಾದಿನಲ್ಲೋ ಇನ್ನೆಲ್ಲೋ ಕೆಲಸಕ್ಕಿದ್ದಿರಲ್ಲವೇ? ಆಗ ನೀವು ಕಾಮತ್ ವಕೀಲರ ಕಂಪೌಂಡಿನೊಳಗಿಂದ ಹೊರಬೀಳುವಾಗಲೇ ನೋಡಿದ್ದೆ. ಹೌದೋ ಅಲ್ಲವೋ ಎಂಬ ಅನುಮಾನ ಬಂತು' ಎಂದಿತು. ರಸ್ತೆಯನ್ನು ದಾಟುವ ಅವಸರದ ವೇಗಕ್ಕೆ ಅನುಗುಣವಾಗಿ ಆಡಿದ ವ್ಯಕ್ತಿಯ ಮಾತು ಮುಗಿಯುವುದರಲ್ಲಿ ಇಬ್ಬರೂ ರಸ್ತೆಯ ಇನ್ನೊಂದು ಅಂಚಿಗೆ ಬಂದು ತಲುಪಿದ್ದರು. ನಾಗಪ್ಪ ತನ್ನ ಭಾವನೆಗಳ ಪ್ರಪಂಚದಿಂದ ಇನ್ನೂ ಹೊರಗೆ ಬಂದಿರಲಿಲ್ಲ. ಅಕಸ್ಮಾತ್ತಾಗಿ ಭೆಟ್ಟಿಯಾದವನ ಪರಿಚಯ ಸರಿಯಾಗಿ ಸಿಗದಿದ್ದರೂ ಎಲ್ಲೋ ನೋಡಿದ ಮೋರೆ ಎನ್ನುವದಷ್ಟು ಹೊಳೆದು ಇಲ್ಲದ ಅನುಮಾನಕ್ಕೆ ಬಿದ್ದ. "ನಾನು ದೋಶಿ. ನೆನಪಿದೆಯೆ? ನೀವು ವಡಾಳಾದಲ್ಲಿ ಹೊನ್ನಾವರರ ಮನೆಯಲ್ಲಿ... ಟ್ಯೂಶನ್ ಕೊಡಲು ಬರುತ್ತಿದ್ದಾಗ..."

"ಓಹೋಹೋ...ದೋಶೀ ದೋಶೀ... ಇನ್‌ಕಮ್-ಟ್ಯಾಕ್ಸ್‌ಆಫೀಸರ್... ಈಗ ತುಂಬ ಬದಲಾಗಿದ್ದೀರಿ..."

“ಹೌದು. ತುಂಬ ದಪ್ಪನಾಗಿದ್ದೇನೆ ಅಲ್ಲವೆ? ಮದುವೆಯಾದದ್ದರ ಪರಿಣಾಮ. ಕೆಲವು ದಿನಗಳ ಹಿಂದೆ ಚೌಪಾಟಿಯ ಕೈವಲ್ಯಧಾಮವನ್ನು ಸೇರಿದ್ದೇನೆ, ಯೋಗಾಸನ ಕಲಿಯಲು. ಇನ್ನೊಂದು ಮಾತು: ನಾನೀಗ ಸರ್ಕಾರೀ ನೌಕರಿಯಲ್ಲಿಲ್ಲ. ಆದರೆ ದಂಧೆ ಅದೇ. ಈಗ ಇನ್‌ಕಮ್-ಟ್ಯಾಕ್ಸ್‌ಪ್ರೆಕ್ಟೀಶನರ್ ” ದೋಶಿಯವರ ಮಾತುಗಳಲ್ಲಿ ಉಮೇದು ಉತ್ಸಾಹಗಳು ತುಂಬಿದ್ದವು. ಗೊತ್ತಾಗುವ ಮೊದಲೇ ನಾಗಪ್ಪ ಬಹಿರ್ಮುಖನಾಗಹತ್ತಿದ.

“ಈಗ ಹೊರಟಿದ್ದೆಲ್ಲಿಗೆ... ನಾನು ಹೀಗೇ ಗಾಳಿ-ವಿಹಾರಕ್ಕೆಂದೇ ದಾದರ್‌ನಿಂದ ನಡೆಯುತ್ತ ಬಂದೆ. ಮನೆಯಲ್ಲೊಬ್ಬನೇ. ಮನೆಯಯವರೆಲ್ಲ ಊರಿಗೆ ಹೋಗಿದ್ದಾರೆ. ನಿಮ್ಮದು ಬೇರೆ ಏನೂ ಕಾರ್ಯಕ್ರಮ ಇಲ್ಲದಿದ್ದರೆ ಸಮುದ್ರ ದಂಡೆಗೆ ಹೋಗಬಹುದಿತ್ತು. ಬರುತ್ತೀರಾ?” ಎಂದು ಕೇಳಿದರು, ದೋಶಿ.

“ಹೋ ಹೋ. ಹೋಗೋಣವಲ್ಲ, ಅದಕ್ಕೇನು. ಎಷ್ಟು ವರ್ಷಗಳ ಮೇಲೆ ಭೆಟ್ಟಿಯಾಗಿದ್ದೀರಿ.” ನಾಗಪ್ಪನಲ್ಲೂ ಉತ್ಸಾಹ ಸೇರಿಕೊಂಡಿತು. ಇಬ್ಬರೂ ಸಮುದ್ರದಂಡೆಗೆ ಬಂದರು. ನಾಗಪ್ಪ ಮೊನ್ನೆ ಕೂತ ತಾಣವಲ್ಲವಿದು. ಕಡಲುತೀರದ ಸ್ಮಶಾನದಿಂದ ದೂರವಾದ, ಗಾಳಿ-ಮರಗಳಿಂದಾಗಿ ಊರಿನ ನೆನಪನ್ನು ಕೆದಕುವ ಹೊಸ ಜಾಗವಾಗಿತ್ತು. ತಮ್ಮ ಪರಿಚಯವಾದ ಮೊದಲು ದಿನಗಳ ನೆನಪುಗಳನ್ನು ಮೆಲುಕಾಡಿಸಿದಾಗ ಅನೇಕ ಸಂಗತಿಗಳು ಮಾತಿನಲ್ಲಿ ಪುನಸ್ಸೃಷ್ಟಿಯಾಗಹತ್ತಿದುವು. ಅನಿವಾರ್ಯವಾಗಿಯೇ ಮಾತು ನಾಗಪ್ಪನ ನೌಕರಿಯತ್ತ ತಿರುಗಿತು. ಆಗಿನಿಂದಲೂ ಉಲ್ಲಸಿತನಾಗಿದ್ದ ನಾಗಪ್ಪ ಕೂಡಲೆ ಮ್ಲಾನಗೊಂಡ: ಇಬ್ಬರೂ ಒಮ್ಮೆಲೇ ಮಾತು ನಿಲ್ಲಿಸಿದ್ದರು. ಅನಿರೀಕ್ಷಿತವಾದ ಈ ಮೌನದಿಂದ ಪ್ರಶ್ನೆ ಕೇಳಿದ ದೋಶಿಯವರಿಗೇ ಮುಜಗರವಾಯಿತು. ನಾಗಪ್ಪನ ಕರ್‍ರಿಯರ್ ಬಗ್ಗೆ, ವಿಖ್ಯಾತವಾದ ಇಂಗ್ಲಿಷ್ ಅಥವಾ ಅಮೇರಿಕನ್ ಮ್ಯಾನೇಜಮೆಂಟ್ ಇದ್ದ ದೊಡ್ಡ ಕಂಪನಿಯೊಂದರಲ್ಲಿ ಅವನಿಗಿದ್ದ ನೌಕರಿಯ ಬಗ್ಗೆ ಕೇಳಿ ಅರಿತಿದ್ದ ದೋಶಿಯವರಿಗೆ ನಾಗಪ್ಪನ ಮೇಲೆ ತುಂಬ ಅಭಿಮಾನವಿತ್ತು. ಅಂತಹ ಅಭಿಮಾನದ ಭಾವನೆಯಿಂದಲೇ ಅವರು ಪ್ರಶ್ನೆ ಕೇಳಿದ್ದರು. ಆದರೆ ಅತಿ ಸಹಜವಾದ ಆ ಪ್ರಶ್ನೆಗೆ ಕೂಡಲೇ ಉತ್ತರ ಕೊಡುವದು ಅಸಾಧ್ಯವಾಗಿ ತೋರಿದ ನಾಗಪ್ಪನಿಂದ ಯಾವ ಮಾತೂ ಹೊರಡದಾಯಿತು. ಆದರೂ ದೋಶಿ ತನ್ನ ಮೌನವನ್ನು ತಪ್ಪು ತಿಳಿದಾರು ಎಂಬ ಆತಂಕದಿಂದ—”ಎಲ್ಲ ಸರಿಯಾಗಿದ್ದರೆ ಇನ್ನೊಂದು ತಿಂಗಳಲ್ಲಿ ನಾನು

ಹೆಚ್ಚಿನ ತರಬೇತಿಗಾಗಿ ಅಮೇರಿಕಾಕ್ಕೆ ತೆರಳಬೇಕಾಗಿತ್ತು. ಆದರೆ ನಮ್ಮ ಕಂಪನಿಯ ಒಬ್ಬ ಪಾರ್ಸೀ ಡೈರೆಕ್ಟರರ ಗಲೀಜು ಪೊಲಿಟಿಕ್ಸ್..." ನಾಗಪ್ಪನ ಮಾತು ಅರ್ಧಕ್ಕೇ ನಿಂತಿತ್ತು. ದೂರ ನೀರಂಚಿನಲ್ಲಿ ಸೂರ್ಯ ಕೆಂಪಿನಉಂಡೆಯಾಗಿ ಪ್ರಜ್ವಲಿಸುತ್ತ ಅಸ್ತಕ್ಕೆ ಸಾಗಿದ್ದ. ಆ ದಿವ್ಯ ಮೂಹೂರ್ತಕ್ಕೆ ಕಾದು ನಿಂತ ರೀತಿ ಸಮುದ್ರ ತೆರೆಗಳನ್ನೆಬ್ಬಿಸುವುದನ್ನು ಕೂಡ ಮರೆತು ಸ್ತಬ್ಧವಾಗಿತ್ತು. ದಂಡೆಯ ಮೇಲೂ ರಜೆಯ ದಿನ ಅಲ್ಲವಾಗಿದ್ದರಿಂದ, ಜನರ ಗದ್ದಲವಿರಲಿಲ್ಲ. ಸುತ್ತಲಿನ ಈ ನೀರವತೆಗೆ ಶ್ರುತಿ ಹಿಡಿಯುವಂತೆ ನಾಗಪ್ಪ ಅತ್ಯಂತ ತಗ್ಗಿದ ದನಿಯಲ್ಲಿ "I am a victim of dirty politics," ಎಂದ. ದೋಶಿ, ಸಹಾನುಭೂತಿಯ ಧಾಟಿಯಲ್ಲಿ, "ನನಗೆಲ್ಲ ಅರ್ಥವಾಗುತ್ತದೆ. ನನಗಿದೇನು ಹೊಸತಲ್ಲ ಬಿಡಿ. ಇದು ಈ ಮನುಷ್ಯ-ಪ್ರಾಣಿ ಎಂಬುದು ಇದ್ದಲ್ಲೆಲ್ಲ ಇರುವದೇ. ನಾನೂ ನನ್ನ ನೌಕರಿಯನ್ನು ಬಿಟ್ಟುಕೊಟ್ಟದ್ದು ಇಂತಹ ಒಂದು ಪರಿಸ್ಥಿತಿಯಲ್ಲೇ. ಇನ್ನೊಮ್ಮೆ ಭೆಟ್ಟಿಯಾದಾಗ ಎಲ್ಲ ಮಾತನಾಡೋಣ. ಧೈರ್ಯ ಬಿಡಬೇಡಿ. ಎಲ್ಲ ಸರಿಯಾಗುತ್ತದೆ" ಎಂದರು. ನಾಗಪ್ಪನಿಗೆ ಆ ಮಾತುಗಳಿಂದ ಅಸಾಧಾರಣ ಧೈರ್ಯವೆನಿಸಿತು. ತುಂಬ ಭಾವನಾವಶನಾದವನ ಹಾಗೆ "ಥೇಂಕ್ಸ್" ಎಂದ. ಹೆಚ್ಚಿನದೇನೋ ಹೇಳಬೇಕೆಂದುಕೊಂಡದ್ದು ತನ್ನ ಈಗಿನ ಸ್ಥಿತಿಯಲ್ಲಿ ಸಾಧ್ಯವಿಲ್ಲವೆನಿಸಿತು. ಕಡಲುತೀರವನ್ನು ಬಿಟ್ಟು ಹೊರಡುವುದಾದ ಮೇಲೆ, "ಒಮ್ಮೆ ನಾನೇ ನಿಮ್ಮ ಮನೆಗೆ ಬಂದು ಭೆಟ್ಟಿಯಾಗುತ್ತೇನೆ. ನೀವು ಅಷ್ಟೊಂದು ಆತ್ಮೀಯತೆಯಿಂದ ಮಾತನಾಡಿಸಿ ತುಂಬ ಧೈರ್ಯಕುದುರಿಸಿದ್ದೀರಿ," ಎಂದು ಹೇಳಿ ದೋಶಿಯವರಿಂದ ಅವರ ಹಿಂದೂ-ಕೊಲೊನಿಯೊಳಗಿನ ಮನೆಯ ಪತ್ತೆ ತೆಗೆದುಕೊಂಡ. ತಾನು ಸದ್ಯ ಒಂದು ಕಾದಂಬರಿಯನ್ನು ಬರೆಯುವ ಉದ್ದೇಶದಿಂದ ಎಂದು ತಿಂಗಳ ರಜೆಯನ್ನು ಪಡೆದಿದ್ದೇನೆಂದೂ, ಗೆಳೆಯರೊಬ್ಬರ ಮನೆಯಲ್ಲಿ ಒಂದು ವಾರ ಕಳೆಯಲ್ಲಿದ್ದೇನೆ ಎಂದು ಹೇಳುತ್ತ ಶ್ರೀನಿವಾಸನ ಹೆಸರು ಹೇಳಿದ್ದೆ, 'ಓಹ್' ಎಂದ ದೋಶಿಯವರು ತಮಗೆ ಶ್ರೀನಿವಾಸನ ಪರಿಚಯ ಚೆನ್ನಾಗಿದೆ. ಆದರೆ ಎಲ್ಲರನ್ನು ಬಿಟ್ಟು ಅವನಲ್ಲೇಕೆ ಎಂಬ ಭಾವವನ್ನು ಮೋರೆಯ ಮೇಲೆ ಪ್ರಕಟಿಸಿದರು. ಹಾಗೂ, "ಕಾದಂಬರಿಯೆ? ಸಂತೋಷ, ಸಂತೋಷ. ಅಂತೂ ನೀವು ಬರೆಯುವ ಹವ್ಯಾಸ ಬಿಟ್ಟಿಲ್ಲ. 'ಕೆನರೀಸ್' ಭಾಷೆಯಲ್ಲಿ ತಾನೇ? ನಿಜ ಹೇಳಲೇ? ಈ ಮನುಷ್ಯನ ವ್ಯಾವಹಾರಿಕ ಜಗತ್ತಿನ ಅಸಹ್ಯವಾದ ಅಂದಗೇಡಿತನದಿಂದ ಮನಸ್ಸು ತನ್ನ ಆರೋಗ್ಯವನ್ನು

ಕಾಪಾಡಿಕೊಳ್ಳಬೇಕಾದರೆ ಇಂತಹದೇನಾದರೂ ದೇವರು ಕೊಟ್ಟದ್ದಿರಬೇಕು... ಸಭ್ಯತೆಯ ಮುಖವಾಡದ ಹಿಂದೆಯೇ ಎಂತಹ ಕ್ರೌರ್ಯದ ಹಲ್ಲುಮಸೆತ ನೋಡಿ... ಕಾಡಿನಲ್ಲಿ ನಮ್ಮ ಪೂರ್ವಜರು ನಾಲ್ಕುಕಾಲುಗಳ ಮೇಲೆ ಆಡುತ್ತಿದ್ದದ್ದನ್ನೇ ಇಲ್ಲಿ ಎರಡು ಕಾಲುಗಳ ಮೇಲೆ ಆಡುತ್ತಿದ್ದೇವೆ." ದೋಶಿಯವರಲ್ಲೂ ತನ್ನೊಡನೆ ಹಂಚಿಕೊಳ್ಳಲು ಹಾತೊರೆಯುವಂತಹ ಪ್ರಚಂಡ ಅನುಭವವಿದ್ದಂತೆ ತೋರಿತು; ಇದ್ದಕ್ಕಿದ್ದಂತೆ ಅವರು ತುಂಬ ಹತ್ತಿರದವರಾಗಿ ಕಂಡರು. ಹೊರಡುವ ಸಿದ್ಧತೆಯಲ್ಲಿ ಎದ್ದುನಿಂತವರು ತಾವಿನ್ನೂ ಮಳಲು-ದಂಡೆಯಲ್ಲಿ ನಿಂತೇ ಇದ್ದದ್ದು ಲಕ್ಷ್ಯಕ್ಕೆ ಬಂದಾಗ ಇಬ್ಬರೂ ನಕ್ಕರು. ಹೀಗೆ ಆಕಸ್ಮಿಕವಾಗಿಯೇ ಆಗಲೊಲ್ಲದೇಕೆ—ಅನೇಕ ವರ್ಷಗಳ ಮೇಲೆ ಆದ ಈ ಭೇಟಿಯನ್ನು ವ್ಯರ್ಥವಾಗಲು ಬಿಡಬಾರದು. ತಾವಿಬ್ಬರೂ ತಿರುಗಿ ಭೆಟ್ಟಿಯಾಗಬೇಕು—ನಾಳೆಗೇ, ಇದೇ ತಾಣದಲ್ಲಿ ಎಂದು ದೋಶಿಯವರು ಮಾಡಿದ ಸೂಚನೆಗೆ ಒಪ್ಪಿಕೊಂಡು, ರಾಜರಸ್ತೆಗೆ ಬಂದವರೇ ಒಬ್ಬರನ್ನೊಬ್ಬರು ಬೀಳ್ಕೊಂಡು ತಮ್ಮ ತಮ್ಮ ಮನೆಯ ಹಾದಿ ಹಿಡಿದರು.

ದೋಶಿ ಕಣ್ಮರೆಯಾದ ಕೂಡಲೇ, ಅವರು ಅಷ್ಟೆಲ್ಲ ಆತ್ಮೀಯತೆಯಿಂದ ಮಾತನಾಡುತ್ತಿದ್ದಾಗ ತಾನು ಮಾತ್ರ ಅವರೊಡನೆ ಸುಳ್ಳಾಡಿದೆನಲ್ಲ ಎಂಬ ಅರಿವಿನಿಂದ. ನಾಗಪ್ಪನ ಮನಸ್ಸು ಕಳವಳಕ್ಕೊಳಗಾಯಿತು; ಒಂದು ತಿಂಗಳ ರಜೆಯ ಮೇಲೆ ಇದ್ದದ್ದು ನಿಜ ಆದರೆ ಕಾದಂಬರಿ ಬರೆಯಲೆಂದು ಪಡೆದದ್ದಲ್ಲ. ಹಾಗೆ ನೋಡಿದರೆ. ಈ ರಜೆಯನ್ನು ತಾನು ಪಡೆದದ್ದೇ ಅಲ್ಲ. ತನಗವರು ಕೊಟ್ಟದ್ದು. ಇದರ ನೆನಪಿನಿಂದಲೇ ನಾಗಪ್ಪನಿಗೆ ಕೊರಳು ಬಿಗಿದುಕೊಳ್ಳಹತ್ತಿದಾಗ ಮೊನ್ನೆ ಶ್ರೀನಿವಾಸ ಅಚಾನಕವಾಗಿ ಸಂತೋಷ-ಭವನದಲ್ಲಿ ತನ್ನನ್ನು ಕಂಡು ಮಾತನಾಡಿಸಿದಾಗ ಥಟ್ಟನೆ ಹೊಳೆದ ಸುಳ್ಳನ್ನೇ ಈಗ ದೋಶಿಯವರ ಇದಿರೂ ಆಡಿದ್ದ...ಕಾಡಿನಲ್ಲಿ ನಾಲ್ಕು ಕಾಲುಗಳ ಮೇಲೆ ಆಡುತ್ತಿದ್ದುದನ್ನೇ ಇಲ್ಲಿ ಎರಡು ಕಾಲುಗಳ ಮೇಲೆ ಆಡುತ್ತಿದ್ದೇವೆ: ಅರೆ! ದೋಶಿಯವರೂ ಕೂಡ ಕೊನ್ರಾಡ್ ಲಾರೆಂಝ್‌ನನ್ನು ಓದಿರಬಹುದೆ? ಅಥವಾ ಖುದ್ದುಜೀವನದಲ್ಲಿ ಬಂದ ಅನುಭವವೇ ಹಾಗೆ ಆಡಲು ಹಚ್ಚಿರಬಹುದೇ? ...ಫಿರೋಜ್ ನಾಲ್ಕು ಕಾಲುಗಳ ಮೇಲೆ ನಿಂತು ಮೈಕೊಡವಿ ಹೂಂಕರಿಸುವ ಚಿತ್ರ ಕಣ್ಣ ಮುಂದೆ ನಿಂತೊಡನೆಯೆ ತಾನಿನ್ನೂ ರಾಜಬೀದಿಯ ಮೇಲೆ ಇದ್ದೇನೆ ಎನ್ನುವುದನ್ನೂ ಮರೆತು—ಥೂ

ಕಾಡುಹಂದಿಯೇ ಎಂದು ಉಗುಳಿದ. ಮರುಗಳಿಗೆ, ತನ್ನ ಕೃತಿಯ ಬಗ್ಗೆ ತನಗೇ ಮುಜಗರವಾಯಿತು. ತ್ವರಿತವಾಗಿ ಮನೆಯತ್ತ ಹೆಜ್ಜೆ ಹಾಕಹತ್ತಿದ. ಮನೆ ತಲುಪಿ ಕೋಣೆ ಹೊಕ್ಕು ಹುಶ್ ಎಂದು ಮಂಚದ ಮೇಲೆ ಒರಗಿದ ಕೂಡಲೇ ಸತ್ಯಸಂಗತಿಯನ್ನು ದೋಶಿಯವರಿಗೆ ನಾಳೆ ತಿಳಿಸಬೇಕೇ? ಎಂಬ ಪ್ರಶ್ನೆ ಇದಿರಾಯಿತು. ಮನುಷ್ಯ ಹ್ಯಾಗೆ ಎನ್ನುವದು ಈಗಲೇ ಹೇಗೆ ಗೊತ್ತಾಗಬೇಕು? ಈ ವರೆಗಿನ ಅನುಭವ ಕಲಿಸಿದ್ದೇನು? ಮೋರೆಯ ಮೇಲೆ ಗೆಳೆಯನೆಂದು ತೋರಿಸಿಕೊಳ್ಳುತ್ತಿರುವಾಗಲೇ ಬೆನ್ನಲ್ಲಿ...ಬೇಡ. ಜನರ ಬಗ್ಗೆ ತನಗೆ ಸಹಜಸ್ಫೂರ್ತಿಯಿಂದ ಅನ್ನಿಸುತ್ತಿದ್ದ ಪ್ರೀತಿ-ವಿಶ್ವಾಸಗಳನ್ನು ಇಷ್ಟೊಂದು ಬೇಗ ಕಳೆದುಕೊಳ್ಳಬಾರದು. ಸದ್ಯಕ್ಕಂತೂ ದೋಶಿಯವರಂತಹರ ಗರಜು ಎಲ್ಲರಿಗಿಂತ ಹೆಜ್ಜಾಗಿ ತನಗೇ ಇದೆ...

ಗುಜರಾಥೀ ಮಾತೃಭಾಷೆಯವರಾದ ದೋಶಿ ಯಾವ ಭಿಡೆಯೂ ಇಲ್ಲದೇನೆ 'ಹೊಡೆದು ಹೋಗುವ' ಕೆಟ್ಟ ಉಚ್ಚಾರಗಳ ಇಂಗ್ಲೀಷು, ಅದಕ್ಕಿಂತ ಹೆಚ್ಚಾಗಿ ನಡುನಡುವೆ ಸೇರಿಸುತ್ತಿದ್ದ 'ಝಾಲಾ-ಮೇಲಾ-ಸಾಲಾ' ಪ್ರಧಾನವಾದ—ದೋಶಿ ಇದು ಮರಾಠೀ ಎಂದು ತಪ್ಪು ತಿಳಿದ—ವಿಚಿತ್ರಭಾಷೆ ಕೂಡ ಹಿಂದಿನಂತೆ ಮೈಮೇಲೆ ಮುಳ್ಳು ನಿಲ್ಲಿಸಲಿಲ್ಲ ಎಂಬುದು: ಈಗ ಗಮನಕ್ಕೆ ಬಂದವನಂತೆ ಸುಖವಾಗಿ ನಕ್ಕ. ಚೇತನಾ ಹೇಗೆ ಇನ್ನೂ ಬಂದಿಲ್ಲ ಎಂದುಕೊಳ್ಳುವಷ್ಟರಲ್ಲಿ ಚೇತನಾ ಹಾಜರ್: ಅಗಳಿ ಹಾಕಿರದ ಕದ ದೂಡಿ ಒಳಗೆ ಬಂದವಳೇ ಮುತ್ತಿನಂತಹ ಹಲ್ಲುಗಳನ್ನು ಬೆಳಗಿಸುತ್ತ, ಗಲ್ಲದಲ್ಲಿ ಗುಳಿ ಮೂಡಿಸುತ್ತ, ಕಣ್ಣಿನಲ್ಲಿ ಹೊಳಪು ಮಿಂಚಿಸುತ್ತ ಕೇಳಿದಳು: 'ಕಾಕಾ, ನೀವು ಅಪ್ಪನ ಬಗ್ಗೆ ಕಾದಂಬರಿ ಬರೆಯುತ್ತೀರಂತೆ. ಹೌದೆ? ಯಾಕೆ?' ತುಸು ತಡೆದು, 'ಅಮ್ಮ ಹೇಳಿದಳು' ಎಂದಳು. ಸರಳ ಮನಸ್ಸಿನ ಮುಗ್ಧತೆಯ ಮೇಲೂ ಬಿದ್ದಂತಿದ್ದ ಹಿರಿಯರ ಧಾಟಿಯ ಛಾಯೆಯಲ್ಲಿ ಅಡಗಿದ್ದದ್ದು ಆತಂಕವೋ? ಕುತೂಹಲವೋ? ನಾಗಪ್ಪ ಕೂಡಲೇ ಉತ್ತರ ಕೊಡಲಿಲ್ಲ. ಸುಮ್ಮನೆ ನಕ್ಕ.

## ಅಧ್ಯಾಯ ಐದು

"ಟಿಪ್ಪಣಿ ಹತ್ತು: ದೇವರೇ, ಈ ಯಾತನೆಗೆ ಕೊನೆಯೇ ಇಲ್ಲವೆ? ಇದೇಕೆ ನೋವು ತಿಂದ ಜಾಗದಲ್ಲೇ ತಿರುತಿರುಗಿ ಪೆಟ್ಟು ಬೀಳುತ್ತದೆ? ಅಪ್ಪ ಹಿಡಿದ ದಾರಿಯೊಂದೇ ನನಗಾಗಿಯೂ ತೆರೆದದ್ದೇ?...ಇಲ್ಲ. ಇಷ್ಟೊಂದು ಸುಲಭವಾಗಿ ಧೈರ್ಯಗುಂದಬಾರದು. ದೋಶಿ ಅನ್ನಲಿಲ್ಲವೇ?"

ನೋವು ತಿಂದ ಜಾಗದ ಉಲ್ಲೇಖದಿಂದ ಆರಂಭವಾದ ಬರವಣಿಗೆ ಗೊತ್ತಾಗುವ ಮೊದಲೇ ತಡೆದಿತ್ತು: ನೋವಿಗೆ ಕಾರಣವಾದದ್ದನ್ನು ನೆನಪಿಗೆ ತರುವ ಧೈರ್ಯ ತಕ್ಷಣ ಹುಟ್ಟಲಿಲ್ಲ. ಲಕ್ಷ್ಯವನ್ನು ಬೇಕೆಂದೇ ಬೇರೆ ಕಡೆಗೆ ಹರಿಯಿಸಲು ಯತ್ನಿಸಿದೆ. ಸಂಜೆ, ದೋಶಿಯವರು ಅಂದ ಒಂದು ಮಾತು ನೆನಪಾದಾಗ ಈ ಶ್ರೀನಿವಾಸ, ಫಿರೋಜರ ನೆಪದಿಂದ ಕಾಡಿನಲ್ಲಿಯ ನಿಷ್ಪಾಪ ಪ್ರಾಣಿಗಳ ಹೆಸರನ್ನೂ ಕೆಡಿಸಿದೆನಲ್ಲ ಎಂದುಕೊಂಡು ತನ್ನಷ್ಟಕ್ಕೇ ಸುಖವಾಗಿ ನಕ್ಕ: ತಮ್ಮ ತಮ್ಮ ನಿಸರ್ಗದತ್ತ ಸ್ವಭಾವಗಳನ್ನು ದಾಟುವ ತಾಖತ್ತು ಅವುಗಳಿಗಿದೆಯೆ? ಅದೇ ಮನುಷ್ಯನಿಗೆ? ಅವನೂ ಬರೀ ಪ್ರವೃತ್ತಿಗಳ ಪಾತಳಿಯಲ್ಲೇ ಬದುಕುವವನೆ? ಮನುಷ್ಯಜೀವನದ ಎಳೆತಗಳು ಅವುಗಳಿಗಿಂತ ಪುರಾತನವಾದ ಪಶುಪ್ರವೃತ್ತಿಗಳಿಂದಲೇ ವಿಕಾಸಹೊಂದಿರಬಹುದಾದರೂ ಮಾನವಕೋಟಿಗೇ ವಿಶಿಷ್ಟವಾದ ಎಳೆತಗಳೂ ಈ ವಿಕಾಸಕ್ರಮದಲ್ಲಿ ಹುಟ್ಟಿಕೊಂಡಿಲ್ಲವೇ? ಪ್ರೀತಿ, ಆದರ, ಕಾಳಜಿ, ನಿಃಸ್ವಾರ್ಥ ಇವೇ ಮೊದಲಾದ ಮಾನವೀಯ ಭಾವನೆಗಳಿಗೆ ಅರ್ಥವೇ ಇಲ್ಲವೆ? ಅವನ ವಿವೇಕಕ್ಕೆ? ನ್ಯಾಯ ಬುದ್ಧಿಗೆ? ನೀತಿಗೆ?

ಇಂತಹ ಮಾತುಗಳಿಗೆ ಗಿಲ್ಬರ್ಟ ಡಿಸೋಝಾ ಅರ್ಥವಿಲ್ಲದ ಸದ್ದಿನ ಆಡಂಬರವೆಂದು ದೊಡ್ಡದಾಗಿ ನಕ್ಕುಬಿಡುತ್ತಿದ್ದ. Cut that silly sentimentality out ಎಂದು ಗದರಿಸಿಬಿಡುತ್ತಿದ್ದ. ಇದ್ದಕ್ಕಿದ್ದಂತೆ ಎಲ್ಲ ಬಿಟ್ಟು ಗಿಲ್ಬರ್ಟನ ಗದರಿಕೆಯ ಆಣಿಮುತ್ತುಗಳನ್ನು ಆಯ್ದು ಬರೆದಿಡುವ ಹುಕ್ಕಿ ಬಂದಿತು ನಾಗಪ್ಪನಿಗೆ, ತನ್ನ ಸದ್ಯದ ಮೂಡು ಎಡೆಮಾಡಿಕೊಟ್ಟ ಭಾಷೆಯಲ್ಲಿ. ಮುಗುಳುನಗುತ್ತ ಪೆನ್ನು ಕೈಗೆತ್ತಿಕೊಂಡ. ಗೆಳೆಯನ ಮೋರೆಯನ್ನು ಕಣ್ಣಮುಂದೆ ನಿಲ್ಲಿಸಿಕೊಳ್ಳಲು ಪ್ರಯತ್ನಿಸಿದಾಗ ಒಡಮೂಡಿದ್ದು ಹುರಿ ಹಾಕಿದಂತಿದ್ದ ಅವನ ಗೇಣುದ್ದ

ಮೀಸೆಗಳು; ಕುಡಿಗಳಲ್ಲಿ ಆಗೀಗ ಮಿನುಗುತ್ತಿದ್ದ ತುಂಟತನದ ನಗು; ಕಣ್ಣುಗಳಲ್ಲಿ ಅದಕ್ಕೆ ಒಪ್ಪ ಹಾಕುವ ಹೊಳಪು.

"ಟಿಪ್ಪಣಿ ಹನ್ನೊಂದು: ಗಿಲ್ಬರ್ಟ ಉವಾಚ: (೧) ನೀನು ಈ ಮಾನವ-ಪ್ರಾಣಿಯ ಸಾಧ್ಯತೆಗಳ ಬಗ್ಗೆ ಅವಾಸ್ತವವಾದ ಕಲ್ಪನೆ ಮಾಡಿಕೊಂಡಿರುವಿ. ಬದುಕಿನ ನಿಜವಾದ ಹೋರಾಟದ ಬಿಸಿ ನಿನಗೆ ತಾಕಲೇ ಇಲ್ಲ. ಎಲ್ಲವೂ ಆಯತ ಹೊತ್ತಿಗೆ ಕೈಗೆ ಬಂದ 'ಆಯ್ತೋಬಾ' ನೀನು. ಈ ಗಿಲ್ಬರ್ಟ ಕಳೆದ ಹತ್ತುವರ್ಷಗಳ ಅನುಭವದಲ್ಲಿ ಕಂಡ ಮನುಷ್ಯನನ್ನು ಚಿತ್ರಿಸುವ ತಾಖತ್ತು ನಿನ್ನ ಪೆನ್ನಿಗಿದ್ದುದಾದರೆ ಬರೆ ಬರೆಯುವಾಗಲೇ ನೀನು ಗಟ್ಟಿಗನಾಗಬಹುದಿತ್ತು. ಮನುಷ್ಯಸ್ವಭಾವದ ನಿಷ್ಠುರ ಸತ್ಯವನ್ನು ಕಾಣುವ, ಕಂಡರೂ ಒಪ್ಪುವ ಧೈರ್ಯವೇ ನಿನ್ನಲ್ಲಿಲ್ಲ. (೨) ನಮ್ಮ ಎಲ್ಲ ವ್ಯವಹಾರಗಳ ಆಡಿಗೆ, ಸಾಮಾಜಿಕ ನಡವಳಿಕೆಯ ಕೆಳಗೆ ಕೆಲಸ ಮಾಡುವ ಶಕ್ತಿಯೊಂದೇ: ಸ್ವಾರ್ಥ. ತನ್ನೊಬ್ಬನ ಹಿತವನ್ನು ರಕ್ಷಿಸಿಕೊಳ್ಳುವ ಭರದಲ್ಲಿ ಉಳಿದವರನ್ನು ಬಲಿಕೊಡಲು ಹಿಂದೆಗೆಯದ ಸ್ವಾರ್ಥ (೩) ಮಾನವ-ಸಮಾಜದಲ್ಲಿಯ ಅಸಮಾನತೆ ನಿಮ್ಮ ಮಾರ್ಕ್ಸ್‌ವಾದಿಗಳು ತಿಳಕೊಂಡಂತೆ ಬರಿಯ ಪ್ರಾಪರ್ಟಿಯ ಹಂಚಿಕೆಯ ಜೀವನೋಪಾಯಗಳ ಹಂಚಿಕೆಯ ಅಸಮಾನತೆಯಲ್ಲಿಲ್ಲ. ಕೀರ್ತಿಯ, ಹೆಸರಿನ ಗಳಿಕೆಯ ಅಸಮಾನತೆಯಲ್ಲೂ ಇದೆ. ಸತ್ತೆಯ ಅಸಮಾನತೆಯಲ್ಲೂ ಇದೆ. ವಿಚಾರಮಾಡಿ ನೋಡು. ಸಮಾಜ ಹುಟ್ಟಿಸುವ ಸರ್ಪ್ಲಸ್ಸು ಬರಿಯ ವಿತ್ತಕ್ಕೆ ಸೀಮಿತವಾದದ್ದೇ? ಅದರ ಮೂಲಭೂತವಾದ ಮಹತ್ವ ಬರಿಯ ಆರ್ಥಿಕವಾದದ್ದೇ? ಒಬ್ಬ ಇನ್ನೊಬ್ಬನ ನೋವಿಗೆ ಕಾರಣವಾಗುವದಕ್ಕೆ ಬರೀ ಆಸ್ತಿಯೇ ಕಾರಣವೆ? (೪) ಅಪಾ ತಮ್ಮಾ, ನನ್ನ, ನನ್ನವರ ದುಃಖದಂತಹ ದುಃಖವೇ ಇಲ್ಲ, ಯಾತನೆಯಂತಹ ಯಾತನೆಯೇ ಇಲ್ಲ ಎಂದು ತಿಳಿಯುವದೂ ಒಂದು ರೋಗವೇ. ನೋವಿನಂತಹ ನೋವನ್ನೂ ನಮ್ಮ ಅಹಂಕಾರದ ಆವಿರ್ಭಾವಕ್ಕೆ ಕಾರಣವಾಗಲು ಬಿಡಬಾರದು. (೫) ನಮ್ಮ ನಮ್ಮ ಅನುಭವದ ಅಳವಿಗೆ ಬಂದ ಸಾಮಾನ್ಯ ವ್ಯಕ್ತಿಗಳ ನೋವನ್ನು ನಮಗೆ ಶಕ್ಯವಿದ್ದ ರೀತಿಯಲ್ಲಿ ಕಡಿಮೆಮಾಡುವ ಬಯಕೆಯಿಂದ ಕಾರ್ಯಪ್ರವೃತ್ತರಾಗುವದು ಶಕ್ಯವಿದ್ದರೆ...ಬಾ, ಅಂತಹ ಒಂದು—ಸುದ್ದಿಯಾಗದೇ, ಸದ್ದಿಲ್ಲದೇ ನಡೆಯುತ್ತಿದ್ದ ಒಂದು ಸಣ್ಣ ಸಂಸ್ಥೆಯ ಕೆಲಸವನ್ನು ನಿನಗೆ ತೋರಿಸುತೇನೆ. ಅಲ್ಲಿ ಕಂಡವರ ನೋವನ್ನು; ಅದನ್ನು ಇದಿರಿಸುವಲ್ಲಿ ಅವರು

ತೋರಿಸಿದ ಎದೆಗಾರಿಕೆಯನ್ನು. ಚಿತ್ರಿಸುವ ತಾಖತ್ತು ನಿನಗೆ ಬಂದಾಗ ಬರೆ— ಕಾದಂಬರಿಯನ್ನೋ, ಕತೆಯನ್ನೋ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಿನ್ನ ಹೆಸರನ್ನುಳಿಸಲಿಲ್ಲ. ಸಾವನ್ನು ಗೆಲ್ಲಲು ಅವರು ನಡೆಸಿದ ಆರೋಗ್ಯವಂತ ಹೋರಾಟವನ್ನು ಉಳಿದವರಿಗೆ ತಿಳಿಸಲು. ಇಂತಹ ಒಂದು ಕೆಲಸ ಮುಂಬಯಿಯಂತಹ ಈ ಮಹಾನಗರದಲ್ಲಿಯೇ ನಡೆಯುತ್ತಿದೆ ಎನ್ನುವುದನ್ನರಿಯುವ ಕುತೂಹಲವೆನ್ನಿಸಿದಾಗ ತಿಳಿಸು. ನಾನೇ ನಿನ್ನನ್ನಲ್ಲಿ ಕರೆದೊಯ್ಯುತ್ತೇನೆ.. ಯಾವಾಗಲೂ ಬದುಕಿನತ್ತ ಮುಖ ಮಾಡಿದ ಮನುಷ್ಯ ನಡವಳಿಕೆಯೇ ಬೇರೆಯಾಗುತ್ತದೆಯೋ ನಾಗಪ್ಪ."

ಹಾಸಿಗೆಯಲ್ಲಿ ಬಿದ್ದಲ್ಲೇ ಅನ್ನಿಸಿತು: ಗಿಲ್ಬರ್ಟ ಇಂದು ಮುಂಬಯಿಯಲ್ಲಿರಬೇಕಾಗಿತ್ತು ಅಂದರೆ ತನ್ನೆಲ್ಲ ದುಗುಡಗಳನ್ನು ಅವನಲ್ಲಿ ತೋಡಿಕೊಳ್ಳಲು ಬರುತ್ತಿತ್ತು. ಹಾಗೆ ನೋಡಿದಲ್ಲಿ ತನಗೆ ಎಷ್ಟೆಲ್ಲ ಜನ ಗೆಳೆಯರಿದ್ದಾರೆ ಅನ್ನಿಸಿದರೂ ಒಬ್ಬೊಬ್ಬರದೇ ಮೋರೆಯನ್ನು ಕಣ್ಣಮುಂದೆ ನಿಲ್ಲಿಸಿ ಯೋಚಿಸಿದರೆ ಯಾರೂ ಇಲ್ಲವೆಂದು ತೋರಿ ತಾನು ತೀರ ಒಬ್ಬಂಟಿ ಎಂಬ ಭಾವನೆ ಹುಟ್ಟುತ್ತಿತ್ತು. ಮೊನ್ನೆ ಆಫೀಸಿನಿಂದ ಫೋನ್ ಬಂದ ದಿನ ಹೀಗೇ ಆಗಿತ್ತು. ಹತ್ತಿರದವನೆಂದು ತಿಳಿದ ಸೀತಾರಾಮ ಕೂಡ: ಜೊತೆಯಾಗಿ ತಿನ್ನಲು ಕುಡಿಯಲು ಅಡ್ಡಿಯಿಲ್ಲ. ವೈಜಾರಿಕವಾಗಿ, ಭಾವಾತ್ಮಕವಾಗಿ ಹತ್ತಿರವಾದವರೆಲ್ಲ ತಾನು ಬರಯುವುದನ್ನು ನಿಲ್ಲಿಸಿದಂದಿನಿಂದ ದೂರವಾಗಿದ್ದಾರೆ. ಅಲ್ಲ, ಅವರೆಲ್ಲ ದೂರವಾಗಿದ್ದರಿಂದಲೇ ತಾನು ಬರೆಯುವದನ್ನು ನಿಲ್ಲಿಸಿದ್ದೇನೆ. ಗಿಲ್ಬರ್ಟ ಯಾರನ್ನೂ ಹೆಚ್ಚಾಗಿ ಹಚ್ಚಿಕೊಂಡವನಲ್ಲ. ಹಾಗಿದ್ದೂ ಅಥವಾ ಹಾಗೆಂದೇ ಇರಬೇಕು ಅನೇಕರಿಗೆ ಬೇಕಾದವನಾಗಿದ್ದ. ಅನೇಕ ವಿಷಯಗಳಲ್ಲಿ ತನಗೆ ತೀರ ವಿರುದ್ಧವಾದ ಪ್ರಕೃತಿಯವನು. ಕೆಥೋಲಿಕ್ ಪಂಥದವನಾದ ಇವನಿಗೆ ಪ್ರಾರ್ಥನೆ ಮಾನಸಿಕ ಸ್ಥೈರ್ಯಕ್ಕೆ ಬಲವಾದ ಆಧಾರ. ಟೈಮ್ಸ್ ಪತ್ರಿಕೆಯ ವಾರ್ತಾಹರನೆಂದು ಕೆಲಸ. ಸೀತಾರಾಮನ ಮುಖಾಂತರವೇ ಪರಿಚಯವಾಗಿತ್ತಾದರೂ ಸೀತಾರಾಮನಿಗಿಂತ ಹೆಚ್ಚು ಹತ್ತಿರದವನಾಗಿದ್ದ. ಮುಂಬಯಿಯ ಅಂಧೇರಿಯಲ್ಲಿ ಅಪಾಂಗರ ಸಲುವಾಗಿ ತೆರೆದ 'ಚೆಶಾಯರ್ ಹೋಮ್' ಸಂಸ್ಥೆ ಇವನ ಆಸ್ಥೆಯ ಕಾರ್ಯಕ್ಷೇತ್ರ. ಸದ್ಯ ರಾಣಿಯ ತವರು ದೇಶವಾದ ನೇಪಾಳದ ಕಾಠಮಂಡೂಕ್ಕೆ ಬದಲಿಯಾಗಿದೆ. ಕೆಲವು ತಿಂಗಳ ಹಿಂದೆ ಏಕಾಏಕೀ ತನ್ನನ್ನು ಆರ್ ಎಂಡ್ ಡೀ

ಮ್ಯಾನೇಜರ್ ಸ್ಥಾನದಿಂದ ವಜಾಮಾಡಿ ಮುಂಬಯಿಗೆ ವರ್ಗಮಾಡಿದ ಅವಸರದಲ್ಲಿ ತನ್ನ ಮನಸ್ಸಿನ ನೋವನ್ನು ತೋಡಿಕೊಂಡಾಗ Stop that immature nonsense ಎಂದು ಗದರಿಸಿದ ರೀತಿಗೆ ತಾನು ಥಕ್ಕಾಗಿ ನೋಡುತ್ತಿದ್ದಾಗ, ಅಷ್ಟೇ ನಿಷ್ಠುರವಾಗಿ, it does not go with your age, ಎಂದಿದ್ದ. ಬಂದ ನೆನಪಿನಿಂದ ನಾಗಪ್ಪನಿಗೆ ತನ್ನ ಅಂದಿನ ನಡತೆಯ ಬಗ್ಗೆ ಈಗ ಮುಜಗರವಾಯಿತು. ದೋಶಿಗೂ ಈ ಸಂಸ್ಥೆಯನ್ನು ನೋಡುವ ಕೂತೂಹಲವಿದ್ದರೆ ಅವರನ್ನೂ ಕರೆದೊಯ್ಯಬಹುದು. ಇನ್‌ಕಮ್‌ಟ್ಯಾಕ್ಸ್ ಪ್ರೆಕ್ಟೀಶನರ್ ಎಂದ ಮೇಲೆ ಕಾರು ಇರಲಿಕ್ಕೇಬೇಕು. ನಾಳೆ ಕೇಳಿ ನೋಡಬೇಕು.

## ಅಧ್ಯಾಯ ಆರು

"ಟಿಪ್ಪಣೆ ಹನ್ನೆರಡು: ಇಂದು ಬೆಳಿಗ್ಗೆ ನಾಲ್ಕು ಗಂಟೆಗೇ ಎಚ್ಚರವಾದದ್ದರಿಂದ ಎದ್ದು ಬರೆಯಲು ಕುಳಿತಿದ್ದೇನೆ. ಮನುಷ್ಯನ ನಡವಳಿಕೆಯ ಹಿಂದೆ ಕೆಲಸ ಮಾಡುತ್ತಿದ್ದ ಶಕ್ತಿಗಳು ಗಿಲ್ಬರ್ಟ ಹೇಳುವಷ್ಟು ಸರಳವಾಗಿವೆಯೆ? ಗಿಲ್ಬರ್ಟ ನನ್ನ ಬಗ್ಗೆ ಮಾಡಿಕೊಂಡ ಕಲ್ಪನೆ ಕೂಡ ಬಹಳ ಸರಳವಾದದ್ದೇ. ನನ್ನೆಲ್ಲ ಯಾತನೆಗಳಿಗೆ ಕಾರಣವಾದದ್ದನ್ನು ಅಪ್ಪನ ತಲೆಗೆ ಸುತ್ತಿ ಪಾರಾಗಬಹುದಿತ್ತು. ಆದರೆ ಹಾಗೆ ಮಾಡಿ ಸಾಧಿಸಿದ್ದೇನು?-ಭೂತಕಾಲದಿಂದ ಪಲಾಯನ! ಅಪ್ಪ ನನ್ನೊಂದಿಗೆ ನಡಕೊಂಡ ರೀತಿಗೆ ತಾನೇ ಸಂಪೂರ್ಣವಾಗಿ ಜವಾಬ್ದಾರನೇ? ಇದರಲ್ಲೆಲ್ಲ ಪೂರ್ವಸಂಚಿತವಾದದ್ದೆಷ್ಟು? ಸಂಕಲ್ಪದ ಬಲವನ್ನವಲಂಬಿಸಿದ್ದೆಷ್ಟು? ಎದೆಗವಚಿಕೊಂಡಲ್ಲೇ ಸುಡುತ್ತ ನನ್ನ ಬದುಕುವ ಇಚ್ಛಾಬಲವನ್ನೇ ಕುಗ್ಗಿಸಿಬಿಡುವ, ಯಾರೊಡನೆಯೂ ಹಂಚಿಕೊಳ್ಳಲಾಗದ ಗುಟ್ಟಿನಂತಹ ಈ ದುಷ್ಟ ಸಂಶಯದಿಂದ ಮುಕ್ತನಾಗುವ ಬಗೆ ಗೊತ್ತಿದ್ದರೆ! ಉಳಿದವರೊಡನೆ ನಡಕೊಳ್ಳುವ ಮತ್ತು ಅನುಭವವನ್ನು ಸ್ವೀಕರಿಸುವ ನನ್ನ ಸಂವೇದನಾಕ್ರಮವನ್ನೇ ನಿರ್ಧರಿಸಿಬಿಟ್ಟ ನನ್ನ ಬಾಲ್ಯದ ಅನುಭವವನ್ನು ಧೈರ್ಯವಾಗಿ ಇದಿರಿಸುವ ಗಟ್ಟಿತನ ನನ್ನಲಿದ್ದಿದ್ದರೆ!... ಗಿಲ್ಬರ್ಟ ತಿಳಿದಂತೆ ನನ್ನಲ್ಲಿ ಇಲ್ಲದಿದ್ದದ್ದು ಮನುಷ್ಯಸ್ವಭಾವದ ನಿಷ್ಠುರ ಸತ್ಯವನ್ನು ಇದಿರಿಸುವ ಧೈರ್ಯವಲ್ಲ. ನನ್ನ ಹುಟ್ಟಿನ ಹಾಗೂ ನನ್ನ ಬಾಲ್ಯದ ಕಠೋರ ನಿಜವನ್ನು ಇದಿರಿಸಲು ಬೇಕಾದ ಧೈರ್ಯ...

ಗಿಲ್ಬರ್ಟ ಬಹಳ ದಿನಗಳ ಹಿಂದೆ ಹೇಳಿದ ಮಾತುಗಳು ಸದ್ಯದ ಮನಃಸ್ಥಿತಿಯಲ್ಲಿ ವಿಚಿತ್ರರೀತಿಯಿಂದ ಪರಿಣಾಮಕಾರಿಯಾಗಿ ಕಾಡುತ್ತಿವೆ. ನನಗಿಂತ ಹೆಚ್ಚು ದುಃಖಿಗಳಾದ ಜನ ಜಗತ್ತಿನಲಿಲ್ಲ ಎಂದು ತಿಳಿಯುವುದು ಹಾಸ್ಯಾಸ್ಪದವಾದೀತು. ನೋವನ್ನು ಆ ರೀತಿ ನೋಡುವದೇ ಅಸಹಜವಾದದ್ದೇನೋ. ಏಕೋ ಈ ಹೊತ್ತು ಎದ್ದದ್ದೇ ಹಿಂದೆ ಎಂದೂ ಅನ್ನಿಸಿರದಷ್ಟು ನಿಚ್ಚಳವಾಗಿ ಖಾತ್ರಿಯಾಗುತ್ತದೆ; ಅಲ್ಲ ಹಿಂದೆ ಮತ್ತೆ ಮತ್ತೆ ಖಾತ್ರಿಯಾದದ್ದನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳುವ ಧೈರ್ಯವಾಗುತ್ತದೆ: ನನ್ನ ಅಂಗಿಗೆ ಆ ದಿನ ರಾತ್ರಿ, ಗಾಢ ನಿದ್ದೆಯಲ್ಲಿದ್ದಾಗ, ಬೆಂಕಿ ಹತ್ತಿದ್ದು ಆಕಸ್ಮಿಕವಾಗಿ ಅಲ್ಲವೇ ಅಲ್ಲ. ಅಪ್ಪ ನನ್ನನ್ನು ಕೊಲ್ಲಲೆಂದೇ ಹಚ್ಚಿದ್ದ. ಇದಾದ ಹತ್ತೇ ದಿನಗಳಲ್ಲಿ ಅಪ್ಪ

ಬಾವಿಯಲ್ಲಿ ಹಾರಿ ಜೀವ ತೆಗೆದುಕೊಳ್ಳುವ ಮೊದಲ ಪ್ರಯತ್ನಮಾಡಿದ. ಆಗ ನನಗೆ ಬರೇ ಎಂಟು ವರ್ಷಗಳು. ಅಪ್ಪ ನನ್ನನ್ನೇಕೆ ಕೊಲ್ಲಲು ಬಯಸಿದ? ನನ್ನನ್ನು ಕೊಂದು ತನ್ನನ್ನೂ ಕೊಂದುಕೊಳ್ಳುವ ಈ ಹಂಚಿಕೆಯ ಹಿಂದಿನ ಪ್ರೇರಣೆ ಯಾವುದಿರಬಹುದು? ನನಗಿಂತ ಒಂದೇ ವರ್ಷದಿಂದ ಕಿರಿಯವಳಾದ ನನ್ನ ತಂಗಿ ಕಲ್ಯಾಣಿ ಮುಂಬಯಿಯ ಹೇಳಹೆಸರಿಲ್ಲದ ಜನಜಂಗುಳಿಯಲ್ಲಿ ಕಾಣೆಯಾಗಿ ಹೋದದ್ದೂ ಈ ಆತ್ಮಘಾತದ ಸಂಚಿನದೇ ಅಂಗವಾಗಿತ್ತೇ? ಇದು ಮಾತ್ರ ಇನ್ನೂ ಸ್ಪಷ್ಟವಾಗಿಲ್ಲ. ಎಂದಿಗೂ ಆಗಲಾರದೇನೋ. ಅಣ್ಣನಿಗೆ ಗೊತ್ತಿರಬಹುದೇ? ನಿದ್ದೆ ಎಚ್ಚರಗಳಲ್ಲಿ ಧುತ್ ಎಂದು ಇದಿರಾದಾಗಲೆಲ್ಲ ತತ್ತರಿಸಲು ಹಚ್ಚಿದ, ಯಾರೊಡನಾದರೂ ಹಂಚಿಕೊಳ್ಳೋಣವೆಂದರೆ ಬಾಯಿ ತೆರೆಯಲೂ ಬಿಡದ ಭೀತಿಗೆ ಆಕಾರ ಕೊಡಲು ಕತೆಗಳನ್ನು ಬರೆದದ್ದು ಸಾಹಿತ್ಯದಲ್ಲಿ ಸ್ಥಾನ ಪಡೆಯುವುದಕ್ಕಲ್ಲ. ಅಷ್ಟು ದೊಡ್ಡ ಮಹತ್ವಾಕಾಂಕ್ಷೆ ಅವುಗಳಿಗೆ ಇಲ್ಲವೇ ಇಲ್ಲ, ನನಗೆ ಆಗಿನ ಕ್ಷಣಗಳಲ್ಲಿ ಅಪ್ಪ ಹಿಡಿದ ಹಾದಿಯಿಂದ ತಪ್ಪಿಸಿಕೊಳ್ಳುವದೇ ಮುಖ್ಯವಾಗಿತ್ತು. ಬದುಕಿ ಉಳಿಯುವದೇ ಮುಖ್ಯವಾಗಿತ್ತು. ಯಾವುದೇ ರೀತಿಯ ಸಾಮಾಜಿಕ ಕಾಳಜೀ ಇಲ್ಲದ, ನಿಷ್ಠೆ ಇಲ್ಲದ ಇಂತಹ ಚಂದದ ಅರೆಗೊಡ್ಡು ಕತೆಗಳನ್ನು ಪತ್ರಿಕೆಗಳು ಬಹಿಷ್ಕರಿಸಬೇಕು. ಇಲ್ಲವಾದರೆ ಹಾಗೆ ಪ್ರಕಟಿಸುವ ಪತ್ರಿಕೆಗಳನ್ನು ಓದುಗರೇ ಬಹಿಷ್ಕರಿಸುವಂತೆ ಚಳುವಳಿ ಎಬ್ಬಿಸಬೇಕಾದೀತು ಎಂಬ ಆಶಯದ ಸಂಪಾದಕೀಯ ಬರೆದ ಹುಬ್ಬಳ್ಳಿಯ ಒಂದು ಸಣ್ಣ ಪತ್ರಿಕೆಯ ಸಂಪಾದಕ ನನ್ನ ಹೆಸರನ್ನು ದಪ್ಪ ಅಕ್ಷರಗಳಲ್ಲಿ ಮುದ್ರಿಸಿದ. ನನ್ನ ಬಹಳಷ್ಟು ಮಹತ್ವದ ಕತೆಗಳು ಪ್ರಕಟವಾದದ್ದೇ ತನ್ನ ಪತ್ರಿಕೆಯಲ್ಲಿ ಎಂಬುದನ್ನು ಮರೆತು. ಈ ಮೊದಲೇ ಕಳಿಸಿದ ಎರಡು ಕತೆಗಳನ್ನು ಎರಡು ಬೇರೆ ಬೇರೆ ಪತ್ರಿಕೆಗಳ ಸಂಪಾದಕರು ಯಾವ - ಕಾರಣವನ್ನೂ ಕೊಡದೆ ಹಿಂದೆ ಕಳಿಸಿದ್ದರು. ಆದರೂ ನನಗೆ ಕೆಡಕೆನಿಸಲಿಲ್ಲ. ಒಂದಕ್ಕೆ ಮಾತ್ರ ಮನಸ್ಸು ಇನ್ನೂ ಸಿದ್ಧವಾಗುವದಿಲ್ಲ: ಅವನ್ನು ಸುಟ್ಟುಹಾಕಿಬಿಡಬೇಕು ಎನ್ನುವ ಬಲವಾದ ಅನ್ನಿಸಿಕೆಯನ್ನು ಆಚರಣೆಯಲ್ಲಿ ತರಲು. ಕೇಳುವವರಿಲ್ಲದಾಗಲೂ ಬರಿಯ ನಮ್ಮ ಮನಸ್ಸಿನ ಸಮಾಧಾನಕ್ಕಾಗಿಯೇ ಹಾಡಿಕೊಳ್ಳಬಲ್ಲೆವು. ತಿಂಗಳುಗಟ್ಟಲೆ ಕಾಲ ಹಾಕಿ ಸುಂದರ ಚಿತ್ರ ಬರೆದು ಯಾರಿಗೂ ತೋರಿಸದೇನೆ ಹರಿದೊಗೆಯ ಬಲ್ಲೆವು ಎಂದೂ ಅನ್ನಿಸುತ್ತದೆ. ಆದರೆ ಶಬ್ದಗಳಲ್ಲಿ ಹಿಡಿದ ಅನುಭವ ಮಾತ್ರ ಇನ್ನೊಬ್ಬನಿಗೆ ಮುಟ್ಟಿದ ಹೊರತು ಮನಸ್ಸಿಗೇಕೆ ಸಮಾಧಾನವೆನ್ನಿಸುವದಿಲ್ಲ? ಕತೆ ಬರೆಯುವುದರ

ಮೂಲಕ ಅಲ್ಲದೇನೆ ಬೇರೆ ಯಾವುದೇ ರೀತಿಯಿಂದ ಉಳಿದವರೊಡನೆ ಮಾತನಾಡುವ ಕಲೆಯೇ ಗೊತ್ತಿರದ ನನ್ನ ಬಾಯನ್ನ ಮುಚ್ಚಿದ ಈ ಹಿಂಸೆಯ ಅರ್ಥ ನನಗಾಗುತ್ತಿಲ್ಲ. ಆದರೂ ಒಂದಿಲ್ಲ ಒಂದು ದಿನ ಯಾರಾದರೂ ಓದಿಯಾರು ಎಂಬ ಭ್ರಮೆಯಿಂದಲೇ ಹತ್ತಾರು ಕತೆಗಳನ್ನು ಬರೆದು ಟ್ರಂಕಿನಲ್ಲಿ ಇಟ್ಟಿದ್ದೇನೆ. ಇಷ್ಟೊಂದನ್ನು ಧೈರ್ಯವಾಗಿ ಹೇಳಬಲ್ಲೆ: ಈ ಮೂರ್ಖ ಸಂಪಾದಕ ತಿಳಿದಂತೆ ನನ್ನ ಕತೆಗಳಲ್ಲಿ ಪ್ರಕಟವಾದ ಮೃತ್ಯು-ಪ್ರಜ್ಞೆಗೆ ನಾನು ಬ್ರಾಹ್ಮಣನಾಗಿ ಹುಟ್ಟಿದ್ದು ಕಾರಣವಲ್ಲ. ಸತ್ಯ ಅಷ್ಟೊಂದು ಸರಳವಾಗಿದ್ದರೆ ಬಹುಶಃ ಅಪ್ಪ ಆತ್ಮಹತ್ಯೆ ಮಾಡಿಕೊಳ್ಳುತ್ತಿರಲಿಲ್ಲವೇನೋ. ನಮ್ಮ ಹುಟ್ಟೇ ನಮ್ಮ ಸಾವಿಗೆ ಕಾರಣವಾಗುತ್ತಿದ್ದದ್ದು ಈ ದೇಶದಲ್ಲಿ ಮಾತ್ರವೇನೋ."

ಈ ಬರವಣಿಗೆಯ ಧಾಟಿಯನ್ನು ಕೂಡ ಗಿಲ್ಬರ್ಟ Silly sentimentality ಎಂದೋ, ಇಲ್ಲ, Immature nonsense ಎಂದು ಕರೆಯುತ್ತಿದ್ದನೇನೋ ಎಂಬುದರ ಅರಿವು ಬಂದ ಕೂಡಲೇ ಬರೆಯುವ ಕೈ ತಂತಾನೆ ತಡೆದಿತ್ತು. ತನ್ನ ಬಗ್ಗೆ ತನಗೇ ಅನ್ನಿಸತೊಡಗಿದ ತೀವ್ರವಾದ ಅಸಮಾಧಾನದಿಂದ. ತಡಫಡಿಸುತ್ತ ಕುಳಿತಲ್ಲಿಂದ ಎದ್ದು ಕಿಡಕಿಗೆ ಬಂದ: ನಾನು ಇದ್ದದ್ದೇ ಹಾಗೆ—Sentimental. ನಾನು ಇದ್ದದ್ದೇ ಹಾಗೆ—immature. ಕಿಡಕಿಯ ಕಟ್ಟಿಗೆಯ ಧಡಿಯ ಮೇಲೆ ಮುಚ್ಚಿದ ಮುಷ್ಟಿಯಿಂದ ಗುದ್ದುತ್ತ—I care a damn ಎಂದ. ಮರುಗಳಿಗೆ, ಈ ಸಿಟ್ಟಿಗೆ ಕಾರಣವಾದದ್ದು ಮನಸ್ಸಿನ ಮೂಲೆಯೊಂದರಲ್ಲಿ ಮೈ ಮುರಿದೆದ್ದ ಫಿರೋಜನ ನೆನಪೆಂದು ತಿಳಿದಾಗ ಇನ್ನಷ್ಟು ಕೆರಳಿ—ಥತ್ ಶನಿಯೇ ಎಂದುಕೊಂಡ. ಸಿಟ್ಟನ್ನು ಕಳೆದುಕೊಳ್ಳುವ ಉಪಾಯವೆಂಬಂತೆ ಈಗಷ್ಟೇ ಕಣ್ಣುಬಿಡುವ ಸಿದ್ಧತೆಯಲ್ಲಿದ್ದಂತಿದ್ದ ಬೆಳಗುಜಾವದಲ್ಲಿ ತಂಪಾಗಿ ಬೀಸುತ್ತಿದ್ದ ಗಾಳಿಗೆ ಮೋರೆಯೊಡ್ಡಿದ.

ಅಪ್ಪ, ಅಮ್ಮರ ಬಗೆಗಿನ ಅನೇಕ ಸಂಗತಿಗಳು ನಾಗಪ್ಪನಿಗಿನ್ನೂ ಒಗಟಾಗಿಯೇ ಉಳಿದಿವೆ. ಗೊತ್ತಾದವುಗಳು ಕೂಡ. ಬೇರೆ ಬೇರೆ ಸಂದರ್ಭಗಳಲ್ಲಿ ಇಷ್ಟಿಷ್ಟಾಗಿಯೇ ಗೊತ್ತಾದವುಗಳು, ಒಂದೊಂದೇ ಹೊಸ ಸಂಗತಿ ಬೆಳಕಿಗೆ ಬಂದಾಗ ಈ ಮೊದಲು ಅನುಭವಿಸಿದ ಸಂಕಟಗಳೆಲ್ಲ ಹೊಸ ರೂಪದಲ್ಲಿ ಹುಟ್ಟಿಬಂದು ನೋವು ಗೋಪುರ ಕಟ್ಟುತ್ತಿತ್ತು. ಫಿರೋಜ್ ಅತ್ಯಂತ ಸಹಜವಾಗಿ

ಎಂಬಂತೆ (ಆ ಸಹಜತೆ ನಟಿಸಿದ್ದಾಗಿತ್ತು ಎಂದು ಗೊತ್ತಾದದ್ದು ತೀರ ತಡವಾಗಿ) ಅವನ ಅಪ್ಪನ ವೃತ್ತಿಯನ್ನು ಕುರಿತು ಪ್ರಶ್ನೆ ಕೇಳಿದಾಗಲೂ ಹೀಗೇ ಆಗಿತ್ತು. ಪ್ರಶ್ನೆಯ ಪ್ರಸ್ತುತತೆ ಕೂಡಲೇ ಹೊಳೆಯಲಿಲ್ಲ. ಬಾಯಿಂದ ಉತ್ತರ ಹೊರಡದೇ ಗೊಂದಲಕ್ಕೆ ಬಿದ್ದುದನ್ನು ಅಪಾರ್ಥ ಮಾಡಿಕೊಂಡು—"ನನ್ನ ಪ್ರಶ್ನೆಗೆ ಉತ್ತರ ಕೊಡುವದು ಕಷ್ಟವಾಗುತ್ತಿದ್ದರೆ ಬಿಟ್ಟುಬಿಡು. ಅದೇನು ಅಷ್ಟು ಮಹತ್ವದ ಸಂಗತಿಯಲ್ಲ. ಹೀಗೇ ಸಹಜ ಕೇಳಿದ್ದು" ಎನ್ನುತ್ತ ಅವನತ್ತ ಲಕ್ಷ್ಯಕೊಡದೇ ಅದೇ ಆರಲು ಬಂದ ಪೈಪನ್ನು ಗಾಳಿ ಊದಿ ಹೊತ್ತಿಸುವುದರಲ್ಲಿ ಗರ್ಕನಾದ. ಅವನ ಈ ಉಪೇಕ್ಷೆಯಿಂದ ಕೆಣಕಲ್ಪಟ್ಟ ನಾಗಪ್ಪ, "ಅವನದು ಸಣ್ಣ ಚಹದಂಗಡಿಯಿತ್ತು, ನಮ್ಮ ಹಳ್ಳಿಯಲ್ಲಿ" ಎಂದ. ಫಿರೋಜ್ ಪೈಪನ್ನು ಸರಕ್ಕನೆ ಬಾಯಿಂದ ತೆಗೆದು 'ಓಹ್' ಎಂದು ಚಕಿತನಾದವನಂತೆ ಒಂದೇ ಕ್ಷಣದ ಮಟ್ಟಿಗೆ ತನ್ನತ್ತ ನೋಡಿ ತಿರುಗಿ ಪೈಪನ್ನು ತುಟಿಗಳ ನಡುವೆ ಹಿಡಿದಾಗ ಅವನ ತುಟಿಗಳ ಮೂಲೆಯಲ್ಲೆಲ್ಲೋ ತನ್ನ ಬಗ್ಗೆ ತಾತ್ಸಾರ ಮೂಡಿತ್ತು ಎನ್ನುವುದರ ನೆನಪಿನಿಂದಲೇ ನಾಗಪ್ಪ ಈಗ ಮತ್ತೆ ಕೆರಳಿ, "ಬೋಳೀ ಮಗನೇ, ನಿನ್ನ ಅಪ್ಪ, ಅಜ್ಜ ಗಳಿಸಿಟ್ಟ ಹಣದ ಮೇಲಾಗಲೀ, ನಿಮ್ಮ ಜಾತಿಯವರು ಕಟ್ಟಿಸಿಟ್ಟ ದೊಡ್ಡ ದೊಡ್ಡ ಧರ್ಮಾರ್ಥ ಸಂಸ್ಥೆಗಳ ಬಿಟ್ಟೀ ಹಣದಿಂದಾಗಲಿ ಕಲಿತವನಲ್ಲವೋ: ಸ್ವಂತ ಮೆಹನತ್ತಿನಿಂದ. ಅಪ್ಪ ಬಡವನಾಗಿದ್ದರೂ ತುಂಬ ಸ್ವಾಭಿಮಾನಿಯಾಗಿದ್ದನೋ. ಯಾರ ಮುಂದೆಯೂ ದೀನನಾದವನಲ್ಲ," ಎಂದಕೊಳ್ಳುತ್ತ ಹಲ್ಲುಕಡಿದ. ಈ ಸಿಟ್ಟು ಮೊದಲಿನಿಂದಲೂ ಇನ್ನಾವುದಕ್ಕೊ ತಳಕು ಹಾಕಿಕೊಂಡಿತ್ತೆಂಬಂತೆ—ಒಂದು ಕಾಲಕ್ಕೆ ತನ್ನ ಸಾಹಿತ್ಯದ ಹಿಂದಿನ ದೊಡ್ಡ ಪ್ರೋತ್ಸಾಹವಾಗಿದ್ದ ಆತ್ಮೀಯ ಗೆಳೆಯನೇ ಇಂದು ಅದರ ಬಾಯಿ ಮುಚ್ಚಿಸಿದ ಕ್ರೌರ್ಯಕ್ಕೆ ಬೆಂಬಲವಾದದ್ದು ನೆನಪಿಗೆ ಬಂದಾಗ ಕೊರಳ ಸೆರೆಗಳು ಉಬ್ಬಿಕೊಂಡವು: ಹುಬ್ಬಳ್ಳಿಯ ಸಣ್ಣ ಪತ್ರಿಕೆಯ ಹೆಸರಾಗಲೀ ಅದರ ಸಂಪಾದಕನ ಹೆಸರಾಗಲೀ ಬಾಯಲ್ಲಿ ಹುಟ್ಟಲಿಲ್ಲ. ಬೈದು ಬಿಡಬೇಕೆಂದರೆ ಸರಿಯಾದ ಬೈಗುಳ ಸಹ ತೋಚಲಿಲ್ಲ. ಗಿಲ್ಬರ್ಟನಿಗೆ ಪ್ರಾರ್ಥನೆ ಒದಗಿಸುತ್ತಿದ್ದದ್ದೇ ಸೃಷ್ಟಿಕಾರ್ಯ ತನಗೆ ಒದಗಿಸುತ್ತಿತ್ತೇನೊ. ಗಾಳಿಯೊಳಗಿನ ತಂಪು ಒಮ್ಮಿಗೆಲೇ ಕಡಿಮೆಯಾಯಿತೆ?

ನಾಗಪ್ಪ ಕಿಡಕಿಯನ್ನು ಬಿಟ್ಟು ಈಚೆಗೆ ಬಂದ.

## ಅಧ್ಯಾಯ ಏಳು

ಅಪ್ಪ ಬಡವನಾಗಿದ್ದರೂ ತುಂಬ ಸ್ವಾಭಿಮಾನಿಯಾಗಿದ್ದ ಎನ್ನುವುದರ ಬಗ್ಗೆಯೆ ಸಂಶಯ ಹುಟ್ಟಿತು ನಾಗಪ್ಪನಲ್ಲಿ.

ಅವನ ಪೂರ್ವಜರು ಮೂಲತಃ ಗೋವೆಯವರಂತೆ. ನಾಗಪ್ಪನ ತಂದೆಯೇ ಗೋವೆಯಿಂದ ಹೊರಬಿದ್ದು ಹನೇಹಳ್ಳಿಯಲ್ಲಿ ತಳವೂರಿದ ಮೊದಲಿಗ. ಗೋವೆಯಿಂದ ಹೊರಬಿದ್ದು ಹನೇಹಳ್ಳಿಗೆ ಬರಲು ಏನು ಕಾರಣವಾಯಿತು? ಗೋವೆಯಲ್ಲಿ ತನ್ನವರು ಯಾರು ಯಾರಿದ್ದಾರೆ? ಅಪ್ಪನಿಗೂ ಹನೇಹಳ್ಳಿಯ ತಮ್ಮ ಮನೆಯ ಮಾಲೀಕರಿಗೂ (ಇವರೂ ಗೊವೆಯವರೇ ಅಂತೆ) ಏನು ಸಂಬಂಧ? ಇವೇ ಮೊದಲಾದ ತನ್ನ ಮೂಲವನ್ನು ಕುರಿತ ಮೂಲಭೂತವಾದ ಪ್ರಶ್ನೆಗಳ ಬಗ್ಗೆ ನಾಗಪ್ಪ ಇಂದಿಗೂ ಬಹಳಷ್ಟು ಅರಿತವನಲ್ಲ. ಅರಿಯುವುದರ ಬಗೆಗಿನ ಅನಾಸ್ಥೆಯಲ್ಲಿ ಕುತೂಹಲದ ಅಭಾವಕ್ಕಿಂತ ಅವನಿಗೇ ಗೊತ್ತಿರದ ಒಂದು ಬಗೆಯ ಅಳುಕೇ ಹೆಚ್ಚಾಗಿದ್ದಂತಿತ್ತು. ಹನೇಹಳ್ಳಿ ದೊಡ್ಡ ಊರಲ್ಲವಾದರೂ ಹಳ್ಳಿಯ ಪ್ರತಿಷ್ಠಿತ ವರ್ಗದವರೊಡನೆ ಸಂಪರ್ಕ ಕಡಿಮೆಯಾಗಿತ್ತಷ್ಟೇ ಅಲ್ಲ, ಅವರಿಗೆ ತಮ್ಮ ಬಗ್ಗೆ ಒಂದು ರೀತಿಯ ಅನಾದರವಿತ್ತು ಎಂಬಂತಹ ಅಸ್ಪಷ್ಟ ಭಾವನೆಯೊಂದು ನಾಗಪ್ಪನಲ್ಲಿ ಚಿಕ್ಕಂದಿನಲ್ಲೇ ಬೇರೂರಿ ನಿಂತಿತ್ತು. ಅಪ್ಪ, ಅಮ್ಮ, ಅಪ್ಪನ ವಿಧವೆ ತಂಗಿ ಇವರೆಲ್ಲರ ಮುಖದ ಮೇಲೂ ಯಾರಿಗೋ ಹೆದರಿಕೊಂಡಂತಹ ಭಾವ ಕಂಡಂತೆ ನೆನಪು. ಈಗಲೂ ಹಿಂದಿನದಕ್ಕೆ ನೆನಪು ಕೈಚಾಚಿದಾಗ ನಿಲುಕುತ್ತಿದ್ದ ವಾಸ್ತವತೆ: ಕತ್ತಲಲ್ಲಿ ಇಷ್ಟಗಲ ತೆರೆದು ನಿಂತು ಬೆದರಿಸುವ ಎರಡು ದೊಡ್ಡ ಕಣ್ಣುಗಳಂತಹದು. ಇದಾವುದರೊಡನೆಯೂ ಸಂಬಂಧ ಹಚ್ಚಿಕೊಳ್ಳಲು ಅಸಮರ್ಥನಾದ ನಾಗಪ್ಪನಿಗೆ ತನ್ನ ಭೂತಕಾಲ ಒಡೆಯದ ಒಗಟಿಗಿಂತ ಹೆಚ್ಚಾಗಿ ಬೆನ್ನಟ್ಟಿ ಬರುವ ಕಾಡುಪ್ರಾಣಿಯ ತರಹದ ಕಪ್ಪು ಶಕ್ತಿಯಾಗಿ ಪರಿಣಮಿಸಿದೆ ಎನ್ನುವುದನ್ನು ಅರಿತೂ ಅರಿಯದವನಂತಾಗಿದ್ದಾನೆ. ಮಸಕುಮಸಕಾಗಿ ತಿಳಿದ ಚೂರು ಚೂರು ಸಂಗತಿಗಳೇ, ಸದ್ಯದ ವಿಚಿತ್ರ. ಮನಃಸ್ಥಿತಿಯಲ್ಲಿ ಒಂದರೊಳಗೊಂದು ಹೆಣೆದುಕೊಳ್ಳುತ್ತ ನಿರ್ಮಿಸಿದ ಕನಸಿನಂತಹ ವಾತಾವರಣವೊಂದು ಫಿರೋಜ್ ಕೇಳಿದ ಪ್ರಶ್ನೆಯ ನೋವನ್ನು ನೂರು ಪಟ್ಟು ಹೆಚ್ಚಿಸುತ್ತಿತ್ತು. ಬೇರೊಂದು ಕಾಲದಲ್ಲಿ ತಾನು ತುಂಬ ಅಭಿಮಾನ ಪಟ್ಟುಕೊಂಡ

ತನ್ನ ಬಾಲ್ಯದ ಬಗ್ಗೆ, ಅಪ್ಪ-ಅಮ್ಮ, ಬರಿಯ ಕೇಳಿ ಗೊತ್ತಿದ್ದ ಅಣ್ಣ, ಕಾಣೆಯಾದ ತಂಗಿ—ಇವರೆಲ್ಲರ ಬಗ್ಗೆ ಈಗ ತೀವ್ರವಾದ ಅಸಮಾಧಾನ ಹುಟ್ಟುತ್ತಿತ್ತು. ಸಿಟ್ಟಿನ ಗಳಿಗೆಯಲ್ಲಿ ಅಪ್ಪನ ವೃತ್ತಿಯ ಬಗ್ಗೆ ಮುಚ್ಚುಮರೆಯಿಲ್ಲದೇ ಹೇಳಿಬಿಟ್ಟ ತನ್ನ ನೈತಿಕ ಧೈರ್ಯದ ಬಗ್ಗೆ ಆಗ ಅಭಿಮಾನ ಅನ್ನಿಸಿದರೂ ಫಿರೋಜ್ ಅದನ್ನು ತನ್ನನ್ನು ಹಣಿಯಲು ಉಪಯೋಗಿಸಿಕೊಂಡ ರೀತಿಯನ್ನು ಅರಿತಾಗ ಅದೆಲ್ಲದರ ಬಗ್ಗೆ ಜಿಗುಪ್ಸೆ ಹುಟ್ಟಿ ಸಿಡಿದುಬೀಳುತ್ತಾನೆ.

ತನ್ನ ಹುಟ್ಟಿನ ಬಗ್ಗೆ, ಅಪ್ಪ ಅಮ್ಮರನ್ನು ಕುರಿತು ಹನೇಹಳ್ಳಿಯವರ ನಿಲುವಿನ ಬಗ್ಗೆ ನಾಗಪ್ಪನಿಗೆ ಮೊತ್ತಮೊದಲು ಸಂಶಯ ಹುಟ್ಟಿದ್ದು ಹಳ್ಳಿಯನ್ನು ಬಿಟ್ಟು ಕುಮಟೆಗೆ ಹೋದ ಮೇಲೆ. ಹನೇಹಳ್ಳಿಯಲ್ಲಾಗ ಹೈಸ್ಕೂಲು ಇರಲಿಲ್ಲ. ಮೂರನೇ ಇಯತ್ತೆಯ ವರೆಗೆ ಕಲಿಸುವ ಆಂಗ್ಲೋ ವ್ಹರ್ನಾಕ್ಯುಲರ್ ಸ್ಕೂಲ್ ಒಂದು ಮಗ್ಗಲು ಹಳ್ಳಿಯಾದ ಬಂಕೀಕೊಡ್ಲದಲ್ಲಿತ್ತು. ಅಲ್ಲೇ ನಾಗಪ್ಪ ತನ್ನ ಇಂಗ್ಲಿಷ್ ಸಾಲೆಯ ಮೊದಲ ಮೂರು ವರ್ಷಗಳ ಶಿಕ್ಷಣವನ್ನು ಪಡೆದಿದ್ದ. ದತ್ತಮಾಸ್ತರರ ಬೆತ್ತದ ಬೆದರಿಕೆ ತರೆಯಮೇಲೆ ಕಾಯಂನಿಂತಿದ್ದರೂ ಒಟ್ಟಿನಲ್ಲಿ ಆ ದಿನಗಳು ಅತ್ಯಂತ ಸುಖದ ದಿನಗಳೆಂದು ನೆನಪು ಮಾಡುವಂತಹವುಗಳಾಗಿದ್ದವು. ತಾನು ಅನುಭವವನ್ನು ಸ್ವೀಕರಿಸುವ ಒಟ್ಟೂ ರೀತಿಯನ್ನು ನಿರ್ಧರಿಸಿದ್ದೇ ತಾನು ಹನೇಹಳ್ಳಿಯಲ್ಲಿ ಕಳೆದ ಬಾಲ್ಯದ ದಿನಗಳೆಂದು ನಾಗಪ್ಪನಿಗೆ ಅನ್ನಿಸುತ್ತದೆ. ಇದೆಲ್ಲದರ ಮೇಲೆ ಕಪ್ಪುನೆರಳು ಚಾಚಿದ ಘಟನೆಗಳು ಒಂದೊಂದಾಗಿ ನಡೆದದ್ದು ಕುಮಟೆಯ ಸಾಲೆಯ ಹಾಸ್ಟೆಲಿನಲ್ಲಿ ಇದ್ದಾಗ. ಶ್ರೀನಿವಾಸನ ತಮ್ಮನಾದ ಮಾಧವನ ಪರಿಚಯವಾದದ್ದೂ ಆ ದಿನಗಳಲ್ಲೇ. ಈಗ ನೆನಪು ಮಾಡಿದರೆ ಮಾಧವ ಹಾಗೂ ಅವನ ಗೆಳೆಯನಾದ ಗಜಾನನ ಇಬ್ಬರೂ ಕೂಡಿ ತನ್ನನ್ನು ಸತಾಯಿಸಿದ್ದ ಅವರು ಮೊತ್ತಮೊದಲು ಕೇಳಿದ ಪ್ರಶ್ನೆಯಿಂದಲೇ ಎಂಬ ಅನ್ನಿಸಿಕೆ: ಅನೇಕ ವರ್ಷಗಳ ನಂತರ ಫಿರೋಜ್ ಕೇಳಿದ ಪ್ರಶ್ನೆಯ ಜಾತಿಯದೇ. ಮಾಧವ ಹಾಗೂ ಗಜಾನನ ತನಗಿಂತ ಮೂರು ಕ್ಲಾಸುಗಳಿಂದ ದೊಡ್ಡವರು. ತಾನು ನಾಲ್ಕನೇ ಇಯತ್ತೆಯಲ್ಲಿದ್ದಾಗ ಅವರು ಮೆಟ್ರಿಕ್‌ನಲ್ಲಿ. ಆ ಪ್ರಶ್ನೆ ತನ್ನ ತಾಯ ಜಾತಿಗೆ ಸಂಬಂಧಪಟ್ಟಿದ್ದಾಗಿತ್ತು. ಅವನ ತಾಯಿ ಅವನು ಇಷ್ಟು ದಿನ ತಿಳಕೊಂಡಂತೆ ಬ್ರಾಹ್ಮಣ ಹೆಂಗಸಾಗಿರದೇ ಕಲಾವಂತರವಳಾಗಿದ್ದಳು ಎಂಬ ಸಂಶಯ ಇವನ ತಲೆಯಲ್ಲಿ ಹಾಕಿದವರು ಇವರೇ. ಅವಳು ಸತ್ತು ಅದಾಗಲೇ ಐದು ವರ್ಷಗಳ

ಮೇಲಾಗಿರಬೇಕು, ಆಗ, ಅವಳು ಯಾವ ಜಾತಿಯವಳಾಗಿದ್ದಳು ಎನ್ನುವುದಕ್ಕಿಂತ ಹೆಚ್ಚಾಗಿ ಅದನ್ನೆಲ್ಲ ಹೇಳಿ ತನ್ನನ್ನು ನೋಯಿಸುವುದರಲ್ಲಿ ಅವರು ಪಡುತ್ತಿದ್ದ ಸಂತೋಷದ ನೆನಪಿನಿಂದ ನಾಗಪ್ಪ ದಿಗ್ಭ್ರಮೆಗೊಳ್ಳುತ್ತಾನೆ: ಸಂತೋಷಕ್ಕಿಂತ ಹೆಚ್ಚಾಗಿ ಅದನ್ನು ವ್ಯಕ್ತಪಡಿಸುವ ಹೇಸಿಕೆ ತರುವ ರೀತಿಯಿಂದ: ಕೈಬೆರಳುಗಳಿಂದ ಸಂಭೋಗ ಕ್ರಿಯೆಯ ಸನ್ನೆಮಾಡುತ್ತ ಇಷ್ಟಗಲ ಹಲ್ಲು ಕಿಸಿದು ಹಲ್ಕಟ್ಟಾಗಿ ನಗುತ್ತಿದ್ದರು. ಗಜಾನನ ಮಣಕಿಯ ಶ್ರೀಮಂತ ಜಮೀನುದಾರನ ಮಗ. ತಾನು ಶ್ರೀಮಂತ. ಜಿಲ್ಲೆಯಲ್ಲೇ ಪ್ರಖ್ಯಾತವಾದ ಕುಟುಂಬದವನೆಂಬ ಜಂಭವೊಂದು ಅವನ ಪ್ರತಿ ಮಾತಿನಲ್ಲಿ, ಗತ್ತಿನಲ್ಲಿ, ವ್ಯಕ್ತವಾಗುತ್ತಿತ್ತು. ನಾಗಪ್ಪನ ಮುಗ್ಧ ಸರಳತೆಯನ್ನು, ಮೆತ್ತಗಿನ ಸ್ವಭಾವವನ್ನರಿತ ಮೇಲಂತೂ ಅವರ ದುಷ್ಟ ಪ್ರವೃತ್ತಿ ಇನ್ನಷ್ಟು ಕ್ರೂರ ರೂಪತಾಳುತ್ತಿತ್ತು. ಮನೆಯಲ್ಲಿ ಅತ್ಯಂತ ಬಡವನಾಗಿದ್ದ ಮಾಧವನ ಗೆಳೆತನವನ್ನು ಗಜಾನನ ಕಟ್ಟಿಕೊಂಡದ್ದು ಎಲ್ಲರಿಗೂ ಆಶ್ಚರ್ಯ ಉಂಟು ಮಾಡಿತ್ತು. ಆದರೆ ಈ ಮೈತ್ರಿಗೆ ತನ್ನನ್ನು ಹೀಗೆ ಕ್ರೂರವಾಗಿ ಛಳಿಸುವದೇ ಮೂಲ ಸ್ಫೂರ್ತಿಯಾಗಿತ್ತೇನೋ ಎಂಬ ಸಂಶಯ ನಾಗಪ್ಪನಿಗೆ.

ಹಾಸಿಗೆಯಲ್ಲಿ ಬಿದ್ದಲ್ಲೇ ಹಿಂದಿನ ನೆನಪುಗಳು ಮರುಕಳಿಸಹತ್ತಿದಾಗ ಮನಸ್ಸಿಗೆ ಬೇಜಾರಾಗಿ ಎದ್ದೇ ಕುಳಿತ. ಬಚ್ಚಲುಮನೆಗೆ ಹೋಗಿ ಮೋರೆ ತೊಳೆದುಕೊಂಡು ಬಂದು 'ಬೆಡ್‌ಟೀ'ದ ಹಾದಿ ಕಾಯುತ್ತಿರುವಾಗ, ಆ ದಿನ ಟೆಲಿಫೋನಿನ ಮೇಲೆ ಬಂದ ಆದೇಶದ ಮೇಲೇ ರಜೆಗೆ ಅರ್ಜಿಮಾಡಿ ಮನೆಯಲ್ಲಿ ಕುಳಿತುಬಿಟ್ಟಿದ್ದೆನಲ್ಲ. ಇದೂ ಒಂದು ಫಿರೋಜನ ಪಿತೂರಿಯಾಗಿರಲಿಕ್ಕಿಲ್ಲವಲ್ಲ! ಅನ್ನಿಸಿತು: ಯಾಕೆ? ಎನ್ನುವುದನ್ನು ಬರೆದು ತಿಳಿಸುತ್ತೇನೆ ಎಂದು ಹೇಳಿದ್ದರೂ ನಿನ್ನೆಯವರೆಗಂತೂ ಪತ್ರ ಬಂದಿರಲಿಲ್ಲ. ನಿನ್ನೆ ಮಧ್ಯಾಹ್ನ ತಾನೇ ಖೇತವಾಡಿಗೆ ಹೋಗಿ ನೋಡಿ ಬಂದಿದ್ದ. ಆಜುಜಾಜಿನ ಮನೆಗಳ ಹೆಂಗಸರು ಕೆಲವರು ತನ್ನತ್ತ ವಿಚಿತ್ರರೀತಿಯಿಂದ ನೋಡಿದ್ದರೇ ಹೊರತು ಯಾರೂ ಮಾತನಾಡಿಸಿರಲಿಲ್ಲ. ಗಂಡಸರಾರೂ ಮನೆಯಕ್ಕೆಲ್ಲದ ವೇಳೆಯಾದ್ದರಿಂದ ಸಂಕೋಚಪಟ್ಟಿರಬೇಕು. ಅಥವಾ ತಾನು ಈ ವೇಳೆಯಲ್ಲಿ ಬರಬಹುದೆಂದು ಊಹಿಸಿರದ ಅವರಿಗೆ ಏನು ಕೇಳಬೇಕೆಂದು ಹೊಳೆಯದಿರಬಹುದು ಅನ್ನಿಸಿತು. ತಾನು ಕಳೆದ ಮೂರು ದಿನಗಳಿಂದ ಬರದೇ ಇದ್ದುದಕ್ಕೆ ಏನೆಲ್ಲ ಅರ್ಥ ಮಾಡಿಕೊಂಡಿದ್ದಾರೋ ಎಂದೂ ಅನ್ನಿಸಿತು.

ವರ್ಷದಲ್ಲಿ ಒಂದು ತಿಂಗಳು, ಕಂಪನಿಯ ನಿಯಮಗಳಿಗನುಸಾರವಾಗಿ, ಸಿಗುತ್ತಿದ್ದ ರಜೆಯನ್ನು ಕೂಡ ವರ್ಷವರ್ಷಕ್ಕೆ ತೆಗೆದುಕೊಂಡವನಲ್ಲ, ನಾಗಪ್ಪ. ಕಂಪನಿಯ ಕೆಲಸಕ್ಕೆ ತನ್ನನ್ನು ಸಂಪೂರ್ಣವಾಗಿ ಒಪ್ಪಿಸಿಕೊಂಡವನಿಗೆ ಈಗ ತಾನು ಕೇಳದೇ ಸಿಕ್ಕ ರಜೆಯಿಂದ ಮನಸ್ಸಿಗೆ ಹೇಗೋ ಹೇಗೋ ಆಗಹತ್ತಿತು. ಕೆಲಸವಿಲ್ಲವವನ ಮನಸ್ಸು, ಕಂಡದ್ದಕ್ಕೆಲ್ಲ ಅರ್ಥ ಹಚ್ಚಿ ಹೆದರುತ್ತಿತ್ತು: ಕೆಲವೇ ನಿಮಿಷಗಳ ಮೊದಲು ಅಸ್ಪಷ್ಟ ಅನುಮಾನವಾಗಿ ಹೊಳೆದದ್ದು ಈಗ ಅಲ್ಲಗಳೆಯಲು ಆಗದಷ್ಟು ಗಟ್ಟಿಮುಟ್ಟಾದ ವಾಸ್ತವತೆಯಾಗಿ ಕಣ್ಣ ಮುಂದೆ ನಿಂತಿತ್ತು: ಅರೆ! ನಾನೇ ನನ್ನ ಭೋಳೇತನದಿಂದ ಕಂಪನಿಯ ಪರ್ಸೊನೆಲ್ ಮ್ಯಾನೇಜರ್ ಫೋನ್ ಮೇಲೆ ಹೇಳಿದ್ದನ್ನೇ ನಂಬಿ ಫಿರೋಜ್ ಹಾಗೂ ಅವನ ಬೇಹುಗಾರರು ರಚಿಸಿದ ಬೋನಿನಲ್ಲಿ ನನ್ನನ್ನು ಸಿಕ್ಕಿಸಿಕೊಂಡಿಲ್ಲವಷ್ಟೇ! ಬಾಸ್‌ಗೆ ಕೂಡ ಫೋನ್ ಮಾಡಿಲ್ಲ. ಸಹೋದ್ಯೋಗಿಗಳೆಲ್ಲ ಏನೆಂದು ತಿಳಿಯುತ್ತಾರೋ... ನಾಸ್ತಾ ಮುಗಿಸಿದ್ದೇ ಆಫೀಸಿಗೆ ಫೋನ ಮಾಡಬೇಕೆಂದು ನಿಶ್ಚಯಿಸಿಕೊಂಡ.

ಕದ ಬಡೆದ ಸದ್ದು ಕೇಳಿಸಿದಾಗ ಅಡಿಗೆಯವನಿರಬೇಕೆಂದು ಬಗೆದು ದಡಬಡಿಸಿ ಎದ್ದು ಅಂಗಿಯ ಗುಂಡಿಗಳನ್ನೆಲ್ಲ ಸರಿಯಾಗಿ ಹಾಕಿಕೊಂಡು ಕದ ತೆರೆದರೆ ಕಣ್ಣ ಮುಂದೆ ನಿಂತವನು ಶ್ರೀನಿವಾಸನಾಗಿದ್ದ. ನಿಷ್ಕಾರಣವಾಗಿ ಹಲ್ಲುಗಳನ್ನು ತೋರಿಸಿ ನಗುತ್ತ ಒಳಗೆ ಬಂದ. ಮೈಯಲ್ಲಿ ಖಾಕಿ ಬಣ್ಣದ ಚಡ್ಡಿ ಮಾತ್ರ. ಕೂದಲಿಲ್ಲದೇ ಬೋಳು ಬೋಳಾದ, ಮೊಲೆ ಬಿಟ್ಟಂತೆ ಕಾಣುವ ಎದೆ; ಹೊಂಡ ಬಿದ್ದಹೊಕ್ಕುಳವನ್ನು ಇನ್ನಷ್ಟು ಆಳವಾಗಿ ತೋರಿಸುವ ಅಸಹ್ಯವಾದ ಬೊಜ್ಜು ಬೆಳೆದ ಹೊಟ್ಟೆ. ದಿನವೂ ಅಡಿಗೆಯವನು ಮಾಡುತ್ತಿದ್ದ ಕೆಲಸವನ್ನು ಇಂದು ತಾನೇ ವಹಿಸಿಕೊಂಡಂತಿತ್ತು: ಕೈಯಲ್ಲಿ ಚಹದ ಕಪ್ಪನ್ನು ಹಿಡಿದು ಬಂದಿದ್ದ. ಒಳಗೆ ಬಂದವನೇ, "ಇಂಥಾ ಸೆಖೆಯಲ್ಲೂ ಹೇಗಪ್ಪ ನೀನು ಯಾವಾಗಲೂ ಅಂಗಿ ಹಾಕಿಕೊಂಡೇ ಇರುತ್ತೀ," ಎಂದ. ನಾಗಪ್ಪನಿಗೆ ಎದೆ ಧಸ್ ಎನ್ನಲಿಲ್ಲ. ಇವನಿಗೆ ಗೊತ್ತಾಗಿಬಿಟ್ಟಿದೆಯೆ ನಾನು ಎದೆಗವಚಿ ಹಿಡಿದರಲ್ಲೇ ನನ್ನನ್ನು ಸುಡುತ್ತಿದ್ದ ಗುಟ್ಟು? ಎಂಬ ಅನುಮಾನ ಕೂಡ ಹುಟ್ಟಲಿಲ್ಲ. ಇಂತಹ ಪ್ರಶ್ನೆಯನ್ನು ಅವನು ಕೇಳಿದ್ದು ಇದೇ ಮೊದಲ ಸಲವಾಗಿರಲಿಲ್ಲ! ಆದ್ದರಿಂದ ಹಿಂದೆ ಎಷ್ಟೊಂದು ಸಲ ಕೊಟ್ಟ ಜವಾಬನ್ನೇ ಯಾವ ಬೇಸರವಿಲ್ಲದೇ ಕೊಟ್ಟ: "ನನಗೆ ಚಿಕ್ಕ ಚಿಕ್ಕಂದಿನಿಂದಲೂ ಅಂಟಿಕೊಂಡ ರೋಗವಿದು-Congenital bronchial trouble ತುಸು expose

ಆದರೂ ಎದೆ ತುಂಬಿಬರುತ್ತದೆ." ತುಸು ತಡೆದು, "ಇದೇಕೆ ಈವತ್ತು ನೀನೇ ಚಹ ತಗೊಂಡು ಬಂದೆ?" ಎಂದು ಕೇಳಿದ ಪ್ರಶ್ನೆಗೆ ಶ್ರೀನಿವಾಸ, "ಅದೊಂದು ದೊಡ್ಡ ಕತೆಯೇ ಇದೆ. ಆಮೇಲೆ ಕೇಳುವಿಯಂತೆ," ಎನ್ನುತ್ತ ವಿಚಿತ್ರವಾಗಿ ನಕ್ಕ. ನಾಗಪ್ಪ ನಿಗೆ ಆ ನಗು ಸೇರಲಿಲ್ಲ. ಚಹ ಕುಡಿಯುತ್ತ ಶ್ರೀನಿವಾಸನ ಮೋರೆಯನ್ನು ನೋಡುತ್ತಿರುವಾಗ, ಶ್ರೀನಿವಾಸ ತಾಲೀಮು ಮಾಡಿಕೊಂಡೇ ಬಂದಂತಿದ್ದ ಪ್ರಶ್ನೆಯನ್ನು ನಾಟಕೀಯವಾಗಿ ಕೇಳಿದ, "ನೀನು ಅಮೇರಿಕೆಗೆ ಹೋಗುವ ತಯಾರಿ ಎಲ್ಲಿಯವರೆಗೆ ಬಂತು?" ಈಗ ಮಾತ್ರ ತನಗಾದ ಆಶ್ಚರ್ಯವನ್ನು ಮುಚ್ಚಿಕೊಳ್ಳುವದು ನಾಗಪ್ಪನಿಗೆ ಸಾಧ್ಯವಾಗಲಿಲ್ಲ. ಬಾಲ್ಯದಿಂದಲೂ ಬಂದ ಅನುಭವ ಈಗ ಮತ್ತೆ ಚೀರಿ ಹೇಳಿತು: ನಿರ್ದೋಷಿಗಳ ಬಲಿ ಇಲ್ಲಿ! ಬದುಕಿನಿಂದ ಬಹಳಷ್ಟನ್ನು ಬಯಸಿದವನಲ್ಲ, ದೇವರೇ. ಅಮೇರಿಕೆಗೆ ಹೋಗುವ ಕನಸು ಉಳಿಯಲಿ. ನನ್ನವರೆನ್ನುವವರಲ್ಲಿ ತಲೆಯೆತ್ತಿ ನಡೆಯಲಾಗದಂತಹ ಪ್ರಸಂಗ ಮಾತ್ರ ತರಬೇಡ. ಶ್ರೀನಿವಾಸನಿಗೆ ಇದೆಲ್ಲ ಹೇಗೆ ಗೊತ್ತಾಯಿತು?

"ನನಗೆ ಹ್ಯಾಗೆ ತಿಳಿಯಿತು ಎಂದು ನಿನಗೆ ಕುತೂಹಲ ಅಲ್ಲವೇ? ನಿನ್ನೆ ನಿನ್ನ ಆಫೀಸಿಗೆ ಹೋಗಿದ್ದೆ. ದೊಡ್ಡದೊಂದು ಆರ್ಡರ್ ಬರುವುದಿತ್ತು. ಆದ್ದರಿಂದ ಸ್ವತಃ ನಾನೇ ಹೋಗಿದ್ದೆ. ಈ ಹೊತ್ತು ಮಹಾರಾಷ್ಟ್ರದಿನದ ನಿಮಿತ್ತ ಪ್ರೆಸ್ಸಿಗೆ ರಜೆ. ಈ ಒಂದು ದಿನ ನಿನ್ನ ಕಾದಂಬರಿಗೆ ವಿರಾಮ ಕೊಡು. ಹೀಗೇ ಠಾಣಾದ ತನಕ ಹೋಗಿಬರೋಣ. ಪ್ರಿಂಟಿಂಗ್ ಮೆಶಿನರೀ ತಯಾರಿಸುವ ನಮ್ಮ ಹೊಸ ಕಾರಖಾನೆಯ ಬಿಲ್ಡಿಂಗ್ ಸಿದ್ಧವಾಗುತ್ತ ಇದೆ." ನಾಗಪ್ಪನಿಂದ ಉತ್ತರ ಬರುವ ಹಾದಿಯನ್ನೂ ಕಾಯದೇ "ಸ್ನಾನ ಮುಗಿಸಿದ್ದೆ ಹಾಲ್‌ಗೆ ಬಾ," ಎಂದ. ಹೋಗು ಹೋಗುವಾಗ, "ನಿನ್ನ ಕಾದಂಬರಿಯ ವಹಿಯನ್ನು ಹಾಗೇ ಟೇಬಲ್ಲಿನ ಮೇಲೇ ಇಟ್ಟು ಹೋಗಬೇಡ. ಡ್ರಾಅರ್‌ದಲ್ಲಿಟ್ಟು ಬೀಗ ಹಾಕು. ಕೀಲಿಕೈ ಅಲ್ಲೇ ಇದೆ ನೋಡು," ಎಂದ.

ನಾಗಪ್ಪನಿಗೆ ಬೆನ್ನಹುರಿಯಲ್ಲೇ ತಣ್ಣಗಿನದೇನೋ ಹರಿದ ಅನುಭವ: ಇಲ್ಲ, ಇಡೀ ದಿನ ನನ್ನ ಬಗ್ಗೇ ವಿಚಾರಮಾಡುತ್ತ ಇದ್ದದ್ದಕ್ಕೇ ಇರಬೇಕು ಹೊರಗಿನಿಂದ ಬಂದ ಕ್ಷುಲ್ಲಕ ಇಷಾರೆಗಳಿಗೂ ಸಲ್ಲದ ಅರ್ಥಗಳು ಹುಟ್ಟುತ್ತವೆ. ನನ್ನ ಮನಸ್ಸೇ ಸರಿಯಾಗಿಲ್ಲ. ಶ್ರೀನಿವಾಸನ ಆಫೀಸಿಗೆ ಹೋಗಿದ್ದ ಎಂದ ಮೇಲೆ ಯಾರಾದರೂ

ಅವನಿಗೆ ಹೇಳಿರಬಹುದೇ. ಇನ್ನೂ ನನಗೇ ಗೊತ್ತಾಗದೇ ಇದ್ದದ್ದನ್ನು? ಕೇಳಿ ನೋಡೋಣವೆ?-ನಾಗಪ್ಪನಿಗೆ ಧೈರ್ಯವಾಗಲಿಲ್ಲ.

ಬರವಣಿಗೆಯ ವಹಿಯನ್ನು ಸೂಟ್‌ಕೆಸಿನಲ್ಲಿಟ್ಟು ಬೀಗ ಹಾಕುತ್ತಿದ್ದಾಗ ತಟ್ಟನೆ ಒಂದು ವಿಚಾರ ಬಂತು: ನಾನು ಬರೆಯುತ್ತಿದ್ದದ್ದು ಕಾದಂಬರಿ ಎಂಬುದನ್ನೇ ದೃಢವಾಗಿ ನಂಬಿದಂತಿದೆ, ಶ್ರೀನಿವಾಸ. ಬಹುಶಃ ನನ್ನ ಕಾದಂಬರಿಯ ಬಗ್ಗೆ ಹೇಳಿದ ಸೀತಾರಾಮನೇ ಅಮೇರಿಕೆಯ ಯೋಜನೆಯ ಬಗೆಗೂ ಹೇಳಿರಲಿಕ್ಕಿಲ್ಲವಷ್ಟೇ. ಆಫೀಸಿನ ಹೆಸರು ಹೇಳಿ ಥಾಪುಹೊಡೆಯುತ್ತಿರಬೇಕು ಬೋಳೀಮಗ. ಏನಿಲ್ಲ. ಹೀಗೆ ಇಡೀ ದಿನ ನನ್ನ ಬಗ್ಗೇ ವಿಚಾರಮಾಡುತ್ತ ಕೂಡ್ರಬಾರದು. ಸಂಜೆ ದೋಶಿ ಭೆಟ್ಟಿಯಾದಾಗ ಅವರಿಗೆ ಸದ್ಯದ ಯಾತನೆಯನ್ನು ಬಿಚ್ಚಿ ಹೇಳಬೇಕು. ವೋಮೂನನ್ನು ಕಾಣದೇ ಬಹಳ ದಿನಗಳಾದುವು. ಅವನ ಬಗ್ಗೆ ಬರೆಯಬೇಕೆಂದುಕೊಂಡದ್ದನ್ನು ಇಂದು ರಾತ್ರಿ ತಪ್ಪದೇ ಬರೆಯಬೇಕು. ನಾಳೆ ಸೀತಾರಾಮನಿಗೆ ಫೋನ್ ಮಾಡಿ ಗಿಲ್ಬರ್ಟನ ವಿಳಾಸ ಪಡೆದು ಪತ್ರಬರೆಯಬೇಕು. ಅವನು ಹೇಳಿದ ಚೆಶಾಯರ್ ಹೋಮನ್ನೂ ನೋಡಿ ಬರಬೇಕು, ಎಂದು ನಿಶ್ಚಯಿಸಿಕೊಂಡ. ತನ್ನ ಸದ್ಯದ ಮನಃಸ್ಥಿ ತಿಯಲ್ಲಿ. ಈವರೆಗೆ ರಾಣಿಯ ನೆನಪೇ ಆಗದೇ ಇದ್ದದ್ದು ಲಕ್ಷ್ಮಕ್ಕೆ ಬಂದಾಗ ಒಂದು ಕ್ಷಣದ ಮಟ್ಟಿಗೆ ಕೆಡಕೆನಿಸಿತು. ಮರುಗಳಿಗೆ, ಬರಿಯ ದೇಹದ ಗರಜಿಗೆ ಹುಟ್ಟಿಸಿಕೊಂಡ ಸಂಬಂಧವಿದು ಎಂದು ತನ್ನ ಔದಾಸ್ಯವನ್ನು ಸಮರ್ಥಿಸಿಕೊಂಡ. ಆಫೀಸಿನಲ್ಲಿ ಬಾಸ್‌ನ ಸೆಕ್ರೆಟರಿಯಾದ ಮೇರಿ ತನ್ನಲ್ಲಿ ವಿಶೇಷ ಆಸ್ಥೆ ತೋರಿಸುತ್ತಿದ್ದಾಳೆ. ತನಗೆ ಮಾತ್ರ ಎಲ್ಲಿಲ್ಲದ ಸಂಕೋಚ, ಭಯ. ಹತ್ತಿರ ಬರುವುದೆಂದರೆ ಮೆಲ್ಲಗೆ ಬಿಚ್ಚಿಕೊಳ್ಳುವ ಕ್ರಿಯೆ. ತನ್ನಲ್ಲೋ ಬಿಚ್ಚುವ ಬದಲು ಮುಚ್ಚಿಕೊಳ್ಳುವಂತಹದೇ ಹೆಚ್ಚಾಗಿದೆ... ಹೊಸ ಸಂಬಂಧವೆಂದರೇನೇ ಹಿಂದೆಗೆಯುವ ತನಗೆ, ಮೇರಿಗೆ ತನ್ನ ಮೇಲೆ ಪ್ರೀತಿ ಇದೆ ಎನ್ನುವುದನ್ನು ನೆನೆಯಲೂ ಹೆದರಿಕೆ, ಇತ್ತಿತ್ತ. ನಾಳೆ ಮೇರಿಗೆ ಫೋನ್ ಮಾಡಿದರೆ ಹೇಗೆ? ಆಫೀಸಿನ ಎಲ್ಲ ಹಕೀಕತ್ತು ತಿಳಿಯುತ್ತಿತ್ತು. ಹುಡುಗಿ ಅಪಾರ್ಥ ಮಾಡಿಯಾಳೆ? ಮಾಡಿದರೆ ಮಾಡಲಿ. ಎಷ್ಟೊಂದಕ್ಕೆ ಹೆದರಿಕೊಂಡಿರಲಿ? ಹೌದು. ಬಾಸ್‌ಗೆ ಫೋನ್ ಮಾಡುವ ಬದಲು ಮೇರಿಗೆ ಫೋನ್ ಮಾಡಬೇಕು.

ಬಚ್ಚಲುಮನೆಯಲ್ಲಿ ತಣ್ಣೀರಿನ ಶಾವರ್ ಕೆಳಗೆ ನಿಂತಾಗ ಎಲ್ಲರನ್ನು ಬಿಟ್ಟು ಮೇರಿ ತನ್ನ ಮೇಲೆ ಇಷ್ಟೊಂದು ಪ್ರೀತಿ ತೋರಿಸಲು ಕಾರಣವೇನು?

ಹುಚ್ಚುಹುಡುಗಿ ಎಂದುಕೊಂಡು ತನ್ನಷ್ಟಕ್ಕೆ ನಕ್ಕ. ಎಂದಿನಂತೆ, ಎದೆಗೆ ಹೊಟ್ಟೆಗೆ ಸಾಬೂನು ತಿಕ್ಕಿಕೊಳ್ಳುವಾಗ ಆ ಭಾಗಗಳನ್ನು ನೋಡುವ ಮನಸ್ಸಾಗದೇ ಛಾವಣಿಯ ಕಡೆಗೆ ದೃಷ್ಟಿ ತಿರುವಿದ: ಸುಟ್ಟ ಜಾಗದ ನುಣುಪಾಗಿಯೂ ಗಂಟುಗಂಟಾದ ಚರ್ಮದ ಸ್ಪರ್ಶಕ್ಕೆ ಮನಸ್ಸು ಬಾಡಹತ್ತಿದಾಗ ಮೇರಿಯ ಸುಂದರ ಮೋರೆಯನ್ನು ಮುಂದೆ ನಿಲ್ಲಿಸಿಕೊಂಡ. ಕಣ್ಣುಗಳು ಹನಿಗೂಡುವ ಮೊದಲೇ ಶಾವರಿನ ನೀರನ್ನು ಮೋರೆಯ ಮೇಲೆ ಧಾರೆಯಾಗಿಸಿಕೊಂಡ. ದಿನಕ್ಕಿಂತ ಹೆಚ್ಚೇ ಹೊತ್ತು ನೀರಡಿಗೆ ನಿಂತ.

## ಅಧ್ಯಾಯ ಎಂಟು

ಬ್ರೇಕ್‌ಫಾಸ್ಟಿಗೆಂದು ಹಾಲ್‌ಗೆ ಹೋದಾಗ ನಾಗಪ್ಪನಿಗೆ ಆಶ್ಚರ್ಯ ಕಾದಿತ್ತು: ಶ್ರೀನಿವಾಸ, ಶ್ರೀನಿವಾಸನ ಹೆಂಡತಿ, ಚೇತನಾ ಹಾಗೂ ಅಡಿಗೆಯವನು ಎಲ್ಲರೂ ಒಳ್ಳೆಯ ಉಡುಪನ್ನು ಧರಿಸಿ ಠಾಣಾಕ್ಕೆ ಹೋಗಲು ಸಿದ್ಧರಾಗಿ ನಿಂತಿದ್ದರು. ಪಿಕ್ನಿಕ್ಕಿಗೆ ಹೊರಟ ತರಹ ಬಹಳ ಖುಶಿಯಲ್ಲಿದ್ದರು. ನಾಗಪ್ಪ, ತಬ್ಬಿಬ್ಬಾದ. ಇವರೆಲ್ಲರ ಜೊತೆಗೆ ಹೋಗುವುದರ ಕಲ್ಪನೆಯಿಂದಲೇ ಮನಸ್ಸು ಅಧೀರಗೊಂಡಿತು. ಶ್ರೀನಿವಾಸನ ಹೆಂಡತಿಯ ಕಣ್ಣು ತುಂಬುವ ರೂಪಕ್ಕೂ ತನ್ನ ಅಧೀರತೆಗೂ ಸಂಬಂಧವಿರಬಹುದೆಂಬ ಅನ್ನಿಸಿಕೆಯನ್ನು ತಳ್ಳಿಹಾಕಲು ಯತ್ನಿಸಿದ. ಹದಿನೆಂಟು ವರ್ಷಗಳಿಂದ ಮಾಡುತ್ತ ಬಂದ ನೌಕರಿ ಒಂದು ಸುಖದಾಯಕ ಹಂತಕ್ಕೆ ಬರುತ್ತಿದ್ದಾಗ ಒದಗಿದ ಈ ದುರ್ಧರ ಪ್ರಸಂಗದಿಂದ ಮನಸ್ಸು ಗಾಸಿಗೊಂಡಾಗ ಈ ಪಿಕ್ನಿಕ್! ಹೇಗಾದರೂ ಇದರಿಂದ ತಪ್ಪಿಸಿಕೊಳ್ಳಬೇಕು ಎಂದು ಯೋಚಿಸುತ್ತಿರುವಾಗ ಶ್ರೀನಿವಾಸನೇ ಇವನ ಮನಸ್ಸನ್ನು ಓದಿಕೊಂಡವನ ಹಾಗೆ, "ನಡೆ, ಹೊರಡುವಾ. ಬೆಳಿಗ್ಗೆ ಎದ್ದಕೂಡಲೇ ನಮ್ಮ ಶಾರದೆಗೆ (ಶ್ರೀನಿವಾಸನ ಹೆಂಡತಿಯ ಈ ಹೆಸರನ್ನು ತಾನು ಕೇಳುತ್ತಿದ್ದದ್ದು ಇದೇ ಮೊದಲೋ ಅಥವಾ ಈ ಮೊದಲೂ ಕೇಳಿದ್ದೆನೊ? ಸರಿಯಾಗಿ ನೆನಪಿಲ್ಲ) ಹುಕಿ ಬಂದುಬಿಟ್ಟಿತು. 'ಠಾಣಾಕ್ಕೆ ಹೋಗುವುದಾದರೆ ಎಲ್ಲರೂ ಕೂಡಿಯೇ ಹೋಗೋಣವಲ್ಲ. ಬ್ರೇಕ್‌ಫಾಸ್ಟಿಗೆ ಮಾಡಿದ ಇಡ್ಲಿ-ಚಟ್ನಿ ಎಲ್ಲವನ್ನು ಕಟ್ಟಿಕೊಂಡು ಹೋಗಿ ಅಲ್ಲಿಯೇ ತಿನ್ನೋಣ. ಒಂದು ಸಣ್ಣ ಪಿಕ್ನಿಕ್ ಆದೀತು.' ಎಂದಳು. ದೊಡ್ಡ ಥರ್ಮೊಸಿನಲ್ಲಿ ಬಿಸಿಬಿಸಿ ಕಾಫಿ. ನಮ್ಮ ಅಚ್ಯುತನೂ ಎಷ್ಟು ಖುಶಿಯಲ್ಲಿದ್ದಾನೆ ನೋಡು" ಎಂದ. ನಾಗಪ್ಪ ಆ ಗಳಿಗೆಯಲ್ಲಿ ನಿರಾಕರಿಸುವದು ಶಕ್ಯವಿರಲಿಲ್ಲ. ಶ್ರೀನಿವಾಸ ಅವನನ್ನು ಹೆಚ್ಚುಕಡಿಮೆ ಎಳೆದೇ ಒಯ್ಯುವವನಂತೆ ಕಾರಿನತ್ತ ದೂಡಿ ಮುಂದಿನ ಸೀಟಿನಲ್ಲಿ ಕೂಡ್ರಿಸಿದ. ಶಾರದೆ, ಚೇತನಾ ಹಾಗೂ ಅಚ್ಯುತ ಹಿಂದಿನ ಸೀಟಿನಲ್ಲಿ. ತಿಂಡಿಯ ಸರಂಜಾಮನ್ನು ಮೊದಲೇ ಡಿಕ್ಕಿಯಲ್ಲಿ ಇಟ್ಟಾಗಿತ್ತು. ಕಾಫಿ ತುಂಬಿದ ಹಂಡೆಯ ಆಕಾರದ ದೊಡ್ಡ ಥರ್ಮೊಸನ್ನು ಅಚ್ಯುತ ತನ್ನ ಕಾಲ ಬಳಿ ಇಟ್ಟು ಕೊಂಡಿದ್ದ. ಅಚ್ಯುತನನ್ನು ನೋಡುನೋಡುವಾಗ ತಾನು. ಈವರೆಗೂ ನೋಡಿಯೇ ಇರದ ಅಣ್ಣನ ವಿಚಾರ ಮನಸ್ಸಿನಲ್ಲಿ ಹಾದು ಹೋಗಿ ಮೈ ನವಿರಿಗೊಳಗಾಯಿತು.

ಕಾರು, ಟಿಳಕಬ್ರಿಜ್, ದಾದರ ಟ್ರ್ಯಾಮ್-ಟರ್ಮಿನಸ್, ಕಿಂಗ್ಸ್ ಸರ್ಕಲ್, ಸಾಯನ್‌ಗಳನ್ನು ದಾಟಿ ಪೂನಾಕ್ಕೆ ಹೋಗುವ ಹಾಯ್ವೇದ ಮೇಲೆ ಓಡುತ್ತಿತ್ತು. ಕಾರಿನ ತೀವ್ರಗತಿಗೆ ಅನುಗುಣವಾಗಿ ಕಾರಿನಿಂದ ಕಂಡ ಸುತ್ತಲಿನ ಭೂಪಟದ ವಿವರಗಳು ಒಂದೊಂದಾಗಿ ಕಣ್ಣ ಪರದೆಯ ಮೇಲೆ ಮೂಡುತ್ತಿದ್ದವು; ಮಾಸುತ್ತಿದ್ದವು: ಮತ್ತೆ ಹೊಸ ವಿವರಗಳಿಗೆ ಎಡೆಮಾಡಿಕೊಡುತ್ತಿದ್ದವು; ಸಾಯನ್ನಿನ ಬೆಟ್ಟ; ಬೆಟ್ಟದ ನೆತ್ತಿಯಲ್ಲಿ ನಿಂತ ಹಳೇ ಕೋಟೆಯ ಭಗ್ನ ಅವಶೇಷಗಳು; ರಸ್ತೆಯ ಬಲಗಡೆಯಲ್ಲಿ ದೃಷ್ಟಿ ಹಾಯುವವರೆಗೂ ಹಬ್ಬಿಕೊಂಡ ದುರ್ಗಂಧ ಸೂಸುವ ಖಾಡಿ; ಖಾಡಿಯ ಅಂಚಿನಲ್ಲಿಯ ಗುಡ್ಡಗಳ ಸಾಲು: ಮಗ್ಗಲಲ್ಲೇ ರಾಸಾಯನಿಕ ತಂತ್ರವಿಜ್ಞಾನದ ದೊಡ್ಡ ಪ್ರತೀಕಗಳಾಗಿ ಮೆರೆಯುವ ಪೆಟ್ರೋಲಿಯಮ್ ರಿಫೈನರಿ; ಫರ್ಟಿಲೈಜರ್ಸ್, ಪೆಟ್ರೋಕೆಮಿಕಲ್ಸ್ ಉತ್ಪಾದಿಸುವ ಕಾರಖಾನೆಗಳು: ಅಡ್ಡತಿಡ್ಡವಾದ, ಅಂಕುಡೊಂಕಾದ ಸ್ಟೀಲ್ ಪೈಪುಗಳ ಕಪ್ಪು, ಕಂದುಬಣ್ಣಗಳ ಅಂದಗೇಡಿಯಾದ ರಾಶಿಯಂತೆ ತೋರುತ್ತ ತಮ್ಮ ಎತ್ತರದಲ್ಲಿ ಬದಿಯ ಗುಡ್ಡಗಳೊಡನೆ ಸ್ಪರ್ಧಿಸುತ್ತಿದ್ದುವು. ಈ ಕಪ್ಪು ಗುಪ್ಪೆಯಿಂದ ಚೆಂಗನೆ ನೆಗೆದ ಉದ್ದೋಉದ್ದವಾದ ಹೊಗೆ-ಕೊಳವೆಗಳ ಹಾಗೆ ಕಪ್ಪಾಗಿ ಸೆಟೆದು ನಿಂತವುಗಳ ತುದಿಯಿಂದ ಹೊಮ್ಮುತ್ತಿದ ಬೆಂಕಿಯ ಜ್ವಾಲೆ; ಹೊಗೆಯ ರಾಶಿ. ಅಲ್ಲಲ್ಲಿ, ಭುಸ್ ಎಂದು ಹೊರಬರುವಾಗಲೇ ಮಂಜಾಗುತ್ತಿದ್ದ ಉಗಿ: ಮುಂಜಾವಿನ ಗಾಳಿಯಲ್ಲೂ ಗಂಧಕದ, ಗಂಧಕಾಮ್ಲದ ವಾಸನೆ ಹರಡಿತ್ತು. ಮೇಲೆ ಬಾಗಿ ನಿಂತ ಆಕಾಶದ ಬಣ್ಣವನ್ನು ಗುರುತಿಸುವುದೂ ಕಠಿಣವಾಗಿತ್ತು. ಹಾಯ್ವೇದ ಎಡಬಲಗಳಲ್ಲೂ ಹಸಿರು ಗಿಜಿಗಿಜಿಸುವ ಖಾಡಿ. ನಡನಡುವೆಯೇ ಊರ ನೆನಪು ತರುತ್ತಿದ ಉಪ್ಪಿನ ಆಗರಗಳು: ಮೂಡುವಷ್ಟರಲ್ಲೇ ಮುಳುಗುತ್ತಿದ್ದ ಪ್ರತಿಬಿಂಬಗಳೊಳಗಿಂದಲೇ ಹುಟ್ಟಿಬಂದಿತ್ತು ಸತತವಾಗಿ ಕೊರೆಯುತ್ತಿದ್ದ ಅರಿವು: ಇದರಲ್ಲೇನೋ ಬೇತು ಇದೆ. ಈ ಒಂದೂ ಮಗ ಹೇಳಿದಷ್ಟು ಸಹಜವಾದ ಪಿಕ್ನಿಕ್ ಅಲ್ಲವಿದು. ಬೆಳಿಗ್ಗೆ ಎದ್ದ ಕೂಡಲೇ ಹೆಂಡತಿಗೆ ಹುಕಿ ಬಂದುಬಿಟ್ಟಿತಂತೆ. ಇವನ ಬೊಜ್ಜಿನಲ್ಲಿ ಎಂದಾದರೂ ಹುಟ್ಟಿತ್ತಿರಬಹುದೇ ಇಂತಹ ಹುಕಿ? ಆಗಿನಿಂದಲೂ ವಟವಟ ಮಾತು ನಡೆಸಿದ್ದಾನೆ, ಹಿಂದಿನ ಸೀಟಿನಲ್ಲಿ ಕೂತ ಹೆಂಡತಿ ಮಗಳೊಡನೆ; ನಾನು ಮಗ್ಗಲಲ್ಲಿ ಕೂತಿರುವಾಗಲೂ; ಕಟ್ಟಿಗೆಯ ಬಾಯಾಗಿದ್ದರೆ ಒಡೆದೇ ಹೋಗುತ್ತಿತ್ತೇನೋ!

ಶ್ರೀನಿವಾಸನ ಭರಭರಾಟಿಯಿಂದ ನಡೆದ ಛಾಪಖಾನೆಯ ದಂಧೆಯ ಬಗ್ಗೆ ಕೇಳಿ. ತಿಳಿದ ನಾಗಪ್ಪನಿಗೆ ಅವನ ಪ್ರತಿ ಮಾತಿನಲ್ಲಿ, ಮಾತನಾಡುವ ರೀತಿಯಲ್ಲಿ ತುಂಬಿತುಳುಕುವ ಪ್ರಚಂಡ ಆತ್ಮವಿಶ್ವಾಸದಿಂದ ಮಾತ್ರ ಆಶ್ಚರ್ಯವಾಗದೇ ಉಳಿಯಲಿಲ್ಲ. ಇಪ್ಪತ್ತು ವರ್ಷಗಳ ಹಿಂದೆ ತಾನು ನೋಡಿದ ಶ್ರೀನಿವಾಸನೆಲ್ಲಿ, ಲಕ್ಷಗಟ್ಟಲೇ ಹಣ ಶೇಖರಿಸಿದ್ದಾನೆಂಬ ಪ್ರತೀತಿಗಳಿಸಿದ ಈಗಿನ ಶ್ರೀನಿವಾಸರಾವ್ ಎಲ್ಲಿ! ಹೆಂಡತಿಯಲ್ಲಿ ಮಗಳಲ್ಲಿ ವ್ಯಕ್ತವಾಗುತ್ತಿದ್ದದ್ದು ಕೂಡ ಇದೇ ಆತ್ಮವಿಶ್ವಾಸ. ತನ್ನಲ್ಲಿ ಅದು ಸದ್ಯಕ್ಕೆ ಇಲ್ಲದ್ದಕ್ಕೋ ಏನೋ ಆತ್ಮ ವಿಶ್ವಾಸವೇ ದೊಡ್ಡ ಮೌಲ್ಯವಾಗಿ ಪ್ರಕೃತಭಾವನೆಗಳ ಹರಹಿನ ಕೇಂದ್ರಸ್ಥಾನದಲ್ಲಿ ನಿಂತಿತು. ಗಿಲ್ಬರ್ಟ ಹಿಂದೊಂದು ದಿವಸ ಹರಿಜನರ ಬಗ್ಗೆ ಮಾತನಾಡುತ್ತಿದ್ದಾಗ ಅಂದಿದ್ದ: ಸಾವಿರಾರು ವರ್ಷಗಳಿಂದ ಈ ಜನರ ಮೇಲೆ ನಡೆಸುತ್ತ ಬಂದ ಅನ್ಯಾಯದ ಅತ್ಯಂತ ಕ್ರೂರ ಪರಿಣಾಮವೆಂದರೆ ನಾವು ಇವರ ಆತ್ಮವಿಶ್ವಾಸವನ್ನೇ ಕೊಂದುಬಿಟ್ಟದ್ದು. ಮಾತಿನ ಸಂದರ್ಭ ಮರೆತಿತ್ತು. ಆದರೆ ಆಮಾತು ಹಿಂದೆಂದೂ ಅನ್ನಿಸಿರದಷ್ಟು ಪರಿಣಾಮಕಾರಿಯಾಗಿ ಈಗ ಕಿವಿತುಂಬಿ ನಿಂತಿತು.

ಶ್ರೀನಿವಾಸನನ್ನು ತಾನು ಮುಂಬಯಿಯಲ್ಲಿ ಮೊತ್ತಮೊದಲು ಭೆಟ್ಟಿಯಾದ ಸಂದರ್ಭ ನೆನಪಿನಲ್ಲಿ ಮರುಕಳಿಸಹತ್ತಿತು. ಜೊತೆಗೆ ಇಷ್ಟುದಿನ ನೆನೆಯಲು ಬಯಸಿರದ ಅನೇಕ ಸಂಗತಿಗಳೂ ಹೊರಗೆ ಬರಲು ಹವಣಿಸಿದಾಗ ಅಸ್ವಸ್ಥನಾದ....

ಅಪ್ಪ ಕೊನೆಗೂ ಬಾವಿಯಲ್ಲಿ ಹಾರಿಯೇ ಪ್ರಾಣ ಕಳೆದುಕೊಂಡಾಗ ನಾಗಪ್ಪನಿಗೆ ಹದಿಮೂರು ವರ್ಷ ಪ್ರಾಯ. ಕುಮಟೆಯ ಹೈಸ್ಕೂಲಿನಲ್ಲಿ ನಾಲ್ಕನೇ ಇಯತ್ತೆಯನ್ನು ಅದೇ ಮುಗಿಸಿದ್ದ. ಇನ್ನು ಮೂರು ವರ್ಷ ಕಳೆದರೆ ಮೆಟ್ರಿಕ್. ಕ್ಲಾಸಿನಲ್ಲಿ ಅವನೇ ಮೊದಲಿಗ. ಸಾಲೆಯ ಹೆಡ್‌ಮಾಸ್ತರರು, ವರ್ಗದ ಟೀಚರರು ಆಗಲೇ ಮೆಟ್ರಿಕ್ಕಿನಲ್ಲಿ ರ್‍ಯಾಂಕು ಗಳಿಸಿ ಸಾಲೆಗೆ ಕೀರ್ತಿ ತರುವ- ಅವನಿಗೇ ಇಲ್ಲದ— ಕನಸುಗಳನ್ನು ಕಾಣುತ್ತಿದ್ದರು. ಇನ್ನಾವುದೇ ರೀತಿಯಿಂದ ಉಳಿದವರಿಂದ ಬೇರೆಯಾಗಿ ನಿಲ್ಲುವ ತಾಖತ್ತಿಲ್ಲದ ಅವನಿಗೆ ತನ್ನ ಬುದ್ಧಿಶಕ್ತಿಯೊಂದೇ ಆತ್ಮವಿಶ್ವಾಸದ ಸೆಲೆಯಾದಂತಿತ್ತು. ರೂಪದಲ್ಲಾಗಲೀ ಮೈಕಟ್ಟಿನಲ್ಲಾಗಲೀ ಯಾವುದೇ ಬಗೆಯ ಆಕರ್ಷಕತೆ ಇಲ್ಲದವನಿಗೆ ಎದೆ ಹೊಟ್ಟೆಗಳ ಮೇಲಿನ ಸುಟ್ಟ ಕಲೆಯೊಂದು ಇನ್ನಷ್ಟು ಊನಗಂಡಕ್ಕೆ, ಉಳಿದವರಿಂದ ದೂರ ಉಳಿದು.

ಅಂತರ್ಮುಖಿಯಾಗುವುದಕ್ಕೆ ಕಾರಣವಾಯಿತು. ಬೆಚ್ಚುವುದಕ್ಕಿಂತ ಮುಚ್ಚಿಕೊಳ್ಳುವದೇ ಒಂದು ಉದ್ಯೋಗವಾಗಿ ಯಾರಾದರೂ ಕಂಡುಹಿಡಿದಾರೇ? ಎಂಬಂತಹ ಭಯದ ಚಿಹ್ನೆಯೊಂದು ಮೋರೆಯ ಮೇಲೆ, ಕಣ್ಣುಗಳಲ್ಲಿ ನೆಲೆಸಹತ್ತಿತು. ಮುಚ್ಚಿಟ್ಟುಕೊಂಡಷ್ಟು ಹೆಚ್ಚು ಹೆಚ್ಚು ಬೆಚ್ಚಿಸುವುದಕ್ಕೆ ಶುರುಮಾಡಿತು. ಉಳಿದವರೊಂದಿಗೆ ಸಂಬಂಧ ಬೆಳೆಸಿಕೊಳ್ಳುವ ರೀತಿಯ ಮೇಲೇ ಕಾಯಂ ಮುದ್ರೆಯೊತ್ತಿನಿಂತ ಈ ಸಂಗತಿ ಅವನನ್ನು ಚಿಕ್ಕಂದಿನಿಂದಲೇ ಒಂಟಿ-ಜೀವಿಯನ್ನಾಗಿಸಿತು: ವಾಸ್ತವದಲ್ಲಿ ಮಾಡಲಾಗದ್ದನ್ನು ಬರೇ ಹಗಲು-ಗನಸುಗಳಲ್ಲಿ ಕಟ್ಟಹತ್ತಿದ. ಆ ದಿನಗಳಲ್ಲಿ ಹುಟ್ಟಿಕೊಂಡ ಅಭ್ಯಾಸವೊಂದು ಇಂದಿಗೂ ಬಿಡಿಸಿಕೊಳ್ಳಲಾಗದ ಚಟದಂತೆ ಜೀವಕ್ಕೆ ಅಂಟಿಕೊಂಡು ನಿಂತಿತು: ಸಾಲೆಯ ಅಭ್ಯಾಸ, ಹೋಮ್‌ವರ್ಕ ಎಲ್ಲ ಮುಗಿದ ಮೇಲೆ ಉಳಿದ ಹುಡುಗರು ಮಣಕೀ-ಗ್ರೌಂಡಿಗೆ ಆಡಲು ಹೋದರೆ ಇವನೊಬ್ಬನೇ ಯಾವುದಾದರೂ ಪುಸ್ತಕ ಓದುವ ನೆಪದಲ್ಲಿ ಕಾಟಿನ ಮೇಲೆ ಅಂಗತ್ತ ಮಲಗಿ ಎದೆಯವರೆಗೂ ಹೊದಿಕೆಯನ್ನೆಳೆದುಕೊಂಡಾಗ ತೆರೆದೇ ಇದ್ದ ಕಣ್ಣುಗಳಲ್ಲಿ ಸಾಧ್ಯವಾಗದ ಕನಸುಗಳು! ಸಾಧ್ಯವಾಗಿರದ ಸಂಬಂಧಗಳು...! ಸ್ಟೇಜಿನ ಮೇಲೆ, ಎಂಥ ಭಯವೂ ಇಲ್ಲದೇ, ಸ್ವತಃ ತಾನೇ ಬರೆದುಕೊಟ್ಟ ಭಾಷಣಗಳನ್ನು ಬಾಯಿಪಾಠ ಮಾಡಿ ವಾಕ್‌ಸ್ಪರ್ಧೆಗಳಲ್ಲಿ ಮೊದಲನೇ ನಂಬರ ಗಿಟ್ಟಿಸುತ್ತಿದ್ದ ಬಾಬ್ಬೂಟೀ ಪೈ; ನಾಟಕಗಳಲ್ಲಿ ಹಿರೋನ ಪಾತ್ರವನ್ನಾಡುತ್ತಿದ್ದ ರಮೇಶ ಶೆಟ್ಟಿ; ಆಟ ಪಂದ್ಯಗಳಲ್ಲಿ ಭಾಗವಹಿಸುತ್ತಿದ್ದ ಕಣ್ಣು ತುಂಬುವ ಆರೋಗ್ಯವುಳ್ಳ ವಾಸುದೇವ ಕಿಣಿ; ಅಂತೋನೀ ಫರ್ನಾಂಡೀಸ್... ಎಷ್ಟೊಂದು ಸುಲಭವಾಗಿ ಇವರೆಲ್ಲ ಉಳಿದವರೊಂದಿಗೆ ಬೆರೆಯಬಲ್ಲರು! ಮುಖ್ಯವಾಗಿ ಸಾಲೆಯ ಸುಂದರ ಹುಡುಗಿಯರ ಮೇಲೆ ಛಾಪು ಹಾಕಬಲ್ಲರು! ಬಂಗಾರಪಟ್ಟೆಯ ಕುಮಟೇಕರ್ ಸುಮನ ಗಜಾನನಿಗೆ ಒಲಿದದ್ದೇ ಅವನ ಝುಗಝುಗಿಸುವ ಮಾತಿನ ವೈಖರಿಗೆ; ಅದಕ್ಕಿಂತ ಹೆಚ್ಚಾಗಿ ಹಾಗೆ ಮಾತನಾಡುವ ಅವನ ಧೈರ್ಯಕ್ಕೆ. ಕುಮಟೇಕರ್ ಸುಮನಳ ಒಯ್ಯಾರ ತುಂಬಿದ ಲಾವಣ್ಯ (ಅವಳೂ ಕಲಾವಂತ ಮನೆತನದವಳೇ ಅಂತೆ) ಹಾಗೂ ಅವಳೊಡನೆ ಆಗಲೀ ಸಾಲೆಯ ಇನ್ನಾವ ಹುಡುಗಿಯೊಡನೆ ಆಗಲೀ ಕೊನೆಗೂ ಮಾತನಾಡಲು ಆಗದ ಧೈರ್ಯ—ಎರಡೂ ಕೈಗೆ ಎಟುಕದ ವಾಸ್ತವತೆಯ ಸಂಕೇತವಾಗಿ ನಾಗಪ್ಪನ ಒಳಮನಸ್ಸಿನಲ್ಲಿ ಬಹಳ ಆಳಕ್ಕೆ ಬೇರು ಚಾಚಿದ್ದುವು. ಜೊತೆಜೊತೆಗೇ ಆ ವಾಸ್ತವತೆಯ ಒಂದು ಭಾಗ ನೆನಪನಲ್ಲಿ

ಸ್ಪಷ್ಟವಾಗಿ ಮೂಡಲು ನಿರಾಕರಿಸುತ್ತ ಹುಟ್ಟಿಸಿದ ಭಯ ಕೂಡ. ದಿನ ಕಳೆದಂತೆ ಕೈಗೆ ಎಟುಕದ, ಕೈ ಹಾಕಿದರೆ ಹೆದರಿಸುವ ವಾಸ್ತವ ಜಗತ್ತಿಗಿಂತ ಹಗಲುಗನಸುಗಳಲ್ಲಿ ಹುಟ್ಟಿಬರುತ್ತಿದ್ದ ಜಗತ್ತು ಹೆಚ್ಚು ಪ್ರಿಯವಾಗಹತ್ತಿತು. ಹಿಂತಿರುಗಿ ನೋಡಿದಾಗ, ತನ್ನ ಬರೆಯುವ ಹವ್ಯಾಸ ಹುಟ್ಟಿದ್ದೇ ಈ ಹಗಲುಗನಸುಗಳನ್ನು ಮಾತಿನಲ್ಲಿ ಹಿಡಿದಿಡಲು ಹೊರಟಾಗ: ಪ್ರತ್ಯಕ್ಷ ಬದುಕಿನಲ್ಲಿ ಸಾಧ್ಯವಾಗಿರದ ಸಂಬಂಧಗಳನ್ನು ಹೀಗೆ ಬರೆಯುವುದರ ಮೂಲಕ ಸಾಧಿಸಲು ಹೊರಟಾಗ ಎಂಬ ಅನುಮಾನ ನಾಗಪ್ಪನಿಗೆ. ಸಮಾಜದ ಆಶೋತ್ತರಗಳಿಗೆ ನಾಲಗೆ ಒದಗಿಸಲು, ಉಳಿದವರನ್ನು ತಿದ್ದಲು, ಕ್ರಾಂತಿ ಎಬ್ಬಿಸಲು ಇಂದಿನ ಸಾಹಿತ್ಯ ಸಿದ್ಧವಾಗಬೇಕು ಎಂಬಂತಹ ವೀರಾವೇಶದ ಮಾತುಗಳನ್ನಾಡುವ ಇಂದಿನ ಇನ್ನೂ ಮೀಸೆಯ ಗೆರೆಯೂ ಮೂಡಿರದ ಎಳೆವಿಮರ್ಶಕರ (ಹಾಗೆಂದು ಕರೆದುಕೊಳ್ಳುವವರ) ಮಾತುಗಳು ತನಗೆ ಅರ್ಥವಾಗದೇ ಇದ್ದುದಕ್ಕೆ ಬಹುಶಃ ಇದೇ ಕಾರಣವಿರಬೇಕು ಅನ್ನಿಸಿತು. ಉಳಿದವರನ್ನು ತಿದ್ದಲು ಹೊರಟ ಬರವಣಿಗೆಯೇ ಅಲ್ಲ ತನ್ನದು. 'ನೀನು ಇಲ್ಲವೇ ಇಲ್ಲ' ಎನ್ನುವಷ್ಟರ ಮಟ್ಟಿಗೆ ತನ್ನ ಹುಟ್ಟಿಗೆ ತನ್ನ ಅಸ್ತಿತ್ವಕ್ಕೆ ನಿರಾಸಕ್ತವಾದ; 'ನೀನು ಇದ್ದರೂ ಒಂದೇ, ಸತ್ತರೂ ಒಂದೇ' ಎನ್ನುವ ರೀತಿಯಲ್ಲಿ ತನ್ನತ್ತ ಬೆನ್ನು ತಿರುವಿ ಮೂಕವಾಗಿ ನಿಂತ ಈ ವಿಶಾಲ ವಿಶ್ವಕ್ರಮದಲ್ಲಿ, ಹತ್ತಿರದ ಈ ಸಮಾಜದಲ್ಲಿ ತನ್ನ ಇರವಿನ ಪ್ರಸ್ತುತತೆಯೇನು ಎಂದು ಕಂಡುಕೊಳ್ಳುವದೇ ತನಗೆ ಮುಖ್ಯವಾಗಿದೆ. ತನಗೀಗ ಮಹತ್ವದ್ದನ್ನಿಸುತ್ತಿದ್ದದ್ದು ತನ್ನ ಸಾಹಿತ್ಯದ ಸಾಮಾಜಿಕ ಪ್ರಸ್ತುತತೆಯಲ್ಲ. ಸಮಾಜದಲ್ಲಿಯ ತನ್ನ ಪ್ರಸ್ತುತತೆ—ತನ್ನ ಹುಟ್ಟಿನ, ತನ್ನ ಇರವಿನ ಪ್ರಸ್ತುತತೆ. ನಾಗಪ್ಪನಿಗೆ ಆಶ್ಚರ್ಯ: ಯಾವ ಪ್ರಸ್ತುತತೆಯೂ ಇಲ್ಲವೆಂಬ ಮಾನಸಿಕ ನಿಲುಗಡೆಯನ್ನು ಈ ಮನಸ್ಸನ್ನು ಹೊತ್ತುನಿಂತ ದೇಹ ಮಾತ್ರ ಅಲ್ಲಗಳೆಯುವಂತಿತ್ತು. ಅಂಗಿಗೆ ಬೆಂಕಿ ಹತ್ತಿದಾಗ ನೋವಿನಿಂದ ವಿಲಿವಿಲಿ ಒದ್ದಾಡಿದ ದೇಹದ 'ಸಾಯಬಾರದು' ಎಂಬ ಸಂಕಲ್ಪದ ಹಿಂದೆ ಕೋಟಿವರ್ಷಗಳ ಇತಿಹಾಸವಿದ್ದರೆ ಯಾಕೆ ಬದುಕಿರಬೇಕು ಎಂದು ಕೇಳಿಕೊಳ್ಳುವ, ಅರಿಯಬೇಕೆನ್ನುವ ವಿವೇಕಪ್ರಜ್ಞೆ ತೀರ ಇತ್ತೀಚಿನದು ಅಲ್ಲವೆ? ಆದರೂ ತನ್ನನ್ನು ಇಂದು ಕಾಡುತ್ತಿದ್ದದ್ದು ತನ್ನ ದೇಹ; ಅಂದು ಅನುಭವಿಸಿದ ಯಾತನೆಯ ನೆನಪಲ್ಲ. ತನ್ನ ಅಸ್ತಿತ್ವಕ್ಕೆ—ಅದನ್ನು ಅಳಿಸಿಯೇಬಿಡುತ್ತೇನೆ ಎನ್ನುವಷ್ಟರ ಮಟ್ಟಿಗೆ—ನಿಷ್ಠುರ ತಾತ್ಸಾರವನ್ನು ವ್ಯಕ್ತಪಡಿಸಿದ ಅಪ್ಪನ ಕೃತ್ಯದ ಹಿಂದಿನ ಪ್ರೇರಣೆ ಏನಿರಬಹುದು

ಎಂಬ ಪ್ರಶ್ನೆ. ತನ್ನ ಬರವಣಿಗೆಯಲ್ಲೆಲ್ಲ ವ್ಯಕ್ತವಾದದ್ದು ಈ ಪ್ರೇರಣೆಯ ಹುಡುಕಾಟವೇ ಎಂದು ತನಗೆ ಇತ್ತಿತ್ತ ಅನ್ನಿಸಹ ಹತ್ತಿದೆ. ನೀನು ಸಾಯ್ ಸಾಯ್ ಸಾಯ್ ಎಂದು ತಿರುತಿರುಗಿ ಅಪ್ಪಣೆ ಕೊಡುವ ನೆನಪಿನ ವಿರುದ್ಧ ಹೋರಾಡುತ್ತ... ನಾಗಪ್ಪಾ ನಾಗಪ್ಪಾ ಬೋಳಿಮಗನೇ, ಬಂದು ಮುಟ್ಟಿದೆಯಲ್ಲೋ ತಿರುಗಿ ನಿನ್ನ ಮೂಲ ಪಾಠಕ್ಕೇ. ನಡುಗುತ್ತಿದ್ದಿಯಲ್ಲೋ ಅಂಜುಬುರುಕಾ. ಓಡ್ತಾ ಇದ್ದೀಯಲ್ಲೋ ಫಿರೋಜನ ಕ್ರೂರ ಹಲ್ಲು ಮಸೆತಕ್ಕೆ ಹೆದರಿ...

“ನಿನ್ನೆ ನಿಮ್ಮ ಹೆಡ್‌ಆಫೀಸಿಗೆ ಹೋದಾಗ ನಿಮ್ಮ ಡೆಪ್ಯೂಟೀ ಮ್ಯಾನೇಜಿಂಗ್ ಡ್ಯಾರೆಕ್ಟರರ ಪರಿಚಯವಾಯ್ತು. ಪಾರ್ಸೀ ಅಲ್ಲವೆ? ಹೈದ್ರಾಬಾದಿನಿಂದ ಬಂದಿದ್ದಾರಂತೆ. ತುಂಬ ಒಳ್ಳೆಯ ಮನುಷ್ಯ. ಇಷ್ಟು ದೊಡ್ಡ ಸ್ಥಾನದಲ್ಲಿದ್ದೂ ಎಳ್ಳಷ್ಟೂ ಗರ್ವವಿಲ್ಲ, ಅಲ್ಲವೆ?” ಹೌದೋ ಬಸವಣ್ಣ ಎನ್ನಬೇಕೆನಿಸಿತು ನಾಗಪ್ಪನಿಗೆ, ಅಲ್ಲವೇ? ಅಲ್ಲವೇ? ಎಂದು ಕೇಳಿದ ರೀತಿಗೆ. ಇದೀಗ ತನ್ನ ಮನಸ್ಸಿನಲ್ಲಿ ಫಿರೋಜ್ ತುಂಬಿರುವ ಹೊತ್ತಿಗೇ ಶ್ರೀನಿವಾಸನಿಗೆ ಈ ಪ್ರಶ್ನೆ ಹೊಳೆದದ್ದು ಹೇಗೆ? ಈ ಆಕಸ್ಮಿಕ ಹೊಂದಾಣಿಕೆಗಿಂತ ಹೆಚ್ಚಾಗಿ ಕಾಡಹತ್ತಿದ್ದು ಫಿರೋಜ್ ಈಗ ಮುಂಬಯಿಯಲ್ಲಿ ಹೇಗೆ ಎಂಬ ಪ್ರಶ್ನೆ. ತಾನೀಗ ಮನೆಯಲ್ಲಿ ಕೂಡ್ರಲು ಕಾರಣವಾದದ್ದಕ್ಕೂ ಫಿರೋಜ್ ಮುಂಬಯಿಗೆ ಬಂದದ್ದಕ್ಕೂ ಸಂಬಂಧ ಇದ್ದಿರಬಹುದಲ್ಲವೆ? ಸಂಶಯ ಹುಟ್ಟಿದೊಡನೆಯೆ ಎದೆಯ ಭಾಗ ಬೆವರಹತ್ತಿದ ಭಾಸವಾಗಹತ್ತಿತು...

ಹಾಯ್‌ವೇದ ಮೇಲೆ ವಾಹನಗಳು ವಿರಲವಾದ ಮುಂಜಾವಿನ ಹೊತ್ತಿನಲ್ಲಿ ವೇಗವಾಗಿ ಓಡುತ್ತಿದ್ದ ಕಾರಿನಲ್ಲಿಯ ಎಲ್ಲರೂ ಈಗ ಮಾತನ್ನು ಒಮ್ಮೆಲೇ ನಿಲ್ಲಿಸಿದ್ದರು. ಶ್ರೀನಿವಾಸನಿಗೂ ಈಗ ತನ್ನ ಡ್ರಾಯ್‌ವಿಂಗ್ ಪ್ರಾವೀಣ್ಯಪ್ರದರ್ಶಿಸುವ ಹುರುಪು ಬಂತೆಂದು ತೋರುತ್ತದೆ. ಗಾಡಿಯವೇಗ, ಅದರಿಂದ ಉಂಟಾಗಬಹುದಾದ ಗಂಡಾಂತರ ಇವುಗಳಿಗೆ ಹೆದರಿಯೂ ಆ ಹೆದರಿಕೆಯನ್ನೇ ಆನಂದಿಸುವವರ ಹಾಗೆ, ಕಾರು ಠಾಣಾದ ಕಡೆ ಹೊರಳುವ ರಸ್ತೆಯ ಮುರಕಿಗೆ ಬರುವತನಕವೂ ಎಲ್ಲರೂ ಉಸಿರುಹಿಡಿದು ಕೂತಿದ್ದರು. ಮುರಕಿಗೆ ಬರುವ ಅಪೇಕ್ಷಿತ ಕ್ಷಣಕ್ಕಾಗಿ ಬ್ರೇಕ್ ಹಚ್ಚಲು ತುಸು ತಡವಾದ್ದರಿಂದ ಬ್ರೇಕ್ ಹಚ್ಚಿದ ರಭಸ ಬೇಕಾದದ್ದಕಿಂತ ಹೆಚ್ಚಾಗಿ ಎಲ್ಲರೂ ತಮ್ಮ ತಮ್ಮ ಮುಂದಿನ ಜಾಗಕ್ಕೆ ಅಪ್ಪಳಿಸುವ ಸ್ಥಿತಿ ಉಂಟಾಯಿತು. ಶ್ರೀನಿವಾಸನ ಹೆಂಡತಿ ಮುಂದಿನ

ಸೀಟಿಗೆ ಅಪ್ಪಲಿಸಬಾರದೆನ್ನುವ ಹಾಗೆ ಜಾಚಿದ ಎರಡೂ ಕೈಗಳು ನಾಗಪ್ಪನ ಭುಜಗಳಲ್ಲಿ ಬಂದು ಊರಿದವು. ಎಲ್ಲರೂ ತಮ್ಮನ್ನು ಸಾವರಿಸಿಕೊಂಡು ಕೂತ ಮೇಲೆ ಕಾರು ಮುಂದೆ ಸಾಗುವ ಸಿದ್ಧತೆ ಮಾಡುತ್ತಿದ್ದಾಗ ಎಲ್ಲರೂ ಒಮ್ಮೆ ಖೋss ಎಂದು ನಕ್ಕು ಮತ್ತೆ ಮೌನ ಧರಿಸಿದ್ದರು. ಫಿರೋಜನ ಬಗ್ಗೆ ಶ್ರೀನಿವಾಸ ಆಡಿದ ಮಾತುಗಳನ್ನು ನೆನಸುತ್ತ, ಭಂಭೋದ್ ಯಾವಾಗಲೂ ಬೇರೆಯವರ ಮೇಲೆ ಛಾಪುಹೊಡೆಯುವುದರಲ್ಲಿ ಎತ್ತಿದಕ್ಕೈ ಎಂದು ನಾಗಪ್ಪ ತಿರುಗಿ ಸಿಟ್ಟಾಗುವ ಹೊತ್ತಿಗೆ ಶ್ರೀನಿವಾಸ ತಾನು ಆಡುತ್ತಿದ್ದದ್ದು ತುಂಬ ಗುಟ್ಟಿನ ಮಾತು; ಹಿಂದಿನ ಸೀಟಿನಲ್ಲಿ ಕುಳಿತವರಿಗೆ ಕೇಳಿಸದಿರಲಿ ಎನ್ನುವ ರೀತಿ ದನಿ ತಗ್ಗಿಸಿ, “ನಿನ್ನೆ, ನೀನು ರಜೆಯ ಮೇಲಿರುವ ಕಾರಣ ತಿಳಿಯಿತು. ನೀನೇಕೆ ನನಗೇನೂ ಹೇಳಲಿಲ್ಲ? ಕಾಮತರಿಗಿಂತ ಒಳ್ಳೆಯ ವಕೀಲರ ಗರಜು ನಿನಗಿದೆ,” ಎಂದ. ನಾಗಪ್ಪನಿಗೆ ಏನೊಂದೂ ಅರ್ಥವಾಗಲಿಲ್ಲ. ದಿಗ್ಭ್ರಾಂತನಾಗಿ ಶ್ರೀನಿವಾಸನ ಮೋರೆಯನ್ನೇ ನೋಡುತ್ತಿದ್ದಾಗ ಶ್ರೀನಿವಾಸನೇ ಮುಂದುವರಿಸುತ್ತ, “ನಿನ್ನ ಮನಸ್ಸಿಗಾಗುತ್ತಿದ್ದ ನೋವಿನ ಕಲ್ಪನೆಯನ್ನು ನಾನು ಮಾಡಿಕೊಳ್ಳಬಲ್ಲೆ. ಹಾಗೆಂದೇ ಈ ಪಿಕ್ನಿಕ್ಕಿನ ಯೋಜನೆ” ಎಂದ. ನಾಗಪ್ಪ ಇದನ್ನೆಲ್ಲ ಗ್ರಹಿಸುವ ಸ್ಥಿತಿಯಲ್ಲೇ ಇರಲಿಲ್ಲ. ಶಬ್ದಗಳು ಗಾಳಿಯಲ್ಲಿ ತೂರಿ ಬಂದು ಕಿವಿ ಹೊಗುತ್ತಿದ್ದುವು, ಅಷ್ಟೇ. ತನ್ನ ಅಳವಿನಾಚೆಯ ಶಕ್ತಿಗಳು ಬೆನ್ನ ಹಿಂದೆ ನಿಗೂಢ ಸಂಚು ನಡೆಸಿವೆ ಎಂಬಂತಹ ಅನ್ನಿಸಿಕೆಯಿಂದ ಕೂತಲ್ಲೇ ತಾನು ಸಣ್ಣಗೆ ನಡುಗುತ್ತಿದ್ದುದರ ಅರಿವಾದಾಗ ನಡುಕವನ್ನು ತಡೆಯಲು ಸೀಟಿನ ಬೆನ್ನಿಗೆ ಕೈಹಾಕಲು ಪ್ರಯತ್ನಿಸಿದಾಗ ಅಚ್ಯುತನ ದೃಷ್ಟಿ ತನ್ನ ಮೇಲೇ ಊರಿದ್ದು ಲಕ್ಷ್ಯಕ್ಕೆ ಬಂದು ವಿಚಲಿತನಾದ.

## ಅಧ್ಯಾಯ ಒಂಭತ್ತು

ನಾಳೆ ಮತ್ತೆ ಸಮುದ್ರದಂಡೆಯ ಮೇಲೇ ಭೆಟ್ಟಿಯಾಗೋಣ ಎಂದ ದೋಶಿಯವರು ಸಂಜೆ ಅಲ್ಲಿ ಹೋದಾಗ ಭೇಟಿಯಾಗಿರಲಿಲ್ಲ. ತನ್ನ ಭಯಗಳನ್ನು ಯಾರಲ್ಲಾದರೂ ತೋಡಿಕೊಳ್ಳಬೇಕು ಅನ್ನಿಸಿ ನಾಗಪ್ಪ ಮನಸ್ಸಿನಲ್ಲಿ ಚಡಪಡಿಸಿದ: ಬೆಳಿಗ್ಗೆ ಠಾಣಾಕ್ಕೆ ಹೋದಾಗ ಶ್ರೀನಿವಾಸ ಮಾತನಾಡಿಯೇ ಮಾತನಾಡಿದ. ಲೆಕ್ಕವಿಲ್ಲದಷ್ಟು ಹಣ ಮಾಡಿದಂತಿದೆ. ನಮ್ಮ ಕಂಪನಿಯಲ್ಲಿ ಹಲವರ ಪರಿಚಯವಿದ್ದಂತಿದೆ. ಅಷ್ಟೇ ಅಲ್ಲ. ಕೆಲವು ದೊಡ್ಡ ಅಧಿಕಾರಿಗಳ ಮೇಲೆ ದುಷ್ಟ ಹಿಡಿತವೂ ಇದ್ದಂತಿದೆ. ಅಥವಾ ನನಗೇ ಇಲ್ಲದ ಸಂಶಯವೇ? ಇವನನ್ನು ನಂಬಬಹುದೆ? ಬರೆಯುವ ವಹಿಯನ್ನು ಮೇಜಿನ ಖಣದಲ್ಲಿ ಇಡಲು ಹೇಳಿದ. ಯಾರಾದರೂ ಓದುತ್ತಾರೆಂಬ ಗುಮಾನಿಯೆ? ಯಾರು? ಚೇತನಾಳಿಗೆ ಕನ್ನಡ ಬರುವುದಿಲ್ಲ. ಅಚ್ಯುತ? ಅವನಿಗೆ ಓದುಬರಹ ಬರುತ್ತದೆಯೆ? ಅಥವಾ ಶಾರದೆ? ಅವಳೂ ಕನ್ನಡ ಕಲಿತವಳಲ್ಲ. ಮೇಲಾಗಿ ನನ್ನ ಕೋಣೆಗೆ ಅವಳೇಕೆ ಬಂದಾಳು? ಅಥವಾ ಸ್ವತಃ ಶ್ರೀನಿವಾಸನೇ ಓದಿರಬಹುದೆ? ಇರಲಿಕ್ಕಿಲ್ಲ. ಓದಿದ್ದರೆ ನಾನು ಬರೆಯಯುತ್ತಿದ್ದದ್ದು ಕಾದಂಬರಿ ಅಲ್ಲ ಎನ್ನುವದು ಗೊತ್ತಾಗುತ್ತಿತ್ತು. ಥತ್ತೇರಿ! ಈಗ ಹೊಳೆಯುತ್ತದೆ: ಇದು ತನ್ನ ಬಗ್ಗೆ ನಾನು ಬರೆಯುತ್ತಿದ್ದ ಕಾದಂಬರಿಯೆಂದು ತಿಳಿದೇ ಹೆದರಿದ್ದಾನೆ—ನಾಡೂ ಮಾಸ್ಕೇರಿಯ ಪದ್ಮನಾಭ ಕೇಣಿಗಳ ಜ್ಯೇಷ್ಠ ಚಿರಂಜೀವನಾದ ಶ್ರೀನಿವಾಸ! ರೋಮ ವಿರಲವಾದ ಮೈಯಲ್ಲಿ ಬೊಜ್ಜೇ ತುಂಬಿ; ಗಡ್ಡ ಮೀಸೆಗಳು ಕೂಡ ಸರಿಯಾಗಿ ಬೆಳೆಯದೇ ನುಣುಪುನುಣುಪಾಗಿ ತಕತಕಿಸುವ ಈ ಅಂಜುಬರುಕಾ ನನ್ನ ಬರವಣಿಗೆಯ ವಹಿಯನ್ನು ನೋಡಲೂ ಹೆದರಿಕೊಂಡಿದ್ದಾನೆ. ಇನ್ನಷ್ಟು ಹೆದರಿಸಬೇಕು: ಪುರ್ ಪುರ್ ಪುರ್! ಎಷ್ಟು ದಿನವೆಂದು ಈತನ ಮನೆಯಲ್ಲಿ ಝೂಂಡ ಹಾಕಿರುವದು? ಖೇತವಾಡಿಗೇ ಮರಳಿದರೆ ಹೇಗೆ? ಇಲ್ಲಿದ್ದ ಮೂರು ದಿನಗಳಲ್ಲಿ ಒಂದು ಬಗೆಯ ಧೈರ್ಯವೆನ್ನಿಸಿದ್ದು ನಿಜ: ಮುಖ್ಯವಾಗಿ ಚೇತನಾಳ ಚೈತನ್ಯ ತುಂಬಿದ ಸಾನ್ನಿಧ್ಯದಲ್ಲಿ. ಅಚ್ಯುತನ ವರ್ತನೆ ಹೆಚ್ಚು ಹೆಚ್ಚು ಕುತೂಹಲಕ್ಕೆ ಕಾರಣವಾಗುತ್ತಿದೆ. ನನ್ನ ಹತ್ತರ ಏನನ್ನೋ ಮಾತನಾಡಲು ದಾರಿ ಕಾಯುವವನ ಹಾಗೆ ಕಾಣುತ್ತಾನೆ. ಶಾರದೆಯನ್ನು ಮಾತನಾಡಿಸುವ ಧೈರ್ಯ ಮಾತ್ರ ಇನ್ನೂ ಆಗುವದಿಲ್ಲ. ಮಾತನಾಡಿಸದ್ದಕ್ಕೇ

ಇರಬೇಕು ಅವಳು ಇನ್ನಷ್ಟು ಆಕರ್ಷಕಳಾಗಿ ತೋರುತ್ತಿದ್ದಾಳೆ. ಅಣ್ಣನ ಬಗ್ಗೆ, ತಂಗಿಯ ಬಗ್ಗೆ ಬರೆಯಬೇಕೆಂದು ಕೂತರೆ ಏನೂ ತೋಚದೆ ಮನಸ್ಸೇ ಖಾಲಿಯಾದಂತೆನ್ನಿಸಿ ತೆರೆದಿಟ್ಟ ವಹಿ ತೆರೆದೇ ಉಳಿಯುತ್ತದೆ.

ಶ್ರೀನಿವಾಸನ ಮನೆಯ ಮಗ್ಗುಲಲ್ಲೇ ಕಾರು ಟ್ರಕ್ಕುಗಳನ್ನು ರಿಪೇರಿ ಮಾಡುವ ಗರಾಜು ಇದೆ. ಕಳೆದ ಹತ್ತು ಹನ್ನೆರಡು ವರ್ಷಗಳಿಂದಲೂ ನಡೆಯುತ್ತಿದ್ದ ಈ ಗರಾಜು ಇದ್ದದ್ದು ಇಂದೋ ನಾಳೆಯೋ ಯಾರಾದರೂ ಬಂದು ಕೆಡವಬಹುದೆಂಬ ಕಾಯಂ ಭಯದ ಮೇಲೆ ನಿಂತ ಹಂಗಾಮೀ ಚಪ್ಪರದಲ್ಲಿ. ಈ ಗರಾಜಿನಲ್ಲಿ ಕೆಲಸ ಮಾಡುವ ನಾಲ್ಕೈದು ಕುಟುಂಬಗಳು ವಾಸಿಸುತ್ತಿದ್ದ ಝೋಪಡಪಟ್ಟಿಗಳು ಶ್ರೀನಿವಾಸನ ಮನೆಯ ಮಗ್ಗುಲಲ್ಲೇ ಇವೆ. ಕಳ್ಳಭಟ್ಟಿಯ ಅಡ್ಡೆಯೂ ಅಲ್ಲಿದೆಯಂತೆ. ಹಾಗೆಂದೇ ಇರಬೇಕು ಅಲ್ಲಿಯ ಹೆಂಗಸರ ಮುದುಕರ ಮಕ್ಕಳ ಮೋರೆಗಳ ಮೇಲೆಲ್ಲ ಬಡತನದ ದೈನ್ಯದೊಡನೆ ಏನನ್ನೋ ಬಚ್ಚಿಟ್ಟಂತಹ ಆತಂಕದ ಕಳೆ. ಜೊತೆಗೇ, ಆ ರೋಪಡಪಟ್ಟಿಗಳು ಸಂಕೇತಿಸುವ ಹಂಗಾಮಿತನ ಅವುಗಳಲ್ಲಿಯ ನಿವಾಸಿಗಳ ಮೋರೆಗಳಿಗೂ ಮೆತ್ತಿಕೊಂಡಂತಿದೆ. ಅಲ್ಲಿಯ ಹನ್ನೆರಡು ಹದಿಮೂರು ವರ್ಷ ವಯಸ್ಸಿನ ಒಬ್ಬ ಚಿಕ್ಕ ಹುಡುಗಿ ನನ್ನ ಲಕ್ಷ್ಯ ಸೆಳೆದಿದ್ದಾಳೆ. ನಾನು ಬರುಹೋಗುವಾಗೆಲ್ಲ ನನ್ನನ್ನೇ ಎವೆಯಿಕ್ಕದೇ ನೋಡುತ್ತಾಳೆ; ಎಣ್ಣೆ ಕಾಣದ, ನೀರು ಕಾಣದ, ಕೆದರಿದ ಕೂದಲು, ಗರಾಜಿನ ಎಣ್ಣೆ ಕೂಡಿದ ಕಪ್ಪು ಬಳಿದ ಮೋರೆ, ರವಕೀ ಖಣದ ಚಿಂದಿಯಾದ ಪರಕರ. ಇಷ್ಟು ದೊಡ್ಡ ಕಣ್ಣುಗಳಲ್ಲಿ ಮಾತ್ರ ಎಲ್ಲಿಲ್ಲದ ಹೊಳಪು. ದೈನ್ಯ, ಭಯ, ಆಸೆ, ಕಳ್ಳಸರಾಯಿ ಮಾರುವುದರಲ್ಲಿ ಇವಳನ್ನೂ ಉಪಯೋಗಿಸುತ್ತಿರಬಹುದೇ ಎಂಬ ಸಂಶಯ. ಸಂಜೆ ಕಡಲು ತೀರದಿಂದ ಮನೆಗೆ ಹಿಂತಿರುಗುವಾಗ ಕೆಡ್‌ಬರೀ ಚಾಕಲೇಟಿನ ಒಂದು ಪೆಕೆಟ್ ಕೊಡುವ ಹುಕ್ಕಿ ಬಂದಿತು. ಕೊಡುತ್ತ ಹೆಸರು ಕೇಳಿದಾಗ ಸರಸ್ವತಿ ಎಂದಳು. ಚಾಕಲೇಟ್ ಸಿಕ್ಕೆ ಬಗ್ಗೆ ಸಂತೋಷ, ಕೃತಜ್ಞತೆ. ಅಥವಾ ಒಳಗೆ ಓಡಿಹೋಗಿ ತಿನ್ನಬೇಕೆಂಬ ಹಪಾಪಿತನದ ಅವಸರ—ಇಂತಹ ಯಾವ ಭಾವನೆಯನ್ನೂ ಅದು ವ್ಯಕ್ತಪಡಿಸದೇ ನನ್ನ ಕಡೆಗೆ ಇಷ್ಟು ದಿನ ನೋಡುತ್ತಿದ್ದ ಕಣ್ಣುಗಳಿಂದ ನೋಡುತ್ತ ನಿಂತಳು: ಯಾಕೋ ಹಾಗೆ ಹತ್ತಿರದಿಂದ ನೋಡುವ ಕಣ್ಣುಗಳನ್ನು ನೋಡಿದಾಗ ಪೂರ್ವಜನ್ಮದಲ್ಲಿ ನಂಬಿಕೆ ಹುಟ್ಟಿ ನನ್ನಷ್ಟಕ್ಕೇ ನಗುತ್ತೇನೆ... ಆಗ ತಂಗಿಯ ಬಗ್ಗೆ ಬರೆಯಬೇಕು ಅನ್ನಿಸಿದ್ದಕ್ಕೆ ಬಹುಶಃ ಸರಸ್ವತಿಯೇ ಕಾರಣವಾಗಿರಬೇಕು. ನನ್ನ

ತಂಗಿಯೂ ಹೀಗೇ ಝೋಪಡಪಟ್ಟಿಗಳಲ್ಲೋ ಸೂಳೆಯರ ಕೇರಿಗಳಲ್ಲೋ ತೀರ ಬಡತನದಲ್ಲಿ ಜೀವನ ನಡೆಸುತ್ತಿರಬಹುದೇ ಎಂಬ ಜೀವ ಹಿಂಡುವ ಸಂಶಯವೊಂದು ನನ್ನನ್ನು ಬಹಳ ವರ್ಷಗಳಿಂದ ಕಾಡುತ್ತ ಬಂದಿದೆ. ಅಪ್ಪ ಇದೆಂತಹ ಹೇಡಿತನದ ಕೆಲಸ ಮಾಡಿದ. ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನೇ ದಾರಿಹೋಕರ ಪಾಲು ಮಾಡುವಂತಹ ಹೀನ ಕೆಲಸಕ್ಕೆ ಕೈ ಹಾಕಬೇಕಾದ ಪರಿಸ್ಥಿತಿ ಯಾವುದಿತ್ತು? ಇದೆಲ್ಲ ನನ್ನ ಕಲ್ಪನೆಯ ಆಚೆಯ ಸತ್ಯವಾಗಿಯೇ ಉಳಿದಿದೆ. ಅಪ್ಪನಿಗೆ ಕಲ್ಯಾಣಿ ಅಂದರೆ ಬಹಳ ಮುದ್ದಿನ ಮಗುವಾಗಿದ್ದಳು. ಅಮ್ಮನದೇ ಸುಂದರ ರೂಪ. ನಾನು ಮಾತ್ರ ಅಪ್ಪನ ಹಾಗೆ! ಅಪ್ಪನ ಹಾಗೇ ಆತ್ಮಘಾತದ ವಿಚಾರಮಾಡಿದ್ದು ಎಷ್ಟು ಸರತಿ; ಆದರೆ ಪ್ರತಿಸಾರೆ ನನಗಿನ್ನೂ ಅರ್ಥವಾಗಿರದ ಪ್ರಬಲವಾದ ಶಕ್ತಿಯೊಂದು ಬರೇ ಬೌದ್ಧಿಕವಾದ ಸಂಕಲ್ಪವನ್ನು ಮೆಟ್ಟಿನಿಂತು ಬದುಕಿನತ್ತ ಮುಖಮಾಡಿ ನಿಲ್ಲುವಂತೆ ಮಾಡುತ್ತಿದ್ದುದರ ಅನುಭವ ಮತ್ತೆಮತ್ತೆ ಬಂದಿದೆ. ತಂಗಿಯ ನೆನಪಿನಿಂದ ಸರಸ್ವತಿ ನನಗೆ ಅಷ್ಟು ಪ್ರಿಯವಾಗುತ್ತಿದ್ದಾಳೆಯೆ? ಅಥವಾ ಸರಸ್ವತಿಯ ಕಣ್ಣುಗಳಲ್ಲೂ ಮಾತಿಗೆ ನಿಲುಕದ ರೀತಿಯಲ್ಲಿ ಗೂಡುಕಟ್ಟಿದ ಮ್ಲಾನತೆಯಿಂದಾಗಿಯೇ ತಂಗಿಯ ನೆನಪು ಮರುಕಳಿಸುತ್ತದೆಯೆ? ಮುಂಬಯಿಯ ಗಿರ್ಗಾಂವ್‌ದ ಸುತ್ತಲಿನ ರೋಪಡಪಟ್ಟಿಗಳನ್ನು ಹೊಲಸು ಊರು-ಕೇರಿಗಳನ್ನು ಲೆಕ್ಕವಿಲ್ಲದಷ್ಟು ಸರತಿ ಸುತ್ತಾಡಿ ಬಂದಿದ್ದೇನೆ: ಮುವ್ವತ್ತು ವರ್ಷಗಳ ಹಿಂದೆ ಕಳೆದುಹೋದ ತಂಗಿ ಫಕ್ಕನೆ ಕಣ್ಣಿಗೆ ಬಿದ್ದರೆ! ಬಿದ್ದರೂ ಗುರುತು ಹೇಗೆ ಸಿಗಬೇಕು? ಈಗಾಗಲೇ ಅವಳನ್ನು ಕಂಡರೂ ಕಂಡಿರಬಹುದು. ಆದರೆ ಅವಳನ್ನು ಕಂಡಿದ್ದೇನೆ ಎಂಬುದಕ್ಕೆ ಯಾವ ಇಷಾರೆಯೂ ಸಿಕ್ಕಿಲ್ಲ. ಒಂದು ದಿನ ಸಿಕ್ಕರೂ ಸಿಕ್ಕೀತು ಎಂಬ ವಿವೇಕಶೂನ್ಯವಾದ ಆಸೆಯೊಂದು ಮನಸ್ಸಿನ ಮೂಲೆಯೊಂದರಲ್ಲಿ ಮೈಮುದುಡಿ ಮಲಗಿದ್ದರ ಅಸ್ಪಷ್ಟ ಅರಿವು ನನಗಿದೆ. ಒಂದನ್ನೊಪ್ಪಿಕೊಳ್ಳಲೆ? ನನ್ನನ್ನು ಆಗೀಗ ಎವೆಯಿಕ್ಕದ ಕಣ್ಣುಗಳಿಂದ ನೋಡುವ ಅಚ್ಯುತ ನನ್ನ ಅಣ್ಣನಿರಬಹುದೇ ಎಂಬ ಸಂಶಯ ನನ್ನಷ್ಟಕ್ಕೇ ನಗುವಂತೆ ಮಾಡಿದೆ. ಸರಸ್ವತೀ ನಿನ್ನಮ್ಮನೆಲ್ಲಿ ಎಂದು ಕೇಳಬೇಕೆಂದು ನಾಲಗೆಯ ತುದಿಯವರೆಗೆ ಬಂದ ಪ್ರಶ್ನೆಯನ್ನು ಅಪಾರ್ಥ ಮಾಡಿಕೊಂಡಾಳೆಂಬ ಭಯದಿಂದ ಕೇಳದೇ ನಿಗ್ರಹಿಸಿಕೊಂಡಿದ್ದೇನೆ—ಭಾರತೀಯ ಸಿನೇಮಾಗಳಲ್ಲಿ ಕೂಡ ಇಂತಹವುಗಳು ಜರುಗಲಾರವು ಎಂಬುದನ್ನು ಅರಿತೂ. ಅಣ್ಣತಂಗಿಯರನ್ನು ಹುಡುಕಿ ತೆಗೆಯಲೆಂದೇ ಬದುಕಿರಬೇಕು ಎಂಬ ನನ್ನ

ಅನ್ನಿಸಿಕೆಗೆ ಪುರಾವೆಗಳಿರದಿದ್ದರೂ ಬದುಕಿರುವಾಗೊಮ್ಮೆ ಅವರನ್ನು ಕಾಣಲೇಬೇಕೆಂಬ ನನ್ನ ಬಲವಾದ ಬಯಕೆಗೆ ಮಾತ್ರ ಪುರಾವೆಗಳು ಬೇಡವೇನೋ!

ತಂಗಿ ಬದುಕಿ ಇದ್ದದ್ದೇ ಹೌದಾದರೆ ಅವಳು ಮುಂಬಯಿಯಲ್ಲೇ ಇದ್ದಾಳೆ—ಗಿರ್ಗಾಂವದ ಆಸುಪಾಸಿನ ಕೇರಿಗಳಲ್ಲೇ—ಎಂದು ನನಗನ್ನಿಸುವುದರ ಕಾರಣ ಅಪ್ಪ ಅವಳನ್ನು ಕಳಕೊಂಡದ್ದು ಈ ಭಾಗದ ಜನಸಂದಣಿಯಲ್ಲಿ ಎಂಬುದೇ ಇರಬೇಕು. ಆದರೆ ಅವಳು ತುಂಬ ಬಡನತದಲ್ಲಿದ್ದಾಳೆಂದು ಯಾಕೆ ಅನ್ನಿಸುತ್ತದೆಯೋ ಗೊತ್ತಿಲ್ಲ. ಅಂಗಿಗೆ ಬೆಂಕಿ ಹಚ್ಚಿ ನನ್ನನ್ನು ಕೊಲ್ಲಲು ಮನಸ್ಸು ಗಟ್ಟಿಮಾಡಿದಂತೆ ತಂಗಿಯನ್ನೂ ಕೊಲ್ಲಲು ಮನಸ್ಸು ಆಗದೇ ಇರುವುದಕ್ಕೆ ಏನು ಕಾರಣ? ನನಗಿಂತ ಹೆಚ್ಚು ಮುದ್ದಿನವಳೆಂದೆ? ಅಮ್ಮನನ್ನು ಹೋಲುತ್ತಿದ್ದಳೆಂದೆ? ಅಮ್ಮನನ್ನು ಪ್ರೀತಿಸಿದಷ್ಟು ಅಪ್ಪ ಇನ್ನಾರನ್ನೂ ಪ್ರೀತಿಸಿದ್ದಿಲ್ಲ. ಅವಳು ಸತ್ತದ್ದೇ ಅಪ್ಪನಿಗೆ ಯಾತರಲ್ಲೂ ಆಸ್ಥೆಯೇ ಉಳಿಯಲಿಲ್ಲ. ಅದೆಲ್ಲದರ ಬಗ್ಗೆ ಈಗ ವಿಚಾರಮಾಡಿದಾಗ ಒಂದೊಂದೇ ಸಂಗತಿ ಸರಿಯಾದ ಬೆಳಕಿನಲ್ಲಿ ನಿಂತು ತನ್ನ ನಿಜಸ್ವರೂಪವನ್ನು ತೆರೆದು ತೋರಿಸುವ ಅನುಭವ: ಅಪ್ಪ ಹೊರಗಿನಿಂದ ಮಾತ್ರ ಮುಂಚಿನ ಹಾಗೇ ತೋರುತ್ತಿದ್ದರು. ಒಳಗಿನಿಂದ ಅವರು ಬೇರೆಯೇ ವ್ಯಕ್ತಿಯಾಗುತ್ತ ಹೋಗಿದ್ದರು ಎಂದು ಈಗ ತೋರುತ್ತದೆ. ಅಂಗಿಗೆ ಬೆಂಕಿ ಹತ್ತಿದ್ದರಿಂದ ಆದ ಪರಿಣಾಮವೆಂದರೆ ನನ್ನ ಹೊಟ್ಟೆ ಎದೆಗಳ ಮೇಲಿನ ಚರ್ಮ ಸುಟ್ಟ ಕಲೆಗಳು ಮಾತ್ರವೆ? ಗಿಲ್ಬರ್ಟ ಹೇಳಿದ ಸಂಸ್ಥೆಗೆ ಒಮ್ಮೆ ಹೋಗಿಬರಬೇಕು. ಅವರು ತಮ್ಮ ತಮ್ಮ ದೈಹಿಕ ದುರ್ಭಾಗ್ಯವನ್ನು ಇದಿರಿಸುವ ಧೈರ್ಯವನ್ನು ಕುರಿತು ಗಿಲ್ಬರ್ಟನಿಗಿರುವ ದೊಡ್ಡ ಆದರದ ಬಗ್ಗೆ, ಸಹಾನುಭೂತಿಯ ಬಗೆ ನನಗೆ ಸಂಶಯವೇ ಇಲ್ಲ. ಕೇಳಬೇಕಾದದ್ದಿಷ್ಟೇ:

ಮನುಷ್ಯನ ಅಪಾಂಗತ್ವ ಬರಿಯೆ ದೈಹಿಕವಾದದ್ದೇ? ತೋರಿಕೆಗೆ ಶಾರೀರಕವಾಗಿ ಸದೃಢನಾಗಿರುವ ವ್ಯಕ್ತಿಯ ಭಾವನಾಲೋಕದ ಅಂತಃಸ್ರಾವ ಕಣ್ಣಿಗೆ ಕಾಣುವದಿಲ್ಲವೆಂದಮಾತ್ರಕ್ಕೆ ಇಲ್ಲವೆಂದೆ? ರೆಡಿಮೇಡ್ ಶರ್ಟ, ಸೂಟುಬೂಟುಗಳನ್ನು ಧರಿಸಿ ಎಲ್ಲರಂತೆ 'ಕಾಣುವ' ವ್ಯಕ್ತಿ ತನ್ನ ಅಂತರಂಗದ ಯಾತನೆಗಳಲ್ಲಿ ಉಳಿದವರಿಂದ ತೀರ ವಿಭಿನ್ನ...

ಬಹಳಷ್ಟು ಸಲ ಆದಂತೆ ಬರೆದಿಡಬೇಕೆಂದುಕೊಂಡ ಒಂದು ಮಾತೂ ಟಿಪ್ಪಣಿಯಾಗಿ ಮೂಡಿರಲಿಲ್ಲ. ಮೇಜಿನ ಖಣದಲ್ಲಿಟ್ಟ ವಹಿಯನ್ನು ಹೊರಗೆ ತೆಗೆದಿರಲಿಲ್ಲ ಎಂಬುದು ನಾಗಪ್ಪನ ಲಕ್ಷ್ಯಕ್ಕೆ ಬಂದದ್ದೂ ತೀರ ತಡವಾಗಿ!

## ಅಧ್ಯಾಯ ಹತ್ತು

ಕೊನೆಗೊಮ್ಮೆ, ನಾಗಪ್ಪ ದಾರಿಕಾಯುತ್ತಿದ್ದ ಅವನ ಕಂಪನಿಯವರ ಪತ್ರವನ್ನು ಶ್ರೀನಿವಾಸನೇ ರಾತ್ರಿ ಮನೆಗೆ ಬರುವಾಗ ತಂದ. ಶ್ರೀನಿವಾಸ ಅವನ ಪ್ರೆಸ್ಸಿನ ಕೆಲಸದ ಸಲವಾಗಿ ತನ್ನ ಆಫೀಸಿಗೆ ಹೋದಾಗ ಪರ್ಸೊನೆಲ್ ಮ್ಯಾನೇಜರನೇ ಕೊಟ್ಟನಂತೆ. ಈ ಬೋಳೀಮಗ ಆಜ್ಞಾಧಾರಕ ಬಾಲಕನಾಗಿ ತಗೊಂಡು ಬಂದನಂತೆ! ಈ ಎಲ್ಲ ಪಿತೂರಿಯಲ್ಲಿ ಶ್ರೀನಿವಾಸನ ಕೈ ಇದ್ದದ್ದು ನಿರ್ವಿವಾದ ಹಾಗಾದರೆ ಎಂದನ್ನಿಸಿ ಪತ್ರವನ್ನು ಕೈಗೆ ತೆಗೆದುಕೊಳ್ಳುವಾಗ ಸಿಟ್ಟು ಮಸ್ತಕಕ್ಕೇರಿ ಕೋಳೀಗಿರಿಯಣ್ಣ ಮಂತ್ರಿಸಿಕೊಟ್ಟ ಎಲ್ಲ ಅಕ್ಷತೆಗಳನ್ನೂ ಶ್ರೀನಿವಾಸನ ತಲೆಯ ಮೇಲೆ ಸೇಸೆಯಿಕ್ಕಿದ. ಪತ್ರದೊಂದಿಗೆ ಕೋಣೆಗೆ ನಡೆದು ಕದವಿಕ್ಕಿ ಅಗಳಿ ಹಾಕಿದ. ಪತ್ರ ತೆರೆದು ಓದಿದ. ಓದಿದ್ದರ ಅರ್ಥವೇ ಆಗುವದಿಲ್ಲ ಎನ್ನುವವನ ಹಾಗೆ ಮತ್ತೆ ಮತ್ತೆ ಓದಿದ: "A departmental enquiry is instituted to investigate a complaint insinuating your name in a recent accident at the factory in which three workers lost their lives. The DMD will personally conduct this enquiry. Please get ready to proceed to Hyderabad as soon as you get the Air-ticket which is being arranged,"

ನಾಗಪ್ಪ, ಪ್ರತಿ ಶಬ್ದವೂ ಬಾಯಿಪಾಠವಾಗುವವರಗೆ, ಆ ಸಣ್ಣಪತ್ರವನ್ನು ಓದಿದ. ಓದಿದ್ದರ ಅರ್ಥವಾಗತೊಡಗಿದೊಡನೆ, ಎಂದಿನ ಪುಕ್ಕಲುತನದಿಂದ ಬೆವರೊಡೆಯುವದನ್ನು ಕೂಡ ಮರೆತು ಈ ವರೆಗೂ ತನಗೇ ಅರಿವಾಗಿರದ ಆಳದಿಂದ ಪುಟಿದೆದ್ದ ಪಾಶವೀ ಧೈರ್ಯದಿಂದ ಮೈ ಸೆಟೆದುಕೊಂಡಿತು. ಫಿರೋಜ್ ತನಗಾಗಿ ಸಿದ್ಧಪಡಿಸಿದ ಈ ಬೋನು ಈ ಜನ್ಮದ್ದೇ ಅಲ್ಲ; ಅದರ ಮೂಲೆ ಮೂಲೆಗಳನ್ನು ತಾನು ಚೆನ್ನಾಗಿ ಬಲ್ಲೆನೆನ್ನುವ ಹಾಗೆ ಅದರ ಬಗೆಗಿನ ಭಯ ದೂರವಾಗಹತ್ತಿತ್ತು. ಬದುಕು ಸಾವುಗಳ ನಡುವಿನ ಆಯ್ಕೆಯ ನಿರ್ಣಾಯಕ ಕ್ಷಣಕ್ಕೆ ಸಿದ್ಧವಾಗಿಸುವಂತೆ ಒದಗಿ ಬಂದ ಸನ್ನಿವೇಶ ಅಚ್ಚರಿಯಾಗುವಷ್ಟು ಸಮಾಧಾನವನ್ನೊದಗಿಸಿತ್ತು: ದ್ವೇಷ, ರೋಷ, ಭಯ ಇವೇ ಮೊದಲಾದ

ವಿಕಾರಗಳಿಂದ ಮನಸ್ಸು ವಿಚಲವಾಗಲಿಲ್ಲ. ಫಿರೋಜ್, ನೀನು ನನ್ನ ಕರ್ರಿಯರದ ಮೊದಲಿನಿಂದಲೂ ನನ್ನ ಬಗ್ಗೆ ತೋರಿಸುತ್ತ ಬಂದ ಕ್ರೌರ್ಯಕ್ಕೆ ಈಗ ಸೋಕ್ಷಮೋಕ್ಷ ವಾಗಿಬಿಡಲಿ. ಇದೋ ನಾನೊ ಸಿದ್ಧನಾಗಿ ನಿಂತಿದ್ದೇನೆ. ನಿನ್ನ ಈ ಡಿಪಾರ್ಟಮೆಂಟಲ್ ಇನ್ಕ್ವಾಯರಿಯ ಹಿಂದಿನ ಬೇತು ನನಗೀಗ ಸಂಪೂರ್ಣವಾಗಿ ಗೊತ್ತಾಗಿದೆ. ಇದು ನನ್ನ ಕರ್ರಿಯರಿನ ಆದ್ದರಿಂದ ಸಾವು-ಇರವಿನ ಪ್ರಶ್ನೆ. ನಿನಗೋ ಇದೊಂದು ದುಷ್ಟ ಆಟ. ನಾನೇ ಸೋಲಬಹುದೋ ಭಂಭೋದ್! ಆದರೆ ನಿನ್ನ ಗೆಲುವಿನ ಹಿಂದಿನ ಕ್ರೌರ್ಯವನ್ನು ಎಲ್ಲರಿಗೂ ಜಾಹೀರುಪಡಿಸದೇ ಸಾಯಲಾರೆ. ಹೌದು. ಈ ಕೊನೆಯದಕ್ಕೂ ಸಿದ್ಧನಾಗಿದ್ದರಿಂದಲೇ ನಿನ್ನನ್ನು ಹೋರಲು ಹಿಂದೆ ಎಂದೂ ಅನ್ನಿಸಿರದಷ್ಟು ಧೈರ್ಯ ಬಂದಿದೆ. ಕುರ್ಚಿಯಲ್ಲಿ ಕುಳಿತಲ್ಲೇ ನಾಗಪ್ಪ ಎದೆ ಉಬ್ಬಿಸಿಕೊಂಡ. ಮತ್ತೆ ಮತ್ತೆ, ತನಗೆ ಇಷ್ಟೊಂದು ಧೈರ್ಯ ಒಮ್ಮೆಗೆಲೇ ಎಲ್ಲಿಂದ ಬಂತು? ತನ್ನ ಮನಸ್ಸು ಇಷ್ಟೊಂದು ಉಲ್ಲಾಸಗೊಂಡದ್ದೇಕೆ ಎಂದು ತನ್ನನ್ನೇ ಕೇಳಿಕೊಂಡ. ಜನ್ಮಾಂತರಗಳ ಪ್ರಾಣಿಬಲವೊಂದು ಮನಸ್ಸಿನ ಆಳದಲ್ಲೆಲ್ಲೊ ಸೆಲೆಯೊಡೆದಿರಬೇಕು ಈ ನಿರ್ಣಾಯಕವಾದ ಮುಖಾಮುಖಿಗೆ ತನ್ನನ್ನು ಅಣಿಗೊಳಿಸಲೆಂದೇ ಎಂದು ತಿಳಿದು ಎದ್ದು ಕೋಣೆಯಲ್ಲಿ ಕುಣಿದುಬಿಡಬೇಕು ಎನ್ನುವಷ್ಟು ಖುಶಿಪಟ್ಟ. ಖುಶಿಯಿಂದ, ಧೈರ್ಯದಿಂದ ಬುದ್ಧಿ, ಮನಸ್ಸುಗಳು ಸ್ವಚ್ಛಗೊಂಡು ಹರಿತವಾಗಿದ್ದುವು. ಫಿರೋಜನನ್ನು ಇದಿರಿಸಲು ತಾನು ಏನು ಮಾಡಬೇಕು ಎನ್ನುವದು ಮಾತ್ರ ಇವುಗಳನ್ನು ಮೀರಿದ ಪ್ರವೃತ್ತಿಯ ನೆಲೆಯಲ್ಲೇ ನಿಚ್ಚಳವಾಗಹತ್ತಿತ್ತು: I enjoy this Phiroz, I enjoy this thoroughly—ಎನ್ನುತ್ತ ಒಂದು ಬಗೆಯ ಉನ್ಮಾದದಿಂದೆಂಬಂತೆ ಪುಲಕಿತನಾಗಿ ಬಲತೊಡೆಯ ಮೇಲೆ ಅಂಗೈಯಿಂದ ಬಡೆದುಕೊಂಡ. ಸಂಶಯವೇ ಇಲ್ಲ. ಶ್ರೀನಿವಾಸನದೂ ಈ ಪಿತೂರಿಯಲ್ಲಿ ಕೈಯಿದೆ ಎಂದನ್ನಿಸಿದಾಗ ಒಂದೇ ಕ್ಷನದ ಮಟ್ಟಿಗೆ ವಿಚಲಿತನಾದ. ಆದರೆ ಯಾವುದೇ ರೀತಿಯ ಭಯದಿಂದಲ್ಲ. ಪ್ರತಿ ಸಲ, ತಾನು ಜನರನ್ನು ಸುಲಭವಾಗಿ ನಂಬಿಬಿಡುತ್ತೇನಲ್ಲ ಎಂಬ ಅರಿವಿನಿಂದ: ಯಾವ ಒಂದು ಸಹಜ ಸ್ಫೂರ್ತಿಯಿಂದ ಹಿಂದಿನದೆಲ್ಲವನ್ನು ಮರೆತು ಎಲ್ಲರನ್ನು ಬಿಟ್ಟು ನಾನು ಈ ಶ್ರೀನಿವಾಸನಲ್ಲಿಗೆ ಬಂದೆ. ಆದರೆ ಈ ಒಂದೂ ಮಗ ನನ್ನನ್ನು ಇಲ್ಲಿಗೆ ಕರೆತಂದದ್ದು ಮೊದಲಿನಿಂದಲೂ ಹೂಡಿದ ಒಂದು ಸಂಚಿನದೇ ಅಂಗವಾದಂತಿದೆ. ಆದಂತಿದೆ ಯಾಕೆ?—ಆಗಿದೆ. ಈಗ ಎಲ್ಲ ಸ್ಪಷ್ಟವಾಗುತ್ತದೆ: ಆ ದಿವಸ ಸಂತೋಷಭವನದಲ್ಲಿ ಕಾಫಿ ಕುಡಿಯುತ್ತಿರುವಾಗ ನನ್ನನ್ನು ಭೆಟ್ಟಿಯಾದದ್ದು ಆಕಸ್ಮಿಕವಾಗಿ ಅಲ್ಲವೇ ಅಲ್ಲ.

ನನ್ನನ್ನು ಮನೆಗೆ ಕರೆದೊಯ್ಯುವುದನ್ನು ನಿಶ್ಚಯಿಸಿಯೇ ಬಂದಿರಬೇಕು. ಪರ್ಸೊನೆಲ್ ಮ್ಯಾನೇಜರನ ಫೋನ್ ಬಂದ ದಿನದ ಸಂಜೆಗೇ ಅದು. ಅರರೇ! ಶ್ರೀನಿವಾಸ ಈ ಹೊತ್ತೇ ಹೇಗೆ ತನ್ನನ್ನು ಭೆಟ್ಟಿಯಾಗಿ ಕರೆಯಲು ಬಂದ ಎಂಬುದರ ಬಗ್ಗೆ ತಾನು ಇಷ್ಟು ದಿವಸ ವಿಚಾರಮಾಡಲೇ ಇಲ್ಲವಲ್ಲ. ನಾಗಪ್ಪ ತನ್ನ ಧಡ್ಡತನವನ್ನು ಶಪಿಸಿಕೊಂಡ: ಅಡ್ಡಿಯಿಲ್ಲ. ನಾಡೂ ಮಾಸ್ಕೇರಿಯ ಶ್ರೀನಿವಾಸಾ, ಇಪ್ಪತ್ತು ವರ್ಷಗಳ ಹಿಂದಿನ ಆ ಘಟನೆಯನ್ನು ನೀನು ಇನ್ನೂ ಮರೆತಿಲ್ಲ ಎಂಬುದನ್ನು ಬಲ್ಲೆ. ಅದರಿಂದಾಗಿ ನೀನು ನನ್ನ ಬಗ್ಗೆ ತಳೆಯುತ್ತ ಬಂದ ದ್ವೇಷವನ್ನು ನಾನೂ ಮರೆತಿಲ್ಲವೊ- ಈ ಕೋಳಿಗಿರಿಯಣ್ಣನ ಕೇರಿಯ 'ಭುಸ್' ನಾಗಪ್ಪನೂ ಮರೆತಿಲ್ಲ. ನಿನ್ನನ್ನು ಕ್ಷಮಿಸಸಿಯೂ ಇಲ್ಲ. ಇದು ಇಂದು ನಮ್ಮಿಬ್ಬರಿಗೂ ಮತ್ತೆ ಸ್ಪಷ್ಟವಾದದ್ದು ಒಳ್ಳೆಯದೇ ಆಯಿತು.

ಶ್ರೀನಿವಾಸನಿಗೆ, ಹಾವಿನಂತೆ ಹಗೆ ಕಾಯುವ ಛಲದ ಗುಣ ಅವನ ತಾಯಿಯಿಂದ ಬಂದದ್ದು. ನಾಗಪ್ಪ ಅವನ ತಾಯಿಯನ್ನು ಕುರಿತು ಬರೆದ ಕತೆ ಈ ಛಲವನ್ನು ಅರಿಯುವುದರ ಸಲುವಾಗಿಯೇ ಬರೆದದ್ದಾಗಿತ್ತು: ಶ್ರೀನಿವಾಸ ಇಂದು ಮುಂಬಯಿಯಲ್ಲಿ ತಮ್ಮ ಜಾತಿಯವರ ಸಮಾಜದಲ್ಲಿ ಗಳಿಸಿದ ಅವಾಸ್ತವವಾದ ಪ್ರತಿಷ್ಠೆ, ಅದನ್ನು ಗಳಿಸಲು ಅವನು ನಡೆಸಿದ ಪ್ರಚಂಡ ಹೋರಾಟ ಇವೆಲ್ಲವನ್ನು ಚೆನ್ನಾಗಿಬಲ್ಲ ನಾಗಪ್ಪನಿಗೆ ಝುಗ್ಗನೆ ಹೊಳೆದು ಹೋದಂತಾಯಿತು: ಇದನ್ನೆಲ್ಲ ಅನುಭೋಗಿಸುವಾಗ ಶ್ರೀನಿವಾಸನನ್ನು ತನಗೆ ಗೊತ್ತಾಗದ ರೀತಿಯಲ್ಲಿ, ನನ್ನ ಬಗೆಗಿನ ಭಯ ಕಾಡುತ್ತಿರಬೇಕು. ಶ್ರೀನಿವಾಸ ನನ್ನ ಬಗ್ಗೆ ತಳೆಯುತ್ತ ಬಂದ ದ್ವೇಷ ಆಳವಾದ ಭಯದ ಮೇಲೆ ನಿಂತಿರಬೇಕು. ನೇತ್ರಾವತಿಯ ಆತ್ಮಹತ್ಯೆಗೆ ಕಾರಣವಾದ ಆ ದುರ್ಘಟನೆ, ಕೊರೋನರ್ಸ್ ಕೋರ್ಟಿನಲ್ಲಿ ನಾನಿತ್ತ ಸಾಕ್ಷಿ: ಶ್ರೀನಿವಾಸನ ಭಯವನ್ನು ನಾನು ಮೊದಲಿನಿಂದಲೂ ಬಲ್ಲೆ. ನಾನು ಬರೆದ ಕತೆಗಳನ್ನು ಚಾಚೂ ತಪ್ಪದೆ ಯಾಕೆ ಓದುತ್ತಾನೆ ಎಂಬುದನ್ನೂ ಬಲ್ಲೆ...ಫಿರೋಜ್ ನನ್ನ ಬಗ್ಗೆ ವ್ಯಕ್ತಪಡಿಸುತ್ತ ಬಂದ ದ್ವೇಷದ ಅಡಿಗೂ ಇಂತಹ ಭಯವೇ ಅಡಗಿರಬಹುದೆ? ಎಂತಹ ಭಯ? ಫಿರೋಜನಿಗೆ ನಮ್ಮ ಕಂಪನಿಯ ಟೆಕ್ನಾಲಾಜಿಯನ್ನು ಕುರಿತಿರುವ ನಂಬಲಾಗದಷ್ಟು ಅಜ್ಞಾನ ನನಗೊಬ್ಬನಿಗೇ ಗೊತ್ತು. ಆದರೂ ಹಲವು ವರ್ಷ ಈತ ಟೆಕ್ನಿಕಲ್ ಡ್ಯಾರೆಕ್ಟರ್ ! ಈಗ ಡೆಪ್ಯೂಟೀ ಮ್ಯಾನೇಜಿಂಗ್ ಡ್ಯಾರೆಕ್ಟರ್! ಧಡ್ಡ ಎರಡೂ ಮಗ. ಮೇಲಕ್ಕೇರಿದ್ದು ಬರೇ

ರಾಜಕಾರಣಿಯ ಧೂರ್ತ ಕಪಟದಿಂದ. ಆದರೆ ತಮ್ಮತಮ್ಮ ಭಯಗಳನ್ನು ಜೋಪಾನವಾಗಿ ಕಾಪಾಡಿಕೊಂಡು ಬಂದ ಈ ಇಬ್ಬರು ಧೂರ್ತರು ಒಂದೆಡೆಯಲ್ಲಿ ಬಂದದ್ದು ಹೇಗೆ? ನಾನು ಅಮೇರಿಕೆಗೆ ಹೋಗುವ ಕನಸು ನನಸಾಗಲಿದ್ದ ಮುಹೂರ್ತದಲ್ಲೇ ಹೇಗೆ? ಅಥವಾ ಮುಹೂರ್ತವೇ ಈ ಇಬ್ಬರೂ ಒಂದೂ ಮಕ್ಕಳ ಗುಪ್ತಸಮಾಗಮಕ್ಕೆ ಸ್ಫೂರ್ತಿಯಾಗಿರಬಹುದೆ? ನಾಗಪ್ಪನಿಗೆ ಇದೆಲ್ಲ ಒಗಟಾಗಿಯೇ ಉಳಿಯಿತು.

ಆದರೆ ಇಬ್ಬರನ್ನೂ ಹೋರುವ ತನ್ನ ನಿರ್ಧಾರದ ಬಗ್ಗೆ ಮಾತ್ರ ಯಾವ ಸಂಶಯವೂ ಉಳಿಯಲಿಲ್ಲ. ಆ ನಿರ್ಧಾರ ಅವನ ಆಗಿನ ಮೂಡಿನಲ್ಲಿ ಸ್ಪಷ್ಟವಾಗಿ ಕಾಣಿಸಿಕೊಂಡಿತು. ಅದು ಹುಟ್ಟಿಸಿದ ಹೊಸ ಧೈರ್ಯದಿಂದಲೇ ಊಟಕ್ಕೆ ಕೂತಾಗ ನಾಳೆ ಬೆಳಿಗ್ಗೆ ನಾಸ್ತಾ ಮುಗಿಸಿದ್ದೆ ಖೇತವಾಡಿಯ ಮನೆಗೆ ಹೋಗುವ ತನ್ನ ನಿಶ್ಚಯವನ್ನು ಶ್ರೀನಿವಾಸನಿಗೆ ತಿಳಿಸಿದ. ಅವನ ಅಪ್ಪಣೆ ಪಡೆದು ಕಂಪನಿಯ ಪರ್ಸೊನೆಲ್ ಮ್ಯಾನೇಜರ ನೋಶೀರ್ ಖಂಬಾಟಾನಿಗೆ ಅವನ ಮನೆಯ ನಂಬರಿಗೆ ಫೋನ್ ಮಾಡಿ, ಗಟ್ಟಿಯಾದ ಆತ್ಮವಿಶ್ವಾಸ ತುಂಬಿದ ದನಿಯಲ್ಲಿ ಹೈದ್ರಾಬಾದಿಗೆ ಹೋಗಲು ತಾನೂ ಸಿದ್ಧನಾಗಿದ್ದೇನೆಂದೂ. ವಿಮಾನದ ಟಿಕೆಟ್ಟನ್ನು ಖೇತವಾಡಿಯ ವಿಳಾಸಕ್ಕೇ ಕಳಿಸಬೇಕೆಂದೂ ತಿಳಿಸಿದ. 'ನೀವು ನನ್ನ ಸಲುವಾಗಿ ಮಾಡುತ್ತಿದ್ದುದರ ಬಗ್ಗೆ ತುಂಬ ಆಭಾರಿಯಾಗಿದ್ದೇನೆ,' ಎಂದಾಗ ಖಂಬಾಟಾ ದಡಬಡಿಸಿದ್ದು ಕೇಳಿಸಿ, "It is allright Naushir. I look forward to this trip to Hyderabad. I will enoy it." ಎಂದು ಹೇಳಿ ಟೆಲಿಫೋನ್ ಕೆಳಗಿಟ್ಟ. ತನ್ನ ದನಿಯಲ್ಲಿಯ ವ್ಯಂಗ್ಯಕ್ಕೆ ತಾನೇ ಖುಶಿಪಟ್ಟ.

ಮರುದಿನ ಬೆಳಗ್ಗೆ, ಟ್ಯಾಕ್ಸಿಯಲ್ಲಿ ಕುಳಿತು ಖೇತವಾಡಿಯ ಹಾದಿ ಹಿಡಿದಾಗ ಲಕ್ಷ್ಯಕ್ಕೆ ಬಂದಿತು, ಬೀಳ್ಕೊಳ್ಳುವಾಗ ಶ್ರೀನಿವಾಸನ ಹೆಂಡತಿಗೆ 'ಬರುತ್ತೇನೆ' ಎಂದು ಹೇಳಿದ್ದೇ ಅವಳನ್ನು ಮಾತನಾಡಿಸಿದ ಮೊದಲ ಸಂದರ್ಭವಾಗಿತ್ತು ಎಂಬುದು. ಆಮೇಲೆ, ವಿಷಾದ ತುಂಬಿದ ಅವಳ ಕಣ್ಣುಗಳು; ಗಲ್ಲ ಚಿವುಟಿದಾಗ ಕಣ್ಣುಗಳಲ್ಲಿ ಹೊಳಪು ಮಿಂಚಿಸುತ್ತ ನಕ್ಕ ಚೇತಳ ನಗು; ಕೊನೆವರೆಗೂ ಬರೇ ನೋಡುತ್ತಲೇ ನಿಂತುಬಿಟ್ಟ ಅಚ್ಯುತನ ನಿಗೂಢ ಮೌನ ನೆನಪಿನಲ್ಲಿ ಮೂಡಿ ನಿಂತು ಬಹಳ ಅಂತರದವರೆಗೆ ಹಿಂಬಾಲಿಸಿದವು.

ಖೇತವಾಡಿಯನ್ನು ತಲುಪಿದ ಮೇಲೆ ಟ್ಯಾಕ್ಸಿಯವನನ್ನು ಬೀಳ್ಕೊಡುವಾಗ, ಮನೆಯಿಂದ ಖೇಮರಾಜಭವನದ ಮೂರು ಮಜಲುಗಳ ಕಟ್ಟಿಗೆಯ ಪಾವಟಿಗೆಗಳನ್ನು ಏರಿ ಹೋಗುವಾಗ; ಸಂಧಿಸಿದ ನೆರೆಹೊರೆಯವರನ್ನು ಕಣ್ಣುಗಳಿಂದಲೇ ವಂದಿಸುವಾಗ ತನ್ನೊಳಗೆ ಸ್ಥಾಯಿಯಾಗಿ ನಿಂತ ಆತ್ಮವಿಶ್ವಾಸದಿಂದ ತಾನೇ ಪುಳಕಿತನಾದ. ಅತ್ಯಂತ ಖುಶಿಯಿಂದ ಮನೆಯ ಬೀಗ ತೆರೆದು, ಕದ ದೂಡಿ, ಒಳಗೆ ಕಾಲಿರಿಸಿದ.

## ಅಧ್ಯಾಯ ಒಂದು

ಮನೆ ಹೊಕ್ಕವನೇ, ನಾಗಪ್ಪ, ಅದನ್ನು ಇದೇ ಮೊದಲೊಮ್ಮೆ ನೋಡುತ್ತಿರುವವನ ಹಾಗೆ ಹೊಚ್ಚ ಹೊಸ ಆಸ್ಥೆಯಿಂದ, ಪ್ರೀತಿಯಿಂದ ನೋಡಿದ. ರಸ್ತೆಯ ಇನ್ನೊಂದು ಮಗ್ಗಲಲ್ಲಿ ನಿಂತ ಚಾಳಿನಲ್ಲಿಯ ಜನರ ಕಡೆಗೆ ಒಮ್ಮೆ ದೃಷ್ಟಿಹಾಯಿಸಿದ. ಅಪೂರ್ವ ಸಂಗತಿಯೊಂದು ತನ್ನ ಹೊಸೆ ಮೂಡಿಗೆ ಕಾರಣವಾಗಿದೆಯೆಂಬ ಅಸ್ಪಷ್ಟ ಅರಿವು ಇದ್ದೂ ಆ ಕಾರಣದ ಬಗ್ಗೆ ವಿಚಾರಮಾಡುವ ಕುತೂಹಲವನ್ನು ಹತ್ತಿಕ್ಕಿ ಕೆಲಹೊತ್ತು ಕೋಣೆಯಲ್ಲಿಯ ಪುಸ್ತಕಗಳ ಮೇಲೆ ದೃಷ್ಟಿ ನೆಟ್ಟು ಕುಳಿತ. ಮನಸ್ಸು ಯಾವುದೇ ಒಂದು ನಿರ್ದಿಷ್ಟ ಸಂಗತಿಯ ಬಗ್ಗೆ ವಿಚಾರಮಾಡಲು ನಿರಾಕರಿಸುತ್ತ ಸುನ್ನವಾಗಿತ್ತು. ನಡುವೆಯೇ ಏನೋ ಹೊಳೆದಂತಾಗಿ, ಕೂತಲ್ಲಿಂದ ಎದ್ದು ಸೂಟ್‌ಕೇಸಿನೊಳಗಿಂದ ಟಿಪ್ಪಣಿಗಳ ವಹಿಯನ್ನು ಹೊರತೆಗೆದ: ಹೌದು. ಹೈದ್ರಾಬಾದಿಗೆ ಹೋಗುವ ಮೊದಲು ಅವಕಾಶವಿದ್ದ ಈ ಕೆಲವು ದಿನಗಳಲ್ಲಿ ಬರೆದು ತೆಗೆಯಬೇಕು: ಫಿರೋಜ್ ಹಾಗೂ ಶ್ರೀನಿವಾಸ ಕೂಡಿ ಹೂಡಿದ ಈ ಸಂಚಿನ ಒಳ ಮರ್ಮವನ್ನು; ಗೂಢಪ್ರೇರಣೆಯನ್ನು ಕುರಿತು ಹೊಳೆದದ್ದನೆಲ್ಲ ಟಿಪ್ಪಣೆ ಮಾಡಬೇಕು. ಯಾಕಂದರೆ, ಈ ಒಳಗುಟ್ಟನ್ನು ಅರಿತಾಗಲೇ ನಾನು ಇದನ್ನೆಲ್ಲ ಇದಿರಿಸುವ ಹಾದಿ ಯಾವುದು? ಕೈಕೊಳ್ಳಬೇಕಾದ ಉಪಾಯಗಳೇನು? ಎನ್ನುವದು ನಿಚ್ಚಳವಾದೀತು. ಮೊನ್ನೆ ಒಂದು ಪ್ರಕ್ಷುಬ್ಧ ಗಳಿಗೆಯಲ್ಲಿ ಹುಟ್ಟಿದ ಅಸ್ಪಷ್ಟ ಗುಮಾನಿ ಈಗ ಮೆಲ್ಲಗೆ ಹರಳುಗಟ್ಟುತ್ತಿದ್ದ ಅನ್ನಿಸಿಕೆ: ಫಿರೋಜ್, ಶ್ರೀನಿವಾಸ ಇವರಿಬ್ಬರೂ ನನಗೆ ಯಾವದೋ ಕಾರಣಕ್ಕಾಗಿ ಹೆದರಿಕೊಂಡಿದ್ದಾರೆ ಎಂಬುದು ಸುಳ್ಳಲ್ಲ... ತನ್ನ ಭಯವನ್ನು ಮರೆತು ಇವರಿಬ್ಬರ ಭಯದ ಮೂಲವನ್ನು ಅರಿಯುವ ಕುತೂಹಲ ಸುಖದಾಯಕವೆನಿಸಿತು. ನಾಗಪ್ಪನಿಗೆ: ನಾಳೆ ಬೆಳಿಗ್ಗೆ ಎದ್ದ ಕೂಡಲೇ ಬರೆಯಲು ಕೂಡ್ರಬೇಕು. ನಸುಕಿನ ಮಬ್ಬು ಹಾಗೂ ತಂಪು ಎರಡೂ ಬರವಣಿಗೆಗೆ ಸ್ಫೂರ್ತಿನೀಡುವಂತವುಗಳು. ರಾತ್ರಿ, ರಾಣಿಯನ್ನು ಕಂಡು ಬರಬೇಕು ಅವಳನ್ನು ಕಾಣದೇ ಈಗ ಎಂಟು ದಿನಗಳ ಮೇಲೆ ಆಯಿತು. ಎಷ್ಟೊಂದು ನೊಂದುಕೊಂಡಿದ್ದಾಳೋ ಹುಡುಗಿ...ರಾಣಿಯ ನೆನಪಿನಿಂದ ಮೈ ಬೆಚ್ಚಗಾಗುತ್ತಿದ್ದಂತೆನಿಸಿತು: ಚಪ್ಪಟೆ ಮೂಗು, ನಗುವಾಗ ಕುಳಿ ಬೀಳುತ್ತಿದ್ದ

ಗಲ್ಲಗಳು (ಚೇತನಾಳ ಗಲ್ಲಗಳಲ್ಲೂ ಕುಳಿಗಳಲ್ಲವೇ)! ಸಪೂರಾದ ತುಟಿಗಳಿದ್ದ ಸಣ್ಣ ಬಾಯಿ, ಮೊಲೆ, ತೊಡೆಗಳು ಮಾತ್ರ ಹುಚ್ಚು ಹಿಡಿಸುವಂತಹವುಗಳು. ಎಲ್ಲರನ್ನು ಬಿಟ್ಟು ಈ ನೇಪಾಳೀ ಹೆಣ್ಣಿನ ಮೋಹಕ್ಕೆ ಬಲಿಯಾದದ್ದರ ಕಾರಣ ಮಾತ್ರ ಬೇರೆಯೇ ಆಗಿತ್ತು: ಗೊತ್ತಿದ್ದೂ ಸ್ಪಷ್ಟವಾಗಿ ಪ್ರಜ್ಞೆಯ ನೆಲೆಯಲ್ಲಿ ಒಪ್ಪಿಕೊಂಡಿರಲಿಲ್ಲ, ಅಷ್ಟೇ: ತನ್ನ ಕಾಣೆಯಾದ ತಂಗಿ ಹೀಗೇ ಎಲ್ಲಾದರೂ ವೇಶ್ಯೆಯಾಗಿ ಬದುಕುತ್ತಿರಬಹುದೇ ಎನ್ನುವ ಅನುಮಾನ ದಿನ ಹೋದಂತೆ ಒಂದು ರೋಗದ ಲಕ್ಷಣ ತಳೆದು ಕಾಡಹತ್ತಿತ್ತು. ನಾಗಪ್ಪ ಅಸ್ವಸ್ಥನಾದ. ಕುರ್ಚಿಯಿಂದ ಎದ್ದು ರಸ್ತೆಯ ಬದಿಯ ಸರಳುಗಳಿಲ್ಲದ ಬೋಳುಕಿಡಕಿಗೆ ಬಂದು ನಿಂತ. ಮೂರನೇ ಮಜಲೆಯ ಆ ಕಿಡಕಿಯಿಂದ ಕೆಳಗಿನ ರಸ್ತೆಯನ್ನು ನೋಡುತ್ತಿರುವಾಗ ದೂರದ ನೆನಪೊಂದು ಮನಸ್ಸಿನ ಆಳದಲ್ಲೆಲ್ಲೋ ಮೈ ಕೊಡವತ್ತಿದ್ದದ್ದು ಅರಿವಿಗೆ ಬರುವಷ್ಟರಲ್ಲಿ ಮೂಲೆಯ ಮನೆಯ ಅರ್ಜುನ್ ರಾವ್ ಅಗಳಿ ಹಾಕಿರದ ಕದಗಳನ್ನು ದೂಡಿ ಒಳಗೆ ಬಂದ.

ಜ್ಯೋತಿಷ್ಯಚೂಡಾಮಣಿ ಮಾಪಣಕರರ ವಾರಭವಿಷ್ಯವೊಂದರಿಂದಾಗಿಯೇ ಸಾವಿರಾರು ಪ್ರತಿಗಳು ಒಂದೇ ದಿನದಲ್ಲಿ ಮಾರಿಹೋಗುವ 'ವಜ್ರಧಾರಿ' ವಾರಪತ್ರಿಕೆಯ ಸಂಪಾದಕನಾದ ಇವನು ತಾನೊಬ್ಬ ದೊಡ್ಡ ಬುದ್ಧಿಜೀವಿ ಎಂದು ತಿಳಕೊಂಡಿದ್ದಾನೆ. ಭೆಟ್ಟಿಯಾದಾಗೊಮ್ಮೆ ಕಮ್ಯುನಿಜಮ್, ಎಂ. ಎನ್. ರಾಯ್ ಅವರ ರೆಡಿಕಲ್ ಹ್ಯುಮೆನಿಜಮ್ ಇವೆಲ್ಲವುಗಳ ಬಗ್ಗೆ ನಿಲ್ಲಿಸದೇ ಮಾತನಾಡುವ ಈತ ಖಟ್ಟಾ ಹಿಂದೂಮಹಾಸಭಾವಾದಿ. ಸಮಾಜದ ಬಗ್ಗೆ ಇವನು ಕಳಕಳಿಯನ್ನು ವ್ಯಕ್ತಪಡಿಸುವಾಗಿನ ಶಬ್ದಪ್ರಭುತ್ವ ದಂಗುಪಡಿಸುವಂಥದ್ದು. ಇವನೊಡನೆ ಮಾತನಾಡುವ ಮೂಡಿನಲ್ಲಿರಲಿಲ್ಲ, ನಾಗಪ್ಪ. ಈಗಾಗಲೇ ಹತ್ತುಗಂಟೆ. ಇನ್ನೂ ಹೇಗೆ ಪ್ರೆಸ್ಸಿಗೆ ಹೋಗಿಲ್ಲವೆಂದು ಕೇಳಿದಾಗ ಮನೆಯಲ್ಲಿಂದು ಸತ್ಯನಾರಾಯಣಪೂಜೆ, ಆ ಕಾರಣ ಒಂದು ದಿನದ ರಜೆ ಪಡೆದಿದ್ದೇನೆ ಎಂದ. ಬೇರೆ ಯಾರಲ್ಲೂ ಬರುತ್ತೇನೆಂದು ಈಗಾಗಲೇ ಹೇಳಿರದಿದ್ದರೆ ತಮ್ಮಲ್ಲೇ ಊಟಕ್ಕೆ ಬರಬೇಕೆಂದು ಕೇಳಿಕೊಂಡ. ನಾಗಪ್ಪನಿಗೆ ಒಳಗೊಳಗೆ ನಗು, ಊಟದ ಆಮಂತ್ರಣವನ್ನು ಸ್ವೀಕರಿಸುವಾಗ ತುಟಿಗಳ ಮೂಲೆಯಲ್ಲಿ ಮೂಡಿದ ತುಂಟತನದ ಮುಗುಳುನಗೆಯನ್ನು ಕಂಡವನ ಹಾಗೆ, ತನಗೆ ಇದಾವುದರಲ್ಲೂ

ವಿಶ್ವಾಸವಿಲ್ಲ. ಆದರೂ ಹೆಂಡತಿಯ ಮನಸ್ಸು ನೋಯಿಸುವ ಮನಸ್ಸಿಲ್ಲ ಎನ್ನುತ್ತ ಹಲ್ಲುಕಿಸಿದ. ನಾಗಪ್ಪನಿಗೆ ಮೋಜೆನಿಸಿತು. ಅರ್ಜುನ್ ರಾವ್ ಬರಿಯ ಔತಣವೀಯಲಷ್ಟೇ ಬಂದಂತೆ ತೋರಲಿಲ್ಲ. ಕುರ್ಚಿಯೊಂದರಲ್ಲಿ ಕುಂಡೆಯೂರುತ್ತ, ಸದ್ಯ ರಜೆಯ ಮೇಲೆ ಇದ್ದಂತಿದೆಯಲ್ಲವೆ? ಎಂದು ಅತ್ಯಂತ ಸಹಜವಾದ ಕುತೂಹಲದಿಂದ ಕೇಳಿದಂತಿದ್ದ ಪ್ರಶ್ನೆಯಲ್ಲಿಯ ಅಧಿಕಪ್ರಸಂಗ ನಾಗಪ್ಪನನ್ನು ತಟ್ಟದೇ ಹೋಗಲಿಲ್ಲ. ಆದರೂ ತಲೆಕೆಡಿಸಿಕೊಳ್ಳದೇ, ಹೌದು. ಒಂದು ತಿಂಗಳ ರಜೆ ಪಡೆದದ್ದು ನಿಜ ಎನ್ನುತ್ತಿರುವಾಗಲೇ, ಕಾದಂಬರಿಯನ್ನೂ ಬರೆಯಲು ಹಿಡಿದಿದ್ದೀರಂತೆ ಎಂದಾಗ ನಾಗಪ್ಪ ಚಕಿತನಾಗಿ ಕಣ್ಣರಳಿಸಿದ್ದನ್ನು ನೋಡಿ, ಶ್ರೀನಿವಾಸರಾವ್ ಭೆಟ್ಟಿಯಾಗಿದ್ದ ಮೊನ್ನೆ ಪ್ರೆಸ್ಸಿನಲ್ಲಿ. ನೀವು ಅವನ ಮನೆಯಲ್ಲೇ ಕೂತು ಕಾದಂಬರಿ ಬರೆಯುತ್ತೀದ್ದೀರಂತೆ ಎಂದಾಗ ಮಾತ್ರ ನಾಗಪ್ಪನಿಗೆ ತನ್ನ ಅಸಮಾಧಾನವನ್ನು ತಡೆಯುವುದಾಗಲಿಲ್ಲ; ಹೌದು. ಹೋದ ನಾಲ್ಕು ದಿನ ಅವನಲ್ಲೇ ಇದ್ದೆ. ಈಗ ಇಲ್ಲೇ ಕೂತು ಬರೆಯಬೇಕೆಂದುಕೊಂಡಿದ್ದೇನೆ. ನಿಮಗೆ ಕನ್ನಡ ಬರುತ್ತಿದ್ದರೆ ಓದಿತೋರಿಸುತ್ತಿದ್ದೆ. ಅಂದರೆ ಅದರಲ್ಲಿ ಬರುವ ಪಾತ್ರಗಳ ಗುರುತು ನಿಮಗೆ ಸಿಗಬಹುದಿತ್ತು. ಅದರಲ್ಲಿ ನೀವೂ ಬರುತ್ತೀರಿ ಎಂಬುದನ್ನು ಮೊದಲೇ ಹೇಳಿಬಿಡುತ್ತೇನೆ. ಯಾಕೆಂದರೆ ಕಾದಂಬರಿಗೆ ಮೂಲ ಪ್ರಚೋದನೆಯಾದ ಘಟನೆ: ಇದೇ ಮನೆಯಲ್ಲಿ ನಡೆದ ನೇತ್ರಾವತಿಯ ಆತ್ಮಘಾತ. ಯಾವ ಒಂದು ಪಾತ್ರದ ಹೆಸರನ್ನೂ ಬದಲಿಸದೇ ಎಲ್ಲವನ್ನೂ ನಡೆದಂತೆಯೇ ಬರೆಯುತ್ತಿದ್ದದ್ದು ಕಾದಂಬರಿಯ ವೈಶಿಷ್ಟ್ಯ. ಶ್ರೀನಿವಾಸ, ಶ್ರೀನಿವಾಸ ಎಂದೇ ಬಂದಿದ್ದಾನೆ. ಅರ್ಜುನರಾವ್ ಅರ್ಜುನರಾವ್ ಎಂದೇ—ಖೇತವಾಡಿಯ ಈ ಖೇಮರಾಜಭವನದ ಮೂರನೇ ಮಜಲೆಯ ಮೇಲಿನ ಮನೆ ನಂಬರು ೫೩ರಲ್ಲಿ ವಾಸಿಸುವ ಸದ್ಗೃಹಸ್ಥರಾಗಿ, 'ವಜ್ರಧಾರಿ' ಪತ್ರಿಕೆಯ ಸಂಪಾದಕರಾಗಿ ನೀವು ಅದರಲ್ಲಿ ಮೆರೆಯುತ್ತೀರಿ. ಯಥಾರ್ಥನಿರೂಪಣೆಯಲ್ಲಿ ಇದೊಂದು ಹೊಸ ಪ್ರಯೋಗ. ಇದನ್ನು ಬರೆಯಲು ಶ್ರೀನಿವಾಸನ ಮನೆ ಸರಿಯಾದ ಜಾಗವಲ್ಲ ಎನ್ನುವದು ಅನುಭವಕ್ಕೆ ಬಂದದ್ದರಿಂದಲೇ ಇಲ್ಲಿಗೆ ತಿರುಗಿ ಬಂದೆ ಎಂದಾಗಿನ ತನ್ನ ಮಾತಿನಲ್ಲಿಯ ನಿಷ್ಠುರತೆಯ ಬಗ್ಗೆ, ಅದು ಅರ್ಜುನ್‌ರಾವನ ಮೇಲೆ ಮಾಡುತ್ತಿದ್ದ ಪರಿಣಾಮದ ಬಗ್ಗೆ ತಾನೇ ಖುಶಿಪಟ್ಟ.

ಕಾದಂಬರಿಯಲ್ಲಿ ತನ್ನ ಪಾತ್ರವೂ ಇದೆ ಎಂದು ಕೇಳಿದ ಅರ್ಜುನರಾವ್ ತಬ್ಬಿಬ್ಬಾದ. ಕುರಿಯ ಪೆದ್ದುತನದಿಂದ ಬೇ ಎಂದ. ಹಗ್ಗೋಡಗನ ಹಾಗೆ ಖೆಕ್ ಎಂದು ಹಲ್ಲುಕಿಸಿದ: "ಎಲ್ಲರನ್ನು ಬಿಟ್ಟು ನನ್ನನ್ನು ಯಾಕೆ? ಅಂತೂ ಇಪ್ಪತ್ತು ವರ್ಷಗಳ ಹಿಂದಿನ ಆ ದುರ್ಘಟನೆಯನ್ನು ನೀವು ಮರೆತಿಲ್ಲವೆಂದಾಯಿತು. ನಾನಾದರೂ ಎಲ್ಲಿ ಮರೆತಿದ್ದೇನೆ. ಶ್ರೀನಿವಾಸರಾವ್ ಗಟ್ಟಿ ಕುಳ ನೋಡಿ. ಎಲ್ಲವನ್ನೂ ಸುರಳೀತ ಮರೆತು ಮದುವೆಯಾಗಿ ಮಕ್ಕಳನ್ನು ಪಡೆದು ಸುಖರೂಪವಾಗಿ ಇದ್ದಾನೆ. ಲಕ್ಷಗಟ್ಟಲೆ ಹಣ ಮಾಡಿದ್ದಾನಂತೆ. ಈಗ ಮ್ಯುನಿಸಿಪಲ್ ಇಲೆಕ್ಷನ್ನಿಗೆ ನಿಲ್ಲುತ್ತಾನಂತೆ. ಅದಕ್ಕೇ ಬಂದಿದ್ದ ಪೋಸ್ಟರುಗಳನ್ನು, ಅಪೀಲುಗಳನ್ನು ನಮ್ಮಲ್ಲಿ ಛಾಪಿಸಲು. ಸ್ವಂತದ ಪ್ರೆಸ್ಸು ಇದ್ದರೂ ಇಂಥದ್ದನ್ನು ಛಾಪಿಸಲು ವ್ಯವಧಾನ ಇಲ್ಲವಂತೆ. ದಂಧೆ ಅಷ್ಟೊಂದು ಭರಭರಾಟಿಯಿಂದ ನಡೆದಿದೆಯಂತೆ. ನೋಡಿ ಒಬ್ಬೊಬ್ಬರ ಭಾಗ್ಯೋದಯದ ರೀತಿಯನ್ನು. ಇದೇ ಮನೆಯಲ್ಲಿ ನಿಮ್ಮ ಜೊತೆಯಲ್ಲಿರುವಾಗ ಚರ್ನೀರೋಡಿನ ಸರ್ಕಾರಿ ಛಾಪಖಾನೆಯಲ್ಲಿ ಒಬ್ಬ ಕ್ಲಾರ್ಕ್. ಈಗ? ...ಏಕೋ, ಇದ್ದಕ್ಕಿದ್ದಂತೆ, ಬೆಳಿಗ್ಗೆ ಇಲ್ಲಿಗೆ ಬರುವಾಗ ಇದ್ದ ತನಗೇ ಸಂಪೂರ್ಣ ಅರ್ಥವಾಗಿರದ, ಪ್ರಚಂಡ ಆತ್ಮವಿಶ್ವಾಸದ ಮೂಡು ಈಗ ಅರ್ಜುನ್‌ರಾವನ ಮಾತು ಕೇಳುತ್ತಿರುವಾಗ ಸಡಿಲವಾಗುತ್ತಿದೆ ಎಂಬ ಅನ್ನಿಸಿಕೆಯಿಂದ ಅಸ್ವಸ್ಥಗೊಂಡ; "ಈವತ್ತು ನಿಮ್ಮಲ್ಲಿ ಪೂಜೆಯೆಂದ ಮೇಲೆ ನಿಮಗೆ ಮನೆಯಲ್ಲಿ ಸಾಕಷ್ಟು ಕೆಲಸಗಳಿರಬೇಕು..."

ತನಗೀಗ ಸ್ನಾನಗೀನ ಮುಗಿಸಿ ಹೊರಗೆ ಹೋಗಬೇಕಾಗಿದೆ ಎಂದು ಹೇಳಿ ಅರ್ಜುನ್‌ರಾವನನ್ನು ಅಲ್ಲಿಂದ ಓಡಿಸುವ ಯೋಜನೆ ನಾಗಪ್ಪನದಾಗಿತ್ತು. ತಡ ಅರ್ಜುನ್‌ರಾವ್ ಅವನ ಮಾತನ್ನು ಪೂರ್ತಿಯಾಗಲು ಬಿಟ್ಟರಲ್ಲವೆ!— "ಛೇ ಛೇ ಛೇ. ನನ್ನ ಇಬ್ಬರು ತಮ್ಮಂದಿರೂ ಅವರ ಹೆಂಡಂದಿರೂ ಬಂದಿದ್ದಾರೆ. ಪುರೋಹಿತರಂತೂ ಹನ್ನೆರಡರ ಮೊದಲು ಬರುವದಿಲ್ಲ. ನನಗೇನು ಕೆಲಸ? ಬೆಳಿಗ್ಗೆ ಎದ್ದಕೂಡಲೇ ಯಾರಾದರೂ ಹರಟೆಹೊಡೆಯಲು ಸಿಕ್ಕರೆ ಎಷ್ಟು ಚೆನ್ನಾಗಿತ್ತು ಅನಿಸಿತ್ತು. ನೀವು ಸಿಕ್ಕಿರಿ. ಐನ ಪೂಜೆಯ ದಿನವೇ ವಾಪಸು ಬಂದಿರಿ. ನಿಮ್ಮ ನಾಸ್ತಾ ಆಗಿರದಿದ್ದರೆ..." ಶ್ರೀನಿವಾಸನಲ್ಲೇ ಮುಗಿಸಿ ಬಂದಿದೇನೆ ಎಂದು ನಾಗಪ್ಪ. ಹೇಳಿದನಷ್ಟೇ: "ಹಾಗಾದರೆ ಒಂದೊಂದು ಕಪ್ಪು ಚಹ ತರಿಸುತ್ತೇನೆ. ನಿಮ್ಮ ನೆಪದಿಂದ ನನಗೂ ಸಿಕ್ಕೀತು," ಎಂದು ಅಲ್ಲಿಂದಲೇ ತನ್ನ ಮಗಳ ಹೆಸರನ್ನು ಹಿಡಿದು

ಕೂಗಿದಾಗ ಬಾಗಿಲಲ್ಲಿ ಬಂದು ನಿಂತ ತಮ್ಮನ ಹೆಂಡತಿಗೆ ಚಹ ಕಳಿಸಿಕೊಡುವಂತೆ ಕೇಳಿಕೊಂಡ. ಬಾಗಿಲಲ್ಲಿ ನಿಂತು ತನ್ನತ್ತಲೇ ನೋಡುತ್ತಿದ್ದಾಗ ಅವಳ ಮೋರೆಯ ಮೇಲೆ ಮೂಡಿದ ಭಾವಕ್ಕೆ ಅರ್ಥ ಹಚ್ಚುವ ಮನಸ್ಸಾಗಲಿಲ್ಲ ನಾಗಪ್ಪನಿಗೆ. ತುದಿಬುಡವಿಲ್ಲದೆ ಮಾತನಾಡುವ ಅರ್ಜುನ್‌ರಾವನೊಡನೆ ಹರಟುವ ಉತ್ಸಾಹವಂತೂ ಅವನಿಗೆ ಎಳ್ಳಷ್ಟೂ ಇರಲಿಲ್ಲ. ಬರಿಯ ಬಾಯ್ತಿಂಡಿಯನ್ನು ತೀರಿಸಲೆಂದೇ ಮಾತನಾಡುವ ಈ ಸದ್ಗೃಹಸ್ಥನ ಆಸ್ಥೆಗಳೆಲ್ಲ ಮೇಲು ಮೇಲಿನವು. ಆಳಕ್ಕೆ ಇಳಿದವನೇ ಅಲ್ಲ, ಈ ಮೂರೂ ಮಗ! ಆದ್ದರಿಂದಲೇ ನಿರುಪದ್ರವಿ. ಯಾರೊಬ್ಬರ ಒಳಿತಿಗಾಗಿ ಶ್ರಮಿಸಿರಲಿಕ್ಕಿಲ್ಲ. ಆದರೆ ಕೆಡುಕನ್ನೂ ಇಚ್ಛಿಸಿದವನಲ್ಲ. ಮನಸ್ಸಿಲ್ಲದ ಮನಸ್ಸಿನಿಂದ, ಅದೇ ಬಂದು ತಲುಪಿದ ಬಿಸಿಬಿಸಿ ಚಹಕ್ಕೆ ತುಟಿ ಹಚ್ಚುತ್ತ ಅರ್ಜುನ್‌ರಾವನೊಡನೆ ಹರಟೆಹೊಡೆಯುವ ವಿಧಿಗೆ ತಲೆ ಒಡ್ಡಲು ಸಿದ್ಧನಾದ. ಕೆಲವೇ ಕ್ಷಣಗಳ ಮೊದಲು ನಿಷ್ಕಾರಣವಾಗಿ ತಲೆದೋರಿದ ಅಸ್ವಸ್ಥತೆ ಮಾಯವಾಗಿ, ಬಿಗಿಗೊಂಡ ನರಗಳು ಸಡಿಲಾದಾಗ ಜೀವಕ್ಕೆ ಹಿತವೆನಿಸಹತ್ತಿತು. ಬಹುಶಃ ತನ್ನ ನರಗಳ ಆರೋಗ್ಯಕ್ಕೆ ಇಂಥ ಸಹವಾಸವೂ ಅಗತ್ಯವಾದದ್ದೇನೋ ಅನ್ನಿಸಿತು.

ಕೊನೆಗೊಮ್ಮೆ, ಅರ್ಜುನ್‌ರಾವ ತನ್ನ ಮಾತಿನ ತಲಬನ್ನು ತೃಪ್ತಪಡಿಸಿ ಹೊರಟು ಹೋದ ಮೇಲೆ ಬಟ್ಟೆ ಬದಲಿಸಿ ಬರೆಯಲು ಕೂತ. ವಹಿಯನ್ನು ತೆರೆಯುತ್ತಿರುವಾಗ ಇವರೆಲ್ಲ ಇದನ್ನು ನಾನು ಬರೆಯುತ್ತಿದ್ದ ಕಾದಂಬರಿಯೆಂದು ತಿಳಿದಿದ್ದಾರೆ ಎನ್ನುವದು ಲಕ್ಷ್ಯಕ್ಕೆ ಬಂದು, 'ಎಲೈ ಒಂಬತ್ತಕ್ಕೆ ಹುಟ್ಟಿದ ನೀನೇ,' ಎಂದು ಸಾಂಖ್ಯ ಭಾಷೆಯಲ್ಲಿ ವಹಿಯನ್ನೇ ಬೈದು, ನಕ್ಕ.

"ಟಿಪ್ಪಣೆ ಹದಿಮೂರು: ನನಗನ್ನಿಸುತ್ತದೆ; ಮನುಷ್ಯನ ಭಯದ ಹಲವಾರು ಮೂಲಗಳಲ್ಲಿ ಇದ್ದದ್ದನ್ನು ಕಳೆದುಕೊಳ್ಳುವ ಸಾಧ್ಯತೆಯೂ ಒಂದೇನೋ. ಹನೇಹಳ್ಳಿಯ ಒಂದು ತೀರ ಬಡ ಕುಟುಂಬದಲ್ಲಿ ಹುಟ್ಟಿದ ನಾನು ಬದುಕಿನಲ್ಲಿ ಮುಂದೆ ಬರಬೇಕು ಎಂದು ನಡೆಸಿದ ಹೋರಾಟದ ಹುಮ್ಮಸ್ಸು ನೆನೆದರೇ ಮೈ ಜುಮ್ ಎನ್ನಿಸುವಂತಹದು. ಆದರೆ ಇಂದು ಗಳಿಸಿದ ಸ್ಥಾನದಿಂದ ಕೆಳಗಿಳಿಯುವುದರ ಕಲ್ಪನೆಯೂ ನಡುಕ ಹುಟ್ಟಿಸುತ್ತದೆ. ನಮ್ಮ ನಮ್ಮ ಕ್ರಾಂತಿಕಾರಕತೆಯ ಬಿಸಿ ಕ್ರಮೇಣ ಕಡಿಮೆಯಾಗುವುದರ ಕಾರಣ ಕೂಡ ಇದೇ ಇರಬಹುದೆ? ನನ್ನನ್ನು ಕಾಡುತ್ತಿದ್ದದ್ದು ನೌಕರಿಯನ್ನು ಕಳಕೊಳ್ಳುವ ಭಯವಲ್ಲ.

ಯಾಕಂದರೆ ಹೊಟ್ಟೆ ಹೊರಕೊಳ್ಳಲು, ಉಪಜೀವಿಸಲು ಏನಾದರೊಂದನ್ನು ಮಾಡಿಕೊಂಡಿರುವ ಧೈರ್ಯ ನನಗಿದೆ. ದೈಹಿಕ ಶ್ರಮಕ್ಕೆ ನಾನು ಎಂದೂ ಹಿಂದೆಗೆದವನಲ್ಲ. ಹಾಗಾದರೆ ನೌಕರಿಯ ಬಗ್ಗೆ ವಿಚಾರಮಾಡಿದಾಗೆಲ್ಲ ಕರುಳಲ್ಲಿ ಹುಟ್ಟುವ ನಡುಕಕ್ಕೆ ಅರ್ಥವೇನು? ಸಮಾಜದ ಕಣ್ಣಿನಲ್ಲಿ ಕೆಳಗಿಳಿಯುವ ಭಯವೆ? ಮನುಷ್ಯನ ಮನಸ್ಸಿನ ಸ್ವಾಸ್ಥ್ಯಕ್ಕೆ ಅವಶ್ಯಕವಾದ ಹಲವು ಸಂಗತಿಗಳಲ್ಲಿ ನಾವು ನಮಗರಿವಿಲ್ಲದೇನೇ ಬಯಸುವ ಸಾಮಾಜಿಕ ಮುನ್ನಣೆಯೂ ಒಂದಾಗಿರಬಹುದೇ? ಆಶ್ಚರ್ಯ: ನಾನು ಕೆಲಸಮಾಡುತ್ತಿದ್ದ ಕಂಪನಿಯಲ್ಲಿಯ ಒಬ್ಬೊಬ್ಬರನ್ನೇ ನೆನೆದರೆ ಅಥವಾ ಈ ಚಾಳಿನವರನ್ನು, ನಮ್ಮ ಜಾತಿಯವರನ್ನು—ಉದಾಹರಣೆಗೆ ಈ ಅರ್ಜುನ್‌ರಾವನನ್ನು ಇಲ್ಲ ಶ್ರೀನಿವಾಸನನ್ನು ಕಣ್ಣಮುಂದೆ ನಿಲ್ಲಿಸಿಕೊಂಡರೆ ಇವರು ನನ್ನ ಬಗ್ಗೆ ಮಾಡಿಕೊಂಡಿರಬಹುದಾದ ಕಲ್ಪನೆಗಳಿಗೆ ನಾನು ದಾದು ಕೊಡಲಾರೆನೆನ್ನುವ ಧೈರ್ಯ ನನಗಿದೆ. ಆದರೆ ಹೀಗೆ ಕಣ್ಣಮುಂದೆ ಬಿಡಿಬಿಡಿಯಾಗಿ ನಿಂತ ಜೀವಂತ ವ್ಯಕ್ತಿಗಳನ್ನೇ ಮೀರಿ ನಿಂತ ಅಮೂರ್ತವಾದ ಶಕ್ತಿಯೊಂದು ನನ್ನನ್ನು ನಡುಗಿಸುತ್ತದೆ ಎನ್ನುವದು ಮಾತ್ರ ನಿಜ. ಫಿರೋಜ್, ಶ್ರೀನಿವಾಸರ ಭಯದ ಸ್ವರೂಪ ಕೂಡ ಇಂತಹದೇ ಆಗಿರಬೇಕು. ಅದಕ್ಕೆ ನಾನು ಮೂಲವಾಗಿರಬೇಕು. ಅಂತೆಯೇ ಈ ನಿರ್ಮೂಲನದ ಸಂಚು."

ಪ್ರಾ. ನಾಗನಾಥ್ ಜಿಂದಾಬಾದ್! ನಾಗಪ್ಪಾ, ಒಂದೂ ಮಗನೇ, ಹೇಡಿತನವನ್ನು ಇಷ್ಟೊಂದು ನಯನಾಜೂಕಿನಿಂದ ಸಮರ್ಥಿಸಿಕೊಳ್ಳುವುದನ್ನು ಯಾರಿಂದ ಕಲಿತೆಯೋ. ನಿನ್ನ ಬೂರ್ಜ್ವಾ ಮನೋಧರ್ಮದ ಅಪ್ಪಟ ದಾಖಲೆಯಲ್ಲವೋ ಇದು: ಕಳಕೊಳ್ಳುವ ಭಯ! ಹೆದರ್ಪುಕ್ಕಾ ಬರೇ ಅವಿತುಕೊಳ್ಳುವ ತಾಣ ಹುಡುಕುತ್ತ ಓಡುತ್ತಿರಬೇಡ. ಎಲ್ಲ ಪರಾರಿಗೂ ಕೊನೆಯೆಂಬುದಿರಬೇಕು. ಒಮ್ಮೆಯಾದರೂ ಸ್ವಸ್ಥಾನಕ್ಕೆ ಮರುಳುವ ಧೈರ್ಯ ಮಾಡಬೇಕಪ್ಪಾ, ನಾಗಪ್ಪಾ. ರಾತ್ರಿ ಮಾಡಿಕೊಂಡ ನಿರ್ಧಾರವನ್ನು ದಿನ ಬೆಳಗಾಗುವುದರಲ್ಲಿ ಹೀಗೆ ಸಡಿಲುಗೊಳ್ಳಲು ಬಿಡಬಾರದು. ಬಿಗಿ ಹಿಡಿ. ಬಿಗಿಯಾಗು. ಗಟ್ಟಿಯಾಗು. ಕವಚ ಕುಂಡಲಗಳನ್ನು ಕಳಚು. ನೀನೇ ನಿನ್ನ ಸುತ್ತ ಬೆಳೆಯಿಸಿಕೊಂಡ ಚಿಪ್ಪನ್ನೊಡೆದು ಹೊರಕ್ಕೆ ಬರಬೇಕು. ತೆರೆ. ತೆರೆದುಕೋ...

## ಅಧ್ಯಾಯ ಎರಡು

ನಸುಕಿನಲ್ಲಿ, ಬೆಳೆಕು ಹರಿಯುವ ಮೊದಲೇ ನಾಗಪ್ಪ ಬರೆಯಲು ಕೂತಿದ್ದ. ಬೆಳಗಿನ ಜಾವದ ಈ ಮುಹೂರ್ತವೊಂದೇ ತನ್ನ ಸೃಜನಶೀಲತೆಗೆ ಅತ್ಯಂತ ಉತ್ತೇಜಕವಾದದ್ದು ಎನ್ನುವ ಅನುಭವ ನಾಗಪ್ಪನಿಗೆ ಅನೇಕ ಸರತಿ ಬಂದಿದೆ. ನಿತ್ಯವ್ಯವಹಾರಗಳಲ್ಲಿ, ಅವುಗಳಿಂದಾಗಿ ಹುಟ್ಟುವ ರಾಗದ್ವೇಷಗಳಲ್ಲಿ, ಆತಂಕ-ದುಗುಡುಗಳಲ್ಲಿ ತೊಡಕಿಕೊಂಡಿರದ ಮನಸ್ಸಿನ ಯಾವುದೋ ಆಳದ ಭಾಗ ತನ್ನ ಮಟ್ಟಿಗಂತೂ ಇಂತಹ ಹೊತ್ತಿನಲ್ಲಿ ಜಾಗೃತವಾಗಿರುತ್ತದೆಯೆಂದು ಮತ್ತೆ ಮತ್ತೆ ಅನ್ನಿಸಿದೆ. ಸೃಷ್ಟಿಕಾರ್ಯದಲ್ಲಿ ತೊಡಗಿರುವ ಮನಸ್ಸಿನ ಅಂಶ ನಿತ್ಯವ್ಯವಹಾರದಲ್ಲಿ ತೊಡಕಿರುವ ಮನಸ್ಸಿನಿಂದ ತೀರ ಬೇರೆಯಾದದ್ದು ಎನ್ನುವ ಅನ್ನಿಸಿಕೆ ಸ್ವಂತ ಅನುಭವದಲ್ಲೇ ಹುಟ್ಟಿದ್ದು. ಕಾರ್ಲ ಯುಂಗನನ್ನು ಓದಿಕೊಂಡದ್ದರಿಂದಷ್ಟೇ ಅಲ್ಲ. ಬರವಣಿಗೆಯಂತೆ ಓದು ಕೂಡ ಸೃಷ್ಟ್ಯಾತ್ಮಕ ಕ್ರಿಯೆಯೇ. ಅದೇನೇ ಇದ್ದರೂ ಮನುಷ್ಯನಿಗೆ ತನ್ನ ಮನಸ್ಸಿನ ಆರೋಗ್ಯಕ್ಕೆ, ತನ್ಮೂಲಕ ಹುಟ್ಟುವ ಅವನ ಕ್ರಿಯೆಯ ಆರೋಗ್ಯಕ್ಕೆ ಮನಸ್ಸಿನ ಈ ಕೇಂದ್ರದ ಸಂಪರ್ಕ ಅತ್ಯಾವಶ್ಯಕ ಎಂಬ ಅನ್ನಿಸಿಕೆ ಕೂಡ ನಾಗಪ್ಪನ ಅನುಭವದಲ್ಲೇ ಹುಟ್ಟಿದ್ದು:

"ಟಿಪ್ಪಣಿ ಹದಿನಾಲ್ಕು: ಈ ಕೇಂದ್ರಕ್ಕೆ ಜೀವವಿಕಾಸದ ದೀರ್ಘಕಾಲದ ಇತಿಹಾಸದಲ್ಲಿ ಹುಟ್ಟಿಕೊಂಡ ಪ್ರವೃತ್ತಿ-ಬಲವಿದೆ. ಹಗೆಯ ವಿರುದ್ಧ ಹೋರಾಡುವ, ಜೀವ ರಕ್ಷಿಸಿಕೊಳ್ಳುವ ಪ್ರಾಣಿಗಳ ನೈಸರ್ಗಿಕ ಜಾಣತನದಂತೆಯೇ ಮನುಷ್ಯನಿಗೇ ವಿಶಿಷ್ಟವಾದ ಸೃಜನಶೀಲತೆ, ನೈತಿಕತೆ ಇವು ಕೂಡ ಈ ಕೇಂದ್ರದಲ್ಲೇ ಜನಿಸಿದವುಗಳು. ಮನುಷ್ಯನ ಸಾಮಾಜಿಕ ಜೀವನದಲ್ಲಿಯ ಇಂದಿನ ಅಧೋಗತಿಗೆ ಮುಖ್ಯಕಾರಣ ಇದೇ ಎಂದು ನನ್ನ ನಂಬಿಕೆ: ಈ ಸೃಷ್ಟಿಗೆ ಮೂಲವಾದ, ನೀತಿಗೆ ಮೂಲವಾದ ಈ ಪ್ರವೃತ್ತಿ-ಬಲವಿದ್ದ ಮನಸ್ಸಿನ ಕೇಂದ್ರದ ಸಂಪರ್ಕ ಕಳೆಕೊಂಡದ್ದು. ಇಂದಿನ ರಾಜಕಾರಣಿ ಈ ದುರಂತಕ್ಕೆ ಒಳ್ಳೆಯ ದೃಷ್ಟಾಂತ: ರಾಜಕಾರಣದ ಭ್ರಷ್ಟಾಚಾರದ ಮೂಲ ಹುಡುಕ ಬೇಕಾದರೆ ಆಧುನಿಕ ಔದ್ಯೋಗೀಕರಣದಿಂದಾಗಿ ಒದಗಿದ ಸೃಜನಶೀಲತೆಯ ಆದ್ದರಿಂದಲೇ ನೈತಿಕತೆಯ ನಷ್ಟಕ್ಕೇ ಬರಬೇಕು. ಒಂದು ದಿನ ಇದೆಲ್ಲವನ್ನು ಕುರಿತು ಒಂದು ಲೇಖನ ಬರೆಯಬೇಕು. ಹುಬ್ಬಳ್ಳಿಯ

ಸಣ್ಣಪತ್ರಿಕೆಯ ಸಂಪಾದಕನ ಸಣ್ಣಮನಸ್ಸಿನ ಬರವಣಿಗೆಗೆ ಸಮರ್ಪಕವಾದ ಉತ್ತರವಾದೀತು."

ರಸ್ತೆಯ ಬದಿಯ ಬೋಳು-ಕಿಡಕಿಯಿಂದ ಕಾಣುವ ದೃಶ್ಯ ನಿತ್ಯ ಪರಿಚಯದ್ದು. ಆದರೂ ಹೊತ್ತಾರೆ ಅದೇ ಕಣ್ಣು ಬಿಡುತ್ತಿದ್ದ ತಂಪು ಬೆಳಕಿನಲ್ಲಿ ಪ್ರತಿ ಸರತಿ ಹೊಸತಾಗಿಯೆ ಕಂಡಿದೆ. ಹೊಸತನ ಬರೇ ಹೊರಗಿನ ದೃಶ್ಯದ್ದಲ್ಲ ತಾನೆ! ತನ್ನ ಮಟ್ಟಿಗಂತೂ ನೋಡುವ ದೃಷ್ಟಿಗೂ ಈ ನಸುಕಿನ ಬೆಳಕು ತಂಪುಗಳಿಗೂ ಅನ್ಯೋನ್ಯ ಸಂಬಂಧವಿದೆ: ಇದಿರಿನಲ್ಲೇ ನಾಲ್ಕು ಮಜಲುಗಳ ಚಾಳು. ಅದರಲ್ಲಿ ಪಾರಿವಾಳದ ಗೂಡುಗಳಂತಹ ಎರಡೆರಡು ಕೋಣೆಗಳ ಮನೆಗಳು. (ಕಿಡಕಿಯ ಬಳಿ ನಿಂತರೆ ಕಿವಿ ತುಂಬುವ ಪಾರಿವಾಳಗಳ ಗುಟುರು; ಮೂಗನ್ನಡರುವ ಅವುಗಳ ಹೇಲಿನ ವಾಸನೆ ಇವುಗಳಿಂದಾಗಿಯೇ ಪಾರಿವಾಳದ ಗೂಡು ನೆನಪಿಗೆ ಬಂದಿರಬಹುದೆ)? ಅವುಗಳಲ್ಲಿ ಗಿಜಿಗುಡುವ ಜನಸಮುದಾಯ: ಆಗೀಗ ಕಿಡಕಿಯ ಹತ್ತಿರ ಬಂದು ಫಕ್ ಎಂದು ಪರಿಚಯದ ನಗು ಮೂಡಿಸುವ ಮುಖಗಳು: ನಗುವಾಗ ಹೊಳಪು ಮಿಂಚಿಸುವ ಹೆಣ್ಣು ಕಣ್ಣುಗಳು! ತಳ ಮಜಲೆಯಲ್ಲಿ ಭೈಯಾನ ಹಾಲು ಮಾರುವ ಅಂಗಡಿ: ತೆರೆದದ್ದೇ ಶೇಗಡಿಯ ಉರಿಯುವ ಕೆಂಡಗಳ ಮೇಲೆ ಕಾವಲಿಗೆಯಲ್ಲಿ ಕಾಯುತ್ತ ಕೆನೆಗಟ್ಟುವ ಹಾಲು. ಬದಿಯ ಅಂಗಡಿಯಲ್ಲಿ ಗೆಜ್ಜೆ ಗಿಲಿಗಿಲಿಸುತ್ತ, ಹಾಡುತ್ತ, ಬೆವರು ಸುರಿಸುತ್ತ ಕಬ್ಬಿನ ಹಾಲು ಅರೆಯುವ ಮರಾಠಾ ಗಾಣಿಗ. ಇವೆಲ್ಲವುಗಳ ಆಚೆ, ನೋಡಿದ ಪ್ರತಿಸಲ ತನಗೇ ಅರ್ಥವಾಗಿರದ ಮಾಂತ್ರಿಕ ಬಲದಿಂದ ಕಾಡಿದ—ಕಮ್ಮಾರನ ಶೆಡ್ಡಿನಲ್ಲಿ—ಧಗಧಗ ಕಾದ ಕಬ್ಬಿಣದ ಕಿಡಿ ಕಾರುವ ಕೆಂಪು ಜ್ವಾಲೆ: ನಾಗಪ್ಪನ ದೃಷ್ಟಿ ಅರಿವಾಗುವ ಮೊದಲೇ, ಧಗಧಗನೆ ಕಾಯುವ, ಮೆತ್ತಗಾಗುವ ಲೋಹದ ಮೇಲೇ ಊರಿದಾಗ ಜೀವದ ಆಳದಲ್ಲಿ ಮಾತಿಗೆ ನಿಲುಕದ ಭಾವನೆಗಳು ಹುಟ್ಟುತ್ತಿದ್ದವು. ಮುಂದಿನ ನೋಟಕ್ಕೆ ಹಳ್ಳಿಯ ಮೆರಗು ತಂದ ಅಶ್ವತ್ಥದ ಗಿಡವೊಂದೇ ಮಾನವನಿರ್ಮಿತ ನಿರ್ಜೀವ ಅವ್ಯವಸ್ಥೆಯ ನಡುವೆ ತಲೆ ಎತ್ತಿ ನಿಂತ ಜೀವಕಳೆಯ ಕುರುಹಾಗಿತ್ತು. ನೇಸರು ಮೇಲೆ ಬಂದೊಡನೆ ಅದರ ಎಳೆಬಿಸಿಲಲ್ಲಿ ತನ್ನ ಆಂತರ್ಯದ ಹಸಿರನ್ನೆಲ್ಲ ಹೊರಚೆಲ್ಲುವ ಅಲೌಕಿಕ ಮುಹೂರ್ತವನ್ನೇ ಕಾಯುತ್ತ, ಈಗ, ಕಪ್ಪುಮೌನದಲ್ಲಿ ನಿಂತ ಆ ಗಿಡ ನಾಗಪ್ಪನಿಗೆ ಬಹಳ ಪ್ರಿಯವಾದದ್ದು. ಮರವನ್ನೆ ನೋಡುತ್ತ ನಿಂತಾಗ ಮನಸ್ಸಿನ ಮೂಲೆಯಲ್ಲಿ ಟಿಪ್ಪಣೆಯೊಂದು ಮೂಡಡತ್ತಿತು: ಆಮೇಲೆ

ಬರೆದಿಡಬೇಕು ಎಂದುಕೊಂಡ: ’ಊರೇ ಉರಿಯುತ್ತಿರುವಾಗ ಗುಲಾಬಿಗಿಡದ ಮೇಲೆ ಕವಿತೆ ಬರೆಯುವದು ಮೂರ್ಖತನವೇನೋ (ಹಾಗೆ ನೋಡಿದರೆ ಕವಿತೆ ಬರೆಯುವದೇ)! ಆದರೆ ಊರಿಗೆ ಬೆಂಕಿ ಏಕೆ ಹತ್ತಿತು ಎಂಬ ಮೂಲಭೂತ ಪ್ರಶ್ನೆಗೆ ಬಂದಾಗ ಮಾತ್ರ ಗುಲಾಬಿಗಿಡವನ್ನು ಮನುಷ್ಯ ಪ್ರೀತಿಸುವುದನ್ನೇ ಮರೆತದ್ದರಿಂದ ಎಂದು ಹೊಳೆಯದೇ ಇರದು.’ ಮನುಷ್ಯ ನಿಸರ್ಗವನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳಲು ಹತ್ತಿದ ರೀತಿಯಿಂದಾಗಿ ಕಳೆದ ನಾಲ್ಕು ಶತಮಾನಗಳಲ್ಲಿ ನಾವು ನಿಸರ್ಗವನ್ನು ನೋಡುವ ದೃಷ್ಟಿಯೇ ಭ್ರಷ್ಟವಾಗಿ ಬಿಟ್ಟಿದೆ. ಆದ್ದರಿಂದ ನಾವು ನಮ್ಮನ್ನೇ ನೋಡುವ ದೃಷ್ಟಿ ಕೂಡ: ಮುಂಬಯಿಯಂಥ ನಗರಗಳಲ್ಲಂತೂ ದೇವರು ಹುಟ್ಟಿಸಿದ ಸೃಷ್ಟಿ ಕಣ್ಣಿಗೆ ಬೀಳುವದೇ ಕಷ್ಟವಾಗಿದೆ. ಎಲ್ಲೆಲ್ಲೂ ಇಂದಿನ ಮಾನವ, ತನ್ನ ಅಹಂಕಾರದ ಮೇಲೆ, ಸ್ವಾರ್ಥದ ಮೇಲೆ ನಿಂತ ನಿರ್ಜೀವ ವಸ್ತುಗಳಿಂದಲೇ ಸುತ್ತುವರಿದಿದ್ದಾನೆ. ಆದ್ದರಿಂದಲೇ ತನ್ನೊಬ್ಬನ ಸ್ವಾರ್ಥಕ್ಕಾಗಿ ಉಳಿದವರನ್ನೂ—ಅವರೂ ನಿರ್ಜೀವ ವಸ್ತುಗಳೇ ಎನ್ನುವ ಹಾಗೆ—ಉಪಯೋಗಿಸಿಕೊಳ್ಳಲು ತೊಡಗಿದ್ದಾನೆ...

ಬರೆಯುವ ಮೂಡಿಗೆ ಬರುವ ಉದ್ದೇಶದಿಂದ ಕಿಡಕಿಯ ಹತ್ತಿರ ಬಂದು ಇಂತ ತನಗೇ ಅರಿವಾಗದಂತೆ ಮನಸ್ಸಿನ ಅಜ್ಞಾತೆ ಕೇಂದ್ರವೊಂದು ಫಿರೋಜ್ ನಡೆಸಲಿದ್ದ ವಿಚಾರಣೆಯನ್ನು ಕುರಿತೇ ಧೇನಿಸುತ್ತಿದ್ದಂತಿತ್ತು. ತನಗೂ ಕಾರಖಾನೆಯಲ್ಲಿ ನಡೆದ ಅಪಘಾತಕ್ಕೂ ಸಂಬಂಧ! ನಂಬುವ ಮಾತೆ? ಅದು ಘಟಿಸಿದಾಗ ತಾನು ಹೈದ್ರಾಬಾದಿನಲ್ಲೇ ಇದ್ದಿರಲಿಲ್ಲ. ಮುಂಬಯಿಯ ಮುಖ್ಯ ಕಚೇರಿಗೆ ವರ್ಗವಾಗಿ ಆಗಲೇ ಮೂರು ತಿಂಗಳ ಮೇಲಾಗಿತ್ತು. ನಾಗಪ್ಪನ ಮೋರೆಯ ಮೇಲೆ ಅಪನಂಬಿಕೆಯ ಮುಗುಳುನಗೆ ಮೂಡಿತು. ಅದರ ಗರ್ಭದಲ್ಲೇ ಬಿಗಿದ ಮುಷ್ಟಿಯನ್ನು ಬಿಚ್ಚದ ಆತಂಕ: ಎಲ್ಲ ಬಿಟ್ಟು ಈ ಅಪಘಾತದಲ್ಲೇ ತನ್ನನ್ನು ಸಿಲುಕಿಸುವ ಉದ್ದೇಶವೇನು? ಅದೂ ಈಗ? ಸರಕಾರೀ ವಿಚಾರಣೆ ಮುಗಿದು ಮೃತರ ಕುಟುಂಬಗಳಿಗೆ ತಮ್ಮ ಕಂಪನಿಯಿಂದ, ಇನ್ಶೂರನ್ಸ್ ಕಂಪನಿಯಿಂದ ಸಿಗಬೇಕಾದ ಕಾಂಪೇನ್ಸೇಶನ್ ಕೂಡ ಕೊಡಿಸಿಯಾದ ಮೇಲೆ! ಈ ಅಪಘಾತದಲ್ಲಿ ಯಾವುದೇ ದುಷ್ಟ ಒಳಸಂಚಾಗಲೀ ಕಂಪನಿಯವರ ಅಜಾಗರೂಕತೆಯಾಗಲೀ ಇರಲಿಲ್ಲ ಎಂಬಂತೆ ಫ್ಯಾಕ್ಟರಿ ಇನ್ಸ್ಪೆಕ್ಟರರೇ ಕೊಟ್ಟ ಹೇಳಿಕೆ ಪತ್ರಿಕೆಗಳಲ್ಲಿ ಪ್ರಕಟವಾದ ಮೇಲೆ! ಅಪಘಾತಕ್ಕೆ ಕಾರಣವಾದದ್ದರಲ್ಲಿ

ಕಂಪನಿಯವರ ಅಜಾಗರೂಕತೆಯ ಸಮಾವೇಶವಿಲ್ಲ ಎನ್ನುವುದರಲ್ಲಿ ನಾಗಪ್ಪನಿಗೆ ಮಾತ್ರ ಎಳ್ಳಷ್ಟೂ ವಿಶ್ವಾಸವಿರಲಿಲ್ಲ; ಇರಲಿಲ್ಲ ಎನ್ನುವದು ಕಂಪನಿಯಲ್ಲಿ ಅನೇಕರಿಗೆ ಗೊತ್ತಿತ್ತು.

ಮಿಥಾಯ್ಲ್ ಇಥಾಯ್ಲ್ ಕೀಟೋನ್‌ದಿಂದ ಪೆರೋಕ್ಸಾಯ್ಡ್ ತಯಾರಿಸುವ ವಿಭಾಗದಲ್ಲಿ ನಡೆದ ಅನಾಹುತವಿದು. ಈ ಪೆರೋಕ್ಸಾಯ್ಡ್‌ದ ಉತ್ಪಾದನೆ ಇರಲಿ ಅದರ ಶೇಖರಣೆ ಹಾಗೂ ಸಾಗಾಟ ಕೂಡ ತುಂಬ ಗಂಡಾಂತರದ್ದು. ಯಾಕಂದರೆ, ಇದರ ಆಸ್ಫೋಟನಕ್ಕೆ ಬೆಂಕಿಯ ಸ್ಪರ್ಶವೇ ಬೇಕೆಂದಿಲ್ಲ. ಘರ್ಷಣೆಯಿಂದ ಇಲ್ಲವೇ ಒಮ್ಮೆಲೇ ಆದ ಆಘಾತದಿಂದ ತನ್ನಷ್ಟಕ್ಕೇ ಸ್ಫೋಟಗೊಳ್ಳಬಹುದು. ಇದು ಈ ವಿಭಾಗದ ತಾಂತ್ರಿಕ ಅಧಿಕಾರಿಗಳಿಗೆ ಗೊತ್ತಿದ್ದೂ ಅಲ್ಲಿಯ ಕೆಲಸಗಾರರಿಗೆ ಈ ವಿಷಯದಲ್ಲಿ ಸಾಕಷ್ಟು ತರಬೇತಿಯನ್ನು ಕೊಟ್ಟಿರಲಿಲ್ಲ. ಪೆರೋಕ್ಸಾಯ್ಡ್ ಯಾವ ಒಂದು ಉಪಯೋಗಕ್ಕಾಗಿ ಮಾರಾಟವಾಗುತ್ತಿತ್ತೋ ಆ ಉಪಯೋಗಕ್ಕೆ ಸಾಕಷ್ಟು ನಿರುಪದ್ರವಿಯಾಗುವ ಹಾಗೆ ಥೆಲೇಟ್ ಪ್ಲೆಸ್ಟಿಸೈಝುರಿನೊಂದಿಗೆ ಬೆರಸಿ, ಸ್ಫೋಟದ ಭಯ ಆದಷ್ಟು ಕಡಿಮೆಯಾಗಲೆಂದು ಪೊಲೀಎಥಿಲೀನದ ಬಾಟಲಿಗಳಲ್ಲಿ, ಕಾರ್‌ಬೊಯ್ಸ್‌ಗಳಲ್ಲಿ ತುಂಬಿಡುತ್ತಿದ್ದರು. ಪ್ಲೆಸ್ಟೀಸೈಝುರಿನಿಂದ ಕ್ರಮೇಣ ಮುಕ್ತವಾದ ಪೆರೊಕ್ಸಾಯ್ಡ್ ವಾಯುವಿನ ಒತ್ತಡ ಬಳಗೆ ಬೆಳೆಯದ ಹಾಗೆ ಈ ಬಾಟಲಿಗಳ ರಚನೆ ಇರುತ್ತದೆ. ಹೀಗೆ ತುಂಬಿದ ಕಾರ್‌ಬೊಯ್ಸ್ ಹಾಗೂ ದೊಡ್ಡ ಬಾಟಲಿಗಳನ್ನು ಕಾರಖಾನೆಯ ಮುಖ್ಯ ಕಟ್ಟಡಗಳಿಂದ ದೂರವಾದ ಒಂದು ಜಾಗದಲ್ಲಿ ಸಿಮೆಂಟ್ ಕಾಂಕ್ರೀಟಿನಲ್ಲಿ ಕಟ್ಟಿಸಿದ ನೆಲಮನೆಯಲ್ಲಿ ಶೇಖರಿಸಿಡುತ್ತಾರೆ. ಗ್ರಾಹಕರಿಂದ ಆರ್ಡರ್ ಬಂದಾಗ ಅವು ಈ ನೆಲಮನೆಯಿಂದಲೇ ರವಾನೆಯಾಗುತ್ತವೆ. ಈ ವಿಷಯದಲ್ಲಿ ಕಾರಖಾನೆಯ ಟೆಕ್ನಿಕಲ್ ಮ್ಯಾನೇಜರ್ ಹಾಗೂ ಫ್ಯಾಕ್ಟರಿ ಮ್ಯಾನೇಜರರು ಸಾಕಷ್ಟು ಜಾಗರೂಕತೆಯನ್ನು ತೆಗೆದುಕೊಂಡಿದ್ದರು. ಆದರೆ ಈ ಜಾಗರೂಕತೆ ಹೆಚ್ಚಾಗಿ ಕಾರಖಾನೆಯ ಆಸ್ತಿಯನ್ನು ರಕ್ಷಿಸುವುದರ ಬಗ್ಗೆ ಆಗಿತ್ತೇ ಹೊರತು ಆ ವಿಭಾಗದಲ್ಲಿ ಕೆಲಸಮಾಡುವ ಕಾರ್ಮಿಕರ ಆರೋಗ್ಯ ಹಾಗೂ ಜೀವರಕ್ಷಣೆಯ ಬಗ್ಗೆ ಆಗಿರಲಿಲ್ಲ. ನಾಗಪ್ಪ ತನ್ನ ದುಗುಡ ಅಸಮಾಧಾನಗಳನ್ನು ಅನೇಕ ಸಂದರ್ಭಗಳಲ್ಲಿ ತನ್ನ ಸಹೋದ್ಯೋಗಿಗಳ ಇದಿರು ವ್ಯಕ್ತಪಡಿಸಿದ್ದ: ಸಂಬಂಧ ಪಟ್ಟ ಮೇಲಧಿಕಾರಿಗಳು ಇವನ ಅಸಮಾಧಾನವನ್ನು ಕಿವಿಯಲ್ಲಿ ಹಾಕಿಕೊಳ್ಳುವ ಬದಲು ಇವನ ಬಾಯನ್ನೇ ಮುಚ್ಚುವ ಪ್ರಯತ್ನ

ಮಾಡಿದ್ದರು. ಪ್ರಕರಣ ಡಿ. ಎಮ್. ಡಿ ಅವರ ತನಕ ಹೋದಾಗ ನಿನಗೆ ಸಂಬಂಧವಿಲ್ಲದ ವಿಷಯಗಳಲ್ಲಿ ನಿನ್ನ ಹೊಲಸು ಬಾಯಿ ತೆರೆಯಬೇಡ ಎಂದು ಇವನನ್ನೇ ಗದರಿಸಿದ್ದರು.

ತಂತ್ರವಿಜ್ಞಾನದ ಪ್ರಾವೀಣ್ಯದಲ್ಲಿ ನಾಗಪ್ಪನನ್ನು ಸರಿಗಟ್ಟುವ ಇನ್ನೊಬ್ಬ ಇಡೀ ಕಾರಖಾನೆಯಲ್ಲೇ ಇಲ್ಲ ಎನ್ನುವ ಪ್ರತೀತಿ ಇದ್ದರೂನೂ ಈತ ತುಂಬ ಭಾವನಾಪ್ರಧಾನಿಯಾದವನು, ವ್ಯವಹಾರಜ್ಞಾನವಿಲ್ಲದವನು ಎನ್ನುವ ಅಭಿಪ್ರಾಯವೊಂದು ಮೇಲಿನ ಅಧಿಕಾರಿಗಳಲ್ಲಿ ನೆಲೆಗೊಂಡಿತ್ತು. ಇವನು ವ್ಯಕ್ತಪಡಿಸಿದ ಭಯಗಳು ಕಾರ್ಮಿಕರ ಸಂಘದ ಪದಾಧಿಕಾರಿಗಳ ಕಿವಿಗೆ ಮುಟ್ಟಿದರಂತೂ ಅದರಿಂದಾಗಿ ಉದ್ಭವಿಸಬಹುದಾದ ತೊಂದರೆಗಳ ಕಲ್ಪನೆಯಿದ್ದ ಮ್ಯಾನೇಜ್‌ಮೆಂಟ್‌ಗೆ ಇವನ 'ಧಡ್ಡತನದ -ಅಧಿಕಪ್ರಸಂಗ' ಸೇರದೇ ಇದ್ದದ್ದು ಸಹಜವಿತ್ತು. ಆದರೆ ನಾಗಪ್ಪನ ದೃಷ್ಟಿಯಲ್ಲಿ ಕಾರ್ಮಿಕರ ಜೀವಕ್ಕೆ ಅಪಾಯ ತರುವಂತೆ ಕೆಲಸ ಮಾಡುವ ರೀತಿ ಅನಿವಾರ್ಯವಾದದ್ದಾಗಿರದೆ ಡಿ. ಎಮ್. ಡಿ. ಹಾಗೂ ಅವರ ಚೇಲಾರ ತಿಳಿಗೇಡಿತನದ ಮೇಲೆ ನಿಂತದ್ದಾಗಿತ್ತು. ಇಂಗ್ಲಂಡ್, ಜರ್ಮನಿ ಹಾಗೂ ಅಮೇರಿಕೆಗಳಲ್ಲಿ ಇಂತ ಪೆರೋಕ್ಸಾಯ್ಡ್ ಉತ್ಪಾದಿಸುವ ದೊಡ್ಡ ಕಂಪನಿಗಳಿಗೆ ತಾನೇ ಪತ್ರ ಬರೆದು ಪೆರೋಕ್ಸಾಯ್ಡ್‌ಗಳ ವಿಷಯದಲ್ಲಿ ವಹಿಸಬೇಕಾದ ಎಚ್ಚರಿಕೆಯ ಉಪಾಯಗಳ ಬಗ್ಗೆ ಬರೆದ ಮೆನ್ಯುಅಲ್‌ಗಳನ್ನು ತರಿಸಿ ಅವುಗಳನ್ನು ಡಿ. ಎಮ್. ಡಿ ಹಾಗೂ ಎಮ್. ಡೀ. ಇಬ್ಬರಿಗೂ ಕಳಿಸಿದ್ದ. ಕಳಿಸಿದ್ದನಷ್ಟೇ ಅಲ್ಲ ಹಾಗೆ ಕಳಿಸಿದ್ದೇನೆ ಎನ್ನುವುದನ್ನು ನಮೂದಿಸಿ ಟೈಪ್ ಮಾಡಿದ ಮೆಮೋಗಳ ಜತೆ ಕಳಿಸಿದ್ದ. ಅದು ಕೈಗೆ ಸಿಕ್ಕ ದಿನ ಡಿ. ಎಮ್. ಡಿ ಅವರ ಅವತಾರ ನೋಡುವ ಹಾಗಿತ್ತು: ತನ್ನನ್ನು ತಮ್ಮ ಕೆಬಿನ್ನಿಗೆ ಕರೆದು ಸಿಟ್ಟಿನಿಂದ ಬೈದ ರೀತಿಯನ್ನು ನೆನೆಯಲೂ ನಾಗಪ್ಪ ಹಿಂದೆಗೆಯುತ್ತಾನೆ. ಸಿಟ್ಟಿಗೆ ಕಾರಣವಾದದ್ದು ಮೆಮೋ ಅಲ್ಲವಾಗಿತ್ತು; ಅದರ ಮೊದಲ ಪ್ರತಿ ಎಂ. ಡಿ. ಅವರಿಗೆ ಬರೆದ್ದಾಗಿತ್ತು: "Don't try to be too smart. You report to me and not to the M.D. Remember that."—ಫಿರೋಜ್ ಗರ್ಜಿಸಿದ್ದ. ಆದರೆ ಪ್ರಕರಣ ಅಷ್ಟಕ್ಕೇ ಮುಗಿಯಲಿಲ್ಲ. ಫಿರೋಜ್ ಈತನನ್ನು ಬೈದು ಕಳೆಸಿದ್ದರ ಸುದ್ದಿ ಕಾರಖಾನೆಯ ತುಂಬ ಹರಡಿತು. ಅದು ಮೊದಲೇ ಸಿದ್ಧವಾದ ಪಿತೂರಿಯ ಅಂಗವಾಗಿತ್ತು, ಸ್ವತಃ ಫ್ಯಾಕ್ಟರಿ ಮ್ಯಾನೇಜರರೇ ಈ ಸುದ್ದಿಗೆ ಕಾರಣವಾಗಿದ್ದರು ಎನ್ನುವದು ನಾಗಪ್ಪನಿಗೆ ತಿಳಿದದ್ದು

ತೀರ ತಡವಾಗಿ. ತುಂಬ ನೊಂದುಕೊಂಡ: ಕಾರಖಾನೆಯ ಆಫೀಸರರಿಂದ ಹಿಡಿದು, ಚೌಕೀದಾರ, ಪೇದೆಗಳು, ಎಲ್ಲ ತರಗತಿಯ ಕಾಮಗಾರರ ವರೆಗೆ R&D ಮ್ಯಾನೇಜರರು DMDಯವರಿಂದ ಚೆನ್ನಾಗಿ ಛಳಿಸಿಕೊಂಡರಂತೆ ಎನ್ನುವಂತಹ ಸುದ್ದಿ ಹರಡಿದ ಕೆಲವು ದಿನ ಫ್ಯಾಕ್ಟರಿಯಲ್ಲಿ ತಲೆಯೆತ್ತಿ ನಡೆಯುವದೇ ಕಷ್ಟವಾಯಿತು. ನಾಗಪ್ಪನ ಸೂಕ್ಷ್ಮಮತಿಗೆ ಪೆಟ್ಟುತಗಲಿದ್ದು ತನ್ನ ಬಗ್ಗೆ ಇವರೆಲ್ಲರಿಗೆ ತುಂಬ ಆದರ ಅಭಿಮಾನಗಳಿವೆ ಎಂದು ಬಗೆದ ಎಡ್ಮಿನಿಸ್ಟ್ರೇಟಿವ್ ಆಫೀಸಿನೊಳಗಿನ ಹುಡುಗಿಯರು ಕೂಡ ತನ್ನತ್ತ ವಿಚಿತ್ರವಾಗಿ ನೋಡಿ ಒಳಗೊಳಗೇ ನಗುತ್ತಾರೆ ಎಂಬ ಭಾವನೆ ಹುಟ್ಟಿದಾಗ. ಟೆಲಿಫೋನ್ ಆಪರೇಟರ್ ರೀನಾ ಒಬ್ಬಳು ಮಾತ್ರ ಇದಕ್ಕೆಲ್ಲ ಅಪವಾದವಾಗಿದ್ದಳು; ಒಂದು ದಿನ ಬೆಳಿಗ್ಗೆ ಇಂಟರ್‌ಕಾಮಿನ ಮೇಲೆ: “Don’t worry. Keep your cool and keep smiling. Every thing will be allright,” ಎಂದಿದ್ದಳು. ತೀರ ಅನಿರೀಕ್ಷಿತವಾಗಿ ಬಂದ ಆ ಆತ್ಮೀಯ ಮಾತುಗಳಿಂದ ನಾಗಪ್ಪನ ಕಣ್ಣು ತೇವಗೊಂಡು ದನಿ ಗದ್ಗದಿತವಾಗಿತ್ತು. ಇದಿರಿನ ಕುರ್ಚಿಯಲ್ಲಿ ಅದೇ ಬಂದು ಕುಳಿತ ಜಲಾಲ್ ಹುಸೇನ ತನ್ನನ್ನೇ ನೋಡುತ್ತಿದ್ದಾನೆ ಎಂಬುದರ ಪರಿವೆ ಮಾಡದೇನೇ: “Thank you Rina. Thank you so much. It is so sweet of you and I need your… ” I need your good wishes ಎನ್ನುವುದರಲ್ಲಿದ್ದ ನಾಗಪ್ಪನ ವಾಕ್ಯ ಅರ್ಧಕ್ಕೇ ಉಳಿದಿತ್ತು. ಬಹುಶಃ ಅದೇ ಆಗ DMD ಆಫೀಸು ಹೊಕ್ಕಿರಬೇಕು ಇಲ್ಲ ಟೆಲಿಫೋನ್ ಕರೆ ಬಂದಿರಬೇಕು: ರೀನಾ ಇಂಟರ್‌ಕಾಮ್ ಕೆಳಗಿಟ್ಟುಬಿಟ್ಟಿದ್ದಳು. ನಾಗಪ್ಪನಿಗೂ ರಿಸೀವರ್ ಕೆಳಗಿಡುವಾಗ ತನ್ನ ವಾಕ್ಯ ಪೂರ್ತಿಯಾಗದೇ ಉಳಿದದಕ್ಕೆ ಕೆಡುಕೆನಿಸಿದರೂ ಒಂದು ಬಗೆಯ ಉತ್ಸಾಹ ಅವನ ಮೋರೆಯ ಮೇಲೆ ಸ್ಪಷ್ಟವಾಗಿ ಮೂಡಿತ್ತು. ಜಲಾಲನಿಂದ ಬಂದ ಪ್ರಶ್ನೆಯಲ್ಲಿಯ ಕೊಂಕು ಕೂಡ ಅಷ್ಟೇ ಸ್ಪಷ್ಟವಾಗಿತ್ತು: “ಬೆಳೆಗಾದದ್ದೇ ತಡ ಸಿಹಿ ಬೇಡುವ…” ನಾಗಪ್ಪ ನೋವು ತುಂಬಿದ ದನಿಯಲ್ಲಿ, “ಜಲಾಲ್, ಪ್ಲೀಜ್, ಪ್ರತಿಯೊಂದಕ್ಕೂ ಅಪಾರ್ಥ ಹಚ್ಚಬೇಡ. ಕಳೆದ ಕೆಲವು ದಿನಗಳಿಂದ ನಾನು ಪಡುತ್ತಿದ್ದ ಮಾನಸಿಕ ಯಾತನೆ ನನಗೊಬ್ಬನಿಗೇ ಗೊತ್ತು. ಇಂದೇ ಮೊದಲೊಮ್ಮೆ ದಿನದ ಆರಂಭದಲ್ಲಿಯೇ ಸಹಾನುಭೂತಿಯ ಮಾತುಗಳನ್ನು ಕೇಳಿದ್ದು.” ಅಂದ. ತನ್ನ ದನಿಯಲ್ಲಿಯ

ಮಾರ್ದವತೆಗೆ ತಾನೇ ಮುಜುಗರಪಟ್ಟಿ. ಜಲಾಲ್ ಹಿಂದೆಗೆಯಲಿಲ್ಲ: "ಮೇಲಾಗಿ ರೀನಾ ಬಹಳೇ ಸಿಹಿಯಾದ ಹುಡುಗಿ..."

ಜಲಾಲನ ಆಸೂಯೆ ತುಂಬಿದ ಈ ಮಾತುಗಳಿಂದ ತಲೆಕೆಡಿಸಿಕೊಳ್ಳುವ ಮನಸ್ಸಾಗದೇ ನಾಗಪ್ಪ ಕುರ್ಚಿಯಿಂದ ಎದ್ದು ಕ್ಯಾಬಿನ್ನಿನ ಕಿಡಕಿಗೆ ಬಂದ. ಹೊತ್ತಿಗೆ ಮೊದಲೇ ಬಂದ ನಾಗಪ್ಪ ದಿನದ ಕೆಲಸದತ್ತ ಲಕ್ಷ್ಯ ಹರಿಸಲು ಇನ್ನೂ ಮೂರು ಮಿನಿಟುಗಳಾದರೂ ಇದ್ದುವು. ಅದಾಗಲೇ ಅವಸರ ಅವಸರವಾಗಿ ಲೆಬೋರೇಟರಿಯನ್ನು ಹೋಗುತ್ತಿದ್ದ ಸಹೋದ್ಯೋಗಿಗಳತ್ತ ನೋಡುತ್ತ ಸುಖವಾಗಿ ಮುಗುಳು ನಕ್ಕ. ಕಿಡಕಿಯ ಕೆಳಗಿನ ದಾಸಾಳದ ಗಿಡದಲ್ಲಿ ಕೆಂಪಗೆ ಬಾಯಿ ತೆರೆದು ನಿಂತ ಹೂಗಳನ್ನು ಇದೇ ಮೊದಲ ಬಾರಿ ನೋಡುತ್ತಿದ್ದವನ ಹಾಗೆ ನೋಡುತ್ತ ನಿಂತ. ನಸುಕಿನಲ್ಲಿ ಮಾಳಿ ಹಾಕಿದ ನೀರಿನಿಂದ ಗಿಡ ಒದ್ದೆಯಾಗಿತ್ತು. ಸ್ವಚ್ಛವಾಗಿತ್ತು. ಬೆಳಗಿನ ಟಪಾಲು ತಂದ ಪೇದೆ ಕ್ಯಾಬಿನ್ ಹೊಕ್ಕ ಸದ್ದು ಕೇಳಿಸಿ ಈಚೆಗೆ ಬಂದ. ಟೇಬಲ್ಲಿನ ಮೇಲೆ ಕಾಗದ-ಪತ್ರಗಳ ದೊಡ್ಡ ರಾಶಿಯನ್ನೇ ಇಡುತ್ತ, ಅನೇಕ ದಿನಗಳ ಮೇಲೆ, ಪ್ರಥಮಬಾರಿ ಎನ್ನುವಂತೆ, ಅವನಿಗೆ ಸಲಾಮು ಹೊಡೆದು ಆದರ ವ್ಯಕ್ತಪಡಿಸುತ್ತ ಮುಗುಳು ನಕ್ಕ. ರಾಶಿಯೊಳಗಿನ ಒಂದು ಪತ್ರವನ್ನು, ಅವನ ಲಕ್ಷ್ಯ ಸೆಳೆಯುವ ಹಾಗೆ ಎಲ್ಲಕ್ಕೂ ಮೇಲಿಡುತ್ತ ಅದರ ಮೇಲೆ ದಿನದ ಅಭ್ಯಾಸದಿಂದ ಪೇಪರ್‌ವೇಟ್ ಇಡುವಷ್ಟರಲ್ಲಿ—ಜಲಾಲ್ ಆ ದಪ್ಪವಾದ ಲಕ್ಕೋಟೆಯ ಮೇಲಿನ ಇಲೆಕ್ಟ್ರಿಕ್ ಟೈಪ್‌ರೈಟರ್‌ಮೇಲೆ ಟೈಪ್ ಮಾಡಿದ ವಿಳಾಸದಿಂದಲೇ ಅದು M.Dಯವರು ಹೆಡ್‌ಆಫೀಸಿನಿಂದ ಬರೆದದ್ದು ಎಂಬುದನ್ನು ಗುರುತಿಸಿ—"ಓಹ್! M.D.ಯವರ ಪತ್ರ! Personal & Confidential." ಎಂದ. ಪೇದೆಯ ಮೋರೆಯ ಮೇಲಿನ ಆದರಕ್ಕೆ ಇದೇ ಕಾರಣವಾಗಿರಬೇಕು. ರೀನಾ ಅನಿರೀಕ್ಷೆ ತವಾಗಿ ಮಾತನಾಡಿಸಿದ್ದಕ್ಕೂ...

M.D ನಾಗಪ್ಪನ ಬಗ್ಗೆ ಇಟ್ಟುಕೊಂಡ ವಿಶೇಷ ಆಸ್ಥೆ ಫ್ಯಾಕ್ಟರಿಯಲ್ಲೆಲ್ಲ ಜನಜನಿತವಾಗಿತ್ತು. ಇದೇ ಅನೇಕರ—DMDಅವರನ್ನೂ ಹೊರತುಪಡಿಸದೇ-ಅಸೂಯೆಗೆ ಕಾರಣವಾಗಿತ್ತು. ಪತ್ರದಲ್ಲಿ ಎಂತಹ ಸುದ್ದಿಯಿರಬಹುದೋ! ಇಲ್ಲಿಯ ಪ್ರಕರಣ ಅವರ ಕಿವಿಗೂ ಮುಟ್ಟಿರಬಹುದೆ? ಅಥವಾ... ನಾಗಪ್ಪನ ಮೋರೆಯ ಮೇಲೆ ದುಗುಡದ ಭಾವನೆ ಪ್ರಕಟವಾಗುವ ಹೊತ್ತಿಗೆ ಪೇದೆ ಕೋಣೆಯಿಂದ

ಹೊರಟುಹೋಗಿದ್ದ. ಜಲಾಲನ ಲಕ್ಷ್ಯ ಮಾತ್ರ ಇನ್ನೂ ಆ ಪತ್ರದ ಮೇಲೇ ಇತ್ತು. ನಾಗಪ್ಪ ಆತಂಕ ತುಂಬಿದ ಉತ್ಸುಕತೆಯಿಂದ ಲಕ್ಕೋಟೆಯ ಬಾಯಿ ಹರಿದು ಪತ್ರವನ್ನೂ ಹೊರತೆಗೆದು ಓದಹತ್ತಿದ. ಓದುತ್ತ ಹೋದ ಹಾಗೆ ಅವನ ಮೋರೆಯ ಮೇಲೆ ಸಂತೋಷ ಅರಳುತ್ತ ಹೋಯಿತು. ಓದಿ ಮುಗಿಸಿದ ಕೂಡಲೇ ಜಲಾಲನನ್ನು ಅಪ್ಪಿ ಬಿಡುವವನ ಹಾಗೆ ಅವನ ಹತ್ತಿರ ಹೋಗಿ-'ಗೆಳೆಯಾ. ಕೊನೆಗೊಮ್ಮೆ ನಾನು ದಾರಿಕಾಯುತ್ತಿದ್ದ ಖುಶಿಯ ಸುದ್ದಿ-I am going to the U.S. for training. ಅಷ್ಟೇ ಅಲ್ಲ. ಈ ವರ್ಷ ಹವಾಯಿಯಲ್ಲಿ ನಡೆಯುವ ಟೆಕ್ನಾಲಾಜಿ ಕಾನ್ಫರನ್ಸಿಗೆ ಹಿಂದೂಸ್ಥಾನದ ಈ ಕಂಪನಿಯಿಂದ ನನ್ನನ್ನು ಆರಿಸಿದ್ದಾರೆ.' ಎಂದ. "Wonderful, Congrats. ನೋಡೋಣ. ನಾನೂ ಓದಲೇ?" ಜಲಾಲ ಪತ್ರಕ್ಕಾಗಿ ಕೈ ಮುಂದೆ ಮಾಡಿದ.

ನಾಗಪ್ಪನ ದುರ್ದೈವದ ಕತೆ ಇಲ್ಲೇ ಆರಂಭವಾಗಿತ್ತು. ಆನಂದಾತಿಶಯದ ಭರದಲ್ಲಿ. ಹಿಂದುಮುಂದಿನ ವಿಚಾರಮಾಡುವ ಮೊದಲೇ, ಆ ಪತ್ರವನ್ನು ಜಲಾಲನ ಕೈಯಲ್ಲಿ ತಾನಾಗಿಯೇ ಇರಿಸಿಬಿಟ್ಟ—ಲಕ್ಕೋಟೆಯ ಮೇಲೆ Personal & Confidential ಎಂದು ಬರೆದದ್ದನ್ನೂ ಮರೆತು. ಇದಾದ ಕೆಲವು ವಾರಗಳಲ್ಲೆ R&D ಕೆಲಸದಿಂದ ಮುಂಬಿಯಿಯ ಹೆಡ್‌ಆಫೀಸಿಗೆ ಬದಲಿಯಾಗಿತ್ತು—'Manager, Special Assignment' ಎಂಬ ತನಗಾಗಿಯೇ ಹುಟ್ಟಿಸಿದಂತಿದ್ದ ಹೊಸ ಸ್ಥಾನಕ್ಕೆ. ಖುದ್ದು MDಯವರ ಕೈಕೆಳಗೆ ಕೆಲಸ ಮಾಡುವ ಅನುವು ಒಂದೇ ಸಮಾಧಾನಕ್ಕೆ ಕಾರಣವಾಗಿತ್ತು. ಆದರೆ ಇಲ್ಲಿ ಬಂದಂದಿನಿಂದ M.Dಯವರಿಗೆ ತನ್ನ ಬಗೆಗನ ಆಸ್ಥೆ ಕಡಿಮೆಯಾಗಿದೆಯೆ? ಅಮೇರಿಕೆಯ ಯೋಜನೆ ಮುಂದೆ ಬೀಳುತ್ತಿದ್ದುದಕ್ಕೆ ಇದೇ ಕಾರಣವಿರಬಹುದೇ?

ನಾಗಪ್ಪನಿಗೆ ಎಲ್ಲವೂ ಅಸ್ಪಷ್ಟ.

## ಅಧ್ಯಾಯ ಮೂರು

ಖೇತವಾಡಿಯ ಮುಂಜಾವಿನ ಚಟುವಟಿಕೆಗಳು ಆಗಲೇ ಆರಂಭವಾಗಿದ್ದುವು. ಮನೆ ಮನೆಗೆ ಎಲ್ಯೂಮಿನಿಯಮ್ ಹಂಡೆಗಳಲ್ಲಿ ಹಾಲನ್ನು ಹೊತ್ತು ಎಲ್ಯೂಮಿನಿಯಮ್ಮಿನದೇ ಅಳತೆ-ಪಾತ್ರೆಯಿಂದ ಅಳೆದು ಮಾರುವ ಭೈಯಾ ಜನ; ನ್ಯೂಸ್‌ಪೇಪರ್ ಮಾರುವ ಹುಡುಗರು; ಖೇಮರಾಜಭವನದ ತಳ ಮಜಲೆಯ ಉಡುಪಿಬ್ರಾಹ್ಮಣರ ಉಪಾಹಾರಗೃಹ; ಗಲ್ಲಿಯ ಬಾಯಲ್ಲಿ ನಿಂತ ಕಾಮ್ಯುನಿಸ್ಟ್ ಪಕ್ಷದ ಪ್ರಿಂಟಿಂಗ್ ಪ್ರೆಸ್; ಇದಿರಿನ ಮನೆಯಲ್ಲಿ ದತ್ತಾತ್ರೇಯನ ಆಳೆತ್ತರದ ಚಿತ್ರದ ಇದಿರು ಕೂತು ಚಾಳಿಗೆ ಚಾಳನ್ನೇ ಎಚ್ಚರಿಸುವ ಭಜನೆಯ ತಯಾರಿಕೆಗೆ ತೊಡಗಿದ ಮುದುಕ; ನಿತ್ಯಪರಿಚಯದ ಅತಿ ನಸುಕಿನ ಸದ್ದು ಗದ್ದಲಗಳು: ಆಳದಲ್ಲಿನ್ನೂ ಜಲಾಲನಿಗೆ ಆ ಪತ್ರ ಕೊಟ್ಟ ಪ್ರಮಾದದ ನೆನಪು: ಕೊನೆಗೂ ತಾನು ವ್ಯವಹಾರ ಎಂಬುದನ್ನು ಕಲಿಯಲೇ ಇಲ್ಲ. ಈ ಜಗತ್ತಿನಲ್ಲಿ ಪ್ರತಿಭೆಯಿದ್ದರಷ್ಟೇ ಸಾಲದು. ಅದನ್ನು ತನಗೇ ಅನ್ಯಾಯವಾಗದಂತೆ ಪ್ರಕಟಿಸುವ ಚಾತುರ್ಯವೂ ಬೇಕು. ದಕ್ಷತೆ ಬೇಕು. ಇವೆರಡೂ ನಾಗಪ್ಪನಲ್ಲಿರಲಿಲ್ಲ. ಆದ್ದರಿಂದಲೇ ಅವನ ಯೋಗ್ಯತೆಯ ಅರ್ಧದಷ್ಟೂ ಯೋಗ್ಯತೆ ಇರದ ಜಲಾಲನಂತಹರೇ ಇಂದು ಕಾರಖಾನೆಯ ಉಚ್ಚ ಪದಾಧಿಕಾರಕ್ಕೆ ಏರಿ ಕೂತಿದ್ದಾರೆ. ಹಲವು ಸಾರೆ ಹೊಸ R&D ಕಲ್ಪನೆಯೊಂದು ಮನಸ್ಸಿನಲ್ಲಿ ಮೂಡಿದ್ದೇ ತಡ ಸೃಷ್ಟಿಶೀಲ ಕಲಾಕಾರನ ಉತ್ಸಾಹದಿಂದ ಸರೀಕರ ಇದಿರು ವಿವರಿಸಿಬಿಡುತ್ತಿದ್ದ-ಹೀಗೆ ವಿವರಿಸುವುದರ ವ್ಯಾವಹಾರಿಕ ಪರಿಣಾಮ ಏನಾಗಬಹುದೆಂಬುದರ ಪೂರ್ವಾಪರ ವಿಚಾರಮಾಡದೇನೇ. ಇಂತಹ 'ಬ್ರಿಲ್ಲಿಯಂಟ್' ಎನ್ನಬಹುದಾದ ಕಲ್ಪನೆಗಳು ಇವನಿಗಿಂತ ಬಹಳೆ ಮುಂಚಿತವಾಗಿ DMD ಯವರಿಗೆ ಲೇಖೀರೂಪದಲ್ಲಿ ಮುಟ್ಟಿರುತ್ತಿದ್ದುವು. ಸರಿಯಾದ ಅನುವು ಸಿಕ್ಕಾಗ ತಾನೇ ಅವುಗಳನ್ನು ಫಿರೋಜನಿಗೆ ಹೇಳಹೊರಟಾಗ ಉಳಿದವರ ಕಲ್ಪನೆಗಳನ್ನು ಕಳವು ಮಾಡಿದ ಆರೋಪಕ್ಕೆ ಗುರಿಯಾಗಿ ನೋವು ಉಂಡದ್ದರ ನೆನಪೂ ಈಗ ನಾಗಪ್ಪನಿಗೆ ಸಿಟ್ಟು ತರಿಸುವಂಥದ್ದು. ಎಲ್ಲಕ್ಕೂ ಮಿಗಿಲಾಗಿ ಫಿರೋಜ ತನ್ನನ್ನು ಚುಚ್ಚಿ ಮಾತನಾಡುವಾಗ ಪಡುತ್ತಿದ್ದ ವಿವೇಕಶೂನ್ಯವಾದ ಸುಖ ಮಾತ್ರ ತನಗಿನ್ನೂ ಅರ್ಥವಾಗಿಲ್ಲ. ಯಾಕೆಂದು ತನ್ನ ಬಗ್ಗೆ ಇವನಿಗೆ ಇಷ್ಟೊಂದು ದ್ವೇಷ...

ತನ್ನ ಆನಂದಕ್ಕೆ ಸೃಷ್ಟಿಶೀಲತೆಯೊಂದೇ ನಿಜವಾದ ಮೂಲಸೆಲೆಯೆಂಬ ಅನುಭವ ನಾಗಪ್ಪನಿಗೆ ಮತ್ತೆ ಮತ್ತೆ ಬಂದಿದೆ. ಹಾಗೆಯೆ, ಹುಟ್ಟಿಬಂದ ಕೃತಿಯ ಮೇಲೆ ತನ್ನ ಹೆಸರಿನ ಅಂಕಿತ ಬಿದ್ದಾಗಲೇ ಅದರ ಮೂಲ ಪ್ರೇರಣೆಯಿಂದ ತನ್ನ ಬಿಡುಗಡೆಯಾಗುತ್ತದೆ ಎಂಬ ಅರಿವೂ ಕೂಡ: ಜೀವನದ ಅರ್ಥ ಪೂರ್ಣತೆಯ ಹುಡುಗಾಟದಲ್ಲಿ, ಎಲ್ಲಕ್ಕೂ ಮಿಗಿಲಾಗಿ ಈ ಸೃಷ್ಟಿಕ್ರಮದಲ್ಲೇ ತನ್ನ ಸ್ಥಾನವೇನು? ಪ್ರಸ್ತುತತೆಯೇನು? ಎನ್ನುವುದರ ಪ್ರಸ್ಥಾಪನೆಗೆ ಮಹತ್ವ ಇರುವುದರ ಜೊತೆಗೇ ಇಂಥ ಪ್ರಸ್ತಾಪನೆಗೆ ಸ್ವ ಅಂಕಿತದ ಅಗತ್ಯವೂ ಇದೆಯೇನೋ ಎಂಬ ಅನುಮಾನ ಕೂಡ ಆಗೀಗ ಬಂದಿದೆ. ಆದರೆ ಅಂಥ ಅಂಕಿತದ ಮುದ್ರೆ ಬೀಳುವ ಅವಕಾಶ ತಪ್ಪಿದಾಗ ಅದಕ್ಕೆ ಕಾರಣವಾದ ಅನ್ಯಾಯದ ವಿರುದ್ಧ ಪ್ರತಿಭಟಿಸದೇ ಇರುವುದಕ್ಕೆ ಕಾರಣ ಮಾತ್ರ ಕೀರ್ತಿಯ ಬಗೆಗಿನ ನಿರಾಸಕ್ತಿಯಾಗಿರದೆ ಪ್ರತಿಭಟನೆಗೆ ಬೇಕಾದ ಪ್ರಬಲವಾದ ನೈತಿಕ ಧೈರ್ಯವೇ ತನ್ನ ಸ್ವಭಾವರಚನೆಯಲ್ಲಿ ಇಲ್ಲದ್ದಿರಬಹುದು ಎಂಬುದರ ಬಗ್ಗೆ ನಾಗಪ್ಪ ವಿಚಾರಮಾಡಿದವನಲ್ಲ.

ಖೇತವಾಡಿಯ ಅನ್ಯೋನ್ಯ ಅಂಗವಾದ ಗದ್ದಲ ಆಗಲೇ ಕಿವಿ ನೋಯಿಸುವ ಮಟ್ಟಕ್ಕೆ ಏರಿತ್ತು. ದತ್ತಭಕ್ತನ ಭಜನೆಯಂತೂ ಎಂತಹ ಕುಂಭಕರ್ಣನನ್ನೂ ಬಡಿದೆಬ್ಬಿಸುವಂತಹದು. ಇದಕ್ಕೆಲ್ಲ ಕಿವುಡನಾಗಿದ್ದ ನಾಗಪ್ಪನ ಮನಸ್ಸು ಒಂದನ್ನೇ ಕುರಿತು ಧೇನಿಸುತ್ತಿತ್ತು. ತಾನು ಅಂದು M. Dಯವರಿಂದ ಬಂದ Confidential ಪತ್ರವನ್ನು ಜಲಾಲನಿಗೆ ಕೊಟ್ಟಿದ್ದರ ಬಗ್ಗೆ. ತನ್ನ ಮೋಹಕವಾದ ವ್ಯಕ್ತಿತ್ವ, ಅದಕ್ಕಿಂತ ಹೆಚ್ಚಾಗಿ ಯಾರನ್ನೂ ಮರಳುಗೊಳಿಸುವ ಮೋಹಕವಾದ ಮುಗುಳುನಗೆ—ಇವುಗಳ ಹಿಂದೆ ಜಲಾಲ ಮೊದಲಿನಿಂದಲೂ ತನ್ನ ಭವಿಷ್ಯತ್ತಿಗೆ ಮಾರಕವಾದ ಅಸೂಯೆಯನ್ನೇ ಬೆಳಿಸಿಕೊಂಡು ಬಂದಿದ್ದ ಎಂಬುದರ ಮೇಲೆ ಝುಗ್ಗನೆ ಬೆಳಕು ಬಿದ್ದಗ ದೇವರೇ ಎಂದುಕೊಂಡ. ಜಲಾಲನಂತಹ ಸಹೋದ್ಯೋಗಿಯನ್ನು ಕೂಡ ನಂಬುವದು ತಪ್ಪಾದರೆ ಬದುಕಿನಲ್ಲಿ ಯಾವುದನ್ನು ನಂಬಬೇಕು? ಪ್ರತಿಯೊಬ್ಬನನ್ನೂ ಅಪನಂಬಿಕೆಯಿಂದ ನೋಡುವದೇ ಜಾಣತನವಾದರೆ ಬದುಕಿರಬೇಕು ಎನ್ನುವ ಅಭೀಪ್ಸೆಗೆ ಅರ್ಥವಾದರೂ ಏನು? ಎಂದೂ ಅನ್ನಿಸಿತು. ಅಂತಃಸ್ಫೂರ್ತಿಯನ್ನು ಕಳಕೊಂಡ ಭಾವನೆಗಳ ಅರ್ಥವೇ ನಾಗಪ್ಪನಿಗೆ ಆಗುತ್ತಿರಲಿಲ್ಲ. ಬರೇ ಸ್ವಾರ್ಥವೇ ಮೂಲವಾದ ಭಾವನೆಗಳು ತಟ್ಟುತ್ತಿರಲಿಲ್ಲ. ತನ್ನ R&D ಕಲ್ಪನೆಗಳನ್ನು ಉಳಿದವರು ಕಳವು

ಮಾಡಿದ್ದಾರೆಂಬುದರ ಬಗ್ಗೆ ಸಿಕ್ಕ ಪುರಾವೆಗಳ ಬಗೆಗಿನ ಉದಾಸೀನತೆಗೆ ಇದೂ ಒಂದು ಕಾರಣ-ಆ ಕೃತ್ಯದ ಅರ್ಥಹೀನತೆ. ಸುತ್ತಲಿನ ಸದ್ದುಗದ್ದಲವನ್ನು ಕೇಳಿಯೂ ಕೇಳದವನ ಹಾಗೆ ಅಂತರ್ಮುಖಿಯಾದಾಗ ಹುಟ್ಟಿದ ಒಂದು ವಿಚಾರದಿಂದ ತಲ್ಲಣಗೊಂಡ: ಫಿರೋಜ್ ತನ್ನ ಬಗ್ಗೆ ತೋರಿಸುತ್ತ ಬಂದ ದ್ವೇಷಕ್ಕೆ ಜಲಾಲ ಸ್ಫೂರ್ತಿಯಾಗಿರಬಹುದೆ? ಹಾಗಾದರೆ ಈ ಎಲ್ಲ ಹೊಸ ನಾಟಕಕ್ಕೆ?

ಜಲಾಲನ ಬಗ್ಗೆ ಇಂತಹ ಸಂಶಯ ಈ ಮೊದಲು ಬಂದಿರಲಿಲ್ಲವೆಂದಲ್ಲ. ಆದರೆ ಅದು ಬಂದದ್ದು ಜಲಾಲ ಕಣ್ಣೆದುರಿಗೆ ಇಲ್ಲದಿದ್ದಾಗ ಮಾತ್ರ. ಯಾವಾಗಲೂ ಹಸನ್ಮುಖಿಯಾದ ಜಲಾಲನ ಮೋರೆ ಕಣ್ಣೆದುರಿಗೆ ಬಂದ ಕೂಡಲೇ ತನ್ನ ಸಂಶಯದಿಂದ ತನಗೇ ಮುಜಗರವಾಗುತ್ತಿತ್ತು. ಏನಿದ್ದರೂ ಫಿರೋಜನ ಕ್ರೌರ್ಯದ ಹಿಂದಿನ ಪ್ರೇರಣೆಯನ್ನು ಅರಸುವಾಗ ಅದರಲ್ಲಿ ಜಲಾಲನ ಪಾತ್ರವೇನು ಎಂಬುದನ್ನರಿಯುವದೂ ಮಹತ್ವದ್ದೆಂದು ತೋರಿತು. ತನ್ನ ಹತ್ತಿರದ ಗೆಳೆಯನೆಂಬಂತೆ ನಡಕೊಳ್ಳುತ್ತಿರುವಾಗಲೂ ಒಳಗೊಳಗೇ ತನ್ನ ಭವಿತವ್ಯದ ವಿರುದ್ಧ ಹೂಡಿದ ಪಿತೂರಿಗೆ ಕಾರಣವಾದದ್ದು ಮಾತ್ರ ಆತ್ಮ ಸಂರಕ್ಷಣೆಯ ಪಶು-ಪ್ರವೃತ್ತಿಯ ನೆಲೆಯಲ್ಲಿ ಹುಟ್ಟಿದ್ದೆಂಬುದರ ಅರಿವು ಬಂದಾಗ ಜಲಾಲನ ಬಗೆಗೂ ಮೊತ್ತಮೊದಲಿಗೆ ಜಿಗುಪ್ಸೆ ಹುಟ್ಟಿತು: R&D – ತನಗೆ ಅತ್ಯಂತ ಪ್ರಿಯವಾದ ಈ ಕಾರ್ಯಕ್ಷೇತ್ರದಲ್ಲಿ ಬೆಳಗಿದ ತನ್ನ ಪ್ರತಿಭೆ ಒಂದು ಆದರಣೀಯವಾದ ಘನತೆಯನ್ನು ಪಡೆಯುವುದರಲ್ಲಿದ್ದಾಗ ಒಮ್ಮೆಲೇ ಎರಗಿದ ಅನಾಹುತದಿಂದಾಗಿ ಹೈದರಾಬಾದವನ್ನು ಬಿಟ್ಟು ಮುಂಬಯಿಗೆ ಬರಬೇಕಾದ ಪ್ರಸಂಗ; ಆದರೂ ಎದೆಗುಂದದೇ ಇಲ್ಲಿ ಬಂದ ಆರು ತಿಂಗಳೊಳಗಾಗಿ ತನಗೆ ವಹಿಸಿಕೊಟ್ಟ ಹೊಸ ಕ್ಷೇತ್ರದಲ್ಲಿ ತಾನು ತೋರಿಸಿದ ಉತ್ಸಾಹ, ಕರ್ತಬುಗಾರಿಕೆಗಳಿಂದಾಗಿ ಇಲ್ಲಿಯ ಸಹೋದ್ಯೋಗಿಗಳಿಂದ, ಡೈರೆಕ್ಟರರಿಂದ, ಕಂಪನಿಯ ಗ್ರಾಹಕರಿಂದ ಪಡೆದ ಗೌರವದ ಬಗೆಗೊ ಫಿರೋಜ್ ತೋರಿಸುತ್ತ ಬಂದ ತಿರಸ್ಕಾರಕ್ಕೆ ಕಾರಣ ತಿಳಿಯದಾಗಿದೆ. ಎಲ್ಲ ಕಡೆಯಿಂದಲೂ ತನ್ನನ್ನು ಸುತ್ತವರಿಯುತ್ತಿದ್ದ ಶಿಕಾರಿಯವರ ತಂಡದಲ್ಲಿ ಈಗ ಶ್ರೀನಿವಾಸನೂ ಸೇರಿಕೊಂಡಂತಿದೆ. ಫಿರೋಜ್, ಜಲಾಲ ಹಾಗೂ ಶ್ರೀನಿವಾಸ ಈ ಮೂವರ ಕ್ರೌರ್ಯಕ್ಕೆ ತನ್ನಂತಹ ನಿರುಪದ್ರವಿಯಾದವನು ಕಾರಣವಾಗಬೇಕಾದರೆ ಈ ಮೂವರನ್ನೂ ಒಟ್ಟಿಗೆ ತಂದ ಯಾವುದೋ ದುಷ್ಟ ಸಂಚಿಗೆ ತಾನು ತನಗೇ ಗೊತ್ತಿಲ್ಲದ ರೀತಿಯಲ್ಲಿ ಅಡ್ಡಗಾಲು ಹಾಕಿರಬಹುದೇ?

ಹೈದ್ರಾಬಾದಿಗೆ ಹೋಗುವ ಮೊದಲು ಇದರ ನಿಲುಗಡೆಯಾಗಬೇಕು. ಮೇರಿಗೆ ಗೊತ್ತಿರಬಹುದೆ? ಮೇರಿಗೆ ಫೋನ್ ಮಾಡಿ ಸಿನೇಮಾಕ್ಕೆ, ರಾತ್ರಿಯ ಊಟಕ್ಕೆ ಕರೆದರೆ ಹೇಗೆ? ತನ್ನ ಬಗ್ಗೆ ಆದರ ಪ್ರೀತಿ ತೋರಿಸುತ್ತ ಬಂದ ಈ ಹುಡುಗಿ ಇಂತಹ ’ಡೇಟಿ’ನ ಸೂಚನೆಯನ್ನು ಎಷ್ಟೊಂದು ಸರತಿ ಮಾಡಿದ್ದರೂ ತಾನೇ ಅದಕ್ಕೆ ಇನ್ನೂ ಧೈರ್ಯಮಾಡಿರಲಿಲ್ಲ. ಒಮ್ಮೆಯಂತೂ ಈ ಅವಳ ಸೂಚನೆಯ ಅರ್ಥ ತನಗಾಗುತ್ತಿಲ್ಲ ಎಂದು ನಟಿಸಿದಾಗ—sweet innocent ಎಂದು ಕಣ್ಣುವಿಟುಕಿಸುತ್ತ ನಕ್ಕಿದ್ದಳು. ಸಂಕೋಚ - ಪ್ರಕೃತಿಯವನಾದ ನಾಗಪ್ಪನಿಗೆ, ಡೇಟಿಂಗಿನಂಥ ನಿಷ್ಪಾಪವಾದ ಚಟುವಟಿಕೆ ಕೂಡ ದೊಡ್ಡ ಸಾಹಸವೆಂಬ ತಿಳಿವಳಿಕೆಯಿಂದಾಗಿ, ಮೇರಿಗೆ ಫೋನ್ ಮಾಡುವ ಕಲ್ಪನೆಯಿಂದಲೇ ಎರಡೂ ಕಿವಿಗಳು ಬೆಚ್ಚಗಾದುವು. ಸದ್ಯ, ಹೊಟ್ಟೆ ಚೆನ್ನಾಗಿ ಹಸಿದಿದೆ; ಒಳ್ಳೇ ನಾಸ್ತಾದ ಗರಜಿದೆ ಎಂಬುದರ ಅರಿವು ಬಂದು ಬೆನ್ ಹೆಮ್‌ಹಾಲ್ ಲೇನಿನಲ್ಲಿಯ ಸಂತೋಷಭವನಕ್ಕೆ ಹೋಗುವ ತಯಾರಿ ಮಾಡಹತ್ತಿದ. ಉತ್ತಪ್ಪ. ವಡೆಗಳ ನೆನಪಿನಿಂದಲೇ ಬಾಯಲ್ಲಿ ನೀರೂರಿತು. ಸಂತೋಷ ಭವನಕ್ಕೆ ಹೋದಾಗ ಹತ್ತಿರದ ಸಾರ್ವಜನಿಕ ಟೆಲಿಫೋನ್ ಬೂಥಿನಿಂದಲೇ ಮೇರಿಗೆ ಫೋನ್ ಮಾಡಿದರಾಯಿತು ಎಂದುಕೊಂಡ. ಅರ್ಜುನ್‌ರಾವರ ಮನೆಯಲ್ಲಿ ಫೋನ್ ಇದ್ದರೂ ಅಲ್ಲಿಂದ ಎಂದೂ ಫೋನ್ ಮಾಡಿದವನಲ್ಲ. ಗರಜುಬಿದ್ದಾಗ ಕೆಲವು ಗೆಳೆಯರು, ಆಫೀಸಿನವರು ಆಗೀಗ ಆ ನಂಬರಿಗೆ ಫೋನ್ ಮಾಡುತ್ತಿದ್ದರು, ಅಷ್ಟೇ. ತನ್ನ ಈಗಿನ ಸ್ಥಾನಬದ್ಧತೆಗೆ ಕಾರಣವಾದ ದುಷ್ಟ ಆದೇಶ ಬಂದದ್ದೇ ಅರ್ಜುನ್‌ರಾವರ ಫೋನಿನ ಮೇಲೆ ಎಂಬುದರ ಅಪ್ರಿಯವಾದ ನೆನಪು ಮರುಕಳಿಸುವ ಮೊದಲೇ ಹೊರಗೆ ಬೀಳುವ ತ್ವರೆಯಲ್ಲಿದ್ದವನ ಹಾಗೆ ಲಗುಬಗೆಯಿಂದ ಹೊಸಲು ದಾಟಿ ಕೋಣೆಯ ಕದವಿಕ್ಕಿ ಬೀಗ ಹಾಕಿದ.

## ಅಧ್ಯಾಯ ನಾಲ್ಕು

ಸಂತೋಷಭವನವನ್ನು ಸಮೀಪಿಸುತ್ತಿದ್ದ ಹಾಗೆ ನಾಗಪ್ಪನ ಮನಸ್ಸು ನಿಷ್ಕಾರಣವಾಗಿ ಕಳವಳಕ್ಕೊಳಗಾಯಿತು. ಪ್ರತಿ ಸಲ, ಖೇಮರಾಜಭವನದಿಂದ ಹೊರಬಿದ್ದು ಪ್ರಾರ್ಥನಾಸಮಾಜಕ್ಕೆ ಹೋಗುವ ಖೇತವಾಡಿ ಮೇನ್ ರೋಡ್ ಸೇರಬೇಕಾದರೆ ಆರನೇ ಗಲ್ಲಿಯಿಂದ ಹೋಗುತ್ತಿದ್ದನಾದರೂ ಇವತ್ತು ಏಳನೇ ಗಲ್ಲಿಯಿಂದ ನಡೆದ. ಏಳನೇ ಗಲ್ಲಿಯ ತುದಿಯಲ್ಲೇ ಕಾಮ್ಯುನಿಸ್ಟ್ ಪಕ್ಷದ ಮುಖಪತ್ರವಾದ 'ಪೀಪಲ್ಸ್ ಏಜ್' ಎಂಬ ಪತ್ರಿಕೆಯನ್ನು ಛಾಪಿಸುತ್ತಿದ್ದ ಮುದ್ರಣಾಲಯ ಹಾಗೂ ಪಕ್ಷದ ಗಿರ್ಗಾಂವ್ ಶಾಖೆಯ ಆಫೀಸು ಇವೆ. ಹೈದ್ರಾಬಾದಿನ ಕಾರಖಾನೆಯ ಕಾಮಗಾರರ ಆರೋಗ್ಯಕ್ಕಿರುವ ಅಪಾಯವನ್ನು ಪರ್ಯಾಯವಾಗಿ ಅಲ್ಲಿಯ ಕಾಮಗಾರ ಯೂನಿಯನ್ನಿನ ಸಂಚಾಲಕತ್ವ ವಹಿಸಿದ ಕಾಮ್ಯುನಿಸ್ಟರ ಲಕ್ಷ್ಯಕ್ಕೆ ತರಬೇಕೆಂದು ಎಂದೋ ಮಾಡಿಕೊಂಡ ಹುಂಬಗಾರಿಕೆಯ ವಿಚಾರ ಈಗ ಆಳದಲ್ಲೆಲ್ಲೋ ತಲೆಯೆತ್ತಿರಬೇಕು: ಪಾರ್ಟಿಯ ಆಫೀಸನ್ನು ದಾಟುವಾಗ ಎದೆ ಡವಗುಟ್ಟಿದ ರೀತಿಗೆ ತಾನೇ ಆಶ್ಚರ್ಯಪಟ್ಟ. ನಡಿಗೆಯ ವೇಗವನ್ನು ಹೆಚ್ಚಿಸಿ ಮೇನ್ ರೋಡ್ ಸೇರಿ ಪ್ರಾರ್ಥನಾಸಮಾಜದ ಕಡೆ ಹೊರಳಿದ. ತಾನು ಇದೀಗ ಅನುಭವಿಸಿದ ಎದೆಗುದಿಗೆ ಕಾರಣ ಮೇರಿಗೆ ಫೋನ್ ಮಾಡುವ ಆತಂಕವಾಗಿರಲೂಬಹುದು ಎಂದೆನ್ನಿಸಿತು. ಯಾಕೆಂದರೆ, ಕಾಮ್ಯುನಿಸ್ಟರ ಆಫೀಸಿನ ಹೊರಗೇ ಸಾರ್ವಜನಿಕ ಟೆಲಿಫೋನ್ ಬೂಥ್ ಇದೆ. ಇಷ್ಟು ತಿಂಗಳು ಅವಳ ಬಗ್ಗೆ ಒಂದು ರೀತಿಯಿಂದ ನಿರಾಸಕ್ತಿ ತೋರಿಸುತ್ತ ಬಂದ ತಾನು ಈಗ ಅವಳನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವದು ಸರಿಯೇ? ನಾಗಪ್ಪ, ಕೊನೆಗೂ ಮೇರಿಗೆ ಫೋನ್ ಮಾಡುವ ವಿಚಾರವನ್ನು ಬಿಟ್ಟುಕೊಟ್ಟ: ಆದರೆ ಅವನು ಇದೀಗ ಸಮರ್ಥಿಸಿಕೊಂಡ ಕಾರಣಕ್ಕಾಗಿಯಲ್ಲ. ನಾನಾಚೌಕಿನತ್ತ ಹೋಗುವ ಬಸ್ಸು ದೂರದಲ್ಲಿ ಕಂಡಂತಾದೊಡನೆ ರಾಣಿ ಮನಸ್ಸು ತುಂಬಹತ್ತಿದ್ದಳು. ಆದರೆ ತನಗೇ ಇನ್ನೂ ಸ್ಪಷ್ಟವಾಗಿ ಅರಿವಿಗೆ ಬಂದಿರದ ಆತಂಕವೊಂದು ಇಂತಹ ಯಾವ ಒಂದು ಬಯಕೆಗೆ ಆಸ್ಪದ ಕೊಡದಾಯಿತು. ತಾನಿನ್ನೂ ಹೆದರಿಕೊಂಡಿದ್ದೇನೆ ಎಂಬಂತಹ ಭಾವನೆ ಇನ್ನಷ್ಟು ಕಳವಳಕ್ಕೆ ಕಾರಣವಾಯಿತು. ಪ್ರಾರ್ಥನಾಸಮಾಜದ ನಾಲ್ಕು ರಸ್ತೆಗಳ ಕೂಟಸ್ಥಾನಕ್ಕೆ

ಬಂದವನೇ ನಾಗಪ್ಪ ಶೂನ್ಯಮನಸ್ಕನಾಗಿ ನಿಂತೇಬಟ್ಟ. ಮುಂದಿನ ಗಿರ್ಗಾಂವ್ ರೋಡ್ ದಾಟಿದರೆ ಬೆನ್-ಹೆಮ್-ಹಾಲ್-ಲೇನ್ ಐದೇ ಮಿನಿಟಿನ ಹಾದಿ. ಉತ್ತಪ್ಪ, ವಡೆಗಳ ನೆನಪಿನಿಂದ ಬಾಯಲ್ಲಿ ನೀರೊಡೆಯುವದು ಬಿಟ್ಟು ಬಾಯಿ ತನ್ನ ರುಚಿಯನ್ನೇ ಕಳಕೊಂಡುಬಿಟ್ಟಿದೆ ಅನ್ನಿಸಿತು. ಮುರಕಿಯಲ್ಲಿಯ ನ್ಯೂಸ್‌ಪೇಪರ್ ಅಂಗಡಿಗೆ ಹೋಗಿ ಟೈಮ್ಸ್ ಆಫ್ ಇಂಡಿಯಾದ ಪ್ರತಿಯೊಂದನ್ನು ಕೊಂಡುಕೊಂಡು: ದಿನವೂ ಬೆಳಿಗ್ಗೆ ಸಂತೋಷಭವನಕ್ಕೆ ನಾಸ್ತಾಕ್ಕೆ ಹೋಗುವಾಗಿನ ಪರಿಪಾಟ. ಪರಿಚಯದ ಹುಡುಗ, 'ಐದಾರು ದಿನಗಳಾದವು. ರಾಯರನ್ನು ಕಾಣಲೇ ಇಲ್ಲ,' ಎಂದು ಪ್ರೀತಿಯಿಂದ ಮಾತನಾಡಿಸಿದ. ಈ ಆತ್ಮೀಯತೆ ತುಂಬಿದ ಸರಳ ಮಾತುಗಳು ಅನಪೇಕ್ಷಿತ ರೀತಿಯಲ್ಲಿ ತಟ್ಟಿ ನಾಗಪ್ಪನನ್ನು ಅಲ್ಲಾಡಿಸಿಬಿಟ್ಟವು. ಹಣ ಕೊಡಲು ಪಾಕೀಟಿಗೆ ಕೈ ಹಾಕಿದಾಗ ಏನಾದರೂ ಹೇಳಬೇಕೆಂದರೆ ಬಾಯಿಂದ ಮಾತೇ ಹೊರಡದಾಯಿತು. ಕೊನೆಗೆ ಮೈಯಲ್ಲಿ ಚೆನ್ನಾಗಿರಲಿಲ್ಲ ಎಂದಿಷ್ಟೇ ಹೇಳಿ ಅಲ್ಲಿಂದ ಹೊರಟು ರಸ್ತೆ ದಾಟಿದ. ಈ ಪ್ರಕರಣದಲ್ಲಿ ತನ್ನ ನೌಕರಿಗೇನಾದರೂ ಸಂಚಕಾರ ಬಂದರೆ ಖೇತವಾಡಿಯ ಯಾವುದಾದರೊಂದು ಮೂಲೆಯಲ್ಲಿ ಹೀಗೆ ಪತ್ರಿಕೆ ಮಾರುವ ಇಲ್ಲ ಬರೀ ರದ್ದೀ ಮಾರುವ ಅಂಗಡಿಯನ್ನು ತೆರೆದು ಕೂತರಾಯಿತು ಎಂದಕೊಂಡ. ಬರಿಯೆ ಚೇಷ್ಟೆಗೆ ಅಂದಹೊಂಡ ಮಾತುಗಳೆಂದು ಅವು ಮನಸ್ಸಿನಲ್ಲಿ ಹುಟ್ಟಿದ ಕ್ಷಣದಲ್ಲಿ ಅನ್ನಿಸಿದರೂ ಹೊತ್ತುಹೋದ ಹಾಗೆ, ಅವು ಬರಿಯೇ ಚೇಷ್ಟೆಯ ಮಾತುಗಳಲ್ಲವೇ ಅಲ್ಲ; ಅಷ್ಟೇಕೆ ಅವು ತನ್ನ ಮಾತುಗಳೇ ಅಲ್ಲ- ಯಾರೋ ಬಜಾಯಿಸಿದ 'ಹುಕುಮ್' ಎಂದನ್ನಿಸಹತ್ತಿದಾಗ ಗಂಭೀರನಾದ. ನಕ್ಕುಬಿಡಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗದಾಯಿತು.

ಬೆನ್-ಹೆಮ್-ಹಾಲ್-ಲೇನಿನ ಇಬ್ಬದಿಗಳಲ್ಲೂ ಸಾಲುಗಟ್ಟಿ ಕುಳಿತು ಕಾಯಿಪಲ್ಲೆ, ಹಣ್ಣು ಹೂಗಳನ್ನು ಮಾರುವ ಮರಾಠೀ ಹೆಣ್ಣು ಗಳು, ಕೆಂಪು ಟೋಪಿಯ 'ವಸೂಯೂವಾಲೇ' ಗಂಡಸರು ತಾವು ತಾವು ಮಾರುತ್ತಿದ್ದ ಸರಕಿನ ಹೆಸರು, ಧಾರಣೆಗಳನ್ನು ಒದರಿ ಹೇಳುತ್ತ ಆ ರಸ್ತೆಯಿಂದ ಹೋಗುವವರೆಲ್ಲ ತಮ್ಮ ಗಿರಾಕಿಗಳೇ ಎಂಬ ಸಂಭ್ರಮದಿಂದ ಅವರ ಲಕ್ಷ್ಯವನ್ನು ತಮ್ಮ ಕಡೆ ಸೆಳೆಯುತ್ತಿದ್ದರು. ಮಲ್ಲಿಗೆಜಡೆಗಳನ್ನು ಮಾರುತ್ತಿದ್ದ ಕಿರಗಣೆ ಉಟ್ಟ ಚಿಕ್ಕ ಹುಡುಗಿ 'ದಾದಾ ದಾದಾ' ಎಂದು ಇವನನ್ನು ಕರೆದಾಗ ಅವಳತ್ತ ದೃಷ್ಟಿ ಹರಿಯಿಸಿದ.

ಸರಸ್ವತಿಯ ನೆನಪು ಬಂದು ವಿಚಾರಮಾಡುವ ಮೊದಲೇ ಜಡೆಯೊಂದನ್ನು ಕೊಂಡ. ಹಸಿ. ಎಲೆಯೊಂದರಲ್ಲಿ ಕಟ್ಟಿಕೊಟ್ಟ ಚಿಕ್ಕ ಪೊಟ್ಟಣವನ್ನು ಕೈಯಲ್ಲಿ ಒಡಿದ ಮೇಲೇ ತನ್ನ ಕೃತ್ಯದ ಅರ್ಥವಾಯಿತೆನ್ನುವ ಹಾಗೆ ಈ ಮೊದಲಿನ ಕಳವಳವನ್ನು ಮರೆತು ಸುಖವಾಗಿ ಮುಗುಳುನಕ್ಕ. ಹೂವಿನ ಮಾದಕವಾದ ಕಂಪನ್ನು ಸೇವಿಸುತ್ತ ಸಂತೋಷಭವನ ಹತ್ತಿರವಾಗುತ್ತಲೇ ಪುಡಿಕೆಯನ್ನು ಪ್ಯಾಂಟಿನ ಕಿಸೆಯಲ್ಲಿ ಹಾಕಿ ರೆಸ್ಟೋರಂಟ್ ಹೊಕ್ಕ...

ಸಂತೋಷಭವನದ ಮಾಲೀಕನಾದ ಅಪ್ಪಾನಾಯಕನು ನಾಗಪ್ಪನ ಪರಿಚಯದವನು. ಅವನ ಜಿಲ್ಲೆಯವನೇ. ನಾಗಪ್ಪನನ್ನು ಕಂಡದ್ದೇ ತಡ ಕವಳ ತಿಂದ ಕೆಂಪುಬಾಯನ್ನು ಎಲ್ಲ ಹಲ್ಲುಗಳನ್ನೂ ತೋರಿಸುವಂತೆ ಕಿಸಿದು, ತಲೆಯ ಮೇಲಿನ ಗಾಂಧೀಟೋಪಿಯನ್ನೊಮ್ಮೆ ವಿನಾಕಾರಣ ತೆಗೆದು ತಿರುಗಿ ತಲೆಯಲ್ಲಿ ತೊಟ್ಟು: “ಐದಾರು ದಿನ ಇತ್ತಕಡೆ ಬರಲೇ ಇಲ್ಲ. ನಿನ್ನೆ ಶ್ರೀನಿವಾಸರಾವ್ ಭೇಟಿಯಾದಾಗಲೇ ತಿಳಿಯಿತು. ಒಂದು ತಿಂಗಳಕಾಲ ನೀನು ಅವನ ಮನೆಯಲ್ಲೇ ಇರುವವನಿದ್ದಿಯಂತೆ. ಆದರೆ ಅಕಸ್ಮಾತ್ ಹೈದ್ರಾಬಾದಿಗೆ ಹೋಗಬೇಕಾಗಿ...“ ನಾಗಪ್ಪನ ಮೋರೆ ಬಣ್ಣ ಕಳಕೊಳ್ಳಹತ್ತಿದ್ದನ್ನು ನೋಡಿ, “ಹೀಗೇ ಸಹಜವಾಗಿ. ನಿನ್ನ ಬಗ್ಗೆ ಮಾತು ಬಂದಾಗ... ನೀನು ಟೇಬಲ್ ಹಿಡಿ—ತಿಂಡಿಗೆ ಆರ್ಡರ್ ಕೊಡು. ಅಲ್ಲಿಗೇ ಬರುತ್ತೇನೆ. ಮತ್ತು ಇದು ನೋಡು. ನಿನ್ನನ್ನು ಹುಡುಕಿಕೊಂಡು ಒಬ್ಬ ಹುಡುಗ ಬಂದಿದ್ದ. ಎರಡು ಸರತಿ ಬಂದು ಹೋದ—ನಿನ್ನೆ ಸಂಜೆ ಒಮ್ಮೆ, ಇಂದು ಬೆಳಿಗ್ಗೆ ಒಮ್ಮೆ.” ಎನ್ನುತ್ತ ಅಂಟು ಹಚ್ಚಿ ಬಾಯಿ ಮುಚ್ಚಿದ ಸಣ್ಣಲಕ್ಕೋಟೆಯನ್ನು ನಾಗಪ್ಪನ ಕೈಗೆ ಕೊಟ್ಟ. ನಾಗಪ್ಪ, ಕೆಲ ಹೊತ್ತು ಒಬ್ಬನೇ ಕೂಡ್ರುವ ಮುಸ್ಸಾಗಿ, ಕೆಳಗೆ ಅನೇಕ ಜಾಗಗಳು ಖಾಲಿ ಇದ್ದರೂ ನಿಚ್ಚಣಿಕೆಯ ಮೆಟ್ಟಿಲುಗಳನ್ನು ಹತ್ತಿ ಮೇಲಿನ ಫೆಮಿಲೀ ರೂಮು ಒಂದನ್ನು ಹೊಕ್ಕ. ಹೊಟೆಲಿನಲ್ಲಾಗ ವಿಶೇಷ ಗದ್ದಲವಿರಲಿಲ್ಲ. ಮೇಲಾಗಿ ಮಾಣಿಗಳೆಲ್ಲ ಪರಿಚಯದವರಾಗಿದ್ದರಿಂದ ಯಾರೂ ಇದಕ್ಕೆ ತಕರಾರು ಮಾಡಲಿಲ್ಲ. ತನ್ನ ಕರಿಯರ್‌ನಲ್ಲಿ ಒದಗಿದ ಈ ದುರ್ಧರ ಪ್ರಸಂಗವನ್ನು ಶ್ರೀನಿವಾಸ ತನ್ನ ಪರಿಚಯದವರಿಗೆಲ್ಲ ಹೇಳುತ್ತ ಹೊರಟಿರಬಹುದೇ ಎಂಬ ಗುಮಾನಿಗೆ ಒಳಗಿನ ನಿರ್ಧಾರ ಕುಸಿಯಹತ್ತಿದ ಭಾವನೆ. ಆರ್ಡರ್ ತೆಗೆದುಕೊಳ್ಳಲು ಬಂದ ಮಾಣಿಗೆ ಉತ್ತಪ್ಪ ಕಾಫಿಗಳ ಆರ್ಡರ್ ಕೊಟ್ಟು ಅವನು ರೂಮಿನಿಂದ ಹೊರಟು ಹೋದ ಕೂಡಲೇ ನಾಯಕ ಕೊಟ್ಟ ಲಕ್ಕೋಟೆಯ ಬಾಯಿ ತೆರೆಯಹತ್ತಿದ.

ಎರಡೆರಡು ಸರತಿ ಬಂದೂ ಹೆಸರು ಕೊಡದೇ ಹೋದ ಈತ ಯಾರಿರಬಹುದು? ಎಂದು ಆತಂಕಪಟ್ಟ. ಲಿಫಾಫೆ ತೆರೆದಾಗ ಎರಡು ಇಂಚು ಉದ್ದ ಅಷ್ಟೇ ಅಗಲದ ಬಿಳಿಯ ಕಾಗದದ ಚೂರಿನಲ್ಲಿ ಟೈಪ್ ಮಾಡಿದ ಸಂದೇಶ: "This is from a friend and a well-wisher. Please phone today after 8 p.m on No. 54879 for an important message."

ಟೆಲಿಫೋನ್ ನಂಬರು ನೋಡಿದರೆ ಬಾಂದ್ರಾ, ಖಾರ್ ಅತ್ತಕಡೆಯದು-ಮೇರಿಯದಿರಬಹುದೆ? ಅವಳು ಇರುತ್ತಿದ್ದದ್ದು ಎಲ್ಲಿ ಎಂಬುದನ್ನು ತಿಳಿಯುವಷ್ಟರ ಮಟ್ಟಿಗೆ ಕೂಡ ತಾನು ಅವಳ ಬಗ್ಗೆ ಆಸ್ಥೆ ತೋರಿಸಲಿಲ್ಲ. ಬಾಂದ್ರಾದಲ್ಲೋ ಖಾರಿನಲ್ಲೋ ತನ್ನ ಜಾತಿಯವರ ಕುಟುಂಬವೊಂದರಲ್ಲಿ ಪೇಯಿಂಗ್ ಗೆಸ್ಟ್ ಆಗಿ ಇದ್ದಾಳೆ ಎಂಬಂತೆ ನೆನಪು. ಹಾಗೆ ನೋಡಿದರೆ ತನ್ನ ಅವಳ ಪರಿಚಯ ಎಷ್ಟು ದಿನದ್ದು? ಏಳೆಂಟು ತಿಂಗಳಷ್ಟೇ. ಅದಕ್ಕಿಂತ ಮೊದಲು ಆಗೀಗ ಹೆಡ್ ಆಫೀಸಿಗೆ ಬಂದಾಗ M.Dಯವರನ್ನು, ಕಾಣಲು ಹೋದಾಗ ಆದರದಿಂದ ಮಾತನಾಡಿಸಿದ್ದೆ. ಅವಳ ಒಳ್ಳೇತನದ ಬಗ್ಗೆ, ವೇಷಭೂಷಣದ ಬಗ್ಗೆ ಮಾತನಾಡಿ ನಗಿಸಿದ್ದೆ. ಒಂದು ಸಾರೆ ಮಾತ್ರ—ಮುಂಬಯಿಗೆ ವರ್ಗಾವಾಗಿ ಬಂದ ಕೆಲವು ದಿನಗಳಲ್ಲೇ ಇರಬೇಕು—ಇಂತಹ ಸುಂದರ ಕಣ್ಣುಗಳನ್ನು ಇನ್ನಾವ ಹುಡುಗಿಯಲ್ಲೂ ನೋಡಿಲ್ಲ ಎಂದಿದ್ದೆ. ಅದು ಬರಿಯ ಹೊಗಳಿಕೆಯ ಮಾತಾಗಿರಲಿಲ್ಲ. ಅವಳ ಮೇಲೆ ಛಾಪು ಹೊಡೆಯಬೇಕು ಎನ್ನುವ ವಿಶೇಷ ಉದ್ದೇಶವೂ ಅದರಲ್ಲಿರಲಿಲ್ಲ. ಮನಸ್ಸು ಆರ್ದ್ರವಾದ ಒಂದು ಕ್ಷಣದಲ್ಲಿ ಅವಳ ಸಾನಿಧ್ಯದಲ್ಲಿ ನಿಂತಾಗ ಸಹಜ ಸ್ಫೂರ್ತಿಯಿಂದ ಅನ್ನಿಸಿದ್ದನ್ನು ಹೇಳಿದ್ದು. ಹುಡುಗಿಯ ಮೇಲೆ ತಾನೇ ಎಣಿಸಿರದ ಪರಿಣಾಮ ಮಾಡಿರಬೇಕು. ಆಗ ಹೊಗಳಲು ಧೈರ್ಯವಾಗಿರದ ಅವಳ ಸುಂದರ ತುಟಿಗಳ ಸುತ್ತ ಮುಗುಳುನಗೆ ಅರಳಿದ್ದು, you flatterer ಎಂದು ತುಂಟತನದಿಂದ ಕಣ್ಣುಮಿಟುಕಿಸಿದ್ದು ನೆನಪಾಯಿತು. ಆ ನೆನಪಿನಿಂದಲೇ ಮನಸ್ಸು ಗೆಲುವಾಗಹತ್ತಿತು. ಮಾಣಿ, ಉತ್ತಪ್ಪ ಚಟ್ಣಿ ತಂದ. "ಕಾಫಿ ಈಗಲೇ ತರಲೇ? ತುಸು ತಡೆದು ತರಲೇ ಸರ್?" ಎಂದು ಕೇಳಿದ. "ನಿಮ್ಮ ಮೆಚ್ಚಿಕೆಯ ವಡೆ ಬಿಸಿಬಿಸಿ ಇವೆ. ಒಂದು ಪ್ಲೇಟ್ ತರಲೇ ಸರ್?" ಎಂದು ಕೇಳಿದ. ನಾಗಪ್ಪನ ಗೆಲುವು ಅವನನ್ನೂ ತಟ್ಟಿರಬೇಕು. ನಾಗಪ್ಪ ಖುಶಿಯಿಂದ, "ಹೌದು, ವಡೆ ಹಾಗೂ ಕಾಫಿ ಒಟ್ಟಿಗೇ ತಾ," ಎಂದ. ಮಾಣಿ ಹೊರಟುಹೋದ ಮೇಲೆ ಹುಟ್ಟಿದ ಸಂಶಯವೊಂದು ಹೊಸ

ದುಗುಡಕ್ಕೆ ಕಾರಣವಾಯಿತು: ಆ ಚೀಟಿ ಮೇರಿಯದಾಗಿರದೇ ಇನ್ನೊಬ್ಬರದಾಗಿದ್ದರೆ? ಮೇರಿಯದೇ ಆಗಿದ್ದರೆ ಅವಳಿಗೆ ಇಷ್ಟೊಂದು ತರಾತುರಿಯಲ್ಲಿ "ನನಗೆ ಮುಟ್ಟಿಸಬೇಕಾದ ಸಮಾಚಾರ ಅದೇನಿರಬಹುದು. ಚೀಟಿಯಲ್ಲಿ ತನ್ನ ಹೆಸರನ್ನು ತಿಳಿಸದೇ ಇರುವುದಕ್ಕೆ ಕಾರಣವೇನು? ಇನ್ನೊಬ್ಬನ ಬಗ್ಗೆ ಚಿಂತೆ ವ್ಯಕ್ತಪಡಿಸುವಾಗಲೂ ತಾನು ಮಾತ್ರ ಈ ಉಪದ್ವ್ಯಾಪದಲ್ಲಿ ಸಿಕ್ಕಿಬೀಳದಿರುವಂತೆ ವಹಿಸಿದ ಎಚ್ಚರವೇ? ದೇವರೇ! ನಾವೆಲ್ಲ ಯಾರೂ ಯಾರನ್ನೂ ನಂಬಲಾಗದಂಥ ಸ್ಥಿತಿಗೆ ಬರುತ್ತಿದ್ದೇವೆಯೆ? ನಮ್ಮ ನಮ್ಮ ತಲೆ ಉಳಿಸಿಕೊಳ್ಳುವುದರಲ್ಲೇ ನಮ್ಮ ಕ್ರಿಯಾಶಕ್ತಿಯ ಸ್ಫೂರ್ತಿಯನ್ನೇ ಕಳಕೊಳ್ಳುತ್ತಿಲ್ಲವಷ್ಟೇ? ಈ ಚೀಟಿ ಮೇರಿಯದೇ ಆಗಿದ್ದರೆ ನನ್ನ ಬಗ್ಗೆ ಇಷ್ಟೊಂದು ಕಾತರ ಇದ್ದೂ ತನ್ನ ಹೆಸರನ್ನು ತಿಳಿಸದೇ ಇರುವಂತಹ ಸಂದರ್ಭವೇನಿರಬಹುದು? ಚೀಟಿಯನ್ನು ನನ್ನ ಕೋಣೆಗೆ ಕಳಿಸದೇ ಹೀಗೆ ಹೊಟೆಲ್ಲಿಗೆ ಕಳಿಸುವ ಉದ್ದೇಶವೇನು? ಎಂಟು ಗಂಟೆಯ ನಂತರವೇ ಫೋನ್ ಮಾಡಲು ಹೇಳಿದ್ದು ಮನೆಯಲ್ಲಿ ತಾನು ನಿಶ್ಚಿತವಾಗಿ ಇರುವ ಹೊತ್ತಿಗೇ ಫೋನ್ ಬರಲಿ ಎಂಬ ಉದ್ದೇಶದಿಂದಿರಬೇಕು.

ಮಾಣಿ ವಡೆ, ಕಾಫಿ ತಂದಿಟ್ಟು ಹೋಗುವಷ್ಟರಲ್ಲಿ ಹೊಟೆಲ್ ಮಾಲಕ ನಾಯಕ ಒಳಗೆ ಬಂದ. ಕಿವಿಯ ಸಂದಿಯಲ್ಲಿ ಅತ್ತರ್ ಹಚ್ಚಿದ ಹತ್ತಿಯ ತುಂಡೊಂದನ್ನು ಸಿಕ್ಕಿಸಿಕೊಂಡಿದ್ದ. ತಲೆನೋವು ತರಿಸುವಂತಹ ಅದರ ವಾಸನೆಯಿಂದ ನಾಗಪ್ಪನಿಗೆ ಕಾಫಿಯ ರುಚಿಯೇ ತಿಳಿಯದಾಯಿತು. ರಂಗೇಲ ಎರಡೂ ಮಗ. ಹೊಟೆಲ್ಲಿನ ಗಲ್ಲೆಯಲ್ಲಿ ಕೂತು ಬರಹೋಗುವವರ ಮೋರೆಗಳನ್ನು ನೋಡುತ್ತ, ಗಿರಾಕಿಗಳಿಂದ ಬಿಲ್ಲು ಪಡೆದು ಹಣ ವಸೂಲುಮಾಡಿ, ಚಿಲ್ಲರೆ ಹಣ ವಾಪಸ್ಸು ಕೊಟ್ಟು ಬಿಲ್ಲನ್ನು ನೆಟ್ಟಗೆ ನಿಂತ ದಬ್ಬಣವೊಂದಕ್ಕೆ ಚುಚ್ಚುತ್ತ ಕೂಡ್ರುವ ಈತನ ತಲೆಯಲ್ಲಿ ದುಡ್ಡಿನ ಪೆಟ್ಟಿಗೆಯಲ್ಲಿ ಶೇಖರಿಸುತ್ತಿದ್ದ ಹಣ, ಅದರಿಂದ ಕೊಂಡುಕೊಳ್ಳಬಹುದಾದ ಭೋಗವಸ್ತು—ಇವುಗಳನ್ನು ಬಿಟ್ಟು ಬೇರೆ ಯಾವುದಾದರೂ ವಿಚಾರ ತುಂಬಿರುವದು ಶಕ್ಯವಿದೆಯೆ? ನಾಗಪ್ಪನಿಗೆ ಸಂಶಯ. "ಚೀಟಿ ಕೊಟ್ಟ ಹುಡುಗನನ್ನು ನಾನು ಇತ್ತಕಡೆ ನೋಡಿದಂತಿಲ್ಲ. ಕ್ರಿಶ್ಚನ್ನನಿದ್ದಂತೆ ತೋರಿತು. ಚೀಟಿ ಯಾರು ಕಳಿಸಿದ್ದಾರೆ ಎಂದು ಕೇಳಿದಾಗ ನಿನ್ನ ಗೆಳೆಯರೊಬ್ಬರೆಂದನೇ ಹೊರತು ಹೆಚ್ಚಿನ ಮಾತೇ ಇಲ್ಲ. ನಿನ್ನೆ ಬಂದಾಗ ಚೀಟಿ

ಇಟ್ಟುಕೊಳ್ಳಲೇ ಎಂದು ಕೇಳಿದಾಗ, ನನಗೆ ಕೊಡಲು ಹಿಂದೆಮುಂದೆ ನೋಡುತ್ತ 'ಇಲ್ಲ, ಇನ್ನೊಮ್ಮೆ ಬರುತ್ತೇನೆಂ'ದ. ನಿನ್ನ ಪರಿಚಯವೂ ಅವನಿಗೆ ಇದ್ದಂತೆ ಇಲ್ಲ. ಯಾಕಂದರೆ ನಾನು ಹಾಕಿಕೊಟ್ಟ ಕುರ್ಚಿಯಲ್ಲಿ ಕುಳಿತು ಗಿರಾಕಿಗಳು ಒಬ್ಬೊಬ್ಬರೇ ಬಂದಂತೆ—'ಅವರು ಬಂದರೆ?' ಎಂದು ಕೇಳುತ್ತಿದ್ದ ನೇರವಾಗಿ, ನಿನಗೆ ಅವರ ಪರಿಚಯವಿಲ್ಲವೇ ಎಂದು ಕೇಳಿದಾಗ ಬಹಳ ಚಾಲಾಕಿನ ಉತ್ತರ—"ಚೀಟಿ ಕೊಟ್ಟವರು ಅವರನ್ನು ಚೆನ್ನಾಗಿ ಬಲ್ಲರು."

ಎರಡೂ ಮಗನೇ ನಿನ್ನ ತಲೆಯ ಮೇಲೆ ಜಜ್ಜಿಬಿಡಬೇಕು ಅನ್ನಿಸುತ್ತದೆ ಯಲ್ಲವೊ ಎನ್ನುವಷ್ಟು ಬಂದ ಸಿಟ್ಟನ್ನು ನಾಗಪ್ಪ ಪ್ರಯತ್ನಪೂರ್ವಕವಾಗಿ ಸುಂಗಿಕೊಂಡ. (ಇಷ್ಟು ಸಣ್ಣ ಚೂರು ಸಂಗತಿಯನ್ನೇ ದೋಸೇ ಹಿಟ್ಟಿನ ಹಾಗೆ ವಿಸ್ತರಿಸುವ ನೀನು ಹೊಟೆಲ್ ಮಾಲಕನಾಗಿ ಶೋಭಿಸುತ್ತೀ, ಬಿಡು!) ಚೀಟಿ ಬರೆದವಳು ಮೇರಿಯೇ ಇರಬೇಕು ಎಂಬ ಅನ್ನಿಸಿಕೆ ಗಟ್ಟಿಯಾಗುತ್ತಿರುವಾಗಲೇ ನಾಯಕ ಸಣ್ಣ ಬಾಂಬನ್ನೇ ಎಸೆದ: “ಶ್ರೀನಿವಾಸನ ಬಗ್ಗ ನೀನೇನೋ ಕಾದಂಬರಿ ಬರೆಯಲು ಹಿಡಿದಿದ್ದಿಯಂತೆ. ನಿನ್ನ ಗೆಳೆಯ ಸೀತಾರಾಮ ಎಲ್ಲ ಕಡೆಯಲ್ಲಿ ಸುದ್ದಿ ಹಬ್ಬಿಸಿದ್ದಾನೆ. ಶ್ರೀನಿವಾಸನಿಗೆ, ಇದು ಗೊತ್ತಾಗಿದೆ. ಆದರೆ ಅದಕ್ಕೆ ಅವನು ಹೆದರಿಕೊಂಡಿಲ್ಲ. 'ಬರೆಯಲಿ, ಯಾವ ಭಿಡೆಯೂ ಬೇಡ. ನನ್ನ ಮನೆಯಲ್ಲೇ ಕೂತು ಬರೆ' ಎಂದು ಅವನೇ ನಿನಗೆ ಸೂಚಿಸಿದ್ದನಂತೆ. ಹೌದೆ? ಶ್ರೀನಿವಾಸನೇ ಹೇಳಿದ್ದು... ಬಾಯಲ್ಲಿ ತುಂಬಿಕೊಂಡ ಕವಳದ ಎಂಜಲವನ್ನು ಸಿಂಕಿನಲ್ಲಿ ಉಗುಳಿ ಬರುವಷ್ಟರಲ್ಲಿ ನಾಗಪ್ಪ ಸಿಟ್ಟಿನಿಂದ ಹೊತ್ತಿಕೊಂಡಿದ್ದ. ಆದರೆ ಆ ಸಿಟ್ಟಿನ ಗುರಿ ಯಾರೆಂಬುದು ಸ್ಪಷ್ಟವಾಗಲಿಲ್ಲ: ಕಾದಂಬರಿಯ ಬಗ್ಗೆ ಸುದ್ದಿ ಹರಡಾತ್ತ ನಡೆದ ಸೀತಾರಾಮನೋ? ಆ ಸುದ್ದಿಗೆ ಹೆದರಿಲ್ಲವೆಂದು ನಟಿಸುವ ಅಂಜಕುಳಿ ಶ್ರೀನಿವಾಸನೋ? ಇಲ್ಲ, ಇಲ್ಲದ ಕಿತಾಪತಿಗೆ ಬಾಯಿ ಕಿಸಿಯುವ ಈ ಡೊಳ್ಳುಹೊಟ್ಟೆಯ ನಾಯಕನೋ? ನಾಯಕ ಬಾಯಿ ಖಾಲಿ ಮಾಡಿಕೊಂಡು ಬಂದಿದ್ದರ ಉದ್ದೇಶ ಬಾಯಿ ಬಿಚ್ಚಹತ್ತಿತು: ಶ್ರೀನಿವಾಸನ ಜತೆ ಹಗೆ ಕಟ್ಟಿಕೊಳ್ಳಬೇಡ. ತನ್ನ ವಿರುದ್ಧ ನಿಂತವರನ್ನು ಹಣಿಯಲು ಅವನು ಕೆಲ ಹೊತ್ತಿನ ಮೇಲೆ: ನನಗಿದಾವುದರಲ್ಲೂ ವಿಶ್ವಾಸವಿಲ್ಲ ಮಾರಾಯಾ. ಹೇಳುತ್ತೇನೆಂದು ಸಿಟ್ಟಾಗಬೇಡ ನಿನ್ನ ಬಗ್ಗೆ ಇದ್ದ ಅಭಿಮಾನದಿಂದಲೇ ಒಂದು ಮಾತು ಹೇಳಿಬಿಡುತ್ತೇನೆ: ಶ್ರೀನಿವಾಸ ಬರೇ ಹಣದ ಬಲದ ಮೇಲೇ ಆಗಲೊಲ್ಲದೇಕೆ—

ಮುಂಬಯಿಯ ಸಾರಸ್ವತ ಬ್ರಾಹ್ಮಣ ಸಮಾಜದಲ್ಲಿ ಒಂದು ಬಲಾಢ್ಯ ಸ್ಥಾನ ಗಳಿಸಿಕೊಂಡಿದ್ದಾನೆ. ಮಠದ ಸ್ವಾಮಿಗಳ ಮೇಲೆ, ಅವರ ಹತ್ತಿರದವರ ಮೇಲೆಲ್ಲ ಪ್ರಚಂಡ ವರ್ಚಸ್ಸು ಇವನದೂ. ವಡಾಳಾದ ಗಣೇಶೋತ್ಸವದ ಎಲ್ಲ ಜವಾಬ್ದಾರಿ ಈ ವರ್ಷ ತಾನೇ ಹೊತ್ತುಕೊಂಡಿದ್ದಾನೆ... ಹೇಳುವ. ಉದ್ದೇಶ ಇಷ್ಟೇ: ಕಳೆದ ಕೆಲವು ದಿನಗಳಿಂದ ನಮ್ಮ ಸಮಾಜದ ವರ್ಚಸ್ಸುಳ್ಳ ಹಿರಿಯರಲ್ಲೆಲ್ಲ ನಿನ್ನ ಪೂರ್ವಜರನ್ನು ಕುರಿತು ಸಂಶಯ ಹುಟ್ಟಿಸುವಂತಹ ಒಂದು ವಿಚಿತ್ರ ಸುದ್ದಿ"... ನಾಗಪ್ಪನ ಮೋರೆ ಸಿಟ್ಟಿನಿಂದ ಕಪ್ಪಾಗುತ್ತಿದ್ದುದನ್ನು ನೋಡಿಯೂ ಹಿಂದೆಗೆಯದೇ ಒಂದು ಬಗೆಯ ಫಾಜೀಲ ಹಠದಿಂದ-"ನಿನ್ನ ಅಮ್ಮ, ಅಪ್ಪ ನಮ್ಮ ಜಾತಿಯವರೇ ಅಲ್ಲ ಎನ್ನುವಂತಹ..."

ನಾಗಪ್ಪ ಮುಂದೆ ಕೇಳುವ ಮನಸ್ಸಿಲ್ಲದೇ ಕಾಫಿ ಮುಗಿಸುವ ಮೊದಲೇ ಧಡಕ್ಕನೆ ಎದ್ದೇ ನಿಂತ. ಇದು ಉದ್ಧಟತನವೆಂದು ಬಗೆದು ಪ್ರಕ್ಷುಬ್ಧಗೊಂಡ ನಾಯಕ, "ಶ್ರೀನಿವಾಸರಾವ್ ನಮ್ಮೆಲ್ಲರ ಮುಂದೆ ಇದನ್ನೆಲ್ಲ ಪುರಾವೆ ಸಹಿತ ಸಿದ್ಧಪಡಿಸುವ ಪಣ ತೊಟ್ಟು ನಾಳೆಗೇ ಗೋವೆಗೆ ಹೋಗುವವನಿದ್ದಾನೆ... ಇದನ್ನೆಲ್ಲ ಹೇಳುತ್ತಿರುವದು ನಿನ್ನ ಒಳಿತಿಗಾಗಿಯೇ..." ಎನ್ನುತ್ತಿರುವಾಗಲೇ ನಾಗಪ್ಪ, "ನೀವು, ನಿಮ್ಮ ದರಿದ ಎಸ್.ಬೀ. ಸಮಾಜ — ಅದಕ್ಕೂ ನನಗೂ ಯಾವ ಸಂಬಂಧವೂ ಇಲ್ಲವೋ ನಾಯಕಾ-ನಿಮ್ಮ ಜಾತಿಯವನಾಗಿ ಹುಟ್ಟಿದ್ದರ ಬಗ್ಗೆ ನನಗೆ ಯಾವ ಅಭಿಮಾನವೂ ಇಲ್ಲ. ಈ ಕಾರಣಕ್ಕಾ ಗಿಯೇ ಸಮಾಜದ ಯಾವ ಒಂದು ಕಾರ್ಯಕ್ರಮದಲ್ಲಿಯೂ ನಾನು ಈ ವರೆಗೆ ಭಾಗವಹಿಸಿಲ್ಲ. ನಡೆಸಲಿ - ಶ್ರೀನಿವಾಸ, ನನ್ನ ಪೂರ್ವಜರನ್ನು ಕುರಿತು ಸಂಶೋಧನೆ. ಅದಕ್ಕೆಲ್ಲ ನಾನು ಹೆದರಿಕೊಂಡಿಲ್ಲ. ಬದಲು, ಶ್ರೀನಿವಾಸ ಹುಡುಕಿ ತೆಗೆದದ್ದನ್ನು ತಿಳಿಯಲು ಕುತೂಹಲವುಂಟಾಗಿದೆ. ಭೆಟ್ಟಿಯಾದಾಗ ನೀನೇ ಹೇಳಿಬಿಡು ನಾನು ಹೀಗೆ ಅಂದೆನಂತ. ಇಷ್ಟೇ ನನ್ನ ಕಾದಂಬರಿಯಲ್ಲಿ ಬರುವ ಅವನ ಪೂರ್ವೇತಿಹಾಸವನ್ನು ಇದಿರಿಸಲು ಮಾತ್ರ ಬೆನ್ನೆಲುಬಿಗೆ ತಾಕತ್ತು ಬರಲು ದಿನವೂ ಚಂಪೀ ಮಾಡಿಕೊಳ್ಳಲು ಹೇಳು." ನಾಗಪ್ಪನ ಮಾತಿನಲ್ಲಿ ಅವನೇ ಬಯಸಿರದ ನಿಷ್ಠುರ ಸೇರಿಕೊಂಡಿತ್ತು. ನಾಯಕನ ಕಣ್ಣುಗಳು ಮತ್ತೆ ಫಾಜೀಲ ಕುತೂಹಲದಿಂದ ದೊಡ್ಡವಾದವು. ಯಾಕೆ? ಅಂತಹದೇನಾದರೂ ಇದೆಯೆ? ಎಂದು ಕೇಳುವ ರೀತಿಯಲ್ಲಿ ತುಟಿ ತೆರೆದು ಕುಳಿತದ್ದನ್ನು ನೋಡಿ ಹೇಸಿಗೆಪಟ್ಟು: ಇನ್ನೊಂದು ಮಾತನ್ನು ಹೇಳಿಡುತ್ತೇನೆ

ನಾಯಕಾ, ಈ ಕಾದಂಬರಿ ಬರೇ ಶ್ರೀನಿವಾಸನ ಬಗ್ಗೆ ಮಾತ್ರವಲ್ಲ. ಅವನ ಹೀನ ಕರಾಮತಿಗಳಿಗೆ ಬೆಂಬಲವಿತ್ತ ನಿಮ್ಮೆಲ್ಲರ ಬಗೆಗೂ ಇದೆ. ನಿಮ್ಮ ಎಸ್.ಬೀ (ಎಸ್.ಓ.ಬೀ!) ಸಮಾಜದ ಬಗೆಗೂ ಇದೆ. ಮಠದ ಸ್ವಾಮಿಗಳ ಬಗೆಗೂ ಇದೆ... ನನ್ನ ಬಗ್ಗೆ ನೀನು ತೋರುತ್ತ ಬಂದ ಅಭಿಮಾನಕ್ಕೆ ತುಂಬ ಋಣಿಯಾಗಿದ್ದೇನೆ." ಎಂದವನೇ ಮಾಣಿ ಮೊದಲೇ ತಂದಿಟ್ಟ ಬಿಲ್ಲನ್ನು ಎತ್ತಿಕೊಂಡು ನಾಯಕನನ್ನು ಕುರ್ಚಿಯಲ್ಲಿ ಕುಳಿತಲ್ಲೇ ಬಿಟ್ಟು ಕೆಳಗೆ ನಡೆದೇಬಿಟ್ಟ. ನಿಚ್ಚಣಿಕೆಯ ಮೆಟ್ಟಿಲ ಮೇಲೆ ಹೆಜ್ಜೆಗಳು ಬಯಸಿದ್ದಕ್ಕಿಂತ ಹೆಚ್ಚು ಸದ್ದು ಮಾಡಿದುವು. ಕೌಂಟರಿನಲ್ಲಿ ಹಣ ತೆತ್ತು ಹೊಟೆಲ್ಲಿನಿಂದ ಹೊರಗೆ ಬಿದ್ದಾಗ ಸಂತೋಷಭವನದೊಂದಿಗಿನ ಸಂಬಂಧ ಇಲ್ಲಿಗೇ ಕಡಿಯಿತೇನೋ ಎಂದುಕೊಂಡ.

## ಅಧ್ಯಾಯ ಐದು

ತನ್ನ ಹಲವಾರು ದುಃಖಗಳಿಗೆ ತನ್ನ ಸ್ವಭಾವರಚನೆಯಲ್ಲೇ ಬೆಳೆದು ಬಂದ ಒಂದು ದಾರುಣವಾದ ಒಂಟಿತನ ಕಾರಣವಾಗಿದೆ ಎಂಬ ಅರಿವು ನಾಗಪ್ಪನಿಗೆ ಇದೆಯಾದರೂ ಅದರ ಬಗ್ಗೆ ಏನೂ ಮಾಡಲು ಆಗದವನಾಗಿದ್ದಾನೆ. ತನ್ನ ಬಾಲ್ಯದ ಬಗ್ಗೆ, ಅಪ್ಪ-ಅಮ್ಮರ ಬಗ್ಗೆ, ಜಾತಿಯ ಬಗ್ಗೆ, ಎದೆಯ ಹತ್ತಿರ ಅವಚಿ ಹಿಡಿದಲ್ಲೇ ಸುಡುವ ಗುಟ್ಟಿನ ಬಗ್ಗೆ, ಅಣ್ಣ-ತಂಗಿಯರ ಬಗ್ಗೆ ಪರ್ಯಾಯವಾಗಿ ಮಾತು ಬಂದರೂ ಹಾಗೆ ಮಾತು ಬಿರಲು ಕಾರಣರಾದವರೊಂದಿಗಿನ ಸಂಬಂಧ ಕಡಿಯುತ್ತ ಬಂದಿದ್ದಾನೆ. ಸಂಶೋಷಭವನದೊಡನೆಯ ಸಂಬಂಧವನ್ನು ಕಡಿಯುವ ನಿರ್ಧಾರ ಇಂತಹ ಅನೇಕ ನಿರ್ಧಾರಗಳ ಸಾಲಿನಲ್ಲಿ ಇತ್ತೀಚಿನದು, ಅಷ್ಟೇ. ಹಾಗೆ ನೋಡಿದರೆ, ನಾಗಪ್ಪನಿಗೆ ಗೆಳೆಯರೆಂದರೆ ಪ್ರಾಣ. ಅವರ ಸಲುವಾಗಿ ಏನನ್ನು ಮಾಡಲೂ ಸಿದ್ಧ: ಅಂತಹ ಉತ್ಕಟತೆ ನಾಗಪ್ಪನ ಭಾವನೆಗಳಿಗಿದೆ. ಆದರೆ ಅದಕ್ಕೆ ಪ್ರತಿಸ್ಪಂದಿಯಾಗುವಂತಹ ಭಾವನೆ ನಾನು ವಿಶ್ವಾಸವಿಟ್ಟವರಿಂದ ಪ್ರಕಟವಾಗದೆ ಇದ್ದಾಗ, ತನ್ನನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳಲು ಅಷ್ಟೇ ಈ ಗೆಳೆತನದ ನಟನೆ ಎಂಬ ನಿಲುಗಡೆಗೆ ಬಂದು ವಿಷಾದಪಟ್ಟಿದ್ದಾನೆ. ಇದು ಬರಿಯೆ ತನ್ನೊಬ್ಬನದೇ ಅನುಭವ ಎಂಬಂತೆ ಒಳಗೊಳಗೇ ಅತ್ತಿದ್ದಾನೆ. ಈ ಶ್ರೀನಿವಾಸನೇ ಐದೇ ದಿನಗಳ ಹಿಂದೆ ಅವನು ತನ್ನನ್ನು ಭೆಟ್ಟಿಯಾದಾಗ, ರಜೆಯ ದಿನಗಳನ್ನು ತಮ್ಮಲ್ಲೇ ಕಳೆಯುವಂತೆ ಕೇಳಿಕೊಂಡಾಗ ಅವನ ಮೋರೆಯ ಮೇಲೆ ಮೂಡಿದ ಪ್ರಾಮಾಣಿಕತೆಯನ್ನು ನೆನೆದರೇ ತನ್ನ ಕಣ್ಣು ಆರ್ದ್ರವಾಗುವ ಅನ್ನಿಸಿಕೆ ನಾಗಪ್ಪನಿಗೆ. ಅವನ ಆ ಪ್ರಾಮಾಣಿಕತೆಯನ್ನು ನಂಬಿಯೇ ಹಿಂದಿನದೆಲ್ಲವನ್ನೂ ಮರೆತವನ ಹಾಗೆ ಯಾವ ಒಂದು ಅಡೆತಡೆಯಿಲ್ಲದೇನೆ ಅವನಲ್ಲಿ ಹೋಗಲು ಒಪ್ಪಿಕೊಂಡಿದ್ದ, ಆದರೆ ಅವನ ಆಗಿನ ಮುಖಚರ್ಯೆ ಕೂಡ ಮೋಸದ್ದಾಗಿತ್ತು ಎಂಬುದು ತಿಳಿದಾಗ ನಾಗಪ್ಪನಿಗೆ ತನ್ನ ಬಗ್ಗೆ ತನಗೇ ಕೆಡಕೆನಿಸಿತು. ಜನರ ನಿಜಸ್ವಭಾವವನ್ನು ಅರಿಯುವ ತಾಕತ್ತೇ ತನಗಿಲ್ಲ. ಎಲ್ಲರನ್ನೂ ಸುಲಭವಾಗಿ ನಂಬಿಬಿಡುತ್ತೇನೆ, ಎಂದುಕೊಂಡ. ಇದೀಗಿನ ಸ್ಥಿತಿಯಲ್ಲಿ ಯಾರಲ್ಲಾದರೂ ಹೋಗಬೇಕು ಅನ್ನಿಸಿತು. ಮೇರಿಗೆ ಫೋನ್ ಮಾಡಲೇ? ಕನಿಷ್ಟ, ಅವಳ ದನಿಯನ್ನಾದರೂ ಕೇಳಿದರೆ ಮನಸ್ಸಿಗೆ ಸಮಾಧಾನವಾದೀತು ಅನ್ನಿಸಿತು. ಮರುಗಳಿಗೆ, ಚೀಟಿ ಕಳಿಸಿದವಳು ಮೇರಿಯೇ

ಹೌದಾದರೆ, ೮ ಗಂಟೆಯ ನಂತರವೇ ಫೋನ್ ಮಾಡಲು ಹೇಳಿದ್ದಕ್ಕೆ ಕಾರಣವಿರಬೇಕು. ಆಫೀಸಿನ ಫೋನಿನ ಮೇಲೆ ಕೂಡಲು ಆಗದಂತಹ ಸುದ್ದಿಯೇನಾದರೂ ಇರಬೇಕು: ಮನೆಯ ಹಾದಿ ಹಿಡಿದ ನಾಗಪ್ಪನ ಮನಸ್ಸನ್ನು ಮೇರಿ ತುಂಬಹತ್ತಿದಳು: ಹಿಂದೊಮ್ಮೆ ಮೇರಿಗೇ ಹೇಳಿದಂತೆ ತನ್ನ ಲಕ್ಷ್ಯವನ್ನು ಮೊತ್ತ ಮೊದಲು ಸೆರೆ ಹಿಡಿದದೇ ಅವಳ ಮೋಹಕವಾದ ಕಣ್ಣುಗಳಾಗಿದ್ದುವು- ಅವುಗಳ ಆರ್ದ್ರವಾದ ಹೊಳಪು. ಕಣ್ಣುಗಳ ಜತೆ ಅವಳ ಹೆಗಲ ಮೇಲೆ ಹರಡಿ ಬೀಳುವ ಲಕಲಕಿಸುವ ಕಪ್ಪು ಕೇಶರಾಶಿಯೂ ಈಗ ಸೇರಿಕೊಂಡಿತು. ಆದರೆ ಹುಡುಗಿಯರ ರೂಪಕ್ಕಷ್ಟೇ. ಮರುಳಾಗುವ ವ್ಯಕ್ತಿತ್ವವೇ ಅಲ್ಲ ನಾಗಪ್ಪನದು. ಮನಸ್ಸಿಗೆ ತುಂಬ ಸುಖಕೊಡುವ ಮೇರಿಯ ರೂಪಕ್ಕಿಂತ ಹೆಚ್ಚಾಗಿ ನಾಗಪ್ಪನನ್ನು ಇದೀಗ ಪುಲಕಿತಗೊಳಿಸಿದ್ದು ಅವಳು ತನ್ನ ಬಗ್ಗೆ ತೋರಿದ ಕಾಳಜಿಯೇ. ಅವಳ ಬಗೆಗಿನ ಈ ಪ್ರೀತಿಯ ಭಾವನೆಯಲ್ಲಿ (ನಾಗಪ್ಪನ ಮೈಮೇಲೆ ಮುಳ್ಳು ನಿಂತಾಗ ತಾನೇ ಆಶ್ಚರ್ಯಪಟ್ಟ) ಕೃತಜ್ಞತೆಯ ಭಾವವೇ ದೊಡ್ಡದಾಗಿತ್ತು. ರಾತ್ರಿಯ ಎಂಟು ಗಂಟೆಯವರೆಗೆ ದಾರಿಕಾಯುವದನ್ನು ಬಿಟ್ಟು ಬೇರೆ ಏನು ಮಾಡಲೂ ತೋಚದೇ, ಯಾರಾದರೂ ಗೆಳೆಯರಲ್ಲಿ ಹೋದರೆ ಹೇಗೆ ಎಂಬ ವಿಚಾರ ಬಂದಾಗ ತನಗೆ ನಿಜವಾದ ಗೆಳೆಯರೇ ಇಲ್ಲ ಎಂಬ ಅರಿವಿನಿಂದ ಮನಸ್ಸು ಮುದುಡಿಕೊಂಡಿತು. ಹಲವಾರು ಹೆಸರುಗಳು, ಹಲವಾರು ಹೆಸರಿಲ್ಲದ ರೂಪಗಳು ಕಣ್ಣೆದಿರಿನಿಂದ ಹಾದು ಹೋದವು. ರಾಣೀ ಕೂಡ. ಯಾರೂ ಬೇಡ ಎನಿಸಿತು. ಬದುಕು ಸಾವುಗಳ ನಿರ್ಣಯವಾಗುತ್ತಿರುವ ಗಳಿಗೆಯಲ್ಲಿ ಸಹವಾಸದ ಕಲ್ಪನೆಯೇ ದುಸ್ಸಹವಾಗಹತ್ತಿತು.

ವಿಚಾರಮಾಡುತ್ತಿರುವಾಗಲೇ ನಾಗಪ್ಪ ಪ್ರಾರ್ಥನಾ ಸಮಾಜಕ್ಕೆ ಬಂದು ತಲುಪಿದ್ದ. ಮುಖ್ಯ ರಸ್ತೆ ದಾಟಿ ಆ ಬದಿಯ ಫೂಟ್‌ಪಾಥ್ ಸೇರಿದ್ದೇ ತಡ: ನ್ಯೂಸ್‌ಪೇಪರ್ ಏಜೆಂಟಿನ ಅಂಗಡಿ! ಸಂತೋಷಭವನಕ್ಕೆ ಹೋಗುವ ಮೊದಲು ಇಲ್ಲಿ ಬಂದಾಗ ತನ್ನಲ್ಲಿ ಮೊಳೆತ ವಿಚಾರಕ್ಕೆ ನಾಗಪ್ಪನಿಗೆ ಈಗ ನಗು ಬಂತು. ಅಂಗಡಿ ತಲುಪುತ್ತಲೇ ಇದಿರಿನಲ್ಲೇ ಇದ್ದಖಾಲಿ ಸ್ಟೂಲೊಂದರ ಮೇಲೆ ಕುಳಿತು ಅಂಗಡಿಯ ಮಾಲೀಕನಾದ ತುಕಾರಾಮನೊಡನೆ ಹರಟೆ ಹೊಡೆಯಲು ಉತ್ಸುಕನಾದ. ನಾಗಪ್ಪ ತನ್ನ ಅಂಗಡಿಯ ಬಾಗಿಲಲ್ಲಿ ಬಂದು ಕೂತದ್ದರ ನಿರಾಡಂಬರತೆಯಿಂದಲೇ ಹಿಗ್ಗಿದ ತುಕಾರಾಮ ಬಹಳ ಖುಶಿಯಿಂದ ಚಹ ತರಿಸಲೇ ಎಂದು ಕೇಳಿದ. ಬೇಡ,

ಇದೀಗ ನಾಯಕರ ಚಹಾದುಕಾನಿನಲ್ಲಿ (ಸಂತೋಷಭವನದ ಹೆಸರು ನೆನೆಯುವ ಮನಸ್ಸಾಗಲಿಲ್ಲ ನಾಗಪ್ಪನಿಗೆ) ನಾಸ್ತಾ ಆಯಿತು ಎಂದು ಆಗ ಕೊಂಡುಕೊಂಡ ಪತ್ರಿಕೆಯನ್ನು ಓದಲೆಂಬಂತೆ ಬಿಚ್ಚ ಹತ್ತಿದ. "ಎಳೆನೀರಾದರೂ?" ಎಂದು ತುಕಾರಾಮ ಕೇಳಿದಾಗ ಬೇಡವೆನ್ನುವ ಮನಸ್ಸಾಗದೇ 'ಗ್ಲಾಸುಗಳಲ್ಲೇ ತರಿಸಿ, ಇಬ್ಬರೂ ಹಂಚಿ ಕುಡಿಯೋಣ,' ಎಂದು ಸೂಚಿಸಿದ. ಸಹಾಯದ ಹುಡುಗನಿಗೆ ಎರಡು ಸೀಯಾಳಗಳನ್ನು ತರುವಂತೆ ಕೈಸನ್ನೆಮಾಡಿ ಹಣಕೊಟ್ಟು ಅಲ್ಲಿಂದ ಓಡಿಸಿದ ತುಕಾರಾಮ. ಸೀಯಾಳ ತರಲು ಬೆನ್‌ಹೆಮ್‌ಹಾಲ್ ಲೇನಿಗೇ ಓಡಬೇಕು.

ಮೆಟ್ರಿಕ್ ಅನಂತರದ ವಿದ್ಯಾರ್ಥಿದೆಸೆಯ ದಿನಗಳನ್ನು ನಾಗಪ್ಪ ಖೇತವಾಡಿಯ ಎರಡು ಕೋಣೆಗಳ ಮನೆಯಲ್ಲೇ ಕಳೆದಿದ್ದ. ಕೆಮಿಕಲ್ ಟೆಕ್ನಾಲಾಜಿಯ ಕೊನೆಯ ಪರೀಕ್ಷೆ ಪಾಸಾದ ನಂತರ ನೌಕರಿಗಾಗಿ ಅಲೆದಾಡಿದ್ದ. ಶ್ರೀನಿವಾಸನೇ ಆಗಿನ ದಿನಗಳಲ್ಲಿ ಹತ್ತಿರದ ಗೆಳೆಯ. ಈ ನ್ಯೂಸ್‌ಪೇಪರ್ ಅಂಗಡಿ, ಸಂಶೋಷಭವನಗಳ ಪರಿಚಯ ಆಗಿನಿಂದಲೇ. ಶೇರ್-ಏ-ಪಂಜಾಬ ಮಾಂಸಾಹಾರೀ ಹೊಟೆಲ್ಲು, ಅದರ ಮಗ್ಗಲಿನ ಲ್ಯಾಟ್ ಆಫ್‌ಏಶಿಯಾ-ಹೆರ್-ಕಟಿಂಗ್-ಸೆಲೂನು ಇವುಗಳ ಪರಿಚಯ ಕೂಡ. ಈ ಪರಿಸರದ ಅನೇಕರು ಆಗಿನ ದಿನಗಳಲ್ಲಿ ಶ್ರೀನಿವಾಸನ ಜಿಗರೀದೋಸ್ತರು. ಯಾವ ಒಂದು ಸಂಕೋಚ, ಆತ್ಮಪ್ರಜ್ಞೆಗಳ ಲವಲೇಶವೂ ಇಲ್ಲದೇ ಇವರ ಕೈಯಲ್ಲಿ ಕೈಯಿಟ್ಟು ಒಮ್ಮೊಮ್ಮೆ ಹೆಗಲ ಮೇಲೆ ಕೈಯಿಟ್ಟು ಮನಮೋಕಳೇ ಮಾತನಾಡುವ ರೀತಿಯನ್ನು ನಾಗಪ್ಪ ಥಕ್ಕಾಗಿ ನೋಡುತ್ತಿದ್ದ. ಶ್ರೀನಿವಾಸನಂತೆ ನಾಗಪ್ಪನೂ ಹಳ್ಳಿಯವನೇ. ಈಗಲೂ ಖೇತವಾಡಿಯ ಗಲ್ಲಿಗಲ್ಲಿಗಳು, ಪ್ರಾರ್ಥನಾ-ಸಮಾಜ, ಠಾಕೂರ ದ್ವಾರ, ಗ್ರೆಂಟ್‌ರೋಡ್, ಚರ್ನೀರೋಡ್, ಚೌಪಾಟೀ, ಧೋಜಬೀ-ತಲಾವ್ ಇವುಗಳೆಲ್ಲ ನಾಗಪ್ಪನ ಮಾನಸಿಕ ಪ್ರಪಂಚದ ಆತ್ಮೀಯ ಅಂಶಗಳು. ನಾಗಪ್ಪನಿಗೂ ಈ ತುಕಾರಾಮನಂತಹರೊಡನೆ ಮನಬಿಚ್ಚಿ ಮಾತನಾಡುವ ಆಸೆ. ಆದರೆ ಒಳಗೆಲ್ಲೋ ನಾಲಗೆಯನ್ನು ಬಿಗಿದುಹಿಡಿಯುವ ಸಂಕೋಚ. ಮಾತಿನಿಂದ ಸಂಬಂಧ ಬೆಳೆಸುವ ಪ್ರಕೃತಿಯೇ ಅಲ್ಲ ತನ್ನದು. ಇವರೆಲ್ಲರ ಬಗೆಗೆ ಅನ್ನಿಸುತ್ತಿದ್ದ ಪ್ರೀತಿ ಪರ್ಯಾಯವಾಗಿ ತನ್ನ ಸಾಹಿತ್ಯದಲ್ಲಿ ಎಂದಾದರೂ ಮೂಡಿಬಂದೀತೇ ಹೊರತು ಪ್ರತ್ಯಕ್ಷ ಮುಖಾಮುಖಿಯಲ್ಲಿ ಪ್ರಕಟವಾಗುವಂತಹದಲ್ಲ. ಮೇಲಾಗಿ, ಭಾಷೆಯೂ ಒಂದು ತೊಡಕಾಗಿತ್ತು. ಶ್ರೀನಿವಾಸನ ಮರಾಠೀ ಭಾಷೆ ತನ್ನದಕ್ಕಿಂತ ಕಚ್ಚಾ ಆಗಿದ್ದರೂ

ಕೂಡ ಯಾವ ಒಂದು ಭಿಡೆಯಿಲ್ಲದೇನೇ ಕೊಂಕಣಿ ಶಬ್ದಗಳನ್ನು, ಕೆಲವೊಂದು ಸರತಿ ಕನ್ನಡ ಶಬ್ದಗಳನ್ನೂ ಬೆರಸಿ ಕೇಳುವವರಿಗೆ ಮಾತ್ರ ತಾನು ಆಡುತ್ತಿದ್ದದ್ದು ಮರಾಠಿಯೇ ಎನ್ನುವ ಭ್ರಮೆ ಹುಟ್ಟಿಸುವಂತೆ ಮಾತನಾಡುವ ರೀತಿಯೆ ಬಲು ಮೋಜಿನದಾಗಿತ್ತು. ಮುಖ್ಯವಾಗಿ ಮಾತನಾಡುವಾಗ ತನ್ನಿಂದ ತಪ್ಪುಗಳಾದಾವು ಎಂಬುದರ ಪರಿವೆ ಇಲ್ಲದ್ದೇ ತನಗೆ ಚೆನ್ನಾಗಿ ಬರದ ಭಾಷೆಯಲ್ಲಿ ಮಾತನಾಡುವಾಗಿನ ಧೈರ್ಯದ ಮೂಲವಾಗಿರಬೇಕು. ತನ್ನ ಮಾತಿನ ಮುಖಾಂತರ, ಮಾತಿನಲ್ಲಿ ವ್ಯಕ್ತವಾಗುವ ಅಸಾಧಾರಣ ಧೈರ್ಯದ ಮುಖಾಂತರ ಎಲ್ಲರ ಮೇಲೆ ಛಾಪು ಹೊಡೆಯುತ್ತಿದ್ದ. ಬಾಯಬಡಾಯಿಯೇ ದೊಡ್ಡದಾಗಿತ್ತಾದರೂ ಆಡಿದ್ದರ ಬಹುಭಾಗವನ್ನು ಮಾಡಿ ತೋರಿಸುವ ಎದೆಗಾರಿಕೆಯೂ ಅಷ್ಟೇ ದೊಡ್ಡದಾಗಿತ್ತಾ. ಯಾರನ್ನು ಮರೆಯಲು ತಾನು ಇಲ್ಲಿಗೆ ಬಂದು ಕುಳಿತಿದ್ದೆನೋ ಅವನ ಬಗ್ಗೆಯೆ ತಾನು ಇದೀಗ ವಿಚಾರಮಾಡುತ್ತಿದ್ದುದರ ಅರಿವು ಬಂದು ನಾಗಪ್ಪ ಬೇಚೈನುಗೊಂಡ. ತನ್ನ ಪ್ರೌಢಾವಸ್ಥೆಯ ಮಹತ್ವದ ಭಾಗವನ್ನು ಕಳೆದ ಈ ಖೇಶವಾಡಿ, ಗಿರ್ಗಾಂವ್ ಇವೆಲ್ಲವುಗಳನ್ನು ಕುರಿತು ಒಂದು ದಿನ ಬರೆಯಬೇಕು. ಯಾಕೆ ಹಾಗೆ ಅನಿಸುತ್ತದೆಯೋ ಗೊತ್ತಿಲ್ಲ. ಬಹುಶಃ ಇವೆಲ್ಲವುಗಳ ಬಗ್ಗೆ ಇಲ್ಲಿ ಕೂತ ಈ ಕ್ಷಣದಲ್ಲಿ ಅನಿಸುತ್ತಿದ್ದ ಬೇರೆ ಯಾವ ಹೆಸರೂ ತಿಳಿಯದ್ದರಿಂದ ಪ್ರೀತಿಯೆಂದು ಕರೆಯಬಹುದಾದ—ಭಾವನೆಯನ್ನು ಯಾರ ಮುಂದೆಯೂ 'ಆಡಿತೋರಿಸಲು' ಆಗದ್ದಕ್ಕೇ ಇರಬೇಕು...

ಸೀಯಾಳಗಳನ್ನು ತಂದ ಹುಡುಗ ಒಂದನ್ನು ನಾಗಪ್ಪನ ಕೈಯಲ್ಲೂ ಇನ್ನೊಂದನ್ನು ತುಕಾರಾಮನ ಕೈಯಲ್ಲೂ ಕೊಟ್ಟು ಕುಡಿಯುವವರಿಗೆ ಸಂಕೋಚವಾಗದಿರಲಿ ಎಂಬಂತೆ ಬದಿಯ ಅಂಗಡಿಯಲ್ಲಿ ಚಹ ಕುಡಿದು ಬರುವ ನೆಪ ಹೇಳಿ ಅಲ್ಲಿಂದ ಹೊರಟುಹೋದ. ನಾಗಪ್ಪ ತನ್ನ ಕೊಂಕಣಿ ಧಾಟಿಯ ಮರಾಠಿಯಲ್ಲಿ ತುಕಾರಾಮನ ದಂಧೆಯ ವಿಷಯ ಮಾತನಾಡಹತ್ತಿದ. ಬೆಳಿಗ್ಗೆ, ಬರಿಯೆ ಒಂದು ಜೋಕು ಆಗಿ ತೋರಿದ್ದು ಈಗ ನಿಜಕ್ಕೂ ಒಂದು ಗಂಭೀರ ನಿರ್ಧಾರದ ರೂಪ ತಾಳುತ್ತ ಬಂದಂತಿತ್ತು. ತುಕಾರಾಮನಿಂದ ಬೀಳ್ಕೊಂಡು ಮನೆಯ ಹಾದಿ ಹಿಡಿದಾಗ: ಹೌದು. ಈ ಪ್ರಕರಣದಲ್ಲಿ ನನ್ನ ನೌಕರಿಗೇನಾದರೂ ಸಂಚಕಾರ ಬಂದರೆ ಈ ಖೇತವಾಡಿಯ ಲೆಕ್ಕವಿಲ್ಲದ ಗಲ್ಲಿಗಳ ಮೂಲೆಯೊಂದರಲ್ಲಿ ಹೀಗೆ ನ್ಯೂಸ್‌ಪೇಪರ್ ಮಾರುವ ಅಂಗಡಿಯನ್ನೋ ಸರ್ಕ್ಯುಲೇಟಿಂಗ್

ಲ್ಯಾಬ್ರರಿಯನ್ನೋ ತೆರೆಯುತ್ತೇನೆ. ಹುಟ್ಟಿನ ಬಲದಿಂದ, ಹಣದ ಬಲದಿಂದ, ಅಷ್ಟೇಕೆ—ವಿದ್ವತ್ತಿನ ಬಲದ ಮೇಲೆ, ಪ್ರತಿಭೆಯ ಬಲದ ಮೇಲೆ ಸಮಾಜದಲ್ಲಿ ಗಳಿಸಿದ ಪ್ರತಿಷ್ಠೆಯನ್ನು ಕಳೆದುಕೊಳ್ಳುವ ಭಯವಿಲ್ಲದೇನೇ 'ಯಾರೂ ಅಲ್ಲ'ವಾಗಿ ಬದುಕುವುದನ್ನು ಕಲಿಯುತ್ತೇನೆ... ಮನೆ ತಲುಪಿ ಕೋಣೆಯ ಕದಮುಚ್ಚಿ ವಿರಾಮ-ಕುರ್ಚಿಯಲ್ಲಿ ಒರಗಿದಲ್ಲೆ ಹೊತ್ತುಹೋದ ಹಾಗೆ ಈ ವಿಚಾರ ಎಷ್ಟೊಂದು ಭಾವನಾತ್ಮಕ ವಿಕೋಪಕ್ಕೆ ಹೋಯಿತೆಂದರೆ ಒಂದೇ ಒಂದು ಕ್ಷಣದ ಮಟ್ಟಿಗಾದರೂ ಅನ್ನಿಸಿಬಿಟ್ಟಿತು: ಹಾಳುಬಿದ್ದ ಈ ನೌಕರಿಯನ್ನು ನಾನಾಗಿಯೇ ಬಿಟ್ಟುಕೊಟ್ಟರೆ ಹೇಗೆ? ಹೈದ್ರಾಬಾದಿಗೆ ಹೋಗುವ ವಿಮಾನದ ಟಿಕೆಟ್ಟು ಬರುವ ಮೊದಲೇ ನನ್ನ ರಾಜೀನಾಮೆಯ ಪತ್ರ ಕಳಿಸಿದರೆ ಹೇಗೆ? ಈಗಿನ M.D ನಿವೃತ್ತರಾದ ಮೇಲೆ ಫಿರೋಜನೇ ಹೇಗಾದರೂ M.D ಆಗುತ್ತಾನೆ. ಕರ್‍ರಿಯರದ ಕೊನೆಯವರೆಗೆ ಅವನೊಡನೆ ಹಗೆ ಕಟ್ಟಿ ಕೆಲಸಮಾಡುವದಂತೂ ಶಕ್ಯವೇ ಇಲ್ಲ. ಆಳವನ್ನು ಅಲ್ಲಾಡಿಸಿಬಿಟ್ಟ ಭಯದ ಕ್ಷಣದಲ್ಲಿ ನ್ಯೂಸ್‌ಪೇಪರ್ ಅಂಗಡಿಯ ವಿಚಾರಮಾಡಿದ್ದೆನಾದರೂ ಅಂತಹ ಅತಿರೇಕಕ್ಕೆ ಕೈಹಾಕುವ ಗರಜಿಲ್ಲವೇನೋ. ಬೇರೆ ಕಂಪನಿಗಳಿಲ್ಲವೆ? ಎಂದೂ ಅನ್ನಿಸಿತು. ಅಂತೂ ಈ ಎಲ್ಲ ಯಾತನೆಯಿಂದ ಮುಕ್ತನಾಗುವ ಉಪಾಯ ಕೊನೆಗೂ ತನ್ನ ಕೈಯಲ್ಲೇ ಇದೆ ಎಂಬ ಅರಿವಿನಿಂದಲೇ ಮನಸ್ಸಿಗೆ ನೆಮ್ಮದಿ ಅನ್ನಿಸಹತ್ತಿತು. ಆದರೂ ಅದು ಬಹಳ ಹೊತ್ತು ಬಾಳುವ ಜಾತಿಯದಾಗಿರಲಿಲ್ಲವೆಂದು ತೋರುತ್ತದೆ. ಮನಸ್ಸು ಮತ್ತೆ ದುಗುಡಕ್ಕೊಳಗಾಯಿತು. ಈಗಿನ ಕಂಪನಿಯಲ್ಲಿ ಇಷ್ಟೊಂದು ವರ್ಷ ಕೆಲಸಮಾಡಿದ ಮೇಲೆ ತಾನು ಆಯ್ಕೆಮಾಡಿದ ಒಂದು ಕ್ಷೇತ್ರದಲ್ಲಿ ಗಳಿಸಿದ ಮನ್ನಣೆಯನ್ನು ಒಮ್ಮಿಗೆಲೇ ಬಿಟ್ಟುಕೊಟ್ಟು ಇನ್ನೊಂದು ಕಂಪನಿಯನ್ನು ಸೇರಲು ಯಾವ ಕಾರಣ ಕೊಡಲೀ? ಕಾರಣ ಕೊಡಲೇ ಬೇಕೆ? ಕಾರಣ ಕೊಡುವುದರ ಅವಶ್ಯಕತೆಯೆಂದರೆ ವ್ಯಕ್ತಿ ತನಗರಿವಿಲ್ಲದೇನೆ ತನ್ನ ಇಚ್ಛಾಶಕ್ತಿಯನ್ನು ಮೀರಿದ ಯಾವುದಕ್ಕೊ ಹೆದರಿಕೊಂಡದ್ದರ ಲಕ್ಷಣ ಅಲ್ಲವೆ? ಮೇಲಾಗಿ, ಒಮ್ಮೆಲೇ ಎಲ್ಲವನ್ನೂ ತೊರೆದುಬಿಡುವ ನಿರ್ಧಾರ ಮೂಲತಃ ಇನ್ನಾವುದಕ್ಕೋ ಇದಿರಿಸುವಾಗ ಹುಟ್ಟಿದ ಭಯದಲ್ಲಿ ಹುಟ್ಟಿದ್ದು. ತಾನು ಬೇಡಿಬಂದಿರದ ಬದುಕಿನಲ್ಲಿ ಮನುಷ್ಯನ ಕೈಯಿಂದ ಒದಗಬಹುದಾದ ಒಂದೇ ಒಂದು ಸಾರ್ಥಕವಾದ ಕ್ರಿಯೆಯೆಂದರೆ ಇದೊಂದೇಯೇನೋ: ತಾನು ಬದುಕಿದ್ದ

ಸಮಾಜದ ಎಲ್ಲ ಒತ್ತಡಗಳಿಗೆ ತನ್ನನ್ನು ಒಡ್ಡಿಕೊಂಡಾಗಲೂ ತಾನೂ ತಾನೇ ಆಗುವದು. ಫಿರೋಜ್-ಶ್ರೀನಿವಾಸ ಹಾಕಿದ ಸವಾಲಿಗೆ ಹೆದರಿ ಪಲಾಯನ ಹೇಳಲೆ? ಹೇಡಿಯಾಗಲೇ ಈ ದುಷ್ಟ ಶಕ್ತಿಗಳಿತ್ತ ಆಹ್ವಾನವನ್ನು ನಿರಾಕರಿಸಿ ಸಂಕಲ್ಪಬಲವಿಲ್ಲದ ತರಕಾರಿಯಾಗಲೆ? ಇದೇ ಖೇತವಾಡಿಯ ಗಲ್ಲಿಯೊಂದರಲ್ಲಿ ಎಲ್ಲ ಭಿಡೆ ಬಿಟ್ಟು ದಿನ ಪತ್ರಿಕೆಗಳನ್ನು ಇಲ್ಲ ಬರೀ ರದ್ದಿ ಮಾರುವ ಅಂಗಡಿಯನ್ನು ತೆರೆದೇನು. ಆದರೆ, ಫಿರೋಜ್ ಒಡ್ಡಿದ ಆಹ್ವಾನಕ್ಕೆ ತಕ್ಕ ಉತ್ತರ ಕೊಟ್ಟ ಮೇಲೇಯೇ. ನಾನೇ ಸೋಲಬಹುದು. ಆದರೆ ಕಾದುವದನ್ನು ಬಿಟ್ಟುಕೊಟ್ಟಿಲ್ಲ. ಇಲ್ಲ. ರಾಜೀನಾಮೆಯ ಪ್ರಶ್ನೆಯೇ ಇಲ್ಲ. ಬಹುಶಃ ಮಾನಸಿಕ ಒತ್ತಡ ತರುವ ಈ ಎಲ್ಲ ಕುತಂತ್ರದ ಹಿಂದಿನ ಉದ್ದೇಶವೂ ಇದೇ ಇರಬಹುದೇನೋ. ನನ್ನ ಬದಲು ತನ್ನ ಚೇಲಾ ಜಲಾಲನನ್ನು ಅಮೇರಿಕೆಗೆ ಕಳಿಸುವ ಹಂಚಿಕೆಯೇನೋ... ಮಧ್ಯಾಹ್ನದ ಊಟ ಮಾಡಿಬಂದದ್ದೇ ಆ ಬೆಂಕಿಯ ಅನಾಹುತ ಎಲ್ಲ ವಿವರಗಳನ್ನೂ ಬರೆದು ತೆಗೆಯಬೇಕು. ತನಿಖೆಯ ಹೊತ್ತಿಗೆ ಉಪಯೋಗಕ್ಕೆ ಬಿದ್ದೀತು. ಎಂದುಕೊಂಡವನೇ ನಾಗಪ್ಪ ಸ್ನಾನದ ತಯಾರಿಗೆ ನಡೆದ. ಇಂದಿನಿಂದ ಸಂತೋಷಭವನ ತನ್ನ ಪಾಲಿಗೆ ವಜಾ. ಸದ್ಯದ ಊಟಕ್ಕಂತೂ ಶೇರ್-ಏ-ಪಂಜಾಬಿಗೇ ಹೋದರಾಯಿತು. ಊಟ ಮುಗಿಸಿ ಬಂದ ನಂತರ ಗಡದ್ದಾಗಿ ಒಂದು ನಿದ್ದೆಮಾಡಬೇಕು. ಎದ್ದನಂತರ ಮೇರಿಗೆ ಫೋನ್ ಮಾಡುವ ಹೊತ್ತಿನ ತನಕ ಏನಾದರೂ ಬರಿಯಬೇಕು. ಇಂದು ರಾತ್ರಿ ರಾಣಿಯ ಮನೆಗೆ ಹೋದರೆ ಹೇಗೆ ಎಂಬ ವಿಚಾರ ಬಂದಾಗ ಯಾಕೋ ದೈಹಿಕ ಸುಖದ ಬಯಕೆಯೇ ಬತ್ತಿಹೋದಂತೆನಿಸಿತು. ಈಗ ಯಾವುದೂ ಬೇಡ. ಎಲ್ಲ, ಹೈದ್ರಾಬಾದಿನಿಂದ ಬಂದ ಮೇಲೆಯೇ, ಎಲ್ಲದರ ಸೋಕ್ಷ ಮೋಕ್ಷವಾದ ಮೇಲೆಯೇ.

## ಅಧ್ಯಾಯ ಆರು

ಖೇತವಾಡಿಯಲ್ಲಿಯ ಈ ೬೦ವರ್ಷಗಳ ಮುದಿ ಮನೆ ಅಂದರೆ—ಕೂಡ್ರುವ ಕೋಣೆ, ಮಲಗುವ ಕೋಣೆ ಹಾಗೂ ಸಣ್ಣ ಅಡಿಗೆಮನೆ. ಮಲಗುವ ಕೋಣೆಯ ಒಂದು ಮೂಲೆಯಲ್ಲಿಯ ಸಣ್ಣ ಮೋರಿಯೇ ಸಮಯಕ್ಕೆ ತಕ್ಕಂತೆ ನಾಣಿಗೆ ಮನೆಯೂ ಆಗುತ್ತಿತ್ತು. ನಾಗಪ್ಪನ ಹುದ್ದೆಯ ಅಂತಸ್ತಿನ ಪ್ರಕಾರ ಕನಿಷ್ಟ ಎರಡು ಮಲಗುವ ಕೋಣೆಗಳಿದ್ದ ಫ್ಲ್ಯಾಟು ಹಾಗೂ ಕಾರು ಎರಡೂ ಅವನಗೆ ದೊರಕಬೇಕಾಗಿದ್ದುವು. ಫ್ಲ್ಯಾಟ್ ಸಿಗುವ ತನಕ ಮೊದಲ ಮೂರು ತಿಂಗಳ ಕಾಲ ಮುಂಬಯಿಯ ಹೊಟೆಲ್ಲೊಂದರಲ್ಲಿ ಉಳಕೊಳ್ಳುವ ಹಕ್ಕೂ ಇತ್ತು. ಆದರೆ ನಾಗಪ್ಪ ತನ್ನ ಎಂದಿನ ಸರಳತನದಿಂದ ಖೇತವಾಡಿಯ ಈ ಹಳೇ ಗೂಡಿಗೇ ಬಂದಿದ್ದ. ಹಾಗೆ ಬರುವಾಗ ಮಾತ್ರ ಈ ವರ್ಗಾವಣೆ ಏನೆಂದರೂ ತಾತ್ಪೂರ್ತಿಕವಾದದ್ದು; ಫಿರೋಜ್‌ಗೆ ತನ್ನ ಬಗೆಗಿನ ಸಿಟ್ಟು ಕಡಿಮೆಯಾದದ್ದೇ ಒಂದಿಲ್ಲ ಒಂದು ದಿನ ತಿರುಗಿ ಫೆಕ್ಟರಿಗೆ ಕರೆಯಿಸದಿರಲಾರನೆಂಬ ಆಸೆಯೊಂದು ಮನಸ್ಸಿನಲ್ಲಿ ಇಲ್ಲದಿರಲಿಲ್ಲ. ಅಂತಹ ಆಸೆಗೆ—ತನ್ನ ಹೊರತು ಆರ್ ಎಂಡ್ ಡೀ ಮ್ಯಾನೇಜರನ ಹುದ್ದೆಗೆ ಯೋಗ್ಯನಾದ ಇನ್ನೊಬ್ಬ ಕಂಪನಿಯಲ್ಲಿ ಇಲ್ಲವೇ ಇಲ್ಲವೆಂಬ ಅಹಂಭಾವ ಕಾರಣವಾಗಿತ್ತೆಂಬ ಅರಿವೂ ನಾಗಪ್ಪನಿಗೆ ಇಲ್ಲದಿಲ್ಲ. ಅದಕ್ಕೆ ಪೆಟ್ಟು ಬಿದ್ದಾಗ ಆಗೀಗ ತುಂಬ ಖಿನ್ನನಾಗಿದ್ದುಂಟು.

ತಿಂಗಳಿಗೆ ಕೇವಲ ಮುವ್ವತ್ತುರೂಪಾಯಿ ಬಾಡಿಗೆಯಿದ್ದ ಆ ಕೋಣೆಗಳನ್ನು ಕಳೆದ ಹಲವು ವರ್ಷಗಳಾದ ಶೇಖರಿಸುತ್ತ ಬಂದ ವಿರಲವಾದ ಪುಸ್ತಕಗಳ ಲಾಯಬ್ರರಿಯನ್ನಾಗಿ ಪರಿವರ್ತಿಸಿದ್ದ. ಹಳೆಯ ಗ್ರಂಥಗಳನ್ನು ಸಂಗ್ರಹಿಸುವ ಚಟ ನಾಗಪ್ಪನಿಗೆ ನೌಕರಿ ಹತ್ತಿದ ಮೊದಲಿನಿಂದಲೂ ಅಂಟಿದ್ದು. ಗ್ರೆಂಟ ರೋಡ್, ಮಹಮ್ಮದಲ್ಲಿ ರೋಡ್, ಧೋಬಿತಲಾವ್‌ಗಳಲ್ಲಿಯ ಹಳೇ ಪುಸ್ತಕಗಳ ವ್ಯಾಪಾರಿಗಳಿಗೆಲ್ಲ ನಾಗಪ್ಪ ಹಳೆಯ ಗೆಳೆಯ. ಆಫೀಸಿನ ಕೆಲಸದ ಮೇಲೆ ಮುಂಬಯಿಗೆ ಬಂದ. ಪ್ರತಿ ಸಾರೆ ನೂರಿನ್ನೂರು ರೂಪಾಯಿಗಳ ಪುಸ್ತಕಗಳನ್ನುಕೊಂಡು ಬಾಂಬೂಗಳನ್ನು ಕತ್ತರಿಸಿ ತಾನೇ ರಚಿಸಿದ ತೀರ ಸರಳವಾದ 'ಕಪಾಟು'ಗಳಲ್ಲಿ ಓರಣವಾಗಿ ಹಚ್ಚಿಟ್ಟಿದ್ದ. ಕಪಾಟಿನ ಹತ್ತಿರ

ಎತ್ತರವಾದ ಒಂದು ಸ್ಟೂಲು. ಅದರ ಮೇಲೆ ಕೂತು ಹೊಸತಾಗಿ ತಂದ ಪುಸ್ತಕಗಳನ್ನು ಒಂದೊಂದಾಗಿ ಅರಿವೆಯ ಚಿಂದಿಯೊಂದರಿಂದ ಸ್ವಚ್ಛಮಾಡಿ, ಹಾಳೆಗಳ ವಾಸನೆ ನೋಡಿ ಜಾಗವಿದ್ದಲ್ಲಿ ಚಂದವಾಗಿ ಜೋಡಿಸಿ ಇಡುತ್ತಿದ್ದ. ಹಳೇ ಪುಸ್ತಕಗಳನ್ನು ಮೂಸಿ ನೋಡುವದು ನಾಗಪ್ಪನಿಗೆ ಅತ್ಯಂತ ರೋಮಾಂಚಕಾರಿಯಾದ ಅನುಭವ: ಪ್ರತಿಯೊಬ್ಬ ವ್ಯಕ್ತಿಗೆ ಯಾವುದೇ ವಿವೇಕಪೂರ್ಣವಾದ ಕಾರಣ ಕೊಡಲು ಶಕ್ಯವಿಲ್ಲದ ಇಂತಹ ಚಟಗಳಿರುತ್ತವೆಯೇನೋ ಅಂದುಕೊಂಡು ತನ್ನಷ್ಟಕ್ಕೇ ನಗುತ್ತಿದ್ದ. ಈಗಲೂ ಸ್ನಾನಕ್ಕೆಂದು ಹೊರಟು ನಿಂತವನು, ವಿಚಾರಮಾಡುವ ಮೊದಲೇ ಸ್ಟೂಲನ್ನು ಹತ್ತಿ ಕೂತು ಕೈಗೆ ಎತ್ತಿಕೊಂಡ ಪುಸ್ತಕವೊಂದನ್ನು ಮೂಸಿ ನೋಡುತ್ತಿದ್ದಂತೆ ಅದರ ಹಳೆತ ವಾಸನೆ ಮಸ್ತಕಕ್ಕೇರಿದ್ದೇ ತಡ ನಾಗಪ್ಪ ಕೂತಲ್ಲೇ ಝಲ್ಲೆಂದು ನಡುಗಿದ: ಶ್ರೀನಿವಾಸ, ತಾನೂ ಬರೆಯುತ್ತಿದ್ದೇನೆಂದು ತಿಳಿದೇ ಹೆದರಿಕೊಂಡ. ನೇತ್ರಾವತಿಯ ದುರ್ಮರಣ ಕಣ್ಣಮುಂದೆ ನಿಂತಂತಾಗಿ ಅವಸರ ಅವಸರವಾಗಿ ಸ್ಟೂಲಿನಿಂದ ಇಳಿದವನೇ ವಿರಾಮ-ಕುರ್ಚಿಯಲ್ಲಿ ಕುಸಿದು ಗಟ್ಟಿಯಾಗಿ ಕಣ್ಣು ಮುಚ್ಚಿದ:

ನೇತ್ರಾವತಿ: ೨೧ ವರುಷದ ಹರೆಯದ ಹುಡುಗಿ. ಸುಂದರಳಲ್ಲ. ಹರೆಯ ತುಂಬಿ ಮುಸುಗುಡುವ ಮೈಯಮಾಟ. ನೋಡುವವರ ಕಣ್ಣುಗಳನ್ನು ತತ್‌ಕ್ಷಣ ಸೆರೆಹಿಡಿದು ನಿಲ್ಲಿಸುವ ಕಣ್ಣುಗಳಲ್ಲಿಯ ಮಾದಕ ಹೊಳಪು. ಮೇಲ್ದುಟಿಯಗುಂಟ ತೆಳ್ಳಗಿನ—ಹೆಣ್ಣಿಗೆ ಶೋಭಿಸದ—ರೋಮದ ಸಾಲು. ತುಟಿಗಳು ಮಾತ್ರ ಭಿಡೆ ತೊರೆದು ನೇರವಾಗಿ ಕಾಮ ಕೆರಳಿಸುವಂತಹವುಗಳು. ಮೊದಲ ಪರಿಚಯದಲ್ಲಿ ನೇತ್ರಾವತಿ ತನಗೆ ಎಳ್ಳಷ್ಟೂ ಸೇರಿರಲಿಲ್ಲ. ಬಹುಶಃ ಅವಳ ಅಕ್ಕನ ಬಗ್ಗೆ ಕೇಳಿ ತಿಳಿದಂತಹ ಸಂಗತಿಗಳಾದಾಗಿರಬೇಕು: ಅವಳು ಮುಂಬಯಿಯ ಒಬ್ಬ ಶ್ರೀಮಂತ ವ್ಯಾಪಾರಿಯೊಬ್ಬನನ್ನು ಇಟ್ಟುಕೊಂಡಿದ್ದು ಎಲ್ಲರಿಗೂ 'ಉಘಡಾ-ಉಘಡೀ' ತಿಳಿದ ಮಾತಾಗಿತ್ತು. ನೇತ್ರಾವತಿಯಲ್ಲಿ ಅನುರಾಗ ಹುಟ್ಟಿ ಶ್ರೀನಿವಾಸ ಅವಳನ್ನು ಮದುವೆಯಾಗುವ ಉದ್ದೇಶವನ್ನು ಜಾಹೀರುಪಡಿಸಿ ರಾಜಾರೋಷವಾಗಿ ಅವಳೊಡನೆ ತಿರುಗಾಡಹತ್ತಿದ ಮೇಲೆ: ವೇಳೆ ಆವೇಳೆಯಲ್ಲಿ ರೂಮಿಗೂ ತರಹತ್ತಿದ ಮೇಲೆ; ಚಾಳಿನಲ್ಲಿಯ ಎಲ್ಲರಿಗೂ ಅವಳ ಪರಿಚಯ ಮಾಡಿಕೊಡುತ್ತ ಅವಳನ್ನು ಹೊಗಳಹತ್ತಿದ ಮೇಲೆ. ಗೆಳೆಯನೊಬ್ಬನ ಪ್ರೇಯಸಿ, ಅದಕ್ಕಿಂತ ಹೆಚ್ಚಾಗಿ ಅವನ ಅಗಲಿದ್ದ ಹೆಂಡತಿಯೆಂಬುದು ಸ್ಪಷ್ಟವಾಗುತ್ತ ಹೋದ ಹಾಗೆ ನೇತ್ರಾವತಿಯ

ಬಗ್ಗೆ ತನ್ನ ಮನಸ್ಸು ಕ್ರಮೇಣ ಮಿದುವಾಗಹತ್ತಿತು. ಶ್ರೀನಿವಾಸನ ಜತೆಯಲ್ಲಿ ಗೋಲಪೀಠಾದಲ್ಲಿಯ ಅವರ ಮನೆಗೆ ಒಂದೆರಡು ಸರತಿ ತಾನೂ ಹೋಗಿದ್ದ. ನೇತ್ರಾವತಿಯ ಅಕ್ಕನ ಮಿಂಡನನ್ನು ಕಣ್ಣಾರೆ ಕಂಡಿದ್ದ. ನೇತ್ರಾವತಿಯ ಮದುವೆಯಾಗಲು ಹೊರಟದ್ದು ಎಷ್ಟು ದೊಡ್ಡ ಸಾಹಸ; ಅದನ್ನು ಕೈಕೊಂಡ ತಾನು ಎಷ್ಟು ದೊಡ್ಡ ಮನಸ್ಸಿನ 'ಹಿರೋ' ಎಂಬುದನ್ನು ಬಣ್ಣಿಸಿದ ಶ್ರೀನಿವಾಸನಿಂದಲೇ ತಿಳಿದ ವಿವರಗಳಿಷ್ಟು: ನೇತ್ರಾವತಿಯ ಅಕ್ಕ ಅನಸೂಯಾ (ಇವರು ಮೂಲತಃ ಉತ್ತರ-ಕನ್ನಡದ ಸಣ್ಣ ಹಳ್ಳಿಯಾದ ಧಾರೇಶ್ವರದವರು. ತಮ್ಮ ಜಾತಿಯವರೇ ಅಂದರೆ ಸಾರಸ್ವತ ಬ್ರಾಹ್ಮಣರು) ತನಗೆ ಒಪ್ಪಿಗೆಯಾಗಿರದ ಒಬ್ಬ ವಯಸ್ಸಾದ ಗಂಡಸಿನೊಡನೆ ಮದುವೆಮಾಡಿಸಲು ಹೊರಟ ತಂದೆತಾಯಿಗಳ ವಿರುದ್ಧ ಬಂಡೆದ್ದು ಮದುವೆಯ ಚಪ್ಪರದಿಂದಲೇ ಓಡಿಹೋದಳಂತೆ. ಆಗ ಅವಳಿಗೆ ಬರೀ ಹದಿನೆಂಟು ವರ್ಷ ಪ್ರಾಯ. ಮುಂದಿನದೆಲ್ಲ ದಿನನಿತ್ಯ ಪೇಪರುಗಳಲ್ಲಿ ಓದುವ ಸುದ್ದಿಗಳೆಂತಹದೇ ಕತೆ: ಓಡಿಬಂದದ್ದು ಮುಂಬಯಿಗೆ. ಸಿಕ್ಕಿಬಿದ್ದದ್ದು ಇಂತಹ ಹುಡುಗಿಯರನ್ನು ಸೂಳೆತನಕ್ಕೆ ಹಚ್ಚುವ ತಲೆಹಿಡುಕರ ಕೈಗೆ. ಅವರ ಕೈಯಿಂದ ತಪ್ಪಿಸಿಕೊಂಡ ಮೇಲೆ 'ಗೆಳೆತನ' ಬೆಳೆದುದ್ದು ಸಜಾತೀಯನಾದ ಈ ಶ್ರೀಮಂತ ವ್ಯಾಪಾರಿಯೊಂದಿಗೆ. ಅವನ ಹೆಂಡತಿ ಟೀಬೀಯಿಂದಲೋ ಇನ್ನಾವುದೋ ಗುಣವಾಗದ ರೋಗದಿಂದಲೋ ಕಾಯಮ್ ಹಾಸಿಗೆ ಹಿಡಿದು ಬಿದ್ದವಳು. ಅನಸೂಯಾಗೆ ತಾನೇ ಬೇರೊಂದು ಮನೆ ಮಾಡಿಕೊಟ್ಟ, ಕಾಯದೆಯೊಂದು ಅಡ್ಡ ಬಂದದ್ದರಿಂದಲೇ ಅನಸೂಯಾ ಹೆಂಡತಿಯಾಗುವದು ಶಕ್ಯವಿರಲಿಲ್ಲ. ಅವರೂ ತನ್ನ ಹೆಂಡತಿಗೆ ಕಡಿಮೆಯಾದವಳಲ್ಲ ಎಂಬ ಭಾವನೆಯನ್ನು ಅವಳಲ್ಲಿ ಮೊಳೆಯಿಸಿದ ಈ 'ಸದ್ಗೃಹಸ್ಥ' ಅನಸೂಯಾಳ ಜೋಡಿಗೆ ಕೂತು ಮಾಡಿದ ಸತ್ಯನಾರಾಯಣಪೂಜೆಗೆ ಜಾತಿಯ ಬ್ರಾಹ್ಮಣ ಸುವಾಸಿನಿಯರನ್ನು ಕರೆಯಿಸಿ ಭೂರಿ ಭೋಜನ ಕೂಡ ಮಾಡಿಸಿದ್ದ. ಅನಸೂಯಾಳ ಮೈ ಮೇಲಿನ ಮಣಭಾರದ ಬಂಗಾರದ ದಾಗಿನೆಗಳಿಂದ ಎಷ್ಟೊ ಸುವಾಸಿನಿಯರ ಅಸೂಯೆ ಕೆರಳಿಸಿದ್ದ. ಮದುವೆಯಾಗಿರದ ಒಂದೇ ಒಂದು ಕಾರಣದಿಂದಲೇ 'ಇಟ್ಟುಕೊಂಡವಳು' ಎಂಬ ಪದವಿಯನ್ನು ಆಗದವರ ಕೈಯಿಂದ ಪಡೆದ ಅನಸೂಯಾಳ ಒಂದೇ ಒಂದು ಹಂಬಲವೆಂದರೆ ನೇತ್ರಾವತಿಯ ಮದುವೆಯನ್ನಾದರೂ ಒಳ್ಳೆಯ ಹುಡುಗನೊಂದಿಗೆ ಮಾಡುವದಾಗಿತ್ತು. ಹಾಗೆಂದೇ ನೇತ್ರಾವತಿಯನ್ನು ಊರಿನಿಂದ

ಕರೆಯಿಸಿ ಇನ್ನೂ ಮಕ್ಕಳಾಗಿರದ ತಾನು ಅವಳನ್ನು ಅಕ್ಕ ಎನ್ನುವುದಕ್ಕಿಂತ ಹೆಚ್ಚಾಗಿ ತಾಯಿ ಎಂಬಂತೆ ತೈನಾತಿ ಮಾಡಿದ್ದಳು. ಮುಂಬಯಿಯಲ್ಲೇ ತಮ್ಮ ಸಮಾಜದ ಎಲ್ಲ ಗಣ್ಯ ವ್ಯಕ್ತಿಗಳ ಇದಿರಿಗೇ ತಾನು, ತನ್ನೊಡನೆ 'ಮದುವೆಯಾಗಿರದ' ಗಂಡ ಕೂಡಿ ಧಾರೆಯರೆದು ಕೊಡುವ ಹಂಬಲ ಅವಳದಾಗಿತ್ತು. ಇತ್ಯಾದಿ ಇತ್ಯಾದಿ...

ಅಂತಹ ಹಂಬಲ ನಿಜವಾಗಿಸಲು ಮುಂದಾದ ಶ್ರೀನಿವಾಸ ಆಗ ತಮ್ಮೆಲ್ಲರ ಕಣ್ಣಲ್ಲಿ ದೊಡ್ಡ ಹೀರೋ. ಅವನ ಸಾಹಸದ ಸಾಮಾಜಿಕ ಮಹತ್ವವನ್ನು ಯಾರೂ ಅಲ್ಲಗಳೆಯುವಂತಿರಲಿಲ್ಲ. ಇಂಥ ಶ್ರೀನಿವಾಸ, ಮದುವೆಗೆ ಇನ್ನೂ ಬರೀ ಮೂರು ತಿಂಗಳಿವೆ ಎನ್ನುವಾಗ ನೇತ್ರಾವತಿಗೆ ತಾನಿತ್ತ ಮದುವೆಯ ಭರವಸೆ, ಆ ಭರವಸೆಯೊಂದರ ಮೇಲೇ ಕಳೆದ ಒಂಭತ್ತು ತಿಂಗಳ ಕಾಲ ನಡೆಸಿದ ಮೇರೆಯರಿಯದ ಚಲ್ಲಾಟ. ಇವೆಲ್ಲವುಗಳನ್ನೂ—ಇಂಥದ್ದು ನಡೆದಿರಲೇ ಇಲ್ಲ ಎನ್ನುವಷ್ಟರ ಮಟ್ಟಿಗೆ—ಮರೆತೇಬಿಟ್ಟು ಅವಳ ದುರ್ಮರಣಕ್ಕೆ ಕಾರಣವಾದದ್ದು ಹೇಗೆ?

ನಾಗಪ್ಪನಿಗೆ ಆ ಮುಂಜಾವು ನಿಚ್ಚಳವಾಗಿ ನೆನಪಿದೆ. ಈಗ ಲಾಯಬ್ರರಿ ಮಾಡಿದ ಈ ಕೋಣೆಯಲ್ಲೇ ತಾನು, ರೂಮಿನ ಇನ್ನೊಬ್ಬ ಪಾರ್ಟ್ನರ್ ಆಗಿದ್ದ ಗೋಪಾಲ ಇಬ್ಬರೂ ಅಭ್ಯಾಸದಲ್ಲಿ ತೊಡಗಿದ್ದೆವು. ಶ್ರೀನಿವಾಸ ನೇತ್ರಾವತಿಯನ್ನು ಮದುವೆಯಾಗುವ ಭರವಸೆಯಿಂದ ಹಿಂದೆಗೆಯಹತ್ತಿ ಅದಾಗಲೇ ಕೆಲವು ವಾರಗಳೇ ಕಳೆದಿದ್ದುವು. ಕದ ತಟ್ಟಿದ ಸದ್ದು ಕೇಳಿಸಿದಾಗ ಗೋಪಾಲ ಎದ್ದು ಕದ ತೆರೆದರೆ; ನೇತ್ರಾವತಿ. ಕೋಣೆಯಲ್ಲಿ ಕಾಲಿರಿಸಿದಾಗಿನ ಮೋರೆ ಯಾವ ಒಳಗುದಿಯನ್ನೂ ವ್ಯಕ್ತಪಡಿಸದೇ ನಿರ್ಭಾವವಾಗಿತ್ತು. ಇಷ್ಟೇ: ತಮ್ಮಿಬ್ಬರತ್ತ ನೋಡಿ ಒಂದೇ ಒಂದು ಕ್ಷಣದ ಮಟ್ಟಿಗೆ ಮಂದವಾಗಿ ಮುಗುಳುನಕ್ಕಿದ್ದಳು ಎಂಬಂತಹ ನೆನಪಿನಿಂದಲೇ ನಾಗಪ್ಪನಿಗೆ ಈಗ ಮೈ ಮೇಲೆ ಮುಳ್ಳು ನಿಂತವು: ಅವಳು ನಕ್ಕದ್ದು ಹೌದೇ ಆದರೆ ಅದೇ ಅವಳ ಕೊನೆಯ ನಗುವಾಗಿತ್ತು. ಶ್ರೀನಿವಾಸ ಒಳಗಿನ ಕೋಣೆಯಲ್ಲಿ ಇದ್ದೇ ಇದ್ದಾನೆ ಎನ್ನುವ ಭರವಸೆಯಿಂದಲೇ ಎಂಬಂತೆ ನೇತ್ರಾವತಿ ಅವನ ಬಗ್ಗೆ ಚಕಾರ ಮಾತೆತ್ತದೇ ನೇರವಾಗಿ ಅತ್ತಕಡೆ ನಡೆದಳು. ಎಂದಿನಂತೆ ಕದವನ್ನು ಮಾತ್ರ ಅಡ್ಡಮಾಡಿಕೊಳ್ಳಲಿಲ್ಲ. ಅವಳು ಆ ಕೋಣೆಯನ್ನು ಹೊಕ್ಕುವಾಗಿನ ಕ್ಷಣದಲ್ಲಿ ಅವಳುಟ್ಟ ಸೀರೆ ಅಚ್ಚ ನೀಲಿ ಬಣ್ಣದ್ದಾಗಿತ್ತು ಎಂದು ಲಕ್ಷ್ಯಕ್ಕೆ ಬಂದದ್ದು ಈಗ ನೆನಪಿನಲ್ಲಿ ಫಕ್ಕನೆ ಮೂಡಿತು: ತೆಳುವಾದ ಜಾರ್ಜೆಟ್

ಸೀರೆ. ನೇತ್ರಾವತಿ ಆ ಸೀರೆಯನ್ನು ಹಿಂದೆ ಎಂದೂ ಉಟ್ಟದ್ದು ನೆನಪಿರಲಿಲ್ಲ. ಎಂದಿಗಿಂತ ಹೆಚ್ಚು ಸುಂದರಳಾಗಿ ಕಂಡದ್ದಕ್ಕೇ ಇರಬೇಕು... ಅಲ್ಲ, ಯಾವ ಸ್ಪಷ್ಟ ಕಾರಣವೂ ಇಲ್ಲದೇನೇ ಅವಳು ಬಸುರಿಯಾಗಿರಬಹುದೇ ಎಂಬಂತಹ ಸಂಶಯ ಮನಸ್ಸಿನಲ್ಲಿ ಹಾದು ಹೋದದ್ದೂ ನೆನಪಾಯಿತು: ಅವಳ ಮೈಯ ಸಹಜ ಮಾದಕತೆಗೆ ಈಗ ಬೇರೆಯೇ ಒಂದು ಮೆರಗು ಬಂದದ್ದನ್ನು ಒಳಮನಸ್ಸೆಲ್ಲೋ ನಮೂದಿಸಿರಬೇಕು. ಒಳಕೋಣೆಯಲ್ಲಿ ನಡೆಯುತ್ತಿದ್ದುದರ ಕಲ್ಪನೆ ತನಗಾಗಲೀ ಗೋಪಾಲನಿಗಾಗಲೀ ಬರುವದು ಶಕ್ಯವಿರಲಿಲ್ಲ. ನೇತ್ರಾವತಿಯ ಈ ಆಗಮನ ಮಾತ್ರ ಎಂದಿನಂತಹದಲ್ಲ ಎಂಬ ಕಳವಳದ ಭಾವ ಮಾತ್ರ ತಮ್ಮಿಬ್ಬರನ್ನೂ ಕಾಡದೆ ಇರಲಿಲ್ಲ. ಶ್ರೀನಿವಾಸ ಮೋರಿಯಲ್ಲಿ ನಿಂತು ಸ್ನಾನಮಾಡುತ್ತಿರಬೇಕು. ನೀರಿನ ಸದ್ದು ಎಂದಿಗಿಂತ ದೊಡ್ಡದಾಗಿಯೇ ಕೇಳಿಸುತ್ತಿತ್ತು. ಅದು ಉದ್ದೇಶಪೂರ್ವಕವಾದದ್ದಿರಬೇಕು; ನೇತ್ರಾವತಿ ಅವನು ಸ್ನಾನಮಾಡುತ್ತಿರವಾಗಲೇ ಅವನೊಂದಿಗೆ ಮಾತನಾಡುತ್ತಿರಬೇಕು. ನೀರಿನ ಸದ್ದು ಕೇಳಿಸಹತ್ತಿ ಐದು ಮಿನಿಟುಗಳೂ ಕಳೆದಿರಲಿಕ್ಕಿಲ್ಲ; ನೇತ್ರಾವತಿ ನಡುಬಾಗಿಲಲ್ಲಿ ಕಾಣಿಸಿಕೊಂಡಳು. ಅವಳ ಮತ್ತು ಶ್ರೀನಿವಾಸರ ನಡುವೆ ಅದೇನು ಮಾತುಕತೆಯಾಗಿತ್ತೋ. ಅವನನ್ನು ಮಾತನಾಡಿಸುದಕ್ಕಿಂತ ಹೆಚ್ಚಾಗಿ ಏನನ್ನೋ ಹೇಳಿ ಹೋಗಲೆಂದೇ ಬಂದಿರಬೇಕು: ಗೋಪಾಲ ಹಾಗೂ ತನ್ನನ್ನುದ್ದೇಶಿಸಿ: ನಿಮ್ಮ ನಿಮ್ಮ ತಂಗಿಯರ ಕಾಳಜಿ ತೆಗೆದುಕೊಳ್ಳಿ. ಇಂತಹ ನೀಚ ಮನುಷ್ಯನ ನೆರಳು ಕೂಡ ಆವರ ಮೇಲೆ ಬೀಳದಿರಲಿ ಎಂದವಳೇ ತಿರುಗಿ ಒಳಗೆ ಹೋದಳು. ಹಾಗೆ ಹೋದದ್ದೇ ತಡ, ಮುಂದಿನ ಚಾಳಿನಿಂದ ಬೊಬ್ಬೆ: ನೇತ್ರಾವತಿ ಮೂರನೇ ಮಜಲೆಯ ಸರಳುಗಳಿಲ್ಲದ ಬೋಳುಕಿಡಕಿಯಿಂದ ಕೆಳಗೆ ಹಾರಿಕೊಂಡಿದ್ದಳು. ಬಂದ ನೆನಪಿನಿಂದ ನಾಗಪ್ಪ ಬೆವರಹತ್ತಿದ. ಹಳೆಯ ಪುಸ್ತಕವೊಂದನ್ನು ಮೂಸಿದ್ದೇ ಈ ನೆನಪಿಗೆ ಮೂಲವೇ? ಅಥವಾ ಅದು ಮನಸ್ಸಿನಲ್ಲಿಯ ಇನ್ನಾವುದಕ್ಕೊ ಗಂಟುಹಾಕಿಕೊಳ್ಳುತ್ತಿದ್ದ ಕ್ಷಣಕ್ಕೆ ಪುಸ್ತಕದ ವಾಸನೆ ಆಕಸ್ಮಿಕ ನೆಪವಾಯಿತೆ? ನಾಗಪ್ಪನಿಗೆ ತಿಳಿಯಲಿಲ್ಲ. ಎರಡು ಸಂಗತಿಗಳನ್ನು ಮಾತ್ರ ನಾಗಪ್ಪನಿಗೆ ನೆನಪಿನಿಂದ ತಳ್ಳಿ ಹಾಕುವದು ಸಾಧ್ಯವಾಗಲಿಲ್ಲ; ಯಾವುದೋ ಉನ್ಮಾದದ ಭರದಲ್ಲಿ ಕೆಳಗೆ ಹಾರಿಕೊಂಡ ಆ ಮುಗ್ಧ ಜೀವ ಮುದ್ದೆಯಾಗಿ ಬಿದ್ದು ಪ್ರಾಣ ಹಾರಿ ಹೋಗುವ ಕೊನೆಯ ಕ್ಷಣದಲ್ಲಿ ಕೈಕಾಲು ಬಡೆದದ್ದು ಹಾಗೂ ಶ್ರೀನಿವಾಸ ಸ್ನಾನದ ನೀರಿನಿಂದ ಒದ್ದೆಯಾದ ಮೈಯಲ್ಲೇ, ಸೊಂಟದಲ್ಲಿ ಟವೆಲ್ಲೊಂದನ್ನು ಸುತ್ತಿಕೊಂಡು

ಓಡೋಡಿ ಹೋಗಿ ಅರ್ಜುನ್‌ರಾವರ ಮನೆಯಿಂದ ಪೋಲೀಸರಿಗೆ ಫೋನ್ ಮಾಡಿದ್ದು... ಆಸ್ಪತ್ರೆ ಸೇರಿಸುವ ಮೊದಲೇ ನೇತ್ರಾವತಿ ಕೊನೆಯುಸಿರನ್ನೆಳೆದಿದ್ದಳು... ಮುಂದೆ ಕೋರೋನರರ ಕೋರ್ಟಿನಲ್ಲಿ ತನ್ನದೇ ಪ್ರಮುಖ ಸಾಕ್ಷಿ: ನೇತ್ರಾವತಿಯ ಪ್ರಕ್ಷುಬ್ಧಗೊಂಡ ಸಂಬಂಧಿಕರೆಲ್ಲ ಶ್ರೀನಿವಾಸನೇ ಅವಳನ್ನು ಹೊರಗೆ ದೂಡಿದ ಎಂದು ಆಡಿಕೊಂಡದ್ದು ತನ್ನ ಸಾಕ್ಷಿಯ ಮೇಲೆ ಪರಿಣಾಮ ಮಾಡುವದು ಶಕ್ಯವಿರಲಿಲ್ಲ. ನೇತ್ರಾವತಿ ಕಿಡಕಿಯ ದಡಿಯನ್ನೇರಿ ಕೆಳಗೆ ಹಾರಿಕೊಂಡದ್ದನ್ನು ಇದಿರು ಚಾಳಿನ ಇಬ್ಬರು ಹೆಂಗಸರು ಕಣ್ಣಾರೆ ನೋಡಿದ್ದರು. ಆದರೆ ತಾನು ಆತ್ಮಹತ್ಯೆಯ ನಿಶ್ಚಯಮಾಡಿಯೇ ಬಂದಿದ್ದೇನೆ ಎಂಬುದನ್ನು ನೇತ್ರಾವತಿ ಶ್ರೀನಿವಾಸನಿಗೆ ಹೇಳಿರಬೇಕು. ಅದನ್ನು ಆ ಕ್ಷಣದ ಮಟ್ಟಿಗಾದರೂ ತಪ್ಪಿಸುವದು ಶ್ರೀನಿವಾಸನಿಗೆ ಶಕ್ಯವಿತ್ತು. ಆದರೆ ಶ್ರೀನಿವಾಸನ ಆ ದಿನದ ಹಲವು ಕೃತ್ಯಗಳನ್ನು ನೆನೆದರೆ ಅವಳು ಆತ್ಮಹತ್ಯೆಮಾಡುವದೇ ಅವನಿಗೆ ಬೇಕಿತ್ತು ಎನ್ನುವದು ಸ್ಪಷ್ಟವಾಗುತ್ತಿತ್ತು. ಆದ್ದರಿಂದಲೇ ಅದನ್ನು ತಪ್ಪಿಸುವಂತಹ ಯಾವ ಮುನ್ನೆಚ್ಚರಿಕೆಯನ್ನೂ ಅವನು ವಹಿಸಲಿಲ್ಲ. ಅವಳು ಹಾರಿಕೊಂಡಾಗ ಅವನ ಕೈಯಿಂದ ನಡೆದ ಮೊದಲನೇ ಕೃತ್ಯ. ತನ್ನ ಕೋಣೆಯಿಂದ ಹಾರಿ ಯಾರೋ ಜೀವ ತೆಗೆದುಕೊಂಡಿದ್ದಾರೆ ಎಂಬ ಸುದ್ದಿ ಕೊಡುತ್ತ ಪೋಲೀಸರಿಗೆ ಫೋನ್‌ಮಾಡಿದ್ದು. ಇದು ಆತ್ಮಹತ್ಯೆ; ಕೊಲೆಯಲ್ಲ ಎಂಬುದನ್ನು ಸಿದ್ಧಪಡಿಸುವದೇ ಶ್ರೀನಿವಾಸನ ತತ್‌ಕ್ಷಣದ ಕಾಳಜಿಯಾಗಿತ್ತು. ನಾಗಪ್ಪನ ಸಾಕ್ಷಿ ಮುಖ್ಯ ಒತ್ತು ಈ ಒಂದು ಸಂಗತಿಯ ಮೇಲಿತ್ತು. ಕಾಯದೆಯ ದೃಷ್ಟಿಯಿಂದ ಇದು ಆತ್ಮಹತ್ಯೆಯಾಗಿ ತೋರಬಹುದಾದರೂ ನೈತಿಕವಾಗಿ ಶ್ರೀನಿವಾಸ ಇದಕ್ಕೆ ಸಂಪೂರ್ಣವಾಗಿ ಜವಾಬ್ದಾರನಾಗಿದ್ದಾನೆ ಎಂಬುದನ್ನು ಅಳು ತುಂಬಿದ ಉನ್ಮಾದದಿಂದ ಹೇಳುತ್ತಿದ್ದಾಗ ಸಾಕ್ಷಿಯ ಸ್ಥಾನದಲ್ಲಿ ನಾಗಪ್ಪ ಗಡಗಡ ನಡುಗುತ್ತಿದ್ದ. ಕೋರ್ಟಿನಲ್ಲಿ ನೆರೆದವರ ಮೇಲೆ ಇದರ ಪರಿಣಾಮವಾಗದೇ ಇರಲಿಲ್ಲ. ನಿರ್ವಿಕಾರವಾಗಿ ಕುಳಿತವರೆಂದರೆ ಇಂತಹ ಕೇಸುಗಳನ್ನು ಕೇಳಿ ಕೇಳಿ ಭಾವನೆಗಳಿಗೆ ಜೊಮ್ಮು ಹಿಡಿದವರಂತೆ ತೋರುತ್ತಿದ್ದ ಕೊರೋನರ್ ಹಾಗೂ ಶ್ರೀನಿವಾಸ. ನಾಗಪ್ಪನ ಸಾಕ್ಷಿಯ ಮುಂದಿನ ಮಾತುಗಳು ಆಡಿದ ನಾಗಪ್ಪನಿಗೇ ಆಶ್ಚರ್ಯವನ್ನುಂಟುಮಾಡಿದ್ದುವು. ಯಾವ ಒಂದು ಪೂರ್ವಯೋಚನೆಯೂ ಇಲ್ಲದೇ—ಸಾಕ್ಷಿಯ ಸ್ಥಾನದಲ್ಲಿ ನಿಂತದ್ದಕ್ಕೆ ಒಳಗಿನಿಂದ ತಮ್ಮಿಂದ ತಾವೇ—

ಹುಟ್ಟಿಬಂದಂತಿದ್ದ ಮಾತುಗಳನ್ನು ಕೇಳುವಾಗ ಎಲ್ಲರ ಹುಬ್ಬುಗಳೂ ಮೇಲಕ್ಕೇರಿದ್ದುವು—ಶ್ರೀನಿವಾಸ ಕೊರೋನರರನ್ನೂ ಒಳಗೊಂಡು:

"ಶ್ರೀನಿವಾಸ ನೇತ್ರಾವತಿಯನ್ನು ಪ್ರೀತಿಸುತ್ತಾನೆ ಎನ್ನುವುದರ ಬಗ್ಗೆ ನನಗೆ ಮೊದಲಿನಿಂದಲೂ ಸಂಶಯವಿತ್ತು. ಈ ಸಂಶಯ ಹುಟಿದ್ದರ ಮೊದಲಲ್ಲಿ ಯಾಕೆಂದು ತಿಳಿದಿರಲಿಲ್ಲ. ಸಂಶಯ ಗಟ್ಟಿಯಾಗುತ್ತಿದ್ದಂತೆ ಒಂದು ದಿನ ಫಕ್ಕನೆಂಬಂತೆ ಹೊಳೆದುಹೋಗಿತ್ತು (ಅಂತೆಯೆ ಇರಬೇಕು ಅವಳು ಸಾಯುವ ಮೊದಲು ಗರ್ಭವತಿಯೆಂಬ ಸಂಶಯ ಬಂದದ್ದು. ಶ್ರೀನಿವಾಸ ಅವಳೊಡನೆ ಗೆಳೆತನ ಬೆಳೆಸಿದಂದಿನಿಂದ ತನಗರಿವಿಲ್ಲದೇನೇ ಅವಳ ಅಂಗಾಂಗಳನ್ನು ಬೇರೆಯೇ ಒಂದು ದೃಷ್ಟಿಯಿಂದ ತಾನು ನೋಡುತ್ತಿರಬೇಕು:) ಇವಳೊಡನೆಯ ಅವನ ಸಂಬಂಧಕ್ಕೆ ಎಂತಹದೋ ಭೀತಿ ಕಾರಣವಾಗಿಯೆಂದು—ಪ್ರೀತಿಯಲ್ಲ. ತನ್ನ ಸಂಭೋಗಶಕ್ತಿಯ ಬಗ್ಗೆ ಶ್ರೀನಿವಾಸನಿಗೆ ಮೊದಲಿನಿಂದಲೂ ಒಂದು ಬಗೆಯ ಅಧೈರ್ಯವಿತ್ತು. ಇಂತಹ ಒಂದು ಭಾವನೆಯನ್ನು ನನ್ನ ಹತ್ತಿರ ಅತ್ಯಂತ ಸೂಕ್ಷ್ಮವಾದ ರೀತಿಯಲ್ಲೊಮ್ಮೆ ಪ್ರಕಟಿಸಿದ್ದ. ಅವನು ಓದುತ್ತಿದ್ದ ಪುಸ್ತಕಗಳಿಂದಲೂ ಹಾಗೇ ಅನ್ನಿಸಿತು. ಚರ್ನಿರೋಡ್ ಹತ್ತಿರದ ಇಂತಹ ಗುಪ್ತ ಪ್ರಶ್ನೆಗಳಿಗೆ ಉತ್ತರ ಕೊಡುವ ಡಾಕ್ಟರರನ್ನು ಕಂಡಿದ್ದು ನೆನಪಿದೆ. ತನ್ನ ಪೌರುಷವನ್ನು ಪಣಕ್ಕೆ ಹಚ್ಚಿ ನೋಡುವ ಅವನ ಗುಂಗು ಇಷ್ಟೊಂದು ವಿಕೋಪಕ್ಕೆ ಹೋಗಿತ್ತೆಂದರೆ ಸೂಳೆಯ ಮನೆಗೆ ಹೋಗುವ ವಿಚಾರವನ್ನೂ ಮಾಡಿದ್ದ ಎಂಬುದು ನನಗೆ ಗೊತ್ತಿದೆ. ರೋಗದ ಭಯವೊಂದೇ ತಡೆಹಾಕಿತ್ತು... (ದೇವರೇ ದೇವರೇ ಈಗ ನಿಚ್ಚಳನಾಗುತ್ತಿದೆಯಲ್ಲ!) ಶ್ರೀನಿವಾಸ ನೇತ್ರಾವತಿಯನ್ನು ಬರಿಯೆ ತನ್ನ ಈ ಭಯದ ನಿವಾರಣೆಗಾಗಿಯೇ ಉಪಯೋಗಿಸಿಕೊಂಡಿರಬೇಕು ಮದುವೆಯ ಉದ್ದೇಶ ಅವನಿಗಿರಲಿಲ್ಲ. ಇಂತಹ ಅಪರಾಧಕ್ಕೆ ತಕ್ಕ ಶಿಕ್ಷೆಯಾಗದೇ ಹೋಗಬಾರದು..." ಮಾತು ಮುಗಿಸಿದಾಗ ನಾಗಪ್ಪನಿಗೆ ಕಣ್ಣಿಗೆ ಕತ್ತಲೆ ಕವಿದಂತಾಯಿತು. ಮುಂದಿನದೆಲ್ಲ ಮಾಮೂಲಿನ ವ್ಯವಹಾರ. ಪೋಸ್ಟ್ ಮೋರ್ಟೆಮ್ ರಿಪೋರ್ಟಿನಲ್ಲಿ ನೇತ್ರಾವತಿ ಮೂರು ತಿಂಗಳ ಗರ್ಭಿಣಿಯಿದ್ದುದರ ಉಲ್ಲೇಖವಿತ್ತು. ಶ್ರೀನಿವಾಸ ಅವಳೊಡನೆ ಸಂಭೋಗಮಾಡಿದ್ದ ಎಂಬುದಕ್ಕಿದ್ದ ಪುರಾವೆಯ ಮೇಲೆ ನಾಗಪ್ಪನ ಸಾಕ್ಷಿ ಹೊಸ ಬೆಳಕನ್ನು ಚೆಲ್ಲುವಂತಹದಾದರೂ ಕಾಯದೆ ಶ್ರೀನಿವಾಸನಿಗೆ ಶಿಕ್ಷೆ ವಿಧಿಸುವುದರಲ್ಲಿ ಷಂಢವಾಗಿದೆ. ಕೋರ್ಟಿನ ಮುಂದಿದ್ದ

ಪ್ರಶ್ನೆಯೊಂದೇ: ಇದು ಆತ್ಮಘಾತವೋ ಅಥವಾ ಕೊಲೆಯೋ? ಆತ್ಮಘಾತವೆಂಬುದಕ್ಕೆ ಕಣ್ಣಾರೆ ಕಂಡವರದೇ ನಿರ್ವಿವಾದ ಸಾಕ್ಷಿಯಿದೆ. ಈ ದುರಂತಕ್ಕೆ ಕಾರಣವಾದ ಸಂಗತಿಗಳಿಗೆ ಸಮಾಜವೇ ತಕ್ಕ ಉಪಾಯಗಳನ್ನು ಯೋಜಿಸಬೇಕೇ ಹೊರತು ಈ ಕೋರ್ಟು ಏನು ಮಾಡಲೂ ನಿರುಪಾಯವಾಗಿದೆಯೆಂಬ ಉದ್ಗಾರಗಳೊಂದಿಗೆ ಈ ಸಾವು ಅತ್ಮಹತ್ಯೆಯದು; ಶ್ರೀನಿವಾಸ ನಿರ್ದೋಷಿ ಎಂಬ ನಿಲುಗಡೆಯ ರೀಪೋರ್ಟಿನ ಮೇಲೆ ಸಹಿ ಮಾಡಿ ಮುಂದಿನ ಕೇಸಿನ ತಯಾರಿಗೆ ತೊಡಗಿದಾಗ ಶ್ರೀನಿವಾಸ ಕೋರ್ಟಿನಿಂದ ಪಲಾಯನ ಹೇಳಿದ್ದ...

ಶ್ರೀನಿವಾಸನ ಈ ದುಷ್ಟ ಕೃತ್ಯಕ್ಕೆ ಸಮಾಜ ವಿಧಿಸಿದ ಶಿಕ್ಷೆಯೆಂದರೆ ಈ ದುರ್ಘಟನೆ ನಡೆದ ಆರೇ ತಿಂಗಳಲ್ಲಿ ಮುಂಬಯಿಯ ನಾಲ್ಕು ಸಣ್ಣ ದೊಡ್ಡ ಹೊಟೆಲ್ಲುಗಳ ಮಾಲೀಕನಾದ ಶೇಷ ಕಾಮತರು ತಮ್ಮ ಏಳನೆ ಸುಕನ್ಯೆಯಾದ ಕಲ್ಯಾಣಿಯನ್ನು (ಮದುವೆಯ ಹೊತ್ತಿಗೆ ಶ್ರೀನಿವಾಸನಿಂದ ಶಾರದೆ ಎಂಬ ಹೆಸರು ಪಡೆದವಳನ್ನು) ಕೊಟ್ಟು ಭವ್ಯ ಹಾಲೊಂದರಲ್ಲಿ ಭರ್ಜರಿಯಾದ ರೀತಿಯಲ್ಲಿ ಕಲ್ಯಾಣಮಾಡಿ ಅವನ ಭರಭರಾಟಿಯ ದಿನಗಳಿಗೆ ಬುನಾದಿ ಹಾಕಿಕೊಟ್ಟದ್ದು. ದಾದರಿನ ಹಿಂದೂಕಾಲೋನಿಯಲ್ಲಿ ಆಗ ಮಾವನೇ ಕೊಂಡುಕೊಟ್ಟ ಫ್ಲಾಟು: ಮದುವೆಯಾದ ಮೇಲೆ ಶ್ರೀನಿವಾಸ ಖೇತವಾಡಿ ಬಿಟ್ಟಿದ್ದ. ಮಾವನೇ ತೆಗೆಸಿಕೊಟ್ಟ ಸಣ್ಣ ಪ್ರಿಂಟಿಂಗ್ ಪ್ರೆಸ್: ಸರಕಾರಿ ನೌಕರಿಗೆ ರಾಜೀನಾಮೆ. ಎಲ್ಲರನ್ನು ಬಿಟ್ಟು ಶ್ರೀನಿವಾಸನನ್ನೇ ಅಳಿಯನನ್ನಾಗಿ ಮಾಡಿಕೊಂಡದ್ದರ ಹಿಂದಿನ ಗುಟ್ಟಿನ ಕತೆಯೂ ಪಕ್ಕ ಮೂಡಿಸಿಕೊಂಡು ಅಲ್ಲಲ್ಲಿ ಹಾರಿದ್ದು ನೆನಪಿಗೆ ಬಂದಾಗ—ಶಾರದೆಯ ಮುಗ್ಧ ಸೌಂದರ್ಯಕ್ಕೆ ಮಾರುಹೋದ ನಾಗಪ್ಪ ಅದನ್ನು ಮನಸ್ಸಿನಿಂದ ತೊಡೆದುಹಾಕುವಂತೆ ತಲೆ ಗಲಗಲ ಅಲ್ಲಾಡಿಸಿದ: ವಯಸ್ಸಿನ ಹದಿನೇಳನೇ ವರುಷದಲ್ಲೇ ಮೈಯಲ್ಲಿ ಹರೆಯದ ಸೊಕ್ಕು ತುಂಬಿ ತುಳುಕಾಡುವ ಕಲ್ಯಾಣಿಯ ಮೇಲೆ ನೆರೆಮನೆಯ ತರುಣನೊಬ್ಬ ಶ್ರೀನಿವಾಸ ನೇತ್ರಾವತಿಯ ಮೇಲೆ ಮಾಡಿದಂತಹ ಪ್ರಯೋಗವನ್ನೇ ಮಾಡಿದ್ದನಂತೆ! ಶ್ರೀನಿವಾಸನ ಮೊದಲ ಹುಡುಗಿ ಮದುವೆಯಾದ ಎಂಟನೇ ತಿಂಗಳಲ್ಲೇ ಹುಟ್ಟಿದ್ದರೂ ಸರಿಯಾಗಿ ಬೆಳೆದ ಮಗುವಾಗಿತ್ತಂತೆ. ಶಾರದೆಯ ಮೋರೆ ಇನ್ನೊಮ್ಮೆ ಕಣ್ಣ ಮುಂದೆ ನಿಂತಾಗ ಈ ಕಂತೆ ಪುರಾಣದ ಬಗ್ಗೆ ಇಷ್ಟೊಂದು ಸಿಟ್ಟುಬಂದಿತೆಂದರೆ ನಾಗಪ್ಪ ಕುರ್ಚಿಯಿಂದ

ಎದ್ದವನೇ ನೇರವಾಗಿ ಮೋರಿಗೆ ಹೋಗಿ ಥೂ ಎಂದು ಬಲವಾಗಿ ಉಗುಳಿದ. ಇನ್ನು ಇಲ್ಲಿ ಬಹಳ ಹೊತ್ತು ಕೂಡ್ರದೆ ಸ್ನಾನ ಮುಗಿಸುತ್ತಲೇ ಹೊರಗೆ ಹೋಗಿ ಊಟಮಾಡಿ ಬರಬೇಕು ಎಂದುಕೊಂಡ. ಕ್ಷೌರಕ್ಕಾಗಿ ಗಡ್ಡದ ಮೇಲೆ ಸಾಬೂನಿನ ನೊರೆಯೆಬ್ಬಿಸುತ್ತಿದ್ದಾಗ. ಶ್ರೀನಿವಾಸನ 'ಬಿಝಿನೆಸ್ಸು' ಊರ್ಜಿತಾವಸ್ಥೆಗೆ ಬಂದು ಸಮಾಜದಲ್ಲಿ ಅವನ ವರ್ಚಸ್ಸು ಹೆಚ್ಚುತ್ತ ಹೋದಂತೆಲ್ಲ ನೇತ್ರಾವತಿಯ ಪ್ರಕರಣ ಒಂದು ದಂತಕತೆಯ ರೂಪಧರಿಸಿದ್ದು, ಶ್ರೀನಿವಾಸ ದೊಡ್ಡ ಹೀರೋ ಆಗಿ ಮೆರೆದದ್ದು ನೆನಪಿಗೆ ಬರಹತ್ತಿತು: ಶ್ರೀನಿವಾಸನೇ ಒಂದು ದಿನ ಬಾಯಿ ಬಿಟ್ಟು ಹೇಳಿದ ಕಾರಣ ಇಷ್ಟು: ಈ ಇಡೀ ಸಂಬಂಧ ಒಂದು ಮೋಸದ ಮೇಲೆ ನಿಂತದ್ದೆಂದು ಗೊತ್ತಾದಾಗ ನೇತ್ರಾವತಿಗಿಂತ ಮೊದಲು ತಾನೇ ಆತ್ಮಹತ್ಯೆಮಾಡಿಕೊಳ್ಳುವವನಿದ್ದನಂತೆ. ಆದರೆ ಈ ಯಃಶ್ಚಿತ ಜನರ ಸಲುವಾಗಿ ಇಂತಹ ವಿಕೋಪಕ್ಕೆ ಹೋಗುವ ಮನಸ್ಸಾಗದೇ ಪ್ರಭಾದೇವಿಯ ಸಿದ್ಧಿವಿನಾಯಕನ ಮೊರೆಹೊಕ್ಕನಂತೆ-ಮನಃಶಾಂತಿಗಾಗಿ! ನಡೆದ ಮೋಸ ಇದು ಅನಸೂಯಾ ಇಟ್ಟುಕೊಂಡವನು ತಮ್ಮ ಜಾತಿಯವನಾಗಿರದೇ ಅಂಕೋಲೆಯ ಕ್ಷೌರಿಕರ ಮನೆತನಕ್ಕೆ ಸೇರಿದವನಂತೆ. ಅವನು ಶ್ರೀಮಂತನಾದದ್ದು ಸ್ಮಗಲ್ ಮಾಡಿದ ಪರದೇಶದ ಸಾರಾಯಿಯ ಮಾರಾಟದಿಂದಂತೆ. ಇದು ತಿಳಿದಾಗಲೇ ಈ ಮದುವೆಯ ಸಂಬಂಧದ ಬಗ್ಗೆ ಮನಸ್ಸು ಮುರಿದಿತ್ತಂತೆ. ಆದರೆ ನೇತ್ರಾವತಿಯ ಮುಖವನ್ನು ನಂಬಿ, ಅವಳಿಗಿತ್ತ ಭರವಸೆಯನ್ನು ನಂಬಿ ಮನಸ್ಸು ಗಟ್ಟಿ ಮಾಡಿದ್ದನಂತೆ. ಆದರೆ ಮೇ ತಿಂಗಳಲ್ಲಿ ಆಗಲಿದ್ದ ಮದುವೆ ಮಾರ್ಚಿನಲ್ಲೇ ಆಗಬೇಕೆಂದು ಉತಾವಳಿ ಮಾಡಿದಾಗ... ಎಂದು ಮುಂತಾಗಿ ಶ್ರೀನಿವಾಸ ನೇತ್ರಾವತಿಯ ಹೊಟ್ಟೆಯೊಳಗಿನ ಪಿಂಡದ ಜವಾಬ್ದಾರಿಯನ್ನು ಅನಸೂಯಾಳ ಮಿಂಡನ ಮೇಲೆ ಹೊರಸಿದ್ದ. ಜನ ಈ ಹೊಸ ಕತೆಯನ್ನೂ ಬಾಯಿ ಚಪ್ಪರಿಸಿ ಕೇಳಿತ್ತು. ಜನ ನಂಬುವಂತೆ ಕತೆ ಕಟ್ಟುವುದರಿಂದಲೇ ವ್ಯಕ್ತಿ ತನ್ನ ಕೃತ್ಯದ ನೈತಿಕ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಬಹುದಾದರೆ...

ನಡುವೆಯೇ ನಾಗಪ್ಪ ಮತ್ತೆ ನಡುಗಿದ:

ಹಳೆಯ ಪುಸ್ತಕವೊಂದನ್ನು ಮೂಸಿ ನೋಡಿದ ಒಂದು ಆಕಸ್ಮಿಕ ಘಟನೆಯೊಂದರಿಂದ ಹುಟ್ಟಿದ ನೆನಪು ತನ್ನನ್ನು ಇನ್ನಾವುದಕ್ಕೋ ಸಿದ್ಧಗೊಳಿಸಲೆಂದೇ ಹುಟ್ಟಿರಬೇಕು. ಮೊದಲಿನಿಂದಲೂ ಅದಕ್ಕೆ

ಗಂಟುಹಾಕಿಕೊಂಡೇ ಮೇಲೆ ಬಂದಿರಬೇಕು: ಸಂತೋಷಭವನದ ನಾಯಕ ಹೇಳಿದ ಮಾತು ಹಠಾತ್ತನೆ ಮೂಡಿಬಂದು ಇದಕ್ಕೆಲ್ಲ ಅರ್ಥ ಸೂಚಿಸಿತು: 'ನಿನ್ನ ಅಪ್ಪ-ಅಮ್ಮ ನಮ್ಮ ಜಾತಿಯವರೇ ಅಲ್ಲವಂತೆ. ಇದನ್ನು ಸಿದ್ಧಗೊಳಿಸುವ ಪುರಾವೆಗಳನ್ನು ಒಟ್ಟುಮಾಡಲು ಶ್ರೀನಿವಾಸ ಗೋವೆಗೆ ಹೋಗಿದ್ದಾನೆ...' ತನ್ನ ಜಾತಿಯ ಪ್ರಶ್ನೆ ನಾಗಪ್ಪನನ್ನು ಎಂದೂ ಕಾಡಿರಲಿಲ್ಲ. ಕಾಡಿದ್ದು ತನ್ನ ಅಪ್ಪ-ಅಮ್ಮ ತಾವು ಇಂತಹ ಜಾತಿಯವರೆಂದು ಹೇಳಿ ಎಂತಹದೋ ಮೋಸಮಾಡಿದ್ದಾರೆ ಎನ್ನುವ ಧಾಟಿಯ ಆರೋಪ. ನೇತ್ರಾವತಿಯ ಭಾವನ ಮೇಲೆ ಶ್ರೀನಿವಾಸ ಹೊರಿಸಿದ ಆರೋಪ ಇದಕ್ಕೆ ಕೊಂಡಿ ಹಾಕಿಕೊಂಡು ಆಗಿನಿಂದಲೂ ಹೊಳೆಯದೇ ಇದ್ದುದನ್ನು ಈಗ ಹೊಳೆಯಿಸಿ ಅದನ್ನು ಇದಿರಿಸುವಂತೆ ತನ್ನನ್ನು ಆಹ್ವಾನಿಸಿರಬೇಕು.

ನಾಗಪ್ಪ ಮೋರಿಯಲ್ಲಿ ನಿಂತು ತಂಬಿಗೆ ತುಂಬಿ ತುಂಬಿ ತಂಪುನೀರನ್ನು ತಲೆಯ ಮೇಲೆ ಸುರಿದುಕೊಳ್ಳುತ್ತ ನಿಂತ: ಅಂತೂ ತನ್ನ ವ್ಯಕ್ತಿತ್ವದ ನಿಜವಾದ ಸತ್ವ ತನಗೇ ಗೊತ್ತಾಗುವ ಮುಹೂರ್ತ ಒದಗಿಬರುತ್ತಿದೆ. ಬರಲಿ ಎಂದುಕೊಂಡ.

## ಅಧ್ಯಾಯ ಏಳು

ಸ್ನಾನಕ್ಕೆ ನಿಂತಲ್ಲೇ ಶ್ರೀನಿವಾಸನೂ ಈ ಪಿತೂರಿಯಲ್ಲಿ ಸಾಮೀಲಾದದ್ದರ ಕಾರಣಕ್ಕೆ ಅರ್ಥ ಹೊಳೆಯುತ್ತಿದೆ ಎನ್ನುವ ಅನ್ನಿಸಿಕೆ: ಕೊರೋನರನ ಕೋರ್ಟಿನಲ್ಲಿ ತಾನು ಆಡಿದ ಮಾತುಗಳಿಂದ ಅಭಿಮಾನಕ್ಕೆ ಬಿದ್ದ ಜಖಮ್ ಶಿಕಾರಿಯಾಡುವ ಶ್ವಾಪದ-ಪ್ರವೃತ್ತಿಯ ನೆಲೆಯಲ್ಲಿ ಸತ್ವಪಡೆಯುತ್ತ ಜೀವಂತವಾಗಿದ್ದಿರಬೇಕು. ಮಾನವನ ಆಕ್ರಮಣಶೀಲತೆ ಬೇರು ಬಿಟ್ಟದ್ದು ತನ್ನ ಪೂರ್ವಜರ ಬೇಟೆಯಾಡುವ ಅವಶ್ಯಕತೆಯಲ್ಲೇ. ಸ್ವತಃ ಅವನೂ ಕೂಡ ತನ್ನ ಇತಿಹಾಸದ ಆರಂಭದಲ್ಲಿ ಬೇಟೆಯಾಡಿಯೇ ಉಪಜೀವಿಸುತ್ತಿದ್ದ: ಇಷ್ಟೇ ಆ ಬೇಟೆಯ ಉದ್ದೇಶ ಹೊಟ್ಟೆಪಾಡಾಗಿತ್ತು. ಆದರೆ ಶ್ರೀನಿವಾಸ ಹಾಗೂ ಫಿರೋಜರ ಪಿತೂರಿಯ ಹಿಂದಿನ ಪ್ರೇರಣೆಗೆ ಉತ್ಕ್ರಾಂತಿ-ಕ್ರಮದಲ್ಲಿ ಯಾವ ಸ್ಥಾನವಿದೆ? ಇಪ್ಪತ್ತು ವರ್ಷಗಳ ಹಿಂದೆ ನಾನು ಅವನ ಬಗ್ಗೆ ವ್ಯಕ್ತಪಡಿಸಿದ ಒಂದು ನಿಲುವಿನ ಕಾರಣದಿಂದ ನನ್ನನ್ನು ಮುಗಿಸಿಯೇಬಿಡುತ್ತೇನೆಂಬಂತಹ ಈ ಛಲಕ್ಕೆ ಸಮಾನವಾದ ಭಾವನೆ ಮಾನವಪೂರ್ವ ವಿಕಾಸಸ್ಥಿತಿಯಲ್ಲಿಲ್ಲ. ಇನ್ನೊಬ್ಬನನ್ನು ಧ್ವಂಸಗೊಳಿಸುವುದರಲ್ಲೇ ಸುಖ ಕಾಣುವ ಪ್ರಾಣಿ ತನ್ನ ಮೆದುಳಿನ ಬೃಹದಾಕಾರದ ಬಗ್ಗೆ ದುರಭಿಮಾನ ತಾಳುವ ಮನುಷ್ಯನೊಬ್ಬನೇ ಎಂದು ತೋರುತ್ತದೆ. ನನ್ನ ಕರ್ರಿಯರದ ಅಭ್ಯುದಯದ ಸಲುವಾಗಿ ಏನನ್ನೂ ಮಾಡಿರದ ಫಿರೋಜ್ ಅದನ್ನಿಂದು ಹಾಳುಮಾಡುವುದರಲ್ಲಿ ಪಡುವ ಸುಖಕ್ಕೆ ಏನು ಅರ್ಥ? ಒಬ್ಬ ಇನ್ನೊಬ್ಬನ ವಿನಾಶಕ್ಕೆ ಕಾರಣವಾಗದ ಹಾಗೆ—ಬೇಟೆಯ ದಿನಗಳಲ್ಲಿ ಬೆಳೆಸಿಕೊಳ್ಳಬೇಕಾದ—ಆಕ್ರಮಣಶೀಲತೆಯನ್ನು ಹತ್ತಿಕ್ಕುವ ಉಪಾಯಗಳು ಮಾನವನಿಗೆ ವ್ಯಕ್ತಿಗತವಾಗಿ ಸಾಧಿಸಿಲ್ಲ. ಪ್ರಾಣಿವರ್ಗಕ್ಕೆ ಇವು ಸಾಧಿಸಿವೆಯಂತೆ. ಮನುಷ್ಯ ಮನುಷ್ಯನದೇ ಧ್ವಂಸಕ್ಕೆ ಕಾರಣವಾಗುವ ದುಷ್ಟಶಕ್ತಿಯ ದಮನ ಸಾಮಾಜಿಕವಾಗಿ ಮಾತ್ರ ಸಾಧ್ಯವೆಂದು ತೋರುತ್ತದೆ. ಆದರೆ ಮಾನವಸಮಾಜ ಇನ್ನೂ ಆ ರೀತಿಯಿಂದ ವಿಕಾಸವಾಗುತ್ತಿಲ್ಲ...

ಮತ್ತೆ, ಇಂತಹ ಬರಿಯೆ ಮಿದುಳಿನಲ್ಲಿ ಹುಟ್ಟಿದ ವಿಚಾರಗಳಿಂದ ದೇಹದ ಇನ್ನಾವುದೋ ಕೇಂದ್ರದಲ್ಲಿ ತನ್ನನ್ನೂ ನಡುಗಿಸುತ್ತಿದ್ದ ಭಯವನ್ನು ಕಳಕೊಳ್ಳಲು ಪ್ರಯತ್ನಿಸುತ್ತಿದ್ದೇನೆ ಎಂಬುದರ ಅರಿವು ನಾಗಪ್ಪನಿಗೆ ಬರದಿರಲಿಲ್ಲ. ಆ ಅರಿವು

ಬಂದ ಕೂಡಲೇ ತನ್ನ ಪುಕ್ಕಲುತನದ ಬಗ್ಗೆ ತನಗೇ ಸಿಟ್ಟುಬಂದಿತು: ಸೀತಾರಾಮನನ್ನು ಕಾಣಲು ಹೋಗಬೇಕು, ಎಷ್ಟು ದಿನವಾಯಿತು ಅವನನ್ನು ಕಾಣದೇನೆ. ಇಲ್ಲ, ಮೊದಲ ಭೇಟಿಯಲ್ಲೇ ಅಷ್ಟೊಂದು ಆತ್ಮೀಯತೆಯಿಂದ ಮಾತನಾಡಿಸಿದ ದೋಶಿಯವರನ್ನಾದರೂ ಕಂಡು ಬರಬೇಕು ಎಂಬ ವಿಚಾರವನ್ನು ಕೂಡ ಬಿಟ್ಟುಕೊಟ್ಟ. ಬೇಡ. ಮಾತನಾಡಿ ಪ್ರತಿಯೊಂದನ್ನೂ ಕೆಟ್ಟ ವಿಜ್ಞಾನವನ್ನಾಗಿ ಮಾಡಿ ಒಳಗಿನ ಭಯವನ್ನು ಕಳೆದುಕೊಳ್ಳುವ ಈ ದುರಭ್ಯಾಸ ಇನ್ನು ಬೇಡ. ಬಹುಶಃ ಮನುಷ್ಯತ್ವದ ಅಂತಿಮ ಲಕ್ಷಣವೊಂದೇ ಎಂದು ತೋರುತ್ತದೆ; ಅನ್ಯಾಯಕ್ಕೆ ಬಗ್ಗದೇ ಇರುವದು. ಅದರ ವಿರುದ್ಧ ಹೋರಾಡುವದು. ಸತ್ತರೂ ಅಡ್ಡಿಯಿಲ್ಲ; ಸೋಲನ್ನೊಪ್ಪಲಾಕಿ...

ತನ್ನ ನಿರ್ಧಾರದ ಅಭಿವ್ಯಕ್ತಿಗೀಗ ಮಂತ್ರೋಚ್ಚಾರದ ಧಾಟಿಬಂದದು ನೋಡಿ ಮುಜಗರವಾಯಿತು.

ಸ್ನಾನ ಮುಗಿಸಿ ಬಟ್ಟೆ ಹಾಕಿಕೊಂಡವನೇ ಊಟಕ್ಕೆಂದು ಸೀದ ಶೇರ್-ಏ-ಪಂಜಾಬ್ ರೆಸ್ಟೋರಂಟಿಗೇ ಹೋದ. ಕೌಂಟರಿನ ಮೇಲೆ ಕೂತ ಶೇಖ ಅನ್ವರ್ ಎ ಗೆಳಿತನದ ನಗು ನಗುತ್ತ, 'ಬಹಳ ದಿನಗಳಾದುವು ಸಾಹೇಬರು ಇತ್ತ ಬರದೇ. ನೋಡಿ ನಿನ್ನೆ ಸಂಜೆ ಒಬ್ಬ ಹುಡುಗ ನಿಮಗೊಂದು ಚೀಟಿ ಕೊಟ್ಟು ಹೋಗಿದ್ದಾನೆ. ಬಹಳ ಹೊತ್ತು ಹಾದಿ ನೋಡಿದ. ನೀವು ದಿನವೂ ಇಲ್ಲೇ ಊಟಕ್ಕೆ ಬಿರುತ್ತೀರಿ ಎಂದ ಯಾರೋ ಹೇಳಿದ್ದರಿಂದ ಇಲ್ಲಿ ಬಂದನಂತೆ. ಹೆಸರು ಹೇಳಲಿಲ್ಲ' ಎಂದು. ನಾಗಪ್ಪನ ಮನಸ್ಸು ತಿರುಗಿ ಕಳವಳಕ್ಕೊಳಗಾಯಿತು. ಮೂಲೆಯ ಒಂದು ಟೇಬಲ್ ಇದಿರು ಕೂಡುತ್ತಲೇ ಇದಿರು ಬಂದ ನಿಂತ ವೇಟರ್‌ಗೆ ಊಟದ ಆರ್ಡರ್ ಕೊಟ್ಟು ಲಿಫಾಫೆಯ ಬಾಯಿ ತೆರೆದು ಒಳಗಿನ ಚೀಟಿಯನ್ನು ಹೊರತೆಗೆದ. ಮುಂಜಾನೆ ಸಂತೋಷಭವನದಲ್ಲಿ ನೋಡಿದ ಚೀಟಿಯದೇ ಕಾರ್ಬನ್ ಪ್ರತಿ. ಇದು ಮೇರಿಯದೇ ಕೆಲಸ. ಚೀಟಿಯ ಮುಖಾಂತರ ತನ್ನನ್ನು ತಲುಪುವುದರಲ್ಲಿ ತೋರಿಸಿದ ಕಾಳಜಿಯಿಂದ ಕಣ್ಣು ತೇವಗೊಳ್ಳುತ್ತಿರುವಷ್ಟರಲ್ಲಿ ಇಷ್ಟೊಂದು ತರಾತುರಿಯಲ್ಲಿ ತನಗೆ ಮುಟ್ಟಿಸಲು ಬಯಸಿದ ಸಂದೇಶ ಅದೆಂತಹದಿರಬಹುದಪ್ಪ ಎಂಬ ಆತಂಕಕ್ಕೊಳಗಾದ. ರಾತ್ರಿಯ ಎಂಟು ಗಂಟೆಯವರೆಗೆ ಕಾಯಬೇಕಾದ ಅವಶ್ಯಕತೆಯ ಒತ್ತಡ ತಡೆಯುವದು ಅಸಾಧ್ಯವೆನಿಸಿತು. ಊಟದ ಬಿಲ್ಲು ತೆತ್ತು ಹೊಟೆಲಿನ ಹೊರಗೆ ಬಿದ್ದು ನಡೆಯುತ್ತ ಮನೆಯ ದಾರಿ ಹಿಡಿದಾಗ ಏನೇನು

ಉಂಡೆ ಎಂಬುದೇ ನೆನಪಿಗೆ ಬರದಾಯಿತು. ಚಿರಪರಿಚಿತವಾದ ಲೆಮಿಂಗ್ಟನ್‌ರೋಡ್ ಗುಂಟ ನಡೆಯುವಾಗ ಕಾಡಿದಷ್ಟು ತೀವ್ರವಾಗಿ ತನ್ನ ಒಂಟಿತನ ನಾಗಪ್ಪನನ್ನು ಹಿಂದೆಂದೂ ಕಾಡಿರಲಿಲ್ಲ. ಹಠಾತ್ತನೆ ಬಂದ ಒಂದು ವಿಚಾರಕ್ಕೆ ನಾಗಪ್ಪ ಫೂಟ್‌ಪಾಥಿನ ಮೇಲೆ ಥಕ್ಕಾಗಿ ನಿಂತೇಬಿಟ್ಟ: ತಾನು ಆಫೀಸಿಗೆ ಹೋಗದೇ ಆರು ದಿನಗಳಾಗುತ್ತ ಬಂದರೂ ತನ್ನ ಬಗ್ಗೆ ಎಷ್ಟೊಂದು ಅಭಿಮಾನ, ಪ್ರೀತಿ ಇಟ್ಟುಕೊಂಡವರೆಂದು ತಿಳಿದ ಸಹೋದ್ಯೋಗಿಗಳು, ತನ್ನ ಕೈಕೆಳಗಿನ ಸಹಾಯಕರು ಇವರಲ್ಲೊಬ್ಬರೂ ತನಗೆ ಭೆಟ್ಟಿಯಾಗಲೂ ಈವರೆಗೆ ಬಂದಿರಲಿಲ್ಲ. ಅವರೆಲ್ಲ ತನ್ನ ಬಗ್ಗೆ ತೋರುತ್ತ ಬಂದ ಭಾವನೆಗಳು ಕೂಡ ಬರಿಯ ಸ್ವಾರ್ಥದ ಮೇಲೆ ನಿಂತವುಗಳಾಗಿದ್ದುವೆ? ಬಂದ ಸಂಶಯದಿಂದ ಉಂಡದ್ದೆಲ್ಲ ಹೊರಬರುವ ಭಯವಾಯಿತು, ನಾಗಪ್ಪನಿಗೆ. ತಾನಿನ್ನೂ ಫೂಟ್‌ಪಾಥಿನ ಮೇಲೆ ಇದ್ದೇನೆ ಎನ್ನುವುದರ ಅರಿವು ಬಂದು ತನ್ನನ್ನು ಸಾವರಿಸಿಕೊಳ್ಳುತ್ತ ಬದಿಯ ಎಲೆಯ ಅಂಗಡಿಗೆ ಹೋಗಿ, 'ಬನಾರಸೀ ಮಸಾಲಾ ಪಾನ್' ಕೊಂಡು ಬಾಯಲ್ಲಿಟ್ಟು ಅಗಿಯುತ್ತ ವೇಗವೇಗವಾಗಿ ಮನೆಯ ಕಡೆಗೆ ಹೆಜ್ಜೆ ಇಡಹತ್ತಿದ್ದ; ಇಲ್ಲ, ಯಾರಾದರೂ ಬಂದಿರಬೇಕು. ತಾನು ಶ್ರೀನಿವಾಸನ ಮನೆಗೆ ಹೋದಾಗ ಬಾಗಿಲ ಬೀಗವನ್ನು ಕಂಡು ಹಿಂತಿರುಗಿ ಹೋಗಿರಬೇಕು. ನೆರೆಮನೆಯವರು ತನಗೆ ಹೇಳಲು ಮರೆತಿರಬೇಕು...ನಾಗಪ್ಪನ ಮನಸ್ಸು ಸತ್ಯಸಂಗತಿಯನ್ನು ಇದಿರಿಸಲು ಹಿಂದೆಗೆಯಹತ್ತಿತು; ಈಗಾಗಲೇ ತನ್ನನ್ನು ಸಸ್ಪೆಂಡ್ ಮಾಡಿದ್ದರ ಸುದ್ದಿ ಆಫೀಸಿನಲ್ಲೆಲ್ಲ ಹರಡಿರಬೇಕು. ಅದರ ಕಾರಣ ಕೂಡ. ಈ ವಿಚಾರ ನಾಗಪ್ಪನಿಗೆ ಹೊಳೆದೂ ಅದನ್ನು ಕೂಡಲೇ ಒಪ್ಪಲು ಸಿದ್ಧನಿರಲಿಲ್ಲ. ಶೇರ-ಏ-ಪಂಜಾಬ್, ಸಂತೋಷಭವನಗಳಲ್ಲಿ ಊಟಕ್ಕೆ ಹೋಗುತ್ತಿದ್ದ ಸಮಾಚಾರ ಮೇರಿಗೆ ತನ್ನ ಸಹೋದ್ಯೋಗಿಗಳಿಂದಲೇ ತಿಳಿದಿರಬೇಕು...

ಮಾಳಿಗೆಯ ಮೆಟ್ಟಿಲುಗಳನ್ನು ಹತ್ತಿ ಕೋಣೆಯತ್ತ ಸಾಗುವಾಗ, ಎಲ್ಲ ಗಂಡಸರು ಆಫೀಸಿನಲ್ಲಿ ಇರುವ ವೇಳೆಗೆ ತಾನೊಬ್ಬನೇ ಮನೆಯಲ್ಲಿರುತ್ತಿದ್ದುದನ್ನು ಕಂಡ ಚಾಳಿನ ಹೆಂಗಸರು ತನ್ನತ್ತ ಬೀರಿದ ದೃಷ್ಟಿಯಲ್ಲಿ ಮೂಡಿದ ಕುತೂಹಲದಲ್ಲಿ ಇಷ್ಟು ದಿನ ಆತ್ಮೀಯನಾದವನು ಈಗ ಒಬ್ಬ ಯಃಕಶ್ಚಿತನಾಗಿ ತಾನು ಅನುಭವಿಸುತ್ತಿದ್ದ ಯಾತನೆಯನ್ನು ಕುರಿತು ಒಂದು ಬಗೆಯ ಫಾಜೀಲವಾದ ಆಸ್ಥೆಯಿದ್ದ ಗುಮಾನಿ ಬಂದು ಮನಸ್ಸು ಹೇಸಿತು. ಇಂದಿನ ಯಾಂತ್ರಿಕ

ಜೀವನದಿಂದಾಗಿ ಜಿಡ್ಡು ಬಿದ್ದ ತಮ್ಮ ಸಂವೇದನೆಗಳನ್ನು ಚುರುಕುಗೊಳಿಸಲು ಇವರು ಇತರರ ದುಃಖವನ್ನು ಕೂಡ ಉಪಯೋಗಿಸಿಕೊಳ್ಳಬಲ್ಲರೇನೋ. ಉಳಿದವರ ಯಾತನೆ ಕೂಡ ಇವರಿಗೆ ಮನರಂಜನೆಯ ವಿಷಯವಾಗಬಲ್ಲುದೇನೋ. ಕೋಣೆಯ ಬೀಗ ತೆಗೆಯುವ ಹೊತ್ತಿಗೆ ಮಗ್ಗಲು ಮನೆಯ ಹೆಂಗಸು 'ಮೈಯಲ್ಲಿ ಹುಷಾರಿಲ್ಲವೆ?' ಎಂದು ಕೇಳಿದ್ದರಲ್ಲಿ ತನ್ನ ಆರೋಗ್ಯದ ಬಗೆಗಿನ ಕಾಳಜಿಗಿಂತ—ನೀನು ಯಾಕೆ ಆಫೀಸಿಗೆ ಹೋಗದೇ ಮನೆಯಲ್ಲೇ ಕೂತಿದ್ದೀ ಎನ್ನುವುದರ ಸುಳುಹು ನಮಗೆ ಹತ್ತಿದೆ—ಎಂಬ ಸೂಚನೆಯೊಳಗಿನ ವ್ಯಂಗ್ಯ, ಅದರಿಂದಾಗಿ ತನಗಾಗುತ್ತಿದ್ದ ನೋವಿನಿಂದ ಅವಳು ಸುಖ ಪಡುವ ರೀತಿಗೆ ಜಿಗುಪ್ಸೆಹುಟ್ಟಿತು. ತನ್ನ ತಿರಸ್ಕಾರವನ್ನು ಮುಚ್ಚುವ ಪ್ರಯತ್ನ ಮಾಡದೇ—"ಹೌದು. ಆದರೆ ಅದಕ್ಕೆ ಬೇಕಾದ ಔಷಧಿ ನಿಮ್ಮ ಹತ್ತಿರ ಇಲ್ಲ," ಎಂದವನೇ ಕದ ತೆರೆದು ಒಳಗೆ ಹೋದ. ಈಗ ಗಡದ್ದಾಗಿ ನಿದ್ದೆ ಮಾಡಬೇಕು ಎಂಬ ವಿಚಾರದಿಂದ ಕದ ಮುಚ್ಚಿ, ಬಟ್ಟೆ ಬದಲಿಸಿ, ಕಾಟಿನ ಮೇಲೆ ಅಡ್ಡವಾದಲ್ಲೇ ಆ ಹೆಂಗಸಿನ ಪೆಚ್ಚು ಬಿದ್ದ ಮೋರೆ ಕಣ್ಣ ಮುಂದೆ ಬಂದು ಹಾಗೆ ಚುಚ್ಚಿ ಮಾತನಾಡಿ ಅವಳ ಬಾಯನ್ನು ಮುಚ್ಚಿಸಿದ ತನ್ನ ಧೈರ್ಯದ ಬಗ್ಗೆ ತಾನೇ ಖುಶಿಪಟ್ಟ. ಅವಳ ಪೇಚನ್ನು ಕಂಡು ಬದಿಯ ಮನೆಗಳ ಇನ್ನಿಬ್ಬರು ಹೆಂಗಸರು ಗುಸು ಗುಸು ನಗುತ್ತ ಒಳಗೆ ಹೋದದ್ದೂ ನೆನಪಿಗೆ ಬಂದು ಇನ್ನಷ್ಟು ಖುಶಿಯಾಯಿತು. ಅರೆ! ಇದೆಂತಹ ಖುಶಿಪಡುವ ರೀತಿ ಎಂದು ತನ್ನ ಬಗ್ಗೆ ತಾನೇ ಅಚ್ಚರಿಪಟ್ಟ.

ನಿದ್ದೆಯಿಂದ ಎಚ್ಚರವಾದಾಗ ಒಂದು ವಿಚಿತ್ರ ಸದ್ದಿನಿಂದ ತನಗೆ ಎಚ್ಚರವಾದದ್ದು ಎನ್ನುವುದಷ್ಟೇ ನಾಗಪ್ಪನಿಗೆ ನೆನಪಿಗೆ ಬಂತು. ಕಣ್ಣುತಿಕ್ಕಿಕೊಳ್ಳುತ್ತ ಗಡಿಯಾರ ನೋಡಿಕೊಂಡಾಗ ಬರೇ ಮೂರು ಗಂಟೆ. ಮೇರಿಗೆ ಫೋನ್‌ಮಾಡಲು ಇನ್ನೂ ಐದು ಗಂಟೆಯ ಕಾಲ ಹಾದಿ ಕಾಯಬೇಕು. ಹಾಸಿಗೆಯಿಂದ ಎದ್ದು, ಮೋರೆ ತೊಳೆದು ಚಹಮಾಡಲು ಸ್ಟೋವ್ ಹೊತ್ತಿಸುವ ಮನಸ್ಸಾಗದೇ ಕೆಳಗೆ ಹೋಗಿ ಶ್ರೀಕೃಷ್ಣವಿಲಾಸದಲ್ಲೇ ಚಹ ಕುಡಿದು ಬಂದರಾಯಿತು ಎಂದುಕೊಂಡು ಉಡುಪು ತೊಡಹತ್ತಿದ. ಕನ್ನಡಿಯ ಇದಿರು ನಿಂತು ಕೂದಲು ಬಾಚಿಕೊಳ್ಳುತ್ತಿರುವಾಗ ಯಾವ ಸ್ಪಷ್ಟ ಕಾರಣವೂ ಇಲ್ಲದೇನೆ ಬಂದ ವಿಚಾರಕ್ಕೆ ದಿಗಿಲಾಯಿತು. ಬಹುಶಃ ನೇತ್ರಾವತಿಯ ಆತ್ಮಘಾತದ ನೆನಪು ಪ್ರಜ್ಞೆಯ ತಳದಲ್ಲಿ ಮೈ ಹೊರಳಿಸಿರಬೇಕು: ಬದುಕುವ ಶೈಲಿಯಂತೆ ಆತ್ಮಹತ್ಯೆಯ ರೀತಿ ಕೂಡ ವ್ಯಕ್ತಿಯ ಅಂತರಂಗವನ್ನು

ಪ್ರಕಟಿಸುತ್ತದೆಯೇನೊ! ನೇತ್ರಾವತಿ ಮೂರು ಮಜಲು ಎತ್ತರದಿಂದ ಕೆಳಕ್ಕೆ ಹಾರಿಕೊಂಡದ್ದು, ಅಪ್ಪ ಭಾವಿಯಲ್ಲಿ ಮುಳುಗಿದ್ದು... ಯಾತನೆ ಪಡುವ ಮನಸ್ಸಿನ ಸಾಯುವ ಸಂಕಲ್ಪಕ್ಕೆ ದೇಹ ಪ್ರತಿಸ್ಪಂದಿಯಾಗುವ ರೀತಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾದದ್ದೇ? ಇಲ್ಲವಾದರೆ ಆತ್ಮಘಾತದ ಕ್ರಮದಲ್ಲಿ ಇಷ್ಟೊಂದು ಪರಿಗಳು ಏಕೆ ಇರುತ್ತಿದ್ದವು? ತಾನೇ ಆತ್ಮಹತ್ಯೆಗೆ ಮನಸ್ಸುಮಾಡಿದ್ದೇ ಆದರೆ (ನಾಗಪ್ಪನ ಮೈಮೇಲಿನ ಕೂದಲು ನೆಟ್ಟಗೆ ನಿಂತವು) ಎರಡು ರೀತಿಗಳನ್ನು ಸರ್ವಥಾ ಆಯ್ಕೆ ಮಾಡುತ್ತಿರಲಿಲ್ಲ; ಒಂದು, ಕೊರಳಿಗೆ ನೇಣುಹಾಕಿಕೊಳ್ಳುವದು; ಇನ್ನೊಂದು, ಮೈಗೆ ಬೆಂಕಿ... ನಾಗಪ್ಪನಿಂದ ಈ ವಿಚಾರವನ್ನು ಪೂರ್ತಿಗೊಳಿಸುವದಾಗಲಿಲ್ಲ. ತಾನು ಸಾಯಲು ಬಯಸಿದ್ದೇ ಆದರೆ ನಿದ್ದೆ ಗುಳಿಗೆಗಳನ್ನು ತಿಂದೇ ತನ್ನ ಯಾತನೆಯನ್ನು ಕೊನೆಗೊಳಿಸಬಹುದು. ಈ ಅನಾರೋಗ್ಯಕರ ವಿಚಾರಗಳಿಂದ ತನ್ನನ್ನು ಬಿಡಿಸಿಕೊಳ್ಳಲೆಂಬಂತೆ ಅವಸರ ಅವಸರವಾಗಿ ಹೊರಗೆ ಹೋಗಬೇಕೆಂದು ಕದ ತೆರೆಯುತ್ತಿದ್ದಾಗ ಯುನಿಫಾರ್ಮು ಧರಿಸಿದ ಕಂಪನಿಯ ಪ್ಯೂನ್—ತನ್ನ ಬಗ್ಗೆ ತುಂಬ ಆದರ ಇಟ್ಟುಕೊಂಡ ಪ್ರಭಾಕರ—ಬಾಗಿಲಲ್ಲಿ ಬಂದು ಹಾಜರಾಗಿದ್ದ. ಎಂದಿನಂತೆ ಸೌಜನ್ಯ ತೋರಿಸಿ ನಮಸ್ಕರಿಸಿ ಕೈಯಲ್ಲಿ ತಂದ ಲಕ್ಕೋಟೆಯನ್ನು ನಾಗಪ್ಪನ ಕೈಯಲ್ಲಿ ಕೊಟ್ಟವನೇ ಅಲ್ಲಿಂದ ಕಾಲು ಕೀಳುವ ತ್ವರೆಯಲ್ಲಿದ್ದುದನ್ನು ಕಂಡು, ಲಕ್ಕೋಟೆಯಲ್ಲಿದ್ದದ್ದು ಹೈದ್ರಾಬಾದಿಗೆ ಹೋಗುವ ಟಿಕೆಟ್ಟೇ ಇರಬೇಕೆಂಬುದರ ಬಗ್ಗೆ ಯಾವ ಸಂಶಯವೂ ಇಲ್ಲದವನಂತೆ ಅದನ್ನು ಪುಸ್ತಕಗಳ ಕಪಾಟಿನಲ್ಲಿ ಒಂದೆಡೆ ಇಡುತ್ತ, "ತಡೆ ಪ್ರಭಾಕರ್, ನಾನು ಇದೀಗ ಚಹ ಕುಡಿಯಲಿಕ್ಕೆಂದು ಕೆಳಗೆ ಹೋಗುವವನಿದ್ದೆ. ಕೂಡಿಯೇ ಹೋಗೋಣ. ಜೊತೆಗೆ ಯಾರು ಇಲ್ಲದೇ ಬೇಸರ ಬಂದಿತ್ತು. ಆಯತ ಹೊತ್ತಿಗೇ ಬಂದೆ. ಬಾ. ಒಂದೊಂದು ಕಪ್ಪು ಚಹ ಕುಡಿಯೋಣ," ಎನ್ನುತ್ತ ಕದ ಮುಚ್ಚಿ ಬೀಗ ಹಾಕುವ ಹೊತ್ತಿಗೆ ಈ ಅನಪೇಕ್ಷಿತ ಆತ್ಮೀಯತೆಯ ಆಹ್ವಾನದಿಂದ ಪ್ರಭಾಕರ ಸಂಕೋಚದಿಂದ ಮುದುಡಿ ಮುದ್ದೆಯಾಗಿದ್ದ: ಕಾರ್ರಿಡಾರಿನಲ್ಲಿ ನಡೆಯುವಾಗ, ನೀನು ತಂದದ್ದು ಹೈದ್ರಾಬಾದಿಗೆ ಹೋಗುವ ಟಿಕೆಟ್ ಇರಬೇಕು ಅಲ್ಲವೆ? ಯಾವ ತಾರೀಖಿನದಂತೆ? ಎಂದು ಕೇಳಿದಾಗ, ಪ್ರಭಾಕರ ತನಗೆ ಗೊತ್ತಿದೆ ಎನ್ನುವದನ್ನು ತೋರಿಸಬೇಕೋ ಬಾರದೋ ಎಂದು ಅನುಮಾನಿಸುತ್ತಿರುವಾಗ ನಾಗಪ್ಪನೇ, ನಾಳೆಯದಿರಬೇಕು ಅಲ್ಲವೇ ಎಂದು ಕೇಳಿದ. ಆಗ ಪ್ರಭಾಕರ ಬಾಯಿಬಿಟ್ಟು ನಾಳೆ ಸಂಜೆಯದಿರಬೇಕು. ಮಿಸ್ ಡಿಸೋಝಾ ಹಾಗಂದಂತೆ ಕೇಳಿಸಿತ್ತು ಎಂದ. ಮಿಸ್ ಡಿಸೋಝಾ ಪರ್ಸೊನಲ್

ಮೆನೇಜರನ ಸೆಕ್ರೆಟರಿ. ಅವನ ಬಗ್ಗೆ ನಿಷ್ಕಾರಣವಾಗಿ ಅಸಡ್ಡೆ ತೋರುತ್ತ ಬಂದವಳು. ಇಬ್ಬರೂ ಕೆಲಹೊತ್ತು ಏನೂ ಮಾತನಾಡಲಿಲ್ಲ. ಪ್ರಭಾಕರ ಸಾಹೇಬರ ಹಿಂದೆ, ಒಂದು ಮಾರಿನ ಅಂತರ ಇಟ್ಟುಕೊಂಡು ತಲೆ ಬಗ್ಗಿಸಿ ನಡೆಯಹತ್ತಿದ. ಮಾಳಿಗೆಯ ಮೆಟ್ಟಿಲುಗಳನ್ನು ಇಳಿಯುವಾಗ ಮೇರಿಯ ಬಗ್ಗೆ ಕೇಳಬೇಕೆಂದುಕೊಂಡು ನಾಲಗೆಯ ತುದಿಯವರೆಗೆ ಬಂದ ಪ್ರಶ್ನೆಯನ್ನು ತಡೆಹಿಡಿದ. ಪ್ರಭಾಕರ ತಾನಾಗಿಯೇ ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ಸಾಹೇಬರ ಜತೆ ಚಹ ಕುಡಿಯುವ ಕಲ್ಪನೆಯಿಂದಲೇ ನಾಲಗೆ ಒಣಗಿತ್ತು. ಸಾಹೇಬರ ಬಗ್ಗೆ ಆಫೀಸು ತುಂಬ ಹರಡಿದ ಸುದ್ದಿಯಿಂದ; ಅದಕ್ಕಿಂತ ಹೆಚ್ಚಾಗಿ ನಿನ್ನೆಮೊನ್ನೆಯವರೆಗೆ ಅವರ ಬಗ್ಗೆ ತುಂಬ ಆದರವಿದೆ ಎಂದು ತೋರಿಸಿಕೊಂಡವರೇ ಈಗ ಒಮ್ಮಿಗೆಲೇ ಮೇಲೆ ಎರಗಿ ಬಂದ ಈ ಪೇಚು ಪ್ರಸಂಗದ ಬಗ್ಗೆ ಮಾತನಾಡುತ್ತ ಬಾಯಿ ಚಪ್ಪರಿಸುವುದನ್ನು ಕಂಡು ಪ್ರಭಾಕರ ರೋಸಿದ್ದ. ಶ್ರೀಕೃಷ್ಣ ವಿಲಾಸವನ್ನು ಹೊಕ್ಕು ತಾನು ಕೂತ ಟೇಬಲ್ಲಿಗೇ ಪ್ರಭಾಕರನನ್ನು ಕರೆದಾಗ ಅವನ ಸರಳ ಸ್ವಭಾವಕ್ಕೆ ಮನಸೋತ ಪ್ರಭಾಕರ— "ಸರ್, ಏನೂ ಹೆದರಬೇಡಿ. ದೊಡ್ಡ ಸಾಹೇಬರು ಊರಿನಲ್ಲಿದ್ದರೆ ಇದೆಲ್ಲ ಆಗುತ್ತಿರಲೇ ಇಲ್ಲ. ಹೈದ್ರಾಬಾದಿನ ಪಾರ್ಸೀಸಾಹೇಬರು ಹಾಗೂ ಅವರ ಚೇಲಾ ಖಂಬಾಟಾ ಕೂಡಿ ಏನೋ ಪಿತೂರಿ ಮಾಡಿದ್ದಾರೆ," ಎಂದ. ನಾಗಪ್ಪನಿಗೆ ಆಶ್ಚರ್ಯವಾಯಿತು. ಮ್ಯಾನೇಜಿಂಗ್ ಡೈರಕ್ಟರರು ಊರಲ್ಲಿಲ್ಲದ ಸುದ್ದಿಯನ್ನು ಮೊದಲ ಬಾರಿಗೇ ಕೇಳುತ್ತಿದ್ದ. ತಿನ್ನಲಿಕ್ಕೆ ಏನಾದರೂ ಬೇಕೋ ಎಂದು ಕೇಳಿದಾಗ ಪ್ರಭಾಕರ ಬೇಡ ಎಂದ. ಎರಡು ಕಪ್ಪು ಚಹಕ್ಕೆ ಆರ್ಡರ್‌ಕೊಟ್ಟು—ದೊಡ್ಡ ಸಾಹೇಬರು ಎಲ್ಲಿಗೆ ಹೋಗಿದ್ದಾರೆ ಎಂದು ಕೇಳಿದಾಗ ಪ್ರಭಾಕರ ಆಶ್ಚರ್ಯ ವ್ಯಕ್ತಪಡಿಸಿದ. "ಅವರು ಅಮೇರಿಕೆಗೆ ಹೋದದ್ದು ತಮಗೆ ಗೊತ್ತೇ ಇಲ್ಲವೆ? ಅಕಸ್ಮಾತ್ತಾಗಿ ಹೋಗಬೇಕಾಗಿ ಬಂತಂತೆ. ಈಗ ಮೂರು ದಿನಗಳಾದುವು. ನಿಮ್ಮ ವಿರುದ್ಧ ನಡೆದ ಪಿತೂರಿಯ ಸುಳಿವು ಅವರಿಗೂ ಹತ್ತಿದೆ. ಆದರೆ ತುರ್ತ ಯಾವುದರಲ್ಲೂ ಸಿಲುಕಿಕೊಳ್ಳುವ ಮನಸ್ಸಿರಲಿಲ್ಲ ಅವರಿಗೆ. ಆದರೆ ನೀವು ಹೆದರುವ ಕಾರಣ ಏನೂ ಇಲ್ಲವೆಂದು ಸೆಕ್ರೆಟರಿಗೆ ಹೇಳಿಹೋಗಿದ್ದಾರಂತೆ." ಇದೆಲ್ಲ ಇವನಿಗೆ ಹೇಗೆ ಗೊತ್ತು ಎಂಬಂತೆ ಹುಬ್ಬೇರಿಸಿದಾಗ, ಪ್ರಭಾಕರನೇ ಹೇಳಿದ—"ಆಗ ಕೊಟ್ಟ ಕವರಿನಲ್ಲಿ ನಿಮಗೊಂದು ಚೀಟಿಯಿದೆ, ಅದರ ಮೇಲೆ ಅವಳು ಸಹಿ ಮಾಡಿಲ್ಲ ಯಾರಿಗೂ ಸಂಶಯ ಬರದಿರಲೀ ಎಂಬ ಉದ್ದೇಶದಿಂದ. ಆದರೆ

ನನಗಷ್ಟೇ ಗೊತ್ತು. ನಾನೇ ಈ ಟಿಕೆಟ್ಟನ್ನು ಇಲ್ಲಿಗೆ ತರುವಂತೆ ಮಾಡಿದ ಖುಬಿ ಅವಳದೇ" ಎನ್ನುವಾಗ ಮೇರಿ ನಾಗಪ್ಪನ ಬಗ್ಗೆ ವ್ಯಕ್ತಪಡಿಸಿದ ಭಾವನೆಗಳಿಂದ ಪ್ರಭಾಕರ ತಾನೇ ಲಜ್ಜಿತನಾದ. ನಾಗಪ್ಪನಿಗೆ ಕೂಡಲೇ ಮೇಲೆ ಹೋಗಿ ಮೇರಿ ಬರೆದ ಚೀಟಿ ಓದುವ ಕುತೂಹಲವಾಯಿತು. ಆಫೀಸಿನಲ್ಲಿ ಸದ್ಯ ಏನೇನು ನಡೆದಿದೆ ಎನ್ನುವುದನ್ನು ಅರಿಯುವ ಉದ್ದೇಶದಿಂದಲೇ ಪ್ರಭಾಕರನನ್ನು ಚಹಕ್ಕೆ ಕರೆದದ್ದು ಎಂಬುದನ್ನು ಕೂಡ ಮರೆತು ಚಹ ಕುಡಿದು ಮುಗಿಸುತ್ತಲೇ ಚಹದ ಹಣ ಕೊಟ್ಟು, ಟಿಕೆಟ್ಟು ತಂದು ಮುಟ್ಟಿಸಿದ್ದರ ಬಗ್ಗೆ ಆಭಾರ ಮನ್ನಿಸಿ, ಪ್ರಭಾಕರನನ್ನು ಬೀಳ್ಕೊಟ್ಟು ಲಗುಬಗೆಯಿಂದ ಕೋಣೆ ಸೇರಿ ಪ್ರಭಾಕರ ತಂದ ಲಕ್ಕೋಟೆಯ ಬಾಯಿ ತೆರೆದ. ಟಿಕೆಟ್ಟಿನೊಂದಿಗೆ ಇಟ್ಟಿದ್ದಾಳೆಂದ ಚೀಟಿಯನ್ನು ಹೊರತೆಗೆಯುವ ತವಕದಿಂದ ಟಿಕೆಟ್ಟನ್ನು ಹೊರತೆಗೆದ. ಅದರ ಜೊತೆ ಇಟ್ಟ ಸಣ್ಣ ಲಕ್ಕೋಟೆಯನ್ನು ಅತ್ಯಂತ ಪ್ರೀತಿಯಿಂದ ಕೈಗೆತ್ತಿಕೊಂಡು ಕಾಳಜಿಪೂರ್ವಕ ಅದನ್ನೂ ತೆರೆದ. ಕೈಗೆ ಬಂದ ಸಣ್ಣ ಚೀಟಿ ಬೆಳಗ್ಗೆ, ಮಧ್ಯಾಹ್ನ ಸಿಕ್ಕ ಸಹಿ ಇಲ್ಲದ ಚೀಟಿಗಳದೇ ಇನ್ನೊಂದು ಪ್ರತಿಯಾಗಿತ್ತು! ಆದರೆ ಈ ಚೀಟಿಯ ಕೊನೆಯಲ್ಲಿ Love- ಎಂಬುದನ್ನಷ್ಟೇ ಇಂಕಿನಲ್ಲಿ ಬರೆದಿತ್ತು. ನಾಗಪ್ಪನಿಗೆ, ಈ ಮೊದಲಿನ ಎದೆಯನ್ನು ಡವಗುಟ್ಟಿಸುವ— ಕುತೂಹಲಕ್ಕೆ ಕಾರಣವಾದುದಕ್ಕೆ ವಿಪರ್ಯಸ್ತವಾದ ವಸ್ತುಸ್ಥಿತಿಯನ್ನು ನೋಡಿ ದೊಡ್ಡಕ್ಕೆ ನಕ್ಕುಬಿಡಬೇಕೆನ್ನಿಸಿತು. ವಿರಾಮ ಕುರ್ಚಿಯಲ್ಲಿ ಕೂತು ಮುಂದಿನ ಸ್ಟೂಲಿನ ಮೇಲೆ ನಿಡಿದಾಗಿ ಕಾಲು ಚಾಚಿ ಮೂರೇ ಸಾಲುಗಳಿದ್ದ ಆ ಚೀಟಿಯನ್ನು ಇನ್ನೊಮ್ಮೆ ಓದಿ ಮೇರಿಯ ಬಗ್ಗೆ ಹಿಂದೆ ಎಂದೂ ಅನ್ನಿಸಿರದಷ್ಟು ಪ್ರೀತಿಯಿಂದ ಮಶಿಯಲ್ಲಿ ಬರೆದ ಅಕ್ಷರಗಳಿಗೆ ತುಟಿಹಚ್ಚಿದ. ತನಗೆ ಗೊತ್ತಾಗುವ ಮೊದಲೇ ಕಣ್ಣುಗಳು ಒದ್ದೆಯಾಗಿದ್ದುವು. ತನ್ನವರೇ ಎನ್ನುವ ಆತ್ಮೀಯ ಜನವೇ ತನಗಿಲ್ಲ ಎಂಬಂಥ ನಿಲುಗಡೆಗೆ ಬಂದು ತಲುಪಿದ ಹೊತ್ತಿಗೇ ಮೇರಿ ತನ್ನ ಬಗ್ಗೆ ತೋರಿದ ಭಾವನೆಯಿಂದ ಮತ್ತೆ, ಬದುಕು ಬದುಕಲರ್ಹವೆನ್ನಿಸಿತು. ನೇತ್ರಾವತಿಯ ದುರ್ಮರಣದ ನೆನಕೆಯ ನೆಪದಲ್ಲಿ ಮನಸ್ಸು ಇನ್ನಾವುದಕ್ಕೋ ಸಿದ್ಧವಾಗುತ್ತಿರುವ ಗಳಿಗೆಯಲ್ಲಿ ಬಂದ ಈ ಚೀಟಿ ತನ್ನ ಹೇಡಿತನದ ಬಗ್ಗೆ ಜಿಗುಪ್ಸೆ ಪಡುವಂತೆ ಮಾಡಿತು. ಇಲ್ಲ, ಬದುಕಿಗೆ ವಿಮುಖನಾಗಲಾರೆ. ಹೋರಾಟ ಬೇಡುವ ಸನ್ನಿವೇಶದಿಂದ ಪಲಾಯನ ಹೋಳಲಾರೆ... ಟಿಕೆಟ್ಟಿನ ಮೇಲಿನ ತಾರೀಖನ್ನೇ ನೋಡಿಲ್ಲ ಎನ್ನುವದು ನೆನಪಿಗೆ ಬಂದು ಎದ್ದು ಟಿಕೆಟ್ಟನ್ನು ತೆರೆದು ನೋಡಿದ. ಪ್ರಭಾಕರ ಹೇಳಿದಂತೆ ನಾಳೆ ಸಂಜೆಯದಾಗಿತ್ತು. ಇಂದು ರಾತ್ರಿ, ನಾಳೆ ಇಡೀ ದಿನ

ಕೂತು ಬೆಂಕಿಯ ಅಪಘಾತವನ್ನು ಕುರಿತು ಬರೆಯಬೇಕು. ಇದೂ ಕೂಡ ಫಿರೋಜನೊಡನೆಯ ಮುಖಾಮುಖಿಯಲ್ಲಿ ಸಹಾಯ ಮಾಡೀತು, ಎಂದುಕೊಂಡ—ನೂರಾ ಒಂದನೇ ಸರತಿ.

## ಅಧ್ಯಾಯ ಎಂಟು

ಕೊನೆಗೊಮ್ಮೆ, ಬೆಳಗ್ಗಿನಿಂದಲೂ ಕಾಯುತ್ತಿದ್ದ ಎಂಟು ಗಂಟೆಯ ಮುಹೂರ್ತ ಹತ್ತಿರವಾಗುತ್ತಿದ್ದ ಹಾಗೆ ಮನಸ್ಸು ತಿರುಗಿ ಕಳವಳಕ್ಕೆ ಒಳಗಾಯಿತು. ಕೆಳಗಿನ ರೆಸ್ಟೋರಂಟಿನಿಂದಲೇ ಫೋನ್ ಮಾಡಿದರಾಯಿತು ಎಂದುಕೊಂಡು ಹೊರಗೆ ಹೋಗುವ ಸಿದ್ಧತೆಗೆ ತೊಡಗಿದಾಗ ಮನಸ್ಸು ಸಲ್ಲದ ಸಂಶಯಕ್ಕೆ ಎಡೆಮಾಡಹತ್ತಿತು: ಮೇರಿಯನ್ನಾದರೂ ನಂಬಬಹುದಲ್ಲವೆ? ದೇವರೇ, ಇದೇಕೆ ಹೀಗೆ ಮನಷ್ಯನಲ್ಲಿಯ ನಂಬಿಕೆಯನ್ನೇ ಕಳೆದುಕೊಳ್ಳುತ್ತಿದ್ದೇನೆ. ಮೇರಿ ನನ್ನ ಬಗ್ಗೆ ಪ್ರಕಟಿಸಿದ ಆತಂಕವನ್ನು ಕೂಡ ಅಪನಂಬಿಕೆಯಿಂದ ನೋಡುತ್ತಿದ್ದೇನಲ್ಲ...

ರೆಸ್ಟೋರಂಟಿಗೆ ಬಂದಾಗ ಅವನಿಗಿಂತ ಮೊದಲೇ ಬಂದ ಹುಡುಗಿಯೊಬ್ಬಳು ಮಾತನಾಡುತ್ತಿದ್ದಳು. ಸಿಂಧಿಯಿರಬೇಕು. ತುಂಬ ಲಾವಣ್ಯವತಿಯಾದ ಹುಡುಗಿ. ಅವಳು ಉಟ್ಟ ಅಚ್ಚ ನೀಲಿಬಣ್ಣದ ಜಾರ್ಜೆಟ್‌ಸೀರೆ ಲಕ್ಷ್ಯಕ್ಕೆ ಬರದಿರಲಿಲ್ಲ. ಅದರೊಳಗಿಂದ ಕಾಣುವ ಹರೆಯ ಹೊರಸೊಸುವ ಬೆಳ್ಳಗಿನ ಮೈಯ ಮಾಟ. ಮೇರಿಯ ಮೈಕೆಟ್ಟೂ ಕೂಡ ತುಂಬ ಮಾದಕವಾದದ್ದು. ಗಂಡುಮೋರೆಗೆ ಶೋಭಿಸುವಂತಹ ಹರವಾದ ಮೂಗೊಂದೇ ಮೋರೆಯ ಅಂದವನ್ನು ತುಸು ಕೆಡಿಸಿತ್ತು. ಮೇರಿಯ ದೈಹಿಕ ಸೌಂದರ್ಯದ ಬಗ್ಗೆ ತಾನು ಹೀಗೆ ವಿಚಾರಮಾಡುತ್ತಿದ್ದದ್ದು ಇದೇ ಮೊದಲ ಸಾರೆಯೇನೋ ಎಂಬ ಅರಿವು ಮೂಡುತ್ತಿರುವ ಹೊತ್ತಿಗೆ ಹುಡುಗಿ ತನ್ನ ಮಾತನ್ನು ಮುಗಿಸಿದ್ದಳು. ಟೆಲಿಫೋನ್ ಬಿಟ್ಟುಕೊಡುವಾಗ—Sorry to have kept you waiting so long, ಎಂದು ಚೆಂದವಾಗಿ ನಕ್ಕು ಅಲ್ಲಿಂದ ಹೊರಬಿದ್ದಳು. ಟೆಲಿಫೋನ್ ಯಂತ್ರದ ತೂತಿನಲ್ಲಿ ಹಾಕಬೇಕಾದ ನಾಣ್ಯಗಳನ್ನು ಕೈಯಲ್ಲಿ ಸಿದ್ಧವಾಗಿ ಇರಿಸಿಕೊಂಡು, ಮೇರಿ ಕೊಟ್ಟ ನಂಬರನ್ನು ತಿರುಗಿಸುವಾಗ ಎದೆ ಡವಗುಟ್ಟುತ್ತಿತ್ತು. ಆ ಬದಿಯಿಂದ 'ಹೆಲ್ಲೋ' ಎಂದ ಹೆಣ್ಣುದನಿ ಕೇಳಿಸುತ್ತಲೇ ನಾಣ್ಯಗಳನ್ನು ಹಾಕಿ ನಡುಗುವ ಗೊಗ್ಗರುದನಿಯಲ್ಲಿ, 'ಹೆಲ್ಲೋಮೇರಿ,' ಎಂದ. ಆ ಬದಿಯಿಂದ ಹೆಲ್ಲೋ ಎಂದ ದನಿ ಮೇರಿಯದೇ ಎಂಬುದನ್ನು ಗ್ರಹೀತ ಹಿಡಿದೇ. ನಾಗಪ್ಪನ ಆಗಿನ ದನಿಯನ್ನು ಮೇರಿ ಕೇಳಿದ್ದೇ ಆಗಿದ್ದರೆ ಅವಳಿಗೆ ಈ ದನಿಯ ಗುರುತು ಸಿಗುತ್ತಿರಲಿಲ್ಲವೇನೋ. ಪುಣ್ಯಕ್ಕೆ

ಫೋನ್ ಕರೆಗೆ ಉತ್ತರ ಕೊಟ್ಟವಳು ಮೇರಿಯ ಗೆಳತಿಯಾಗಿದ್ದಳು. ಮೇರಿ ಫೋನಿನ ಮೇಲೆ ಬರುತ್ತಲೇ, ಫೋನ್ ಮೇಲೆ ಕೇಳಿಸಿದ್ದು ಗಂಡುದನಿಯೆಂದು ತಿಳಿದೇ, 'Is that Nagnath?' ಎಂದು ಕೇಳಿದಳು. ನಾಗನಾಥ್ ಹೌದು ಎನ್ನುವಾಗ ದನಿಯಲ್ಲಿನ್ನೂ ಕಂಪನವಿತ್ತು. "ನಾಗನಾಥ್, M. D.ಯವರು ಅಮೇರಿಕೆಗೆ ಹೋಗುವಾಗ ತಾನು ಹಿಂತಿರುಗಿ ಬರುವ ತನಕ ಬಂದೂಕವಾಲಾರ ಮಾತಿಗೆ ಕೆರಳದೇ ನೀವು ಸ್ವಲ್ಪ ಸಮಾಧಾನದಿಂದ ನಡಕೊಳ್ಳಬೇಕು ಎಂದು ನಿಮಗೆ ತಿಳಿಸುವಂತೆ ಹೇಳಿ ಹೋಗಿದ್ದರು. ಎಲ್ಲ ಸರಿ ಹೋಗುತ್ತದೆ. ನಿಮ್ಮ ಮನಸ್ಸಿಗೆ ಆಗುತ್ತಿದ್ದ ನೋವಿನ ಕಲ್ಪನೆ ನನಗೆ ಸಂಪೂರ್ಣವಾಗಿ ಇದೆ. ಆದರೆ ಎದೆಗುಂದಬೇಡಿ." ನಾಗಪ್ಪನಿಗೆ ಈ ಆತ್ಮೀಯ ಮಾತುಗಳಿಂದ ಎಷ್ಟೊಂದು ಹೃದಯ ತುಂಬಿಬಂದಿತೆಂದರೆ ತನ್ನ ಬಾಯಿಂದ ಹಿಂದೆಂದೂ ಬಂದಿರದ ಶಬ್ದಗಳಲ್ಲಿ—"Thank you darling," ಎಂದು ಮೂಡಿದ ಉದ್ಗಾರಕ್ಕೆ ತಾನೇ ಮೊದಲು ಥಕ್ಕಾದ. ಮೇರಿ ಕೂಡ ಕೆಲ ಹೊತ್ತು ತನ್ನ ಕಿವಿಗಳನ್ನು ನಂಬದಾದಳು. ನಾಗಪ್ಪನ ಸದ್ಯದ ಮನಃಸ್ಥಿತಿಯ ಅರಿವು ಇದ್ದ ಅವಳೂ ಕೂಡ ಅದೇ ಆತ್ಮೀಯತೆಯಿಂದ, ಆದರೂ ಭಾವನಾವಶಳಾಗದೆ, "Listen my dear friend, M.D ಇಲ್ಲಿಂದ ಹೊರಟುಹೋದ ಮೇಲೆ ಮಾತ್ರ ಪರಿಸ್ಥಿತಿ ಒಮ್ಮೆಲೇ ಬದಲಿಸಿಬಿಟ್ಟಿದೆ. ನನ್ನನ್ನು ಕೇಳಿದರೆ, M.D ಅವರು ಅಮೇರಿಕಾಕ್ಕೆ ಹೋದದ್ದು ನಮಗೆ ತೋರಿದಷ್ಟು ಆಕಸ್ಮಿಕವಾದದ್ದಲ್ಲ ಅನ್ನಿಸುತ್ತದೆ. ಅವರ ಬಗ್ಗೆ ನಡೆದ ಪೂರ್ವತಯಾರಿ DMD ಯವರಿಗೆ ಗೊತ್ತಿರಬೇಕು. ಇಲ್ಲಿ ಹಬ್ಬಿದ ಸುದ್ದಿಯೇನೆಂದರೆ M.D ಯವರಿಗೆ ದೊಡ್ಡ ಬಡತಿಯ ಮೇಲೆ ನ್ಯೂಯಾರ್ಕ ಇಲ್ಲ ಹೊಂಕೊಂಗಿಗೆ ಬದಲಿಯಾಗಲಿದೆಯಂತೆ. ಅದಕ್ಕೆಂದೇ ಅವರನ್ನು ಹೀಗೆ ಗುಟ್ಟಾಗಿ ನ್ಯೂಯಾರ್ಕಿಗೆ ಕರೆದದ್ದು. ಬಂದೂಕವಾಲಾ ಅವರೇ ಮುಂಬಯಿಗೆ M.D ಆಗಿ ಬರಬಹುದಾಗಿತ್ತು. ಆದರೆ ಎಂತಹದೋ ದೊಡ್ಡ ಲಫಡಾದಲ್ಲಿ ಅವರ ಹೆಸರು ಸಿಕ್ಕಿಕೊಂಡಿದೆಯಂತೆ. ಅದಕ್ಕೆ ಬೇರೆ ಯಾರನ್ನಾದರೂ Scape goat ಮಾಡುವ ಹಂಚಿಕೆಯೆಂದು ತೋರುತ್ತದೆ. ಹಾಗಂದೇ ನಿಮ್ಮನ್ನು ಕುರಿತ ಈ ತನಿಖೆಯ ನಾಟಕ ಅಸಿಸ್ಟಂಟ್ ಎಡ್ಮಿನಿಸ್ಟ್ರೇಶನ್ ಮ್ಯಾನೇಜರರೇ ಇದನ್ನು ನಿಮಗೆ ತಿಳಿಸೆಂದು ನನಗೆ ಸೂಚಿಸಿದ್ದು. ಒಳ್ಳೆಯ ಹುಡುಗ. ಗೊತ್ತಿದೆಯಲ್ಲ—ಖಂಬಾಟಾಗೂ ಅವನಿಗೂ ಹಾವು ಮುಂಗುಸಿ. ಯಾರು ಯಾರೆಲ್ಲ ಈ ಪಿತೂರಿಯಲ್ಲಿ ಸಾಮೀಲಾಗಿದ್ದಾರೆ. ಯಾರಿಗೂ

ಗೊತ್ತಿಲ್ಲ ಲಕ್ಷಗಟ್ಟಲೆ ರೂಪಾಯಿಗಳ ವ್ಯವಹಾರದಲ್ಲಿ ಏನೋ ಗೋಲ್‌ಮಾಲ್ ಆಗಿದೆಯಂತೆ. ಬಂದೂಕವಾಲಾ ಹಿಡಿದು ಅವರ ಅನೇಕ ಚೇಲಾರ ಕೈ ಇದರಲ್ಲಿದ್ದರೂ ಅದನ್ನು ಹೊರಗೆಳೆಯುವ ಧೈರ್ಯ ಒಬ್ಬರಿಗೂ ಇಲ್ಲ. ಎಲ್ಲ ತಮ್ಮ ಚರ್ಮವನ್ನು ರಕ್ಷಿಸಿಕೊಳ್ಳುವವರೇ. ನಿಮ್ಮ ಬಗ್ಗೆ ಅನೇಕರಿಗೆ ಒಳ್ಳೇ ಮತವಿದ್ದರೂ ಒಬ್ಬರೂ ಧೈರ್ಯವಾಗಿ ನಿಮ್ಮ ರಕ್ಷಣೆಗೆ ಬರಲಾರರು. ಸ್ವತಃ ಅಸಿಸ್ಟೆಂಟ್ ಎಡ್ಮಿನಿಸ್ಟ್ರೇಶನ್ ಮ್ಯಾನೇಜರ್ ಕೂಡ. ಇಷ್ಟೇ ಅಲ್ಲ, ಸನ್ನಿವೇಶದ ದುರ್ಲಾಭ ಪಡೆಯಲು ಹಾತೊರೆದವರೇ ಹೆಚ್ಚು ಮಂದಿ. ಖುದ್ದು ನಿಮ್ಮ ಡಿಪಾರ್ಟಿಮೆಂಟಿನವರ ನಡತೆಯೂ ಹೇಸಿಕೆ ತರಿಸುವಂತಹದು. ನಾಗಪ್ಪನ ಬಾಯಿಂದ ನೋವು ತುಂಬಿದ ವಿಚಿತ್ರ ಸದ್ದು ಹೊರಬಿದ್ದದ್ದು ಕೇಳಿಸಿ 'Are you allright sweet heart? Take it easy. ನಿಮ್ಮನ್ನು ಸ್ವತಃ ಕಂಡು ಮಾತನಾಡಿಸುವದಿತ್ತು. ನಿಜ ಒಪ್ಪಿಕೊಳ್ಳುವುದೆಂದರೆ ನನಗೂ ಆ ಧೈರ್ಯವಿಲ್ಲ. ಬಂದೂಕವಾಲಾ ಎಂತಹ ಮನುಷ್ಯ ಎನ್ನುವದು ನಮಗೆಲ್ಲ ಗೊತ್ತೇ ಇದೆ. ಸ್ವಲ್ಪ ಸಂಶಯ ಬಂದರೂ ಹಗೆ ಕಾಯುವ ಪ್ರಾಣಿ. ಎಂತಹ ಲಫಡಾ ಪ್ರಕರಣವೋ ಯಾರಿಗೆ ಗೊತ್ತು. M.D ಇಲ್ಲದ ಈ ಸಮಯವನ್ನು ಸಾಧಿಸಿ ಕಿತಾಪತಿ ನಡೆಸಿದ್ದಾನೆ. ನೀವು ಆದಷ್ಟು ಜಾಗರೂಕರಾಗಿರುವದು ಒಳ್ಳೆಯದು. ಈ ತನಿಖೆ ಅಷ್ಟು ಸರಳವಾದದ್ದೆಂದು..." ಮೇರಿ ಒಮ್ಮಿಗೆಲೇ ತಡೆದಳು. ಬಾಗಿಲ ಗಂಟೆ ಬಾರಿಸಿದ್ದು ಫೋನ್ ಮೇಲೆ ನಾಗಪ್ಪನಿಗೂ ಕೇಳಿಸಿತು. Hold on ಎಂದು ಅತಿ ಮೆಲ್ಲಕ್ಕೆ ಅಂದದ್ದೂ ಕೇಳಿಸಿತು. ಮೇರಿಯ ಗೆಳತಿ ಎದ್ದು ಹೋಗಿ ಕದ ತೆರೆದಿರಬೇಕು. ಬಂದದ್ದು ಯಾರೆಂದು ತಿಳಿಯದೇ ಮೇರಿಗೆ ಮುಂದೆ ಮಾತನಾಡುವ ಮನಸ್ಸಿರಲಿಲ್ಲವೆಂದು ತೋರುತ್ತದೆ...ಟೆಲಿಫೋನ್ ರಿಸೀವರ್ ಕೈಯಲ್ಲಿ ಹಿಡಿದೇ ಬಂದ ವ್ಯಕ್ತಿಗೆ—Oh! it is you—good evening Mr. Khambatta. What a pleasant surprise—ಎಂದು ನಾಗಪ್ಪನಿಗೆ ಸರಿಯಾಗಿ ಕೇಳಿಸುವಂತೆ ಅಂದು, ಇನ್ನೊಂದು ಕೊನೆಯಲ್ಲಿದ್ದವರು ಯಾರು ಎಂಬುದು ಖಂಬಾಟಾಗೆ ಗೊತ್ತಾಗದಿರಲಿ ಎನ್ನುವಂತೆ—"Bye Annette. Thanks for Calling. All the best" ಎಂದವಳೇ ಟಲಿಫೋನ್ ಕೆಳಗಿರಿಸಿಬಿಟ್ಟಳು. ಟೆಲಿಫೋನ್ ಬಿಟ್ಟು ದೂರ ಸರಿಯುವಾಗ ನಾಗಪ್ಪ ಧಾರಾಳವಾಗಿ ಬೆವೆತಿದ್ದನಾದರೂ ಒಳಗಿನ ಭಯವನ್ನು ಅರಿವಿಗೆ ತಂದುಕೊಳ್ಳುವ ಧೈರ್ಯ ಕೂಡಲೇ ಆಗಲಿಲ್ಲ. ಹೊಟೆಲ್ಲಿನಿಂದ ಹೊರಗೆ

ಬಂದಾಗ ಕಾಲುಗಳು ಸೋತು ನಡೆಯುವದೇ ಅಸಾಧ್ಯವಾದಾಗ ಎಲ್ಲಾದರೂ ಕೂಡ್ರಬೇಕು ಅನ್ನಿಸಿ ರಸ್ತೆಯ ಇನ್ನೊಂದು ಮಗ್ಗಲಲ್ಲಿಯ ಇರಾಣೀ ಚಹದಂಗಡಿಯನ್ನು ಹೊಕ್ಕು ಸ್ಪೆಶಲ್ ಚಹ ತರಿಸಿದ. ತನ್ನನ್ನು ಎನ್ನೆಟ್ ಎಂದು ಕರೆದ ಮೇರಿಯ ಜಾಣತನದ ನೆನಪಾಗಿ ನಗಬೇಕೆನಿಸಿದರೂ ಖಂಬಾಟಾ ಈ ಹೊತ್ತಿಗೆ ಮೇರಿಯ ಮನೆಯಲ್ಲಿ ಹೇಗೆ ಎಂಬ ಆತಂಕ ನಗಲು ಬಿಡಲಿಲ್ಲ. ಮೇರಿ ಎಲ್ಲಿರುತ್ತಾಳೆಂದು ಅರಿಯುವ ಪ್ರಯತ್ನ ಕೂಡ ತಾನು ಈವರೆಗೂ ಮಾಡಿಲ್ಲ. ಮೇರಿಯ ಬಗ್ಗೆ ವಿಚಾರ ಮಾಡುತ್ತ ತನ್ನನ್ನು ನಡುಗಿಸುತ್ತಿದ್ದದನ್ನು ಮರೆಯುವ ಪ್ರಯತ್ನದಲ್ಲಿ ನಾಗಪ್ಪ ಸಫಲನಾಗಲಿಲ್ಲ: ತನ್ನ ಹೆಸರು ಸಿಕ್ಕಿಕೊಂಡ ಲಫಡಾದಲ್ಲಿ ನನ್ನನ್ನು ಸಿಕ್ಕಿಸುವ ಸಂಚು. ದೇವರೆ, ಎಲ್ಲರನ್ನು ಬಿಟ್ಟು ನನ್ನನ್ನು ಯಾಕೆ?—ಲಫಡಾ ಎಂದರೇನೇ ಹೆದರುವ ನನ್ನನ್ನು? ಇವನ M.D ಆಗುವ ಮಹತ್ವಾಕಾಂಕ್ಷೆಗೆ ಅಡ್ಡ ಬರುವಂತಹ ಇದಿರಾಳಿ ನಾನಲ್ಲ. ಈ ನನ್ನ ನೌಕರಿಯಿಂದ ನಾನು ಬಹಳಷ್ಟನ್ನು ಬಯಸಿದವನಲ್ಲ. ಬಯಸಿದ್ದಾದರೂ ಏನೆನ್ನುವದು ನನಗೇ ಗೊತ್ತಿಲ್ಲವಾದರೂ ಈಗಿನದಕ್ಕಿಂತ ಮೇಲಿನ ಸ್ಥಾನಕ್ಕೆ ಏರಬೇಕೆನ್ನುವ ಹಂಬಲವಂತೂ ನನಗಿಲ್ಲ... ಇದು ತೀರ ಸಾದಾ ತನಿಖೆಯೆಂದು ತಿಳಿಯಬೇಡ. ಆದಷ್ಟು ಜಾಗರೂಕನಾಗಿರು ಎಂದು ಮೇರಿ ಇತ್ತ ಇಷಾರೆ ಇರಾಣೀ ಅಂಗಡಿಯ ಖಡಕ್ ಚಹಾದ ಬಿಸಿಯನ್ನು ಲೆಕ್ಕಿಸದೇ ಕರುಳಲ್ಲೇ ಚಳಿ ಹುಟ್ಟಿಸಿತು: ಇಂತಹದನ್ನೆಲ್ಲ ಗ್ರಹಿಸುವ ತಾಖತ್ತು ತನ್ನ ತೀರ ಸರಳವಾದ ಮನಸ್ಸಿಗೆ ಇಲ್ಲವೇ ಇಲ್ಲ.

ಊಟಮಾಡುವ ಮನಸ್ಸು ಆಗದೇ ಇರಾಣೀ ಅಂಗಡಿಯಿಂದ ಹೊರಬಿದ್ದವನೇ ನಾಗಪ್ಪ ಖೇತವಾಡಿಯ ಗಲ್ಲಿಯೊಂದನ್ನು ಹಿಡಿದು ದಿಕ್ಕುದಿವಾಣ ಅರಿಯದೇ ಅಲೆಯಹತ್ತಿದ. ಆಗಲೇ ರಾತ್ರಿಯ ೮-೩೦ ಮೀರಿದ್ದರಿಂದ ಇಬ್ಬದಿಯ ಅಂಗಡಿಗಳೆಲ್ಲ ಮುಚ್ಚಿಕೊಳ್ಳತೊಡಗಿದ್ದವು. ಇಡೀ ಖೇತವಾಡಿಗೇ ಮೆತ್ತಿಕೊಂಡಂಥ, ವರ್ಣಿಸಲಸಾಧ್ಯವಾದ ಗಬ್ಬುವಾಸನೆ. ಮ್ಯುನಿಸಿಪಾಲಿಟಿಯ ಕುರುಡು ದೀಪಗಳ ಬೆಳಕಿನಲ್ಲಿ ಕಣ್ಣಿಗೆ ಬೀಳದಿದ್ದರೂ ಕಾಲಡಿಗೆ ಇದು ಎಂದು ಎಚ್ಚರಿಸುವ ಹೊಲಸು ರಾಡಿ. ಹೆಂಗಸರ ಮಕ್ಕಳ ಗಜಬಜಾಟ ಕೇಳಿಸುತ್ತಿದ್ದ ಇಬ್ಬದಿಯ ಚಾಳುಗಳು; ತನ್ನ ಮನಸ್ಸಿನ ಯಾತನೆಯನ್ನು ಮರೆಯಲೆಂದೇ ಇವೆಲ್ಲವುಗಳ ಕಡೆ ಲಕ್ಷ್ಯ ಹರಿಯಿಸಲು ಎಷ್ಟೊಂದು ಪ್ರಯತ್ನಿಸಿದರೂ ಫಿರೋಜನ ಪಿತೂರಿಯಲ್ಲಿ ಅವೂ ಸಾಮೀಲಾಗಿವೆ ಎಂಬ ಭಾವನೆಯಿಂದ ಅವುಗಳ ಬಗ್ಗೆ ಬೇಸರಪಟ್ಟ. ಗಲ್ಲಿಯ ಕೊನೆಗೆ

ಬರುತ್ತಿದ್ದಂತೆ ಹೊಳೆಯಿತು: ತುಸು ಮುಂದಕ್ಕೆ ಹೋಗಿ ಬಲಕ್ಕೆ ಹೊರಳಿದರೆ ತಾನು ಗ್ರೆಂಟರೋಡ್ ಕೊರ್ನರಿಗೆ ಬರುತ್ತೇನೆ ಎನ್ನುವದು. ಅಲ್ಲೇ ಬಾನಾವಳೀ ಮೆಡಿಕಲ್ ಸ್ಟೋರ್ಸ. ಅದರ ಮಾಲೀಕ ತನ್ನ ಪರಿಚಯದವ. ಡಾಕ್ಟರರ ಪ್ರಿಸ್ಕ್ರಿಪ್ಶನ್ ಇಲ್ಲದೆ ಕೂಡ ಔಷಧ ಕೊಡಬಹುದೇನೋ. ನೇರವಾಗಿ ಅಂಗಡಿಗೆ ಬಂದವನೇ ಕೌಂಟರಿನ ಮೇಲಿನ ಕಾಗದದ ತುಂಡಿನ ಮೇಲೆ ತನಗೆ ಬೇಕಾದ ಔಷಧದ ಹೆಸರನ್ನು ಬರೆದು ಬಾನಾವಳಿಯ ಕೈಯಲ್ಲಿಡುತ್ತ—"It is very late to go to the doctor Please oblige," ಎಂದ, ಬಹಳ ದಿನಗಳಾದವು ನಿಮ್ಮನ್ನು ನೋಡದೇ! ಮೈಯಲ್ಲಿ ಹುಷಾರಿಲ್ಲವೇ? ತುಂಬ ಇಳಿದುಹೋಗಿದ್ದೀರಿ," ಎನ್ನುತ್ತ ಚೀಟಿ ತೆರೆದು ಓದಿ ಹುಬ್ಬೇರಿಸಿದ. ಮರುಕ್ಷಣ ಏನೋ ಅರ್ಥವಾದವನ ಹಾಗೆ ಒಳಗೆ ಹೋಗಿ ನಾಗಪ್ಪ ಬೇಡಿದ ಔಷಧದ ಬಾಟಲಿಯೊಂದನ್ನು ಕಾಗದದಲ್ಲಿ ಹೊದಿಸಿ ಅವನ ಕೈಯಲ್ಲಿಡುತ್ತ—"Take it easy: ಮೊನ್ನೆ ಶ್ರೀನಿವಾಸರಾವ್ ಬಂದಾಗ ಹೇಳಿದರು. My sympathies." ಇದನ್ನು ಕೇಳಿ ನಾಗಪ್ಪ ಎಷ್ಟೊಂದು ಗೊಂದಲಕ್ಕೊಳಗಾದನೆಂದರೆ ಹಣ ಕೊಡುವ ಮೊದಲೇ ಅಲ್ಲಿಂದ ಓಡುವವನು; ಐನ್‌ಹೊತ್ತಿಗೆ ಬಾನಾವಳಿ, "ಅದರ ಕಿಮ್ಮತ್ತು ಹತ್ತು ರೂಪಾಯಿ. ಬಿಲ್‌ಕೊಡಲು ಸಾಧ್ಯವಿಲ್ಲ" ಎಂದಾಗ ಹಣ ಕೊಟ್ಟು ಹೊರಗೆ ಬಿದ್ದ ನಾಗಪ್ಪನ ತಲೆಯಲ್ಲಿ ಒಂದೇ ಭಯದ ವಿಚಾರ: ಇಡೀ ಬಾಟಲಿಯನ್ನು ಒಂದೇ ಪಟ್ಟಿಗೆ ಖಾಲಿ ಮಾಡುವ ಚಪಲ ಹುಟ್ಟದಿರಲಿ ದೇವರೇ...

ಕೈಯಲ್ಲಿ ಹಿಡಿದದ್ದು ಬಾರ್ಬಿಚ್ಯುರೇಟ್ ನಿದ್ದೆಗುಳಿಗೆಗಳ ಬಾಟಲಿಯಾಗಿತ್ತು. ಯಾವುದೇ ರೀತಿಯಿಂದ ಅಡ್ಡಿಮಾಡದೇ ಕೇಳಿದ ಬಾಟಲಿಯನ್ನು ತನ್ನ ಕೈಯಲ್ಲಿಡುತ್ತ, Take it easy; ಶ್ರೀನಿವಾಸರಾವ್ ಎಲ್ಲ ಹೇಳಿದ್ದಾರೆ ಎನ್ನುವಾಗ ಬಾನಾವಳಿಗೆ ತನ್ನ ಬಗ್ಗೆ ಇರುವ ಭಾವನೆಯಲ್ಲಿ ಕಾಳಜಿಗಿಂತ ಹೆಚ್ಚಾಗಿ ಒಂದು ಬಗೆಯ ಕ್ರೂರ ಆನಂದವಿತ್ತೇ ಎಂಬ ಗುಮಾನಿ ಬಂದಾಗಂತೂ ಖೇಮರಾಜಭವನದ ಆ ಮನೆಯಲ್ಲಿ ಒಬ್ಬನೇ ಮಲಗುವದು ಅಸಾಧ್ಯವಾಗಿ ತೋರಿತು. ಕೈಯಲ್ಲಿ ಹಿಡಿದ ಬಾಟಲಿಯೊಂದೇ ತನಗರಿವಿಲ್ಲದೇನೇ ಮನೆಯತ್ತವೇ ತನ್ನನ್ನು ಎಳೆದೊಯ್ಯುತ್ತಿದ್ದ ಧೈರ್ಯಕ್ಕೆ ಕಾರಣವಾದಂತಿತ್ತು...

ಖೇಮರಾಜಭವನವನ್ನು ಸಮೀಪಿಸುವಾಗ ವಿಲಕ್ಷಣ ಅನುಭವ: ನಡೆದ ದಣಿವಿಗೋ, ಅರಿವು ಇಲ್ಲದಿದ್ದರರೂ ಹೊಟ್ಟೆ ಹಸಿದದ್ದಕ್ಕೋ, ಕಿಸೆಯಲ್ಲಿ ಹೊತ್ತು ತಂದ ಬಾಟಲಿ ಎಬ್ಬಿಸುತ್ತಿದ್ದ ಕಳವಳಕ್ಕೋ ಅಥವಾ ಸ್ಪಷ್ಟವಾಗಿ ಒಪ್ಪಿಕೊಂಡಿರದಿದ್ದರೂ, ಮೇರಿ ಖಂಬಾಟಾ ಈಗ ಈ ಬಾನಾವಳಿ ಇವಕೆಲ್ಲರಿಂದಾಗಿ ಹುಟ್ಟಿದ ಹೊಟ್ಟೆಹೊರಳಿಸುವ ಭಯಕ್ಕೋ ಅಷ್ಟೊಂದು ಜನರ ಸದ್ದುಗದ್ದಲದಿಂದ ತುಂಬಿದ ಖೇತಶವಾಡಿಯ ಅಂದಗೇಡಿಯಾದ ಚಾಳುಗಳೆಲ್ಲ ನಿರ್ಜನವಾಗಿ ನಿಂತಂತೆ ತೋರಿತು. ಖೇಮರಾಜಭವನದ ಕಟ್ಟಿಗೆಯ ಪಾವಟಿಗೆಗಳುಳ್ಳ ನಿಚ್ಚಣಿಕೆಯನ್ನು ಏರುವಾಗಂತೂ ಯಾವುದೋ, ಪ್ಲೇಗಿನಂತಹ, ರೋಗದ ಹಾವಳಿಯಿಂದ ಜನರೆಲ್ಲ ಮನೆಗಳನ್ನು ಖಾಲಿ ಮಾಡಿ ಆಗಲೇ ಓಡಿಹೋಗಿದ್ದಾರೆ; ತಾನೊಬ್ಬನೇ ಹಿಂದೆ ಉಳಿದುಬಿಟ್ಟಿದ್ದೇನೆ ಎಂಬಂತಹ ಭಾಸವಾದಾಗ ತನ್ನಲ್ಲಿ ಹುಟ್ಟಿದ ಭಾವನೆಗೆ ನಾಗಪ್ಪನಿಗೆ ಹೆಸರು ಹೊಳೆಯಲಿಲ್ಲ. ಇಷ್ಟೇ, ಆ ಭಾವನೆಯ ಗುಂಗಿನಲ್ಲಿದ್ದಾಗಲೇ ಹಿಂದೆ ಎಂದೂ ಮಾಡಿರದ ಒಂದು ಬಾಲಿಶವಾದ ಚಟುವಟಿಕೆಯಲ್ಲಿ ತೊಡಗಿದವನಾಗಿ ಏರುತ್ತಿದ್ದ ನಿಚ್ಚಣಿಕೆಯ ಮೆಟ್ಟಿಲುಗಳನ್ನು ಒಂದೊಂದಾಗಿ ಎಣಿಸಹತ್ತಿದ; ಮೊದಲ ಮಜಲೆಯ ಕೊನೆಯ ಮೆಟ್ಟಿಲಿಗೆ ಬಂದೊಡನೇ, ತನಗೇ ಕೇಳಿಸುವಷ್ಟು ದೊಡ್ಡ ಧನಿಯಲ್ಲಿ “ಹದಿಮೂರೂ” ಎಂದೂ, ಎರಡನೇ ಮಜಲೆಯ ಕೊನೆಗೆ ಬಂದೊಡನೆ “ಇಪ್ಪತ್ತಾರೂ,” ಎಂದೂ ಅಂದವನು ಮೂರನೇ ಮಜಲೆಯನ್ನು ತಲುಪಿದೊಡನೆ, “ ಮುವ್ವತ್ತೊಂಬತ್ತೂss” ಎಂದ. ಹಾಗೆ ಅಂದಾಗ ದನಿ ಎಷ್ಟು ದೊಡ್ಡದಾಗಿತ್ತೆಂದರೆ ನಿಚ್ಚಣಿಕೆಯ ಇಬ್ಬದಿಯ ಮನೆಗಳ ಜನಕ್ಕೆ ಅದು ಸ್ಪಷ್ಟವಾಗಿ ಕೇಳಿಸಿರಬೇಕು. ಪುಣ್ಯಕ್ಕೆ, ಹಾಗೆ ಒದರಿದವರು ಯಾರು ಎಂಬುದನ್ನು ತಿಳಿಯಲು ಹೊರಗೆ ಬರುವಷ್ಟು ಕುತೂಹಲ ಮಾತ್ರ ಯಾರಿಗೂ ಆಗಲಿಲ್ಲ. ಇಷ್ಟೆಲ್ಲ ಜನ ತುಂಬಿದ ಚಾಳಿನಲ್ಲಿ ಇಂತಹ ವೈಚಿತ್ರ್ಯಗಳು ದಿನವೂ ನಡೆಯುವವೇ. ಮೂಲೆಯ ಮನೆಯ ಅರ್ಜುನ್‌ರಾವ್ ಮಾತ್ರ ಇವನನ್ನು ಸಂಧಿಸದೇ ಉಳಿಯಲಿಲ್ಲ. ಇವನ ಬರವಿನ ಹಾದಿಯನ್ನೇ ಕಾಯುತ್ತಿದ್ದವನ ಹಾಗೆ ಬಾಗಿಲಲ್ಲೇ ನಿಂತಿದ್ದ: ಇವನ ಮೋರೆಯನ್ನು ನೋಡಿದ್ದೇ ತಡ ತಾನು ಅವನ ಹಾದಿಯನ್ನು ಕಾಯುತ್ತಿದ್ದುದಾದರೂ ಯಾಕೆ ಎಂಬುದನ್ನು ಕೂಡ ಮರೆತೇ ಬಿಟ್ಟವನ ಹಾಗೆ “ನಾಳೆ ಹೈದ್ರಾಬಾದಿಗೆ ಹೋಗುತ್ತೀರಂತೆ... ಹೆಹೆಹೆ...” ಎಂದು ಹಲ್ಲು ಕಿಸಿದಾಗ ನಾಗಪ್ಪನೇ ಅವನ ಮುಂದಿನ ಮಾತುಗಳನ್ನು ಪೂರ್ತಿಗೊಳಿಸಿದ—”ಬೆಳಿಗ್ಗೆ ಶ್ರೀನಿವಾಸರಾವ್ ಭೆಟ್ಟಿಯಾಗಿದ್ದ; ಅವನೇ ಹೇಳಿದ”

ಇದನ್ನು ಹೇಳುವಾಗ ನಾಗಪ್ಪ ಅರ್ಜುನ್‌ರಾವನ ಇದಿರು ನಿಂತಿರಲಿಲ್ಲ; ತನ್ನಷ್ಟಕ್ಕೇ ಮಾತನಾಡುತ್ತ ತನ್ನ ಕೋಣೆಯ ಕಡೆಗೆ ಹೆಜ್ಜೆ ಇಡುತ್ತ ಸಾಗಿದ್ದ. ಕದ ತೆರೆದು ಕೋಣೆ ಸೇರಿದವನೇ ಬಟ್ಟೆ ಬದಲಿಸುವ ಮೊದಲೇ ಹಾಸಿಗೆಯಲ್ಲಿ ಅಡ್ಡವಾಗಿದ್ದ.

ಬೆಳಿಗ್ಗೆ ಎಚ್ಚರವಾದದ್ದು ಹನ್ನೊಂದು ಗಂಟೆಯ ನಂತರ. ಎದ್ದಕೂಡಲೇ. ಹೊಟ್ಟೆಗೆ ಹಸಿವೆಯಾಗಿದೆಯೆಯ ಅರಿವು ಬಂದು ಹಾಸಿಗೆಯಲ್ಲಿ ಎದ್ದು ಕೂಡ್ರೋಣವೆಂದರೆ ಇನ್ನೂ ನಿದ್ದೆಯಿಂದ ಎಚ್ಚರವಾಗಿಲ್ಲ ಎಂಬಂತಹ ಅನ್ನಿಸಿಕೆ. ಹಾಗೇ ಕೆಲ ಹೊತ್ತು ಬಿದ್ದಿರೋಣ ಎನ್ನುವ ಮನಸ್ಸಾಗಿ ತಿರುಗಿ ಹಾಸಿಗೆಯಲ್ಲಿ ಅಡ್ಡವಾದ: ಹೊತ್ತು ಹೋದಂತೆ ನೆನಪಿಗೆ ಬರಹತ್ತಿತು: ಬಾನಾವಳಿಯ ಅಂಗಡಿಯಿಂದ ಹೊರಬಿದ್ದ ಮೇಲೆ ಬಾಟಲಿಯನ್ನು ರಸ್ತೆಯಲ್ಲಿ ನಿಂತಲ್ಲೇ ತೆರೆದು ಐದು ಗುಳಿಗೆಗಳನ್ನು ಎಣಿಸಿ ನುಂಗಿದ್ದ—ಆ ಡೋಜು ದೊಡ್ಡದೆಂದು ಗೊತ್ತಿದ್ದೂ. ಈಗ ಸಂಶಯ: ನುಂಗಿದ ಗುಳಿಗೆಗಳು ಐದೇ ಆಗಿದ್ದುವೋ ತಪ್ಪಿ ಇನ್ನೂ ಹೆಚ್ಚು ಆಗಿದ್ದೂವೋ! ತನ್ನ ಯಾತನೆಗೆ ಮೂಲಾಕಾರಣ ಯಾತನೆಯ ತೀವ್ರ ಅರಿವೇ ಆಗಿದ್ದರೆ ಆ ಅರಿವನ್ನೇ ನಾಶಮಾಡುವ ಈ ನಿದ್ದೆಯಂತಹ ಸಾವಿನಿಂದಲೇ ಅದಕ್ಕೆ ಕೊನೆಯೇನೋ. ನೇತ್ರಾವತಿ ಕೆಳಗೆ ಬಿದ್ದು ಸಾಯಲು ಬಯಸಿದ್ದಕ್ಕೆ ಅವಳ ನೈತಿಕ 'ಪತನವೇ' ಕಾರಣವಾಗಿರಬಹುದೆ? ನಾಗಪ್ಪನಿಗೆ ಬಿದ್ದಲ್ಲೇ ತಿರುಗಿ ನಿದ್ದೆ ಹತ್ತಿತು. ಎಚ್ಚರವಾದಾಗ ಹಠಾತ್ತನೆ ನೆನಪಿನಲ್ಲಿ ನಿಂತದ್ದು ಯಾರಿಗೋ ತಾನು ತನ್ನ ವಯಸ್ಸನ್ನು ಕೂಗಿ ಹೇಳಿದ್ದು; ಮುವ್ವತ್ತೊಂಬತ್ತೂss. ಹೇಳಿದ್ದು ಮೇರಿಗೊ? ಮೇರಿಗೆ ವಯಸ್ಸೆಷ್ಟು—ಇಪ್ಪತ್ತಾರು ಇಪ್ಪತ್ತೇಳು? ಕೇಳಿ ನೋಡಬೇಕು. ಅಪ್ಪ ಸತ್ತಾಗ ತನಗೆ ವಯಸ್ಸು ಹದಿಮೂರು! ತಾನು ಎಣಿಸಿದ್ದು ನಿಚ್ಚಣಿಕೆಯ ಮೆಟ್ಟಿಲುಗಳನ್ನು ಅಲ್ಲವೇ ಅಲ್ಲವಾಗಿತ್ತೇನೊ. ಕೆಳಗೆ ಹೋಗುವಾಗ ಇನ್ನೊಮ್ಮೆ ಎಣಿಸಿನೋಡಬೇಕು. ಹುಚ್ಚು ಕಲ್ಪನೆ ಎಂದು ನಕ್ಕುಬಿಡಬೇಕು ಎಂದು ಅನ್ನಿಸಿದರೂ ಈ ವಿವೇಕಶೂನ್ಯವಾದ 'ಆಕಸ್ಮಿಕ' ನಾಗಪ್ಪನ ಮನಸ್ಸಿನ ಮೇಲೆ ಎಷ್ಟೊಂದು ಪ್ರಬಲವಾದ ಪರಿಣಾಮ ಮಾಡಿತ್ತೆಂದರೆ, ಲೆಕ್ಕ ತಪ್ಪಿ ತೆಗೆದುಕೊಂಡ ಬಾರ್ಬಿಚ್ಯುರೇಟ್ ಗುಳಿಗೆಗಳ ದೊಡ್ಡ ಡೋಜಿನ ಪರಿಣಾಮವನ್ನೂ ಕ್ಷುಲ್ಲಕಗೊಳಿಸಿ ನಾಗಪ್ಪ ಸಂಪೂರ್ಣವಾಗಿ ಎಚ್ಚರವಾಗಿದ್ದ. ಸಂಜೆ ತಾನು ಕೈಕೊಳ್ಳಲಿದ್ದ ಪ್ರವಾಸದ ನೆನಪೂ ಬಂದು ಅದರ ಸಿದ್ಧತೆಗೆ ತೊಡಗುವುದಕ್ಕೆ ಮನಸ್ಸನ್ನು ಗಟ್ಟಿಮಾಡಿ ಹಾಸಿಗೆ ಬಿಟ್ಟು ಎದ್ದ.

## ಅಧ್ಯಾಯ ಒಂದು

ತನ್ನ ಸುತ್ತಲೂ ಬಿಗಿಗೊಳ್ಳುತ್ತಿದ ರಾಜಕೀಯದ ಮೊದಲ ಸುಸ್ಪಷ್ಟವಾದ ಕುರುಹು ಅನುಭವಕ್ಕೆ ಬಂದದ್ದು ಹೈದ್ರಾಬಾದ್ ವಿಮಾನ-ನಿಲ್ದಾಣದಲ್ಲಿ ಇಳಿದಾಗಲೇ...

ಇಂದು ರವಿವಾರ. ಶೇರ್-ಏ-ಪಂಜಾಬ್ ರೆಸ್ಟೋರೆಂಟಿನಲ್ಲಿ ಲೆಕ್ಕವಿಲ್ಲದಷ್ಟು ಸಂದಣಿ. ಪರಿಚಯದ ಜನ ಭೆಟ್ಟಿಯಾದರೂ ಆದರೇ. ತನ್ನ ಆಫೀಸಿನ ಕೆಲ ಜನ ಕೂಡ ಅಲ್ಲಿ ಬರುತ್ತಾರೆ. ಅಲ್ಲಿಯ ಚಿಕನ-ಬಿರ್ಯಾಣಿ ಗಿರ್ಾಂವದ ಆ ಭಾಗದಲ್ಲೇ ಪ್ರಖ್ಯಾತ. ಅದರಲ್ಲೂ ಇತ್ತೀಚೆ ತಂಪು ಬಿಯರ್ ಬೇರೆ ಮಾರಲು ಶುರುಮಾಡಿದ್ದಾರೆ. ನಾಗಪ್ಪನಿಗೋ ಇಂದು ಯಾರನ್ನೂ ಭೇಟಿಯಾಗುವುದಿರಲಿಲ್ಲ. ಎಂತಲೇ, ಗ್ರೆಂಟ್‌ರೋಡ್ ಮೂಲೆಯಲ್ಲಿಯ ದರ್ಬಾರ್ ಹೊಟೆಲ್ಲಿಗೇ ಹೋದ. ದರ್ಬಾರ್ ಹೊಟೆಲ್ ಇದಿರಿಗೇ ಬಾನಾವಳೀ ಮೆಡಿಕಲ್ ಸ್ಟೋರ್ಸ: ರವಿವಾರವಾದ್ದರಿಂದ ಮುಚ್ಚಿತ್ತು. ಆದರೆ ಅದು ಕೆರಳಿಸಿದ ನೆನಪಿನಿಂದ ನಿನ್ನೆಯ ತನ್ನ ನಡತೆಯ ಬಗ್ಗೆ ತನಗೇ ನಾಚಿಕೆ ಎನ್ನಿಸಿತು: ಎಲ್ಲೋ ಆಳದಲ್ಲಿ, ಸತ್ವಪರೀಕ್ಷೆಯಲ್ಲಿಯ ಸೋದಿಗೆ ಹೆದರಿಕೊಂಡ ಮನಸ್ಸು ಸತ ಪರೀಕ್ಷೆಯ ಕ್ಷೇತ್ರದಿಂದಲೇ ಪಲಾಯನ ಹೇಳುವ ಸಿದ್ಧತೆಯಲ್ಲಿದ್ದಂತಿತ್ತು ಎನ್ನುವುದರ ಅಸ್ಪಷ್ಟ ಅರಿವು ನಾಗಪ್ಪನಿಗಿತ್ತು: ಬಾರ್ಬಿಚ್ಯುರೇಟ್ ಗುಳಿಗೆಗಳಿಗೆ ಶರಣು ಹೋಗಬೇಕಾದ ಆವಶ್ಯಕತೆಯ ಅರ್ಥ ಹೊಳೆದಿತ್ತು. ಊಟಕ್ಕೆ ಕೂತಾಗ, ತನ್ನ ಬುದ್ಧಿಶಕ್ತಿಗೆ ಈಗ ಎಂದಿಗಿಂತ ಹೆಚ್ಚಾಗಿ ತನ್ನ ಚುರುಕುತನವನ್ನು ಕಾಯುಕೊಳ್ಳುವ ಅಗತ್ಯವಿದೆ ಎಂದು ತನ್ನನ್ನು ತಾನೇ ಎಚ್ಚರಿಸಿಕೊಂಡ. ಫಿರೋಜ್—ಶ್ರೀನಿವಾಸ—ಜಲಾಲರ ಗುಂಪಿಗಿರುವ ಬಲಾಢ್ಯವಾದ ರಾಜಕೀಯ ಸತ್ತೆಯ ವಿರುದ್ಧ ಹೋರಾಡಲು ಬೇಕಾದ ರಾಜಕೀಯಕುತಂತ್ರ ತನ್ನ ವ್ಯಕ್ತಿತ್ವದ ಅಳವಿನುಚೆಯದಾದರೂ ಸತ್ಯ ತನ್ನ ಬದಿಗಿದೆ. ಎಂಬ ಒಂದೇ ಒಂದು ದೈರ್ಯ ನಾಗಪ್ಪನು ತನ್ನ ಊಟದ ರುಚಿಯನ್ನು ಕಳಕೊಳ್ಳದಂತೆ ಮಾಡಿತ್ತು. ಮಧ್ಯದಲ್ಲೇ, ತನ್ನ ಬಗ್ಗೆ ಪ್ರೀತಿಯುಳ್ಳ M.D ಅವರೇ ಊರಲಿಲ್ಲ ಎನ್ನುವುದರ ನೆನಪು ಹಾಗೂ ಅವರನ್ನು ಬಿಟ್ಟರೆ ತನ್ನ ಪರವಾಗಿ ಮಾತನಾಡುವ ಧೈರ್ಯವಾಗಲೀ

ಆಸ್ಥೆಯಾಗಲೀ ಇದ್ದವರು ಕಂಪನಿಯಲ್ಲಿ ಇನ್ನೊಬ್ಬರಿದ್ದಾರೆಯೆ ಎಂಬುದರ ಬಗ್ಗೆ ಹುಟ್ಟಿದ ಸಂಶಯಗಳಿಂದಾಗಿ ಮನಸ್ಸು ಕುಗ್ಗುತ್ತದೆ: ಬೇಡ ಬೇಡವೆಂದರೂ. ಉಪಜೀವಿಕೆಯ ಕ್ಷೇತ್ರದಲ್ಲಿ ಮನುಷ್ಯ ಹೋರಾಡುವದು ಸತ್ಯಕ್ಕಾಗಿರದೇ ಬರಿಯ ತಮ್ಮತಮ್ಮ ಸ್ಥಾನಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೇ ಎಂಬ ನಿಲುಗಡೆಗೆ ಬಂದು ಮುಟ್ಟಿದ. ಅರಿತೋ ಅರಿಯದೆಯೋ, ಎಲ್ಲರೂ, ಫಿರೋಜ್ ಹೂಡಿದ ಬೇಟೆಯ ಸಂಚಿನಲ್ಲಿ ಸೇರಿ, ತನ್ನನ್ನು ಸುತ್ತುವರಿದು ತಮ್ಮಟೆ, ಜಾಗಟೆಗಳನ್ನು ಬಾರಿಸುತ್ತ, ಬಾರಿಸುತ್ತ ತನ್ನನ್ನು ನೇರವಾಗಿ ಫಿರೋಜ್ ಗುರಿ ಹಿಡಿದು ಕುಳಿತ ಕೋವಿಯ ಇದಿರಿಗೇ ಬರುವ ಪಶುವನ್ನಾಗಿ ಮಾಡುತ್ತಿದ್ದಾರೆ ಅನ್ನಿಸಹತ್ತಿತು: ಈ ಚಿತ್ರ ಕಣ್ಣಮುಂದೆ ನಿಂತದ್ದೇ ನಾಗಪ್ಪನ ಕಣ್ಣುಗಳು ಮತ್ತೆ ಆರ್ದ್ರಗೊಂಡಿದ್ದುವು: ವಿಮಾನ-ಪರಿಚಾರಿಕೆ ಇವನ ಹತ್ತಿರ ಬಂದ-Tea or Coffee please ಎಂದು ಕೇಳಿದಾಗ, ತನ್ನ ವಿಚಾರಗಳ ಗುಂಗಿನಿಂದ ಹೊರಬಂದು ಕಣ್ಣಿನಲ್ಲಿ ಕಲೆತ ನೀರಿನ ಪರದೆಯೊಳಗಿಂದ, ಮುಂದೆ ನಿಂತ ಸುಂದರ ಮೋರೆಯ ಪರಿಚಯ ಹಿಡಿದು-Tea please ಎಂದು ಹೇಳಲು ನಾಗಪ್ಪನಿಗೆ ಕೆಲವು ನಿಮಿಷಗಳೇ ಬೇಕಾದವು. ಮುಂದಿಟ್ಟ ಕಪ್ಪಿನಲ್ಲಿ ಚಹ-ಹಾಲು ಸುರಿಯುತ್ತಿರುವಾಗ, "ಚಹ ಮುಗಿಸಿ ಹಿಂದಿನ ಸೀಟಿಗೆ ಬನ್ನಿ. ಮಾತನಾಡೋಣ," ಎಂದು ಗುಟ್ಟಿನಲ್ಲಿ ಹೇಳುವವಳಂತೆ ಹೇಳಿ. ಬಹಳ ಚೆಂದವಾಗಿ ನಕ್ಕು ಹಿಂದಿನ ಸಾಲಿಗೆ ಚಹ ಕೊಡಲು ಹೊರಟುಹೋದಳು. ನಾಗಪ್ಪ ತನ್ನ ಕಿವಿಗಳನ್ನು ತಾನೇ ನಂಬದಾದ: ಇಪ್ಪತ್ತು ವರ್ಷಗಳಲ್ಲಿ ನಡೆಯದೇ ಇದ್ದಷ್ಟು ಸಂಗತಿಗಳು ಈಗ ಒಮ್ಮೆಲೇ ಇಪ್ಪತ್ತೇ ದಿನಗಳಲ್ಲಿ ನಡೆಯುವ ಹೊಂಚು ಹಾಕಿ ಕೂತಿವೆಯೇನೋ ಅನ್ನಿಸಿತು: ಇವಳು ಯಾರು? ಇಷ್ಟೆಲ್ಲ ಪ್ರವಾಸಿಗಳು ಇರುವಾಗ ತನ್ನೊಡನೆಯೇ ಮಾತನಾಡುವ ಆತುರ ಇವಳಿಗೇಕೆ? ನಾಗಪ್ಪ ಚಹ ಮುಗಿಸಿದ್ದೇ ಹಿಂತಿರುಗಿ ನೋಡಿದ: ಹುಡುಗಿ ಇನ್ನೂ ಉಳಿದ ಪ್ರಯಾಣಿಕರಿಗೆ ಚಹ ಕೊಡುವುದರಲ್ಲಿ ಮಗ್ನಳಾಗಿದ್ದಳು: ಬಹಳ ಆಕರ್ಷಕವಾದ ಮೈಕಟ್ಟು, ಬಣ್ಣ, ನಿಲುವು. ಉಟ್ಟಸೀರೆ ಮೈಸೂರ ಸಿಲ್ಕಿನದು. ಪರಿಚಾರಿಕೆಯರಿಗೆ ಇಂಡಿಯನ್ ಏರ್‌ಲ್ಯಾನ್ಸ್ ಒದಗಿಸಿದ ಯೂನಿಫಾರ್ಮ ಸೀರೆಯಾಗಿದ್ದರೂ ಅವಳ ಗೌರವರ್ಣಕ್ಕೆ ತುಂಬ ಎದ್ದು ಕಾಣುತ್ತಿತ್ತು. ಪೀಕಾಕ್ ಬ್ಲ್ಯೂ ಬಣ್ಣದ್ದು. ಮುಡಿ ಕಟ್ಟಿದ ಕೂದಲಿನ ಮುಚ್ಚುಮರೆಯಿಲ್ಲದ ಮೋಹಕತೆ ಮೇರಿಯ ಕೂದಲನ್ನು ನೆನಪಿಗೆ ತಂದಿತು.

ನಾಗಪ್ಪನ ಲಕ್ಷ್ಯ ಅತಿ ಹಿಂದಿನ ಸೀಟುಗಳತ್ತ ಹೋಯಿತು: ಕೊನೆಯ ಎರಡು ಸಾಲುಗಳು ಖಾಲಿಯಿದ್ದವು. ನಾಗಪ್ಪನಲ್ಲಿ ಅದೆಂತಹ ಖುಶಿ ತುಂಬಿದ ಧೈರ್ಯದ ಸಂಚಾರವಾಯಿತೋ: ತನ್ನ ಸೀಟಿನಿಂದ ಎದ್ದವನೇ ನೇರವಾಗಿ ಹಿಂದಿನ ನಡೆಯಹತ್ತಿದ. ಅರ್ಧಕ್ಕೇ ತಡೆದು ಏನೋ ನೆನಪಾದವನ ಹಾಗೆ ಮೊದಲು ಕೂತ ಜಾಗಕ್ಕೇ ಹಿಂತಿರುಗಿ ಬಂದು ಬ್ರೀಫ್‌ಕೇಸ್ ತೆರೆದು ಅದರೊಳಗಿಂದ, ಮನಸ್ಸು ಬಂದಾಗ ಟಿಪ್ಪಣೆಗಳನ್ನು ಬರೆದಿಡುತ್ತಿದ್ದ ನೋಟ್ ಬುಕ್ ತೆಗೆದುಕೊಂಡ. ಎಲ್ಲಕ್ಕೂ ಹಿಂದಿನ ಸೀಟೊಂದರಲ್ಲಿ ಕುಳಿತುಕೊಳ್ಳುವ ಹೊತ್ತಿಗೆ, ಪರಿಚಾರಿಕೆ ತನ್ನ ಪಾಲಿನ ಎಲ್ಲ ಪ್ರವಾಸಿಕರಿಗೂ ಚಹ ಕೊಟ್ಟು ಮುಗಿಸಿದ್ದಳು. ಬಗ್ಗಿ ನಡೆಯುತ್ತ ಚಹ ಸುರಿಯುತ್ತಿದ್ದವಳು ತನ್ನ ತನ್ನ ಕೆಲಸದಿಂದ ಬಿಡವು ಪಡೆದು ನೆಟ್ಟಗೆ ನಿಂತದ್ದೇ ನಾಗಪ್ಪ ಕಣ್ಣಿಗೆ ಬಿದ್ದಾಗ, ಮೋಹಕವಾಗಿ ಮುಗುಳು ನಗುತ್ತ ಹತ್ತಿರ ಬಂದು – Care for another cup of tea? ಎಂದು ಕೇಳಿದಳು. No, thanks ಎಂದು ನಾಗಪ್ಪ ಉತ್ತರಿಸಿದಾಗ—I am a friend of Mary. I will join you soon ಎಂದು ಅವಳು ಚಹದ ಪಾತ್ರೆಯೊಂದಿಗೆ ಕೆಬಿನ್ ಕಡೆಗೆ ಹೊರಟಾಗ ಆಗಿನಿಂದಲೂ ಕಾಡುತ್ತಿದ್ದ ರಹಸ್ಯ ಒಡೆದಂತಾಗಿ ಮನಸ್ಸಿಗೆ ನಿರಂಬಳತೆ ಎನಿಸಿತು. ಮರುಗಳಿಗೆ ತಾನು ಯಾರೆಂದು ಅವಳಿಗೆ ತಿಳಿದ ಬಗೆ ಹೇಗೆ ಎಂಬುದರ ಬಗ್ಗೆ ಕುತೂಹಲ ಹುಟ್ಟದೇ ಇರಲಿಲ್ಲ. ತನ್ನ ಹತ್ತಿರ ಬಂದು ಅವಳು ಕೂತಾಗ ಮಾತನ್ನು ಆರಂಭಿಸಲು ಒಂದು ಪ್ರಶ್ನೆಯಾದರೂ ಸಿಕ್ಕಿತು ಎಂದು ಸಂತೋಷವಾಯಿತು: ಪರಿಚಯವಿಲ್ಲದ ಹುಡುಗಿಯರೆಂದರೆ ನಾಗಪ್ಪನಿಗೆ ಬಹಳ ಸಂಕೋಚ. ಪರಿಚಾರಿಕೆ ತನ್ನ ಸದ್ಯದ ಕೆಲಸ-ಬೊಗಸೆಗಳಿಂದ ಬಿಡುವು ಸಿಕ್ಕಿದ್ದೇ ಇವನ ಕಡೆಗೇ ಬರಹತ್ತಿದಳು: ದೂರದಿಂದಲೇ ಇವನನ್ನು ಕಂಡದ್ದೇ ಸಿಹಿಯಾಗಿ ಮುಗುಳುನಗುತ್ತ ಇವನನ್ನು ಸಮೀಪಿಸಿ-May I? ಎಂದು ಕೇಳಿ ಇವನ ಬದಿಯ ಕುರ್ಚಿಯಲ್ಲಿ ಕೂಡ್ರುತ್ತ: I am happy to meet you Mr. Nagnath ಎಂದಳು: ನನ್ನ ಹೆಸರು ಡಾಯನಾ ಡ್ರೈವರ್. ಮೇರಿಯ ಮಗ್ಗಲು-ಮನೆಯಲ್ಲಿರುತ್ತೇನೆ, ಎಂದು ಇನ್ನೊಮ್ಮೆ ಚೆಂದವಾಗಿ ನಕ್ಕಳು. ಅವಳು ಹಾಗೆ ನಕ್ಕಾಗ, ವಿಮಾನ-ಪರಿಚಾರಿಕೆಯರ ಬಗ್ಗೆ ತಾನು ಯಾವಾಗಲೂ ಮಾಡುತ್ತಿದ್ದ ಜೋಕ್ ಹೇಳುವ ಕುತೂಹಲವಾಯಿತು. ಆದರೆ ಅದನ್ನು ಸದ್ಯ ತಡೆಹಿಡಿದು, "ಕ್ಷಮಿಸಿ ಮಿಸ್ ಡ್ರೈವರ್..." "Call me Diana." "ಓಕೇ ಡಾಯನಾ, ನಿನಗೆ ನಾನೇ ನಾಗನಾಥನೆಂದು ತಿಳಿದದ್ದು ಹೇಗೆ?"

ಎಂದು ಕೇಳಿದ. “Your sad sweet face,” ಎಂದು ಡಾಯನಾ ನಕ್ಕಾಗ ನಾಗಪ್ಪ ಇನ್ನಷ್ಟು ಗೊಂದಲಕ್ಕೆ ಬಿದ್ದುದನ್ನು ಕಂಡು, “ಇಲ್ಲ, ನಿನ್ನೆ ನೀವು ಮೇರಿಗೆ ಫೋನ್ ಮಾಡಿದಾಗ ನಾನು ಅಲ್ಲೇ ಇದ್ದೆ. ಮೊದಲು ಫೋನ್ ತೆಗೆದುಕೊಂಡದ್ದೇ ನಾನು. ನೀವು ಈ ಫ್ಲೈಟ್ ಮೇಲೆ ಇದ್ದೀರಿ ಎನ್ನುವುದು ತಿಳಿದು ನಿಮ್ಮ ಬಗ್ಗೆ ಕೇಳಿದಾಗ, ನಿಮ್ಮ ಬಗ್ಗೆ ಹೇಳುತ್ತ ನಿಮ್ಮ ವರ್ಣನೆ ಕೂಡ ಮಾಡಿದ್ದಳು.” ನಾಗಪ್ಪನಿಗೆ ಆಶ್ಚರ್ಯ: ಮೇರಿ ಬಾಯಿಂದ ಮಾಡಿದ ವರ್ಣನೆಯಿಂದಲೇ ತನ್ನ ಗುರುತು ಹಿಡಿಯುವಂತಹ ವೈಶಿಷ್ಟ್ಯ ತನ್ನಲ್ಲೇನಿದೆ ಎಂಬಂತಹ ಪ್ರಶ್ನೆಗೆ ನಾಗಪ್ಪ ಶಬ್ದಗಳನ್ನು ಹುಡುಕುತ್ತಿರುವಾಗ ಡಾಯನಾ ತಾನೇ ಎಂದಳು- “ಮೇರಿ ನಿಮ್ಮ ದೈಹಿಕ ವರ್ಣನೆ ಮಾಡುತ್ತ ಒಂದು ವಿಶೇಷ ಲಕ್ಷಣವನ್ನು ತೋರಿಸಿಕೊಟ್ಟಿದ್ದಳು: ನೀವು ನಡೆಯುವಾಗ ಆಗಾಗ ಎಡಗೈಯಿಂದ ಛಾತಿಯ ಬಲಭಾಗವನ್ನು ಮುಟ್ಟಿ ನೋಡುತ್ತೀರಿ.” ನಾಗಪ್ಪನಿಗೆ, ತನ್ನ ಅರಿವಿಗೆ ಬಂದಿರದ ಈ ಸಂಗತಿಯಿಂದ ಎಷ್ಟೊಂದು ಆಶ್ಚರ್ಯದ ಧಕ್ಕೆ ತಗಲಿತೆಂದರೆ ಅವನ ಬಾಯಿಂದ ಬಂದ ’No’ ಎಂಬ ಉದ್ಗಾರ ಬಯಸಿದ್ದಕ್ಕಿಂತ ದೊಡ್ಡದಾಯಿತು. ಡಾಯನಾ, ’ಸ್ವಲ್ಪ ಮೆಲ್ಲಗೆ’ ಎಂದು ಸೂಚಿಸುವವಳ ಹಾಗೆ ಕುರ್ಚಿಯ ಕೈಯ ಮೇಲೆ ಊರಿದ ನಾಗಪ್ಪನ ಹಸ್ತವನ್ನು ಮೃದುವಾಗಿ ಅಮುಕಿ, ತಾನು ಹೇಳುತ್ತಿದ್ದದ್ದು ದೊಡ್ಡ ಗುಟ್ಟಿನ ಸುದ್ದಿಯೆಂಬಂತೆ ದನಿಯನ್ನು ತಗ್ಗಿಸಿ, ”ನಿಮ್ಮನ್ನೆಲ್ಲ ಸ್ವಾಗತಿಸಲು ಬಾಗಿಲಲ್ಲಿ ನಿಂತಲ್ಲಿಂದಲೇ ಸಾಲುಗಟ್ಟಿ ಬರುತ್ತಿದ್ದ ಪ್ರಯಾಣಿಕರಲ್ಲಿ ನಿಮ್ಮನ್ನು ತಪ್ಪದೇ ಗುರುತಿಸಿದ್ದೆ: ವಿಮಾನವನ್ನು ಪ್ರವೇಶಿಸುವ ಮೊದಲು ಮೂರು ಸರತಿಯಾದರೂ ನೀವು ಛಾತಿಯನ್ನು ಮುಟ್ಟಿ ನೋಡಿರಬೇಕು. ನಿಜ ಹೇಳಲೇ?- ನಾನು ಮಾತ್ರ, ನೀವು ನೀವೇ ಎಂದು ಪತ್ತೆ ಹಚ್ಚಿದ್ದು ಮೇರಿ ಬಹಳವಾಗಿ ಮೆಚ್ಚಿಕೊಂಡಂತಿದ್ದ ನಿಮ್ಮ ಕಣ್ಣೊಳಗಿನ ಬುದ್ಧಿ ಮತ್ತೆಯ ಹೊಳಪು ಹಾಗೂ ಅದರ ಆಳದಲ್ಲಿಂದ ಹೊರಸೂಸುವ ಮ್ಲಾನತೆಗಳಿಂದ. ನಾನೂ ಮೆಚ್ಚಿಕೊಂಡದ್ದು ಅವುಗಳನ್ನೇ” ಎನ್ನುತ್ತ ಕುರ್ಚಿಯ ಮೇಲೆ ಇನ್ನೂ ಊರಿಯೇ ಇದ್ದ ನಾಗಪ್ಪನ ಕೈಯನ್ನು ಗಟ್ಟಿಯಾಗಿ ಅದುಮಿ ಹಿಡಿದಳು. ಕ್ಷಣದಲ್ಲಿ ಬಿಟ್ಟಳು: ’ಇದೆಲ್ಲ ಮೇರಿಯದೇ ಕೈವಾಡವೆ? ನನ್ನ ಮನಃಸ್ಥಿತಿಯ ಅರಿವು ಇದ್ದ ಈ ಹುಡುಗಿ ತನ್ನ ಗೆಳತಿಯ ಮುಖಾಂತರ ನನ್ನನ್ನು ಖುಶಿಯಲ್ಲಿಡುವ ಪ್ರಯತ್ನ ಮಾಡುತ್ತಿದ್ದಾಳೆಯೆ? ದೇವರೇ, ಯಾವ ಜನ್ಮದ ಋಣಾನಂಬಂಧವಿದು. ನನ್ನವರೆನ್ನುವವರೇ ನನ್ನನ್ನು ಹಣಿಯಲು

ಸಿದ್ಧರಾಗಿದ್ದಾಗ... ನಾಗಪ್ಪ ಒಮ್ಮೆಲೇ ಅಂತರ್ಮುಖಿಯಾದದ್ದನ್ನು ನೋಡಿ" ಯಾವಾಗಲೂ ಚಿಂತೆ ಮಾಡುತ್ತ ಕೂಡ್ರಬೇಡಿ ನಾಗನಾಥ್" ಎಂದ, ಡಾಯನಾಳ ಆತ್ಮೀಯತೆಗೆ ಪುಲಕಿತನಾದ ನಾಗಪ್ಪ ಹೊರಬರಲು ಪ್ರಯತ್ನಿಸುತ್ತ. "ಥೆಂಕ್ಸ್ ಡಾಯನಾ. ಒಂದು ಹೇಳಲೆ?—ಏರ್ ಹಾಸ್ಟೆಸ್ ಕುರಿತು ನಾನು ಬಹಳಷ್ಟು ಸಲ ಮಾಡಿದ ಜೋಕಿಗೆ ನೀನು ದೊಡ್ಡ ಅಪವಾದ," ಎಂದು ತನ್ನ ಜೋಕನ್ನು ಹೇಳಿದ: I used to call you Air-hostesses as Air-hostiles ಎಂದುದಕ್ಕೆ ಡಾಯನಾಳಿಗೆ ದೊಡ್ಡಕ್ಕೆ ನಕ್ಕುಬಿಡಬೇಕು: ಅನ್ನಿಸಿದ್ದರೂ ತಾವು ಇದ್ದ ಸನಿವೇಶವನ್ನು ನೆನೆದು, "ನೀವು ತುಂಬ ತುಂಟರಿದ್ದೀರಿ," ಎನ್ನುವಷ್ಟರಲ್ಲಿ ಕೊಕ್‌ಪಿಟ್ಟಿನಿಂದ ಕರೆ ಬಂದಿದ್ದರಿಂದ excuse me ಎಂದವಳೇ ಅಲ್ಲಿಂದ ಹೊರಟುಹೋದಳು.

ನಾಗಪ್ಪ ತನ್ನ ನೋಟ್‌ಬುಕ್ ತೆರೆದು ಬರೆಯಹತ್ತಿದ: "ಮೇರಿ ಹಾಗೂ ಡಾಯನಾ ನನ್ನ ಬಗ್ಗೆ ಮಾಡುತ್ತಿದ್ದುದನ್ನು ನೋಡಿ ಮಾನವತೆಯಲ್ಲಿ ನನಗಿದ್ದ ಭರವಸೆ ಮತ್ತೆ ಚಿಗುರು ಮೂಡುತ್ತಿದ್ದ ಭಾವನೆ. ಡಾಯನಾಳೊಡನೆ ಮಾತನಾಡುವಾಗಂತೂ ಹೈದ್ರಾಬಾದಿನಲ್ಲಿ ನಡೆಯಲಿದ್ದದ್ದು ನನ್ನ ಕಲ್ಪನೆಯಲ್ಲಿ ಹುಟ್ಟಿದ್ದೆನ್ನುವಂತಹ ಭಾಸ..."

ಶ್ರೀನಿವಾಸ ಮತ್ತು ಫಿರೋಜ್ ಒಂದೆಡೆಯಲ್ಲಿ ಬಂದದ್ದಾದರೂ ಹೇಗೆ? ಇದು ಇನ್ನೂ ಬಿಡಿಸಲಾಗದ ಒಗಟಾಗಿಯೇ ಉಳಿದಿದೆ...

ನಾಗಪ್ಪ ಬರೆಯುವದನ್ನು ಎಂದೋ ನಿಲ್ಲಿಸಿದ್ದ. ತೆರೆದೆ ಇದ್ದ ವಹಿ, ತೆರೆದೇ ಇದ್ದ ಪೆನ್ನು, ತೆರೆದೇ ಇದ್ದ ಕಣ್ಣುಗಳ ಇದಿರಿನಲ್ಲೆ ಮಾತಿನಲ್ಲಿ ಹಿಡಿಯಲಾಗದ ಚಿತ್ರಗಳು: ಹನೆಹಳ್ಳಿ. ಕುಮಟೆಯ ಹಾಸ್ಟೆಲ್ಲು. ಅಪ್ಪ ಹಾರಿದ ಭಾವಿ. ಶ್ರೀನಿವಾಸನ ಮನೆಯ ಹತ್ತಿರದ ಝೋಪಡಪಟ್ಟಿಗಳು: ಹೆದರಿದ ಕಣ್ಣುಗಳಿಂದ ನೋಡುವ ಸರಸ್ವತಿ. ವೋಮೂ. ಸೀತಾರಾಮ. ಒಂದೇ ಒಂದು ಸಂಜೆಯ ಮಟ್ಟಿಗೆ ಭೆಟ್ಟಿಯಾಗಿ ಆತ್ಮೀಯ ಮಾತುಗಳನ್ನಾಡಿದ ದೋಶಿ. ಗಲ್ಲದಲ್ಲಿ ಕುಳಿ ಮೂಡಿಸಿ ನಗುವ ಮುದ್ದಿನ ಚೇತನಾ. ಇನ್ನೂ ಕಂಡಿರದ ಅಣ್ಣನಿರಬಹುದೇ ಎಂದು ಗುಮಾನಿ ಹುಟ್ಟಿಸಿದ ಶ್ರೀನಿವಾಸನ ಮನೆಯಲ್ಲಿಯ ಅಡಿಗೆಯ ಅಚ್ಯುತ. ಚಿಕ್ಕಂದಿನಲ್ಲೇ ಕಳೆದುಹೋದ ತಂಗಿ. ಮನೆ ಬಿಡುವ ಕೊನೆಯ ಗಳಿಗೆಯಲ್ಲಿ ಅರ್ಥವಾಗದ

ರೀತಿಯಲ್ಲಿ ತನ್ನನ್ನು ಬಲವಾಗಿ ತಟ್ಟಿದ ಶ್ರೀನಿವಾಸನ ಹೆಂಡತಿ ಶಾರದೆ. ಜನ್ಮಾಂತರದಲ್ಲಿ ನಂಬಿಕೆ ಮೂಡಿಸುವ ಮೇರಿ. ಇದೀಗ ಇಷ್ಟೊಂದು ಅಕ್ಕರೆಯಿಂದ ಮಾತನಾಡಿಸಿದ ಡಾಯನಾ...

"ಅದೆಂತಹ ಹಗಲುಗನಸಿನಲ್ಲಿ ಮುಳುಗಿದಿರಪ್ಪ!" ಡಾಯನಾಳ ಪ್ರಿಯವಾದ ಧ್ವನಿ ಕೇಳಿಸಿದ್ದೇ ನಾಗಪ್ಪ ವಾಸ್ತವಜಗತ್ತಿಗೆ ಇಳಿದಿದ್ದ. ಹೈದ್ರಾಬಾದ್ ವಿಮಾನ-ನಿಲ್ದಾಣವನ್ನು ತಾವು ಸಮೀಪಿಸುತ್ತಿದ್ದೇವೆಂದೂ, ಕುರ್ಚಿಯ ಸೇಫ್ಟೀ ಬೆಲ್ಟುಗಳನ್ನು ಕಟ್ಟಿಕೊಳ್ಳಬೇಕೆಂದೂ ಮೈಕ್ ಮೇಲೆ ಬಂದದ್ದು ಡಾಯನಾಳ ಸಂಗಾತಿಯ ಧ್ವನಿಯಾಗಿತ್ತು. ನಾಗಪ್ಪನ ಮಗ್ಗಲ ಕುರ್ಚಿಯಲ್ಲಿ ತಾನೂ ಬೆಲ್ಟ್ ಕಟ್ಟಿಕೊಂಡು ಕುಳಿತ ಡಾಯನಾ ಒಮ್ಮೆಲೇ ಭಾವಪರವಶಳಾದವಳ ಹಾಗೆ "ಹೆದರಬೇಡಿ. ಮೇರಿ ನನಗೆ ಎಲ್ಲ ಹೇಳಿದ್ದಾಳೆ, ಯಾವಾಗಲೂ ನಿಮ್ಮ ಬಗ್ಗೆ ಮಾತನಾಡುತ್ತಿರುತ್ತಾಳೆ. ನಿಮ್ಮ ಬಗ್ಗೆ ಬಹಳ ಆದರವಿದೆ ಅವಳಿಗೆ ...She loves you..." ಎನ್ನುತ್ತಿರುವಾಗ ವಿಮಾನ ನೆಲವನ್ನು ಮುಟ್ಟಿತ್ತು. "ಇನ್ನು ನಾನು ನನ್ನ ಡ್ಯೂಟಿಗೆ ಹೋಗಬೇಕು. ಇನ್ನೊಮ್ಮೆ ಭೆಟ್ಟಿಯಾಗುವ ಹೊತ್ತಿಗೆ ನೀವು ನಿಮಗೆ ಸಲ್ಲಬೇಕಾದ ಸ್ಥಾನಕ್ಕೆ ಬಂದು ಹಸನ್ಮುಖಿಗಳಾಗಿರುತ್ತೀರಿ ಎಂದು ಆಶಿಸುತ್ತೇನೆ... ಅಲ್ಲಿಯ ವರೆಗೆ..." ಎನ್ನುತ್ತ, ಪ್ರೀತಿ ಉಕ್ಕಿಬಂದವಳ ಹಾಗೆ ನಾಗಪ್ಪನ ಅಂಗೈಯನ್ನು ಒತ್ತಿ ತನ್ನ ಕೆಲಸಕ್ಕೆ ಹೊರಟುಹೋದಳು...

ವಿಮಾನದ ಬಾಗಿಲದ ಕಡೆಯ ಬಾಗಿಲಲ್ಲಿ ಡಾಯನಾಳ ಸಂಗಾತಿ ನಿಂತಿದ್ದಳು. ನಾಗಪ್ಪ ತಾನು ಮೊದಲು ಕೂತ ಸೀಟಿಗೆ ಹೋಗಿ, ಬ್ರೀಫ್‌ಕೇಸನ್ನು ಕೈಗೆತ್ತಿಕೊಂಡು, ಡಾಯನಾ ನಿಂತ ಮುಂದಿನ ಬಾಗಿಲಿನಿಂದಲೇ ಹೊರಗೆ ಹೋಗುವದನ್ನು ನಿಶ್ಚಯಿಸಿ ಆಕಡೆಗೆ ನಡೆಯಹತ್ತಿದ: ಡಾಯನಾ ಕೈಮುಗಿದು ನಿಂತು 'ಗುಡ್‌ಬಾಯ್' ಎನ್ನುತ್ತ ಪಯಣಿಗರನ್ನು ಬೀಳ್ಕೊಡುತ್ತಿದ್ದಳು. ನಾಗಪ್ಪ ತನ್ನ ಸರದಿ ಬಂದದ್ದೇ, "ಗುಡ್‌ಬಾಯ್ ಡಾಯನಾ, ಈ ಸಂಜೆಯನ್ನು ನಾನೆಂದೂ ಮರೆಯಲಾರೆ,"- ಎಂದು ಚೆಂದವಾಗಿ ನಕ್ಕು ಅವಳಿಂದ ಬೀಳ್ಕೊಂಡ. ನಿಚ್ಚಣಿಕೆಯ ಮೆಟ್ಟಿಲುಗಳನ್ನು ಇಳಿಯುವಾಗ, ಕಳೆದ ಏಳು ದಿನಗಳಲ್ಲಿ ತಾನು ಇಷ್ಟೊಂದು ಸುಖವಾಗಿ ನಕ್ಕದ್ದು ಇದೇ ಮೊದಲ ಸಲವೇನೋ ಎಂದು ಅನ್ನಿಸದೇ ಇರಲಿಲ್ಲ. ಆದರೆ ಕೊನೆಯ ಮೆಟ್ಟಿಲನ್ನು ಬಿಟ್ಟು ನೆಲಕ್ಕೆ ಕಾಲಿರಿಸಿದ್ದೇ, ಬೆನ್ನಹುರಿಯಲ್ಲಿ

ಬರ್ಫಿನಂತಹದೇನೋ ಹರಿದ ಅನುಭವ: ತಾನು ಹೈದ್ರಾಬಾದಿಗೆ ಬಂದ ಪ್ರತಿಸಲ ಪರ್ಸೊನೆಲ್ ಡಿಪಾರ್ಟಮೆಂಟಿನ ಜನ ಯಾರಾದರೂ ಕಾರಿನೊಂದಿಗೆ ವಿಮಾನ-ನಿಲ್ದಾಣದಲ್ಲಿ ತನ್ನನ್ನು ಕಾಣಲು ಬಂದೇ ಬರುತ್ತಿದ್ದರು. ಈಗಲೂ ಯಾರಾದರೂ ಬಂದಿರಬಹುದಲ್ಲವೇ? ಯಾಕೋ ಹಠಾತ್ತನೆ ಬಂದ ಈ ಸಂಶಯದಿಂದ ಕಾಲೇ ಸೋತುಬಂದವು: ಇಲ್ಲ, ವಿಮಾನ ನಿಲ್ದಾಣದಲ್ಲಿ ಅವನನ್ನು ಸ್ವಾಗತಿಸಲು ಕಂಪನಿಯಿಂದ ಯಾರೂ ಬಂದಿರಲಿಲ್ಲ. ತನ್ನ ಬಗ್ಗೆ ತುಂಬ ಆದರ ಇಟ್ಟುಕೊಂಡ ಸರ್ದಾರ ಡ್ರೈವರ್ ಕಾರನ್ನಾದರೂ ತಂದಿರಬಹುದೆಂಬ ಎಣಿಕೆಯೂ ತಪ್ಪಾಯಿತು: ಕಂಪನಿಯವರು ಕಾರನ್ನು ಕೂಡ ಕಳಿಸಿರಲಿಲ್ಲ; ಫಿರೋಜ್ ಸಾರಿದ ಯುದ್ಧದ ಮೊದಲ ಕಹಳೆ ಸ್ಪಷ್ಟವಾಗಿ ಕೇಳಿಸಿತ್ತು. ಇವನು ಕಾರಿನ ಹಾದಿ ಕಾಯುತ್ತ ನಿಂತಾಗ ನಿಲ್ದಾಣದಲ್ಲಿದ್ದ ಐದಾರು ಟೆಕ್ಸಿಗಳೂ ಆಗಲೇ ಹೊರಟುಹೋಗಿದ್ದುವು. ಈಗ ಒಟೋರಿಕ್ಷಾಗಳು ಮಾತ್ರ. ಒಟೋರಿಕ್ಷಾ ಒಂದನ್ನು ಕರೆದು ಒಳಗೆ ಕೂಡ್ರುವದಕ್ಕೂ, ಇಂಡಿಯನ್ ಏರ್ ಲಾಯ್ನ್ಸ್‌ದ ಸ್ಟೇಶನ್ ವ್ಯಾಗನ್ನಿನಲ್ಲಿ ಡಾಯನಾ ಹತ್ತುವದಕ್ಕೂ ಸರಿಯಾಯಿತು. ಡಾಯನಾ ಇವನು ರಿಕ್ಷಾ ಹತ್ತುವದನ್ನು ಕಂಡಿದ್ದಳು. ಆದರೆ, ಕಂಡೂ ಕಾಣದವಳಂತೆ ಮುಖ ತಿರುವಿಸಿ ಸ್ಟೇಶನ್‌ವ್ಯಾಗನ್ ಹತ್ತಿ ಕೂತಿದ್ದಳು: ರಿಕ್ಷಾದವನಿಗೆ ಕಂಪನಿಯ ಗೆಸ್ಟ್‌ಹೌಸಿನ ವಿಳಾಸ ಕೊಟ್ಟು ವಾಹನವನ್ನು ಓಡಿಸಲು ಹೇಳಿದ್ದೇ, ವಾಹನವನ್ನು ಸ್ಟಾರ್ಟ ಮಾಡಿ, ವಿನಾ ಕಾರಣ ಬಾರಿಸಿದ ಹಾರ್ನಿನ ಸದ್ದಿನಲ್ಲಿ ಬೇರೆ ಏನೋ ಕೇಳಿಸಿದಂತಾದಾಗ ಮೈ ಮೇಲೆ ಮುಳ್ಳುನಿಂತವು.

## ಅಧ್ಯಾಯ ಎರಡು

ಬಂಜಾರಾ ಹಿಲ್ಲಿನ ನೆತ್ತಿಯಲ್ಲಿ ನಿಂತ, ನಾಲ್ಕು ಮಲಗುವ ಕೋಣೆಗಳುಳ್ಳ ಒಂದು ಬಂಗಲೆಯನ್ನು ಕಂಪನಿಯ ಗೆಸ್ಟ್‌ಹೌಸ್ ಆಗಿ ಉಪಯೋಗಿಸಲಾಗುತ್ತಿತ್ತು. ಬಂಗಲೆಗೆ ಹೋಗುವ ರಸ್ತೆಯ ಬದಿಯಲ್ಲಿ ಬೃಹದಾಕಾರದ ಬಂಡೆಗಳು. ಮಳೆಗಾಳಿಗಳಿಂದಾಗಿ ಉರುಟುರುಟಾಗಿ, ಬೋಳುಬೋಳಾದ ಅಂತಹ ಬಂಡೆಗಳನ್ನು ನಾಗಪ್ಪ ಇನ್ನೆಲ್ಲೂ ನೋಡಿರಲಿಲ್ಲ. ಹೈದ್ರಾಬಾದಿನ ವೈಶಿಷ್ಟ್ಯಗಳಲ್ಲೊಂದಾದ ಆ ಬಂಡೆಗಳಿಂದಲೇ ಗೆಸ್ಟ್‌ಹೌಸ್ ನಾಗಪ್ಪನಿಗೆ ಬಹಳ ಪ್ರಿಯವಾಗಿತ್ತು. ಮುಂಬಯಿಗೆ ವರ್ಗವಾದ ಕಳೆದ ಎಂಟು ತಿಂಗಳಲ್ಲಿ ನಾಲ್ಕು ಸಲವಾದರೂ ಹೈದ್ರಾಬಾದಿಗೆ ಬಂದಿದ್ದ. ಬಂದ ಪ್ರತಿ ಸರತಿ ಅಲ್ಲಿದ್ದ ಎರಡು ಮೂರು ದಿನಗಳನ್ನು ಅತ್ಯಂತ ಸುಖದಲ್ಲಿ ಕಳೆದಿದ್ದ. ಬಂಗಲೆಯ ಕಂಪೌಂಡಿನ ಬೇಲಿಯಲ್ಲಿ ಕೆಂಪು, ಗುಲಾಬಿ ಹಾಗೂ ಬಿಳಿ ಹೀಗೆ ಮೂರು ಮೂರು ಬಣ್ಣಗಳ ಹೂವುಗಳನ್ನು ಮೈತುಂಬ ಅರಳಿಸಿ ನಿಂತ ಆಳೆತ್ತರದ ಬೋಗನ್‌ವಿಲ್ಲಾ ಗಿಡಗಳು. ಸಂಪಿಗೆಯ ಮರಗಳು. ಬಾಗಿಲಲ್ಲೇ, ಚಪ್ಪರದ ಹಾಗೆ ಟೊಂಗೆಗಳನ್ನು ಹರಡಿ ನಿಂತ ದೇವದಾರು ಗಿಡ. ಬಂಗಲೆಯ ಹಿಂದೆ ಸಣ್ಣ ಹಳ್ಳ, ಕಣಿವೆಯ ಆಳದಲ್ಲಿ ಅಲ್ಲಲ್ಲಿ ನೀರು ಪ್ರಕಟಿಸುತ್ತ ಹರಿಯುತ್ತಿತು. ಕಣಿವೆಯ ಆಚೆಯ ಮೈ ಮತ್ತೆ ಬೋಳುಬೋಳಾದ ದೊಡ್ಡ ಬಂಡೆಗಳಿಂದ ಆಚ್ಛಾದಿತವಾದ ಗುಡ್ಡವಾಗಿತ್ತು. ಹಿಂದಿನ, ಅಂಗಳದಷ್ಟು ದೊಡ್ಡದಾದ ಗಚ್ಚಿಯಲ್ಲಿ ಬೆತ್ತದ ಕುರ್ಚಿಯನ್ನು ಹಾಕಿಸಿ, ಟೀಪಾಯಿಯ ಮೇಲೆ ನಿಡಿದಾಗಿ ಕಾಲು ಚಾಚಿ ತಂಪಾದ ಬಿಯರ್ ಕುಡಿಯುತ್ತ ಆಕಾಶದಲ್ಲಿಯ ಚಿಕ್ಕಿಗಳನ್ನು ನೋಡುತ್ತ ವಿರಮಿಸುವ ಕನಸು ಕಾಣುತ್ತ, ವಿಮಾನ-ನಿಲ್ದಾಣದಲ್ಲಾದ—ಅಪಮಾನಕ್ಕೆ ಕಡಿಮೆಯಲ್ಲದ—'ಸ್ವಾಗತ'ವನ್ನು ಕೂಡ ಮರೆತು ತನ್ನಷ್ಟಕ್ಕೆ ಖುಶಿಯಲ್ಲಿದ್ದ ನಾಗಪ್ಪನ ಮನಸ್ಸು ಬಂಜಾರಾ ಹಿಲ್ ಸಮೀಪಸುತ್ತಿದ್ದಂತೆ ಫಕ್ಕನೆ ಹುಟ್ಟಿದ ವಿಚಾರಕ್ಕೆ ಈಗ ಮತ್ತೆ ಕಳವಳಕ್ಕೊಳಗಾಯಿತು: ಗೆಸ್ಟ್‌ಹೌಸಿಗಾದರೂ ತಾನಿಂದು ಬರುವ ಸುದ್ದಿ ತಿಳಸಿರಬಹುದಲ್ಲವೆ? ಕೃಷ್ಣ ಹಾಗೂ ಅವನ ಕೈಕೆಳಗಿನ ಮುತ್ತೂಸ್ವಾಮಿ ಗೆಸ್ಟ್ ಹೌಸಿನ ದೇಖರೇಖಿ ನೋಡಿಕೊಳ್ಳುತ್ತಿದ್ದರು. ಮುತ್ತೂಸ್ವಾಮಿ ಒಳ್ಳೆಯ ಅಡಿಗೆಯ ಭಟ್ಟ ಕೂಡ. ಎರಡು ದಿನಗಳ ಮಾತಿಗೆ ಬಂದಾಗ ಕೂಡ ಪ್ರತಿ ಒಬ್ಬನಿಗೆ ಐದೈದು

ರೂಪಾಯಿ ಭಕ್ಷೀಸು ಕೊಡದೇ ಹೋದವನಲ್ಲ ನಾಗಪ್ಪ: ಇಬ್ಬರಿಗೂ ಅವನ ಮೇಲೆ ತುಂಬ ಖುಶಿ. ವಿಸ್ಕೀಬಾಟಲಿಯನ್ನು ತರಿಸಿದಾಗಂತೂ ಒಂದೊಂದು ಪೆಗ್ಗನ್ನಾದರೂ ಕದ್ದು ಕುಡಿಯದೇ ಇರುತ್ತಿರಲಿಲ್ಲ ಎರಡೂ ಮಕ್ಕಳು. ಕೃಷ್ಣ ತುಂಬ ಹಲ್ಕಟ್ ಎರಡೂ ಮಗ. ತಾನು ಮೊದಲ ಬಾರಿಗೆ ಬಂದಾಗಲೇ ಹುಡುಗಿಯರ ಬಗ್ಗೆ ವಿಚಾರಿಸಿದ್ದ. ಬಂಗಲೆಯಲ್ಲಿ ಇರಲು ತಾನೊಬ್ಬನೇ ಆಗ. ತಾನು ಪ್ರಕಟಿಸಿದ ಸಿಟ್ಟಿಗೆ ಮುಂದೆ ಆ ವಿಷಯದಲ್ಲಿ ತಿರುಗಿ ಚಕಾರ ಮಾತೆತ್ತಿರಲಿಲ್ಲ; ಆ ಸಂದರ್ಭ ಈಗ ನೆನಪಿಗೆ ಬಂದಾಗ ತನ್ನ ಕಳವಳದ ಮನಃಸ್ಥಿತಿಯಲ್ಲೂ ನಾಗಪ್ಪನಿಗೆ ನಗು ಬಂತು. ಗೆಸ್ಟ್ ಹೌಸಿನತ್ತ ಹೊರಳುವ ಸಣ್ಣ ರಸ್ತೆಗೆ ಬಂದದ್ದೇ ರಿಕ್ಷಾದವನು ತಾನು ಸರಿಯಾದ ರಸ್ತೆಗೆ ಹೊರಳುತ್ತಿದ್ದೇನೆ ಎನ್ನುವುದನ್ನು ಖಾತ್ರಿ ಮಾಡಿಕೊಳ್ಳಲೆಂಬಂತೆ—ಎಂಟನೇ ರಸ್ತೆ ಇದೇ ಅಲ್ಲವೇ ಸರ್ ಎಂದು ಕೇಳಿದ. ನಾಗಪ್ಪನಿಗೂ ಖಾತ್ರಿಯಿರಲಿಲ್ಲ. ಹಿಂದೆ ಬಂದ ಪ್ರತಿಸಲ ಕಂಪನಿಯ ಕಾರು ಇತ್ತು. "ನಿನಗೆ ಖಾತ್ರಿಯಿಲ್ಲದಿದ್ದರೆ ಮುರಕಿಯಲ್ಲಿಯ ಪೆಟ್ರೋಲ್-ಪಂಪಿಸಲ್ಲಿ ವಿಚಾರಿಸಿಕೊಂಡು ಬಾ." ಎಂದ. ಅವನು ಹಾಗೇ ಮಾಡಿ ಬಂದ. ಅವರು ಹಿಡಿಯಲಿದ್ದ ರಸ್ತೆ ಸರಿಯಾಗಿತ್ತು. ಮುಂದಿನ ಐದೇ ಮಿನಿಟುಗಳಲ್ಲಿ ಗೆಸ್ಟ್‌ಹೌಸಿನ ಕಂಪೌಡನ್ನು ಒಟೋರಿಕ್ಷಾ ಹೊಕ್ಕಿತ್ತು. ಅದರ ಕಿವಿಗೆ ಅಪ್ಪಳಿಸುವ ಸದ್ದಿಗೆ ಬದಿಯ ಬಂಗಲೆಯೊಳಗಿನ ದೊಡ್ಡ ನಾಯಿಯೊಂದು ಸುತ್ತಲಿನ ಬಂಡೆಗಲ್ಲುಗಳಿಂದ ಮಾರ್ದನಿ ಎಬ್ಬಿಸುವಂತೆ ಗುಲ್ಲೆಬ್ಬಿಸಿತು. ಗೆಸ್ಟ್‌ಹೌಸಿನ ಬಾಗಿಲೂ ತೆರೆಯಿತು. ಕೃಷ್ಣನೂ ಹಲ್ಲು ಕಿಸಿಯುತ್ತ, ಕೈಮುಗಿಯುತ್ತ ಹೊರಗೆ ಬಂದ. ನಾಗಪ್ಪನ ಸಂಶಯವೇ ನಿಜವಾಗಿತ್ತು: ಕೃಷ್ಣನಿಗೆ ನಾಗಪ್ಪ ಬರುವದರ ಸುದ್ದಿಯನ್ನು ಯಾರೂ ತಿಳಿಸಿರಲಿಲ್ಲ. ಗೆಸ್ಟ್ ಹೌಸಿನಲ್ಲಿ ಸದ್ಯ ಯಾರೂ ಇಲ್ಲದ್ದರಿಂದ ಅಡಿಗೆಯ ಮುತ್ತೂಸ್ವಾಮಿಯೂ ಆ ದಿನ ರಜೆ ಪಡೆದಿದ್ದ. ನಾಗಪ್ಪನಿಗೆ ತನಗೆ ಬಂದ ಸಿಟ್ಟನ್ನು ತಡೆಯುವುದಾಗಲಿಲ್ಲ.

ರಿಕ್ಷಾದಿಂದ ತನ್ನ ಸಾಮಾನನ್ನು ಇಳಿಸಲು ಕೃಷ್ಣನಿಗೆ ಹೇಳಿದವನೇ, ರಿಕ್ಷಾದವನಿಗೆ ಹಣ ಕೊಡುವ ಮೊದಲೇ ಸೀದಾ ಒಳಗಿನ ಹಾಲಿಗೆ ನಡೆದು ಪರ್ಸೊನೆಲ್ ಆಫೀಸರನಿಗೆ ಫೋನ್ ಮಾಡಲೆಂದು ಡಿರೆಕ್ಟರಿಯಲ್ಲಿ ಅವನ ನಂಬರನ್ನು ಹುಡುಕಹತ್ತಿದ. ನಂಬರ್ ಸಿಕ್ಕು, ಫೋನ್ ಮಾಡಿದಾಗ ಫೋನ್ ಮೇಲೆ ಬಂದ ಹೆಣ್ಣಿಗೆ, ರಾಮಕೃಷ್ಣ ಮನೆಯಲ್ಲಿದ್ದಾರೆಯೇ? ಎಂದು ಕೇಳಿದ. ಟೆಲಿಫೋನ್ ಮೇಲೆ ಹೆಣ್ಣುದನಿ ಕೇಳಿಯೇ ನಾಗಪ್ಪ ತುಸು ಮೆತ್ತಗಾಗಿದ್ದ. ಫೋನಿನ ಇನ್ನೊಂದು

ತುದಿಯಿಂದ ಬಂದ ಮಾತುಗಳನ್ನು ಕೇಳಿದ ಮೇಲಂತೂ ಸಿಟ್ಟಿನ ಜಾಗದಲ್ಲಿ ಬೇರೆಯೇ ಒಂದು ಭಾವನೆ ನೆಲೆಸಹತ್ತಿತು. ಇಲ್ಲ, ರಾಮಕೃಷ್ಣ ಊರಲ್ಲಿರಲಿಲ್ಲ. ಬಂದೂಕವಾಲರ ಜೊತೆ ಅಂದೇ ಸಂಜೆಯ ಪ್ಲೇನಿಗೆ ಮುಂಬಯಿಗೆ ಹೋಗಿದ್ದ, ಬರಲು ಮೂರು ದಿನಗಳಾದರೂ ಹಿಡಿದಾವು. ನಾಗಪ್ಪ ಸಂಪೂರ್ಣವಾಗಿ ಗೊಂದಲಿಸಿ ಹೋದ: ಸಂಜೆಯ ಪ್ಲೇನು ಎಂದರೆ ತಾನು ಇದೀಗ ಮುಂಬಯಿಯಿಂದ ಬಂದದೇ. ಅದೇ ತಿರುಗಿ ಮುಂಬಯಿಗೆ ಹೋಗುತ್ತದೆ.

ಹೊರಗೆ ರಿಕ್ಷಾವಾಲಾ ಗದ್ದಲ ಮಾಡಹತ್ತಿದ. ನಾಗಪ್ಪ, ಮೊದಲು ಅದೇ ರಿಕ್ಷಾ ಹತ್ತಿ ಯಾವುದಾದರೂ ಹೊಟೆಲ್ಲಿಗೆ ಹೋಗಿ ಊಟ ಮಾಡೋಣ: ಬರುವಾಗ ಟ್ಯಾಕ್ಸಿಯಿಂದ ಬಂದರಾಯಿತು ಎಂದುಕೊಂಡಿದ್ದ. ಆದರೆ ಇದೀಗ ಫೋನ್ ಮೇಲೆ ತಿಳಿದ ಸುದ್ದಿಯಿಂದ ಊಟದ ರುಚಿಯೇ ಕೆಟ್ಟುಹೋಗಿತ್ತು. ರಿಕ್ಷಾವಾಲಾನನ್ನು ಅವನು ಕೇಳಿದಷ್ಟು ಹಣ ಕೊಟ್ಟು ಕಳಿಸಿಕೊಟ್ಟ. ಮಧ್ಯಾಹ್ನ, ದರ್ಬಾರ್ ಹೊಟಿಲ್ಲಿನಲ್ಲಿ ಊಟ ಸರಿಯಾಗಿರದ್ದಕ್ಕೋ ಏನೋ ಹೊಟ್ಟೆ ಹಸಿದಿತ್ತು. ಕೃಷ್ಣನಿಗೆ—ಊಟಕ್ಕೆ ಆಮ್ಲೆಟ್ ಆದರೂ ಸಿಗಬಹುದೇ? ಎಂದು ಕೇಳಿದ. “ಸಿಗಬಹುದು ಸರ್. ಬ್ರೆಡ್ ಮಾತ್ರ ತೀರಿಹೋಗಿದೆ. ಚಿಂತೆ ಮಾಡಬೇಡಿ. ಇದೀಗ ಸಾಯ್ಕಲ್ ಮೇಲೆ ಹೋಗಿ ತರುತ್ತೇನೆ. ಅದಕ್ಕೇನಂತೆ. ಬಿಯರ್-ಗಿಯರ್?...” ಕೃಷ್ಣನ ಮಾತುಗಳಲ್ಲಿ ಹುರುಪು ಇತ್ತು. ಬಿಯರಿನ ಹೆಸರು ತೆಗೆಯುತ್ತಲೇ, ಹೌದು ಇಂದು ಕುಡಿಯದೇ ಮಲಗುವದು ಶಕ್ಯವೇ ಇಲ್ಲ ಅನ್ನಿಸಿತು. ಕುಡಿತದ ಅಮಲಿನಲ್ಲೇ ತನ್ನೆಲ್ಲ ಯಾತನೆಯನ್ನು ಮುಳುಗಿಸಿ ಬಿಡಬೇಕು ಎಂದುಕೊಂಡು ಕೃಷ್ಣನಿಗೆ ಎರಡು ಬಾಟಲಿ ಬಿಯರ್ ತರಲು ಹೇಳಿ ಹಣ ಕೊಡುವಾಗ ಐದು ರೂಪಾಯಿ ನೋಟೊಂದನ್ನು ಹೆಚ್ಚಿಗೆ ಕೊಡುತ್ತ—’ಇದು ನಿನಗೆ ಎಂದಾಗ,’ ಕೃಷನ ಬಿಯರ್ ತರುವ, ಆಮ್ಲೆಟ್ ಮಾಡುವ ಉಮೇದಿಗೆ ಮೇರೆಯೇ ಉಳಿಯಲಿಲ್ಲ. ಹಿಂದೊಮ್ಮೆ ಸಾಹೇಬರು ತೋರಿಸಿದ ಸಿಟ್ಟು ನೆನಪಿಗೆ ಬಂದಿರದಿದ್ದರೆ ಮತ್ತೇನನ್ನೋ ಹುರುಪೂ ಇತ್ತು: ಗೆಸ್ಟ್‌ಹೌಸಿನಲ್ಲಿ ತಮ್ಮಿಬ್ಬರನ್ನು ಬಿಟ್ಟರೆ ಮತ್ತಿನ್ನಾರೂ ಇದ್ದಿರಲಿಲ್ಲ, ಮೇಲಾಗಿ!

ಕೃಷ್ಣ ಸಾಯ್ಕಲ್ ಹತ್ತಿ ಹೊರಟುಹೋದ ಮೇಲೆ ನಾಗಪ್ಪ ಕೃಷ್ಣ ತನಗಾಗಿ ಯಾವಾಗಲೂ ಕಾದಿಡುತ್ತಿದ ರೂಮಿಗೇ ಹೋದ. ಬೂಟು ಕಳಚಿ ಹಾಸಿಗೆಯ ಮೇಲೆ ಅಡ್ಡವಾದ. ತಲೆ ಸುನ್ನವಾಗಿತ್ತು: ಇದು ಸಾದಾ ತನಿಖೆಯಲ್ಲ. ಬರಿಯೆ ನನ್ನ

ಮೇಲಿನ ಸೇಡು ತೀರಿಸುವ ಜಾತಿಯದೂ ಅಲ್ಲ. ಈ ರಾಜಕಾರಣ ನಾನು ತಿಳಿದದ್ದಕ್ಕಿಂತ ಹೆಚ್ಚು ದೂರದವರೆಗೆ ಹಸ್ತ ಕ್ಷೇಪ ಮಾಡಿದ್ದು. ಫಿರೋಜ್ ತಾನು ಸಿಕ್ಕಿಬಿದ್ದ ಯಾವುದಾದರೂ ಪೇಚಿನಿಂದ ತಪ್ಪಿಸಿಕೊಳ್ಳುವುದಕ್ಕೆ ನನ್ನನ್ನು ಬಲಿ ಕೊಡುತ್ತಿಲ್ಲವಷ್ಟೇ... ನನ್ನನ್ನು ಇಲ್ಲಿ ಕರೆಯಿಸಿದ ದಿನ, ಅದೇ ಪ್ಲೇನಿನಿಂದ ತಾನೇ ಮುಂಬಯಿಗೆ ಹೊರಟುಹೋಗುವದೆಂದರೆ, ಮೊದಲೇ ಯೋಜಿಸಿಕೊಂಡ ಫೆಸಿಸ್ಟ್ ಉಪಾಯವಿದು: ನನ್ನನ್ನು ಮಾನಸಿಕ ಗೊಂದಲಕ್ಕೀಡುಮಾಡಿ, ದಣಿಸಿ, ಹೋರಾಡುವ ನನ್ನ ಸಂಕಲ್ಪವನ್ನು ಮುರಿಯುವ ಹಂಚಿಕೆ, ದಣಿವಿನ ವಿಚಾರದಿಂದಲೇ ನಾಗಪ್ಪನಿಗೆ ಬಿದ್ದಲ್ಲೇ ನಿದ್ದೆ ಬರುತ್ತಿದ್ದಂತೆ ತೋರಿತು. ಅದನ್ನು ದೂರ ಮಾಡುವವನ ಹಾಗೆ ಭಡಕ್ಕನೆ ಎದ್ದು ಕುಳಿತ—ಬೇಡ, ಹೇಗಾದರೂ ನೌಕರಿಯನ್ನು ಕಳಕೊಳ್ಳುವ ಅಂತಿಮ ಸಾಧ್ಯತೆಗೆ ಕೂಡ ಮನಸ್ಸು ಗಟ್ಟಿ ಮಾಡಿರುವಾಗ ಇಂತಹ ನೀರಿಲ್ಲದ ವಿಚಾರ ಸಲ್ಲದು ಎಂದುಕೊಂಡು ಕಿಡಕಿಗೆ ಬಂದು ನಿಂತ.

ನಾಗಪ್ಪನನ್ನು ಸದ್ಯ ದಣಿಸುತ್ತಿದ್ದದ್ದು ನೌಕರಿಯನ್ನು ಕಳಕೊಳ್ಳುವ ಭಯವಲ್ಲ. ಮನುಷ್ಯನನ್ನು ಮಾನಸಿಕವಾಗಿ ಮುರಿಯುವದು ಹೀಗೆ ಸ್ಪಷ್ಟವಾದ ಮಾತಿನಲ್ಲಿ ಹಿಡಿಯಬಹುದಾದ ಭಯವಲ್ಲ ಎಂಬ ಅರಿವು ನಾಗಪ್ಪನಿಗಿದೆ. ಸುಳ್ಳು ಅಪಾದನೆಗೆ ತನ್ನನ್ನು ಗುರಿಪಡಿಸಿದಾಗ ತನ್ನ ನಿಷ್ಪಾಪವನ್ನು, ನಿರಪರಾಧವನ್ನು ಉಳಿದವರಿಗೆ ಸಿದ್ಧಪಡಿಸಿ ತೋರಿಸುವುದರಲ್ಲಿ ತಾನು ಸೋಲಬಹುದೆಂಬ ಭಯ. ತನಗೆ ಸಲ್ಲಬೇಕಾದ ನ್ಯಾಯವನ್ನು ಯಾರೋ ಬರಿಯ ಹುಂಬ ಸತ್ತೆಯ ಬಲದ ಮೇಲೆ ಕಸಿದುಕೊಂಡಿದ್ದಾರೆ ಎಂಬುದಕ್ಕೆ ಪುರಾವೆ ಒದಗಿಸುವುದರಲ್ಲಿ ತಾನು ಸೋತೇನು ಎನ್ನುವ ಆತಂಕ. ಸತ್ಯವೇ ಕೊನೆಗೆ ಗೆಲ್ಲುತ್ತದೆ ಎಂಬ ಮಾತು ಫಿರೋಜನಂತಹ ಧೂರ್ತ ರಾಜಕಾರಣಿಯ ಮುಂದೆ ನಡೆಯುವಂತಹದಲ್ಲ. ಇದೇ! ಇದೇ! ತಾನು ಸಂಪೂರ್ಣವಾಗಿ ನಿರಪರಾಧಿಯಾಗಿರುವಾಗಲೂ ತನ್ನನ್ನು ಅಪರಾಧಿಯನ್ನಾಗಿ ತೋರಿಸುವ ಈ ಕಪ್ಪು ಬಲಕ್ಕೆ, ಮಾತಿನ ತೆಕ್ಕೆಗೆ ಸಿಗದಂತೆ ಅದು ಹುಟ್ಟಿಸುವ ಭಯಕ್ಕೆ ತಾನಿಂದು ದಣಿಯುತ್ತಿದ್ದೇನೆ... ಸತ್ಯವೇ ಕೊನೆಯಲ್ಲಿ ಗೆಲ್ಲುತ್ತದೆ ಎಂಬ ಭರವಸೆ ಇಲ್ಲದ್ದಕ್ಕೇ ತಾನಿಂದು ಹೀಗೆ ನಡುಗುತ್ತಿದ್ದೇನೆ. ಯಾಕಂದರೆ ಸತ್ತ ಸತ್ಯದ ವ್ಯಾಖ್ಯೆಯನ್ನೇ ಫಿರೋಜನಂತಹ ರಾಜಕಾರಣಿ ಬದಲಿಸಿಬಿಟ್ಟಿದ್ದಾನೆ...

ನಿಂತಲ್ಲೇ ಬಂದ ಒಂದು ವಿಚಾರಕ್ಕೆ ನಾಗಪ್ಪ ಕೂಡಲೇ ಕಿಡಕಿ ಬಿಟ್ಟು ತಿರುಗಿ ಟೆಲಿಫೋನಿಗೆ ಬಂದ. ಭರಭರನೆ ಟಿಲಿಫೋನ್ ಡಿರೆಕ್ಟರಿಯ ಪುಟಗಳನ್ನು ತಿರುವಿ ತನಗೆ ಬೇಕಾದ ನಂಬರನ್ನು ಹುಡುಕಿ ತೆಗೆದ. ರಿಸೀವರನ್ನು ಕೈಗೆತ್ತಿ ನಂಬರನ್ನು ತಿರುವಿದ. ಆ ತುದಿಯಲ್ಲಿ ತನಗೆ ಪರಿಚಿತವಿದ್ದ ದನಿಯ 'ಹಲ್ಲೋ' ಕೇಳಿಸಿದ್ದೇ, ತನಗೇ ಅರ್ಥವಾಗಿರದ ಅತುರತೆಯಿಂದ, "ಹೈದರ್‌ಸಾಬ್, ನಾನು ನಾಗನಾಥ" ಎಂದ. "ಹಲ್ಲೋ ಹಲ್ಲೋ ಪ್ರಾಫೆಸರ್," ಎಂದು ಎಂದಿನ ಹುರುಪಿನಿಂದಲೇ ಮಾತಿಗೆ ಆರಂಭಿಸಿದ ಹೈದರ್. ಒಮ್ಮೆಲೇ ದನಿಯನ್ನು ತೀರ ತಗ್ಗಿಸಿ, "ಯಾವಾಗ ಬಂದಿರಿ? ಕಾರಖಾನಯಲ್ಲಿ ಯಾರಿಗೂ ಗೊತ್ತಿಲ್ಲವೇ ನೀವು ಬರುವುದರ ಬಗ್ಗೆ? ರಾಮಕೃಷ್ಣ ಕೂಡ ಏನೂ ಹೇಳಲಿಲ್ಲ?" ಎಂದಾಗ ನಾಗಪ್ಪನಿಂದ ಕೆಲ ಹೊತ್ತು ಮಾತೇ ಹೊರಡದಾಯಿತು: ಯಾರು ಬಲ್ಲರು, ಯಾರ ಮುಂದೆಯೂ ಹೆಚ್ಚಿನ ಟಮ್ ಟಮ್ ಮಾಡದೇನೇ ತನ್ನೊಬ್ಬನೊಂದಿಗಷ್ಟೇ ಫಿರೋಜನಿಗೆ ಮಾತನಾಡುವದಿದೆಯೇನೋ. ಆದ್ದರಿಂದಲೇ, ತನ್ನನ್ನು ಇಲ್ಲಿ ಕರೆಯಿಸಿದ ಉದ್ದೇಶವನ್ನು ಗುಟ್ಟಾಗಿಡುವುದಿದೆಯೇನೋ. ತನ್ನನ್ನಿಲ್ಲಿಗೆ ಕರೆಯಿಸಿದ ನಂತರವೇ ಅನಿರೀಕ್ಷಿತ ಕಾರಣಕ್ಕಾಗಿ ಮುಂಬಯಿಗೆ ಹೋಗಬೇಕಾಗಿ ಬಂತೇನೋ. ಫಿರೋಜನನ್ನು ತಾನು ಸುಳ್ಳೇ ತಪ್ಪು ತಿಳಿದೆನೇನೋ... ನಾಗಪ್ಪನ ಈ ಆಶಾವಾದ ಬಹಳ ಕಾಲ ಬಾಳಲಿಲ್ಲ. ನಾಗಪ್ಪ ಇದ್ದಕ್ಕಿದ್ದಂತೆ ಮಾತು ನಿಲ್ಲಿಸಿದ್ದು ಲಕ್ಷ್ಯಕ್ಕೆ ಬಂದ ಹೈದರನೇ ಕೇಳಿದ: "ಈಗ ಎಲ್ಲಿಂದ ಮಾತನಾಡುತ್ತೀರಿ? ಗೆಸ್ಟ್‌ಹೌಸಿನಿಂದಲೇ? ಹತ್ತಿರ ಇನ್ನಾರೂ ಇಲ್ಲವಲ್ಲ?" "ಇಲ್ಲ. ಇದ್ದ ಕೃಷ್ಣನೂ ಕೂಡ ಬ್ರೆಡ್ ತರಲು ಹೊರಗೆ ಹೋಗಿದ್ದಾನೆ." ಎಂದಾಗ "ನೀವು ಈಗ ಇಲ್ಲಿಗೆ ಬರಬಾರದಾಗಿತ್ತು. ಇಲ್ಲಿ ಏನೇನು ನಡೆದಿದೆಯೆನ್ನುವುದನ್ನು ಯಾರೂ ನಿಮಗೆ ತಿಳಿಸಿಲ್ಲವೆ? ನಾನು ಇದೆಲ್ಲದರಿಂದ ದೂರ ಉಳಿಯಲೆಂದೇ ಎಂಟು ದಿನದ ರಜೆ ಪಡೆದು ಮನೆಯಲ್ಲಿದ್ದೇನೆ. ಕಾರಖಾನೆಯಲ್ಲಿ ನಡೆದ ಲಫಡಾದಲ್ಲಿ ದೊಡ್ಡದೊಡ್ಡ ಕುಳಗಳ ಹೆಸರುಗಳೇ ಸಿಕ್ಕಿಕೊಂಡಿವೆಯಂತೆ. ಲಕ್ಷಗಟ್ಟಲೆ ರೂಪಾಯಿಯ ಮಾಲಿನ ಲೆಕ್ಕವೇ ಸಿಗುವದಿಲ್ಲವಂತೆ. ಇದಕ್ಕೂ ಈ ಹಿಂದೆ ನಡೆದ ಬೆಂಕಿಯ ಅನಾಹುತಕ್ಕೂ ಏನೋ ಸಂಬಂಧ ಹಚ್ಚುವ ಪ್ರಯತ್ನ ನಡೆದಿದೆಯಂತೆ. ನೀವು ಸ್ವಲ್ಪ ಈಗ ಜಾಗರೂಕರಾಗಿರುವದು ಒಳ್ಳೆಯದು" ಎಂದ ಹೈದರನ ಮಾತುಗಳಿಂದ ನಾಗಪ್ಪ ಎಷ್ಟು ಹೆದರಿಕೊಂಡಿದ್ದನೆಂದರೆ ಪೂರ್ವಾಪರ ವಿಚಾರಮಾಡುವ ಸಾಮರ್ಥ್ಯವನ್ನೇ ಕಳಕೊಂಡವನ ಹಾಗೆ "ಹೈದರ್‌ಸಾಬ್, ನಾನಾಗಿಯೇ ಇಲ್ಲಿಗೆ ಬಂದಿಲ್ಲ.

DMDಯವರೇ ನನ್ನನ್ನು ಕರೆಯಿಸಿದ್ದಾರೆ. ಆದರೆ ಈಗ ಅವರೇ ಊರಲಿಲ್ಲವಂತೆ." ನಾಗಪ್ಪನ ದನಿಯಲ್ಲಿ ಅರಿವಿಲ್ಲದೇನೆಯೇ ಒಂದು ಬಗೆಯ ಹತಾಶತೆ ಸೇರಿಕೊಂಡಿತ್ತು. ಅವು ಇದೀಗ ಹೇಳಿದ ಮಾತಿನಿಂದ, ಮಾತಿನ ಧಾಟಿಯಿಂದ ಮೊದಲೇ ಹೈದರ್ ಇನ್ನಷ್ಟು ಹೆದರಿದರು. ಈ ಎಲ್ಲ ಜಂಜಾಟದಲ್ಲಿ ತನ್ನನ್ನು ಸಿಕ್ಕಿಸಿಕೊಳ್ಳುವ ಮನಸ್ಸಾಗದೇ, ಅತ್ಯಂತ ಜಾಗರೂಕತೆಯಿಂದ, "ಏನೋಪ್ಪಾ, ನನಗಿದರ ಅರ್ಥವಾಗುವದಿಲ್ಲ. ನೀವು ನನ್ನೊಡನೆ ಮಾತನಾಡಿದ್ದು ಮಾತ್ರ ದಯಮಾಡಿ ಯಾರಿಗೂ ಹೇಳಬೇಡಿ. ಇದಾವುದರಲ್ಲೂ ಸಿಕ್ಕಿಬೀಳುವ ಮನಸ್ಸಿಲ್ಲದ್ದರಿಂದಲೇ ಇಂದಿನಿಂದಲೇ ರಜೆ ಪಡೆದಿದ್ದೇನೆ. ನನ್ನನ್ನು ತಪ್ಪು ತಿಳಿಯಬೇಡಿ. ದೊಡ್ಡ ದೊಡ್ಡ ಜಾಗದಲ್ಲಿದ್ದವರೇ ತಮ್ಮ ತಮ್ಮ, ಚಮಡಾ ಕಾಪಾಡಿಕೊಳ್ಳುವ ಉದ್ಯೋಗದಲ್ಲಿ ತೊಡಗಿರುವಾಗ ನಮ್ಮಂಥ ಬಡಪಾಯಿಗಳಿಗೇಕಪ್ಪಾ ಈ ಇಲ್ಲದ ಉಪದ್ವ್ಯಾಪ....DMD ಇಂದೇ ಮುಂಬಯಿಗೆ ಹೋಗುವವರಿದ್ದರು. ಅವರು ಹೋಗುವ ಕಾರ್ಯಕ್ರಮವಂತೂ ನಾಲ್ಕು ದಿನಗಳ ಮೊದಲೇ ನಿಶ್ಚಿತವಾಗಿತ್ತು. ನಿಮಗೆ ಯಾಕೆ ಮೊದಲೇ ತಿಳಿಸಲಿಲ್ಲವೋ. ಪಾಪ, ಈಗ ಅವರು ಬರುವವರಿಗೂ ಕಾಯಬೇಕಾಯಿತಲ್ಲ... ಖಂಬಾಟಾಗೆ ಏಕೆ ಫೋನ್ ಮಾಡಿ ನೋಡುವದಿಲ್ಲ... ಆ ಅರೆ-ಮಳ್ಳು ನಿಮಗೆ ಹೇಳಲು ಮರೆತಿರಬೇಕು. ನಿಮಗೀಗ ಪ್ರವಾಸದ ದಣಿವಿರಬೇಕು... ಈಗ ತುಸು ವಿಶ್ರಮಿಸಿರಿ. ಸುಳ್ಳೇ ಚಿಂತೆ ಮಾಡಬೇಡಿ. ಯಾರೋ ಎಲ್ಲೊ ತಪ್ಪಿದ್ದಾರೆ, ಅಷ್ಟೇ. ಗುಡ್ ನೈಟ್," ಎಂದು ಟೆಲಿಫೋನ್ ಕೆಳಗಿಟ್ಟು ಬಿಟ್ಟ ಹೈದರ್ ಎಂದಿನವನಾಗಿರಲಿಲ್ಲ. ಸ್ವತಃ ಅತ್ಯಂತ ನಿರುಪದ್ರವಿಯಾದ ಈ ವ್ಯಕ್ತಿ ತನ್ನ ಹತ್ತಿರ ಮಾತನಾಡತ್ತಿರುವಾಗಲೇ ಯಾಕೋ ಹೆದರಿಕೊಂಡಿದ್ದ. ತನ್ನೊಡನೆ ಮಾತನಾಡುವದಕ್ಕೂ ಹೆದರಬೇಕೆಂದರೆ! ಆದರೂ ಒಂದರಲ್ಲಿ ಸಮಾಧಾನ: ತನ್ನನ್ನು ಸಸ್ಪೆಂಡ್ ಮಾಡಿದ ಸುದ್ದಿ ಇನ್ನೂ ಇಲ್ಲಿ ಯಾರಿಗೂ ತಲುಪಿದಂತೆ ತೋರಲಿಲ್ಲ. ಅಥವಾ...ಹೈದರ್ ಗೊತ್ತಿದ್ದೂ ಗೊತ್ತಿಲ್ಲದವನಂತೆ ನಟಿಸುತ್ತಿರಬಹುದೆ?... ದೇವರೇ, ಈ ಸಂಶಯಕ್ಕೆ ಕೊನೆಯೆಲ್ಲಿ?...

ಖಂಬಾಟಾಗೆ ಫೋನ್ ಮಾಡಲೇ ಬಿಡಲೇ ಎಂಬಂಥ ಸಂದಿಗ್ಧ ಮನಃಸ್ಥಿತಿಯಲ್ಲಿರುವಾಗಲೇ ಕೃಷ ಬ್ರೆಡ್ ಹಾಗೂ ಬಿಯರ್ ಬಾಟಲಿಗಳೊಂದಿಗೆ ಬಂದ. ತನ್ನೆಲ್ಲ ನೋವನ್ನು, ಆತಂಕವನ್ನು ಬಿಯರಿನಲ್ಲಿ ಮುಳುಗಿಸಿಬಿಡಬೇಕು ಎಂಬ ಆತುರದಲ್ಲಿ,-ಥೆಂಕ್ಸ್ ಕೃಷ್ಣ. ಒಂದು ಬಾಟಲಿ ತೆರೆ ಹಾಗೂ ಒಂದು ಗ್ಲಾಸು

ತಗೊಂಡು ಬಾ, ಎಂದ. ಈ ಫಿರೋಜ್, ಖಂಬಾಟಾ, ರಾಮಕೃಷ್ಣ, ಈ ನಿರುಪದ್ರವಿ ಅಂಜುಬುರುಕ ಹೈದರ್ ಎಲ್ಲ ಎಲ್ಲ ಹೋಗಲೀ ಹಳ್ಳ ಹಿಡಿದು...

ಬಿಯರಿನ ಅಮಲು ಮೆಲ್ಲಕ್ಕೆ ತಲೆಗೇರುತ್ತಿದ್ದಾಗ ಕಣ್ಣ ಮುಂದೆ ನಿಂತದ್ದು ಮೇರಿಯ ಮಾದಕವಾದ ಮೈಕಟ್ಟು. ಡಾಯನಾಳ ಸುಂದರ ಮೋರೆ. ಏಕೋ, ಬೇಡಬೇಡವೆಂದರೂ ಮೇರಿಗೆ ತಾನು ಹತ್ತಿರವಾಗುತ್ತಿದ್ದೇನೆ ಎಂದನ್ನಿಸಿದಾಗ ಅಸಾಧ್ಯವಾದ ಸುಖ! ಆ ಸುಖದ ಮತ್ತಿನಲ್ಲಿರುವಾಗಲೇ ಇನ್ನೊಂದು ಬಾಟಲಿಯನ್ನು ತೆರೆಯಲು ಹೇಳಿದ. ಒಂದೇ ಪಟ್ಟಿಗೆ ಎರಡು ಬಾಟಲಿ ಬಿಯರನ್ನು ನಾಗಪ್ಪ ಹಿಂದೆಂದೂ ಹೀಗೆ ಒಬ್ಬನೇ ಕೂತು ಕುಡಿದಿರಲಿಲ್ಲ. ವಿಮಾನ-ನಿಲ್ದಾಣದಲ್ಲಿ ರಿಕ್ಷಾ ಹತ್ತುವಾಗ ಇಂದು ಮತ್ತೆ ಬಾರ್ಬಿಚ್ಯುರೇಟ್ ಗುಳಿಗೆಗಳನ್ನು ನುಂಗಬೇಕಾಗುತ್ತದೆಯೇನೋ ಎಂದು ಅನ್ನಿಸಿದ್ದರ ನೆನಪು ಬಂದು, ನಿದ್ದೆಗುಳಿಗೆಗಳಿಗಿಂತ ಇದು ಲೇಸು ಎಂದುಕೊಳ್ಳುತ್ತ ಎರಡನೇ ಬಾಟಲಿಯಿಂದ ಬಿಯರನ್ನು ಗ್ಲಾಸಿನಲ್ಲಿ ಸುರಿಯಹತ್ತಿದ: ಕಣ್ಣಮುಂದೆ ನಗುತ್ತ ನಿಂತವರು ವೋಮು ಹಾಗೂ ಸರಸ್ವತಿ. ಅವರು ಹಾಗೆ ನಕ್ಕದ್ದು ಇದೇ ಮೊದಲು ಅನ್ನಿಸಿ ತಾನೂ ಮುಗುಳು ನಕ್ಕ.

## ಅಧ್ಯಾಯ ಮೂರು

ಬೆಳಿಗ್ಗೆ ಎಚ್ಚರವಾದಾಗ ನಾಗಪ್ಪನಿಗೆ ವಿಚಿತ್ರಭಾವನೆ. ಎಷ್ಟು ಗಂಟೆಯಾಗಿದೆ ಎಂಬುದು ಕೂಡ ಕೂಡಲೇ ತಿಳಿಯಲಿಲ್ಲ. ಕೋಣೆಯ ದಪ್ಪವಾದ ಕರ್ಟನ್ಸ್‌ಗಳೊಳಗಿಂದ ಹೊರಗಿನ ಬೆಳಕ ಬರುವದು ಕಷ್ಟವಾಗಿತ್ತು. ಆದರೂ ಹೊರಗೆ ಆಗಲೇ ಬಿಸಿಲೇರಿದೆ; ತಾನೀಗ ಏಳಬೇಕು ಎಂದುಕೊಂಡರೂ ಏಳುವುದಕ್ಕೆ ಮನಸ್ಸೇ ಆಗುತ್ತಿರಲಿಲ್ಲ. ನಿನ್ನೆ ರಾತ್ರಿ ಬಿಯರ್ ಕುಡಿದದ್ದಕ್ಕೋ ಅಥವಾ ಏನು ಮಾಡಲಿ ಎಂಬುದರ ಬಗ್ಗೆ ಯಾವ ನಿರ್ಧಾರವನ್ನೂ ಮಾಡಲಾಗದ್ದಕ್ಕೋ ಮನಸ್ಸು ಗೊಂದಲಕ್ಕೊಳಗಾದ ಅನ್ನಿಸಿಕೆ: ಯಾರ ದೆಸೆಯಿಂದ ತಾನು ಈ ಎಲ್ಲ ಯಾತನೆಯನ್ನು ಅನುಭವಿಸುತ್ತಿದ್ದೆನೋ ಅಂತಹ ಫಿರೋಜನನ್ನೇ ತಾನು ಈವರೆಗೂ ಕಂಡಿರಲಿಲ್ಲ—ಈ ಹೊಸ ಘಟನೆಗಳು ನಡೆಯಹತ್ತಿದ ಮೇಲೆ. ಶ್ರೀನಿವಾಸನೂ ಈ ಪಿತೂರಿಯಲ್ಲಿ ಸೇರಿಕೊಂಡಿದ್ದಾನೆ ಎಂಬುದರ ಬಗ್ಗೆಯೂ ಸ್ಪಷ್ಟವಾದ ಪುರಾವೆಗಳಿಲ್ಲ. ಹಾಗಾದರೆ... ತನ್ನನ್ನು ಶಿಕಾರಿಯಾಡುತ್ತಿದ್ದದ್ದು ತನ್ನ ಮನಸ್ಸೇ ಅಲ್ಲ ತಾನೇ? ಅಪ್ಪ ತನ್ನನ್ನು, ತಂಗಿಯನ್ನು ಕೊಂದು ಕೊನೆಗೆ ತನ್ನನ್ನೇ ಕೊನೆಗಾಣಿಸುವ ಸಂಚಿನ ಅಂಗವಾಗಿದ್ದ ಮಗು ತಾನು ಎಂಬ ಗುಮಾನಿಯ ಮೇಲೆ ಬೆಳೆದ ತನ್ನ ಮನೋಗಂಡ ಈಗ ಒಂದು ದುರ್ಬಲ ಕ್ಷಣದಲ್ಲಿ ತನ್ನ ನಿಜಸ್ವರೂಪವನ್ನು ಪ್ರಕಟಿಸಹತ್ತಿದೆಯೆ?...ಕಂಪನಿಯ 'ಆರ್ ಎಂಡ್ ಡೀ' (ರಿಸರ್ಚ್ ಆಂಡ್ ಡೆವಲಪ್‌ಮೆಂಟ್) ಖಾತೆಯನ್ನು ಇಂದಿನ ಊರ್ಜಿತಾವಸ್ಥೆಗೆ ತರುವದರಲ್ಲಿ ತಾನು ಬಹು ದೊಡ್ಡ ಭಾಗವಹಿಸಿದ್ದೇನೆ ಎಂಬ ಅನ್ನಿಸಿಕೆ ಬರಿಯ ಅಹಂಕಾರದಲ್ಲಿ ಹುಟ್ಟಿದ್ದೇ?

ದುರ್ದೈವದ ಸಂಗತಿಯೆಂದರೆ: ಕಂಪನಿಯ ಬಗ್ಗೆ ತಾನು ಮಾಡಿದ್ದರ ಸಂಪೂರ್ಣ ಲಾಭವನ್ನು ಪಡೆದವರು ಬೇರೆಯವರೇ ಆಗಿದ್ದಾರೆ ಎಂಬುದರ ಅರಿವು ನಾಗಪ್ಪನ ತೀರ ಸರಳ ಮನಸ್ಸಿಗೆ ತಟ್ಟುವಂತಹದಲ್ಲ. ದುಡಿಮೆಯ ಕ್ಷೇತ್ರದಲ್ಲಿಯ ಅವನ ಆಸೆ ಅಪೇಕ್ಷೆಗಳೇ ಬೇರೆಯಾಗಿವೆ. ತಾನು ಮೆಚ್ಚಿಕೊಂಡ, ತನ್ನ ಆಯ್ಕೆಯ ಕ್ಷೇತ್ರವಾದ 'ಆರ್ ಎಂಡ್ ಡೀ'ಯಲ್ಲಿ ಅತ್ಯುತ್ತಮವಾದದ್ದನ್ನು ಸಾಧಿಸುವದು; ಸಾಧನೆಗೆ ತಕ್ಕ ಮನ್ನಣೆಯನ್ನು ಪಡೆಯುವದು. ಕಂಪನಿಯ

ಸ್ಥಾನಮಾನಗಳ ಪಾವಟಿಗೆಗಳನ್ನು ಮೇಲೇರಿ ಹೋಗಬೇಕು ಎನ್ನುವಂತಹ ಮಹತ್ವಾಕಾಂಕ್ಷೆ ನಾಗಪ್ಪನಿಗಿಲ್ಲ. ಹಾಗೆ ನೋಡಿದಲ್ಲಿ ಮಹತ್ವಾಕಾಂಕ್ಷೆ ಅವನ ಸ್ವಭಾವ-ಶಿಲ್ಪದಲ್ಲೇ ಇಲ್ಲವಾಗಿತ್ತು. ಈ ಮಹತ್ವಾಕಾಂಕ್ಷೆಯ ಅಭಾವವೇ ಒಂದು ಅರ್ಥದಲ್ಲಿ ಅವನೆ ಸದ್ಯ ಸಿಲುಕಿಕೊಂಡ ಸನ್ನಿವೇಶಕ್ಕೆ ಕಾರಣವಾಗಿತ್ತೆನ್ನಬಹುದು. ಆರ್ ಎಂಡ್ ಡೀ ಬಿಟ್ಟರೆ ನಾಗಪ್ಪ ತುಂಬ ತನ್ಮಯತೆಯಿಂದ ತೊಡಗುತ್ತಿದ್ದದ್ದು ಸಾಹಿತ್ಯದಲ್ಲಿ, ಸಾಲೆಯ ದಿನಗಳಿಂದಲೇ ಕವಿತೆ ಗೀಚುವ, ಕತೆ ಬರೆಯುವ ಹುಚ್ಚುಹವ್ಯಾಸ. ಸಣ್ಣಕತೆಯ ಕ್ಷೇತ್ರದಲ್ಲಿ ಹೆಸರನ್ನು ಗಳಿಸುವ ಪ್ರತಿಭೆಯಿದ್ದೂ ಹೆಸರು ಗಳಿಸುವದರ ಬಗೆಗೇ ನಿರಾಸಕ್ತ. ಸೃಷ್ಟಿಶೀಲತೆಯ ಸರ್ವಸ್ವವನ್ನೂ ಧಾರೆಯೆರೆದು ಬರೆದಿದ್ದೇನೆ ಎಂದನ್ನಿಸಿದ ಕತೆಗಳ ಸಂಗ್ರಹಕ್ಕೆ, ಸಾಹಿತ್ಯದಲ್ಲಿ ಈಗಾಗಲೇ ದೊಡ್ಡ ಕೀರ್ತಿಯ ಸ್ಥಾನಗಳಿಸಿದ, ವಯಸ್ಸಿನಲ್ಲಿ ತನಗಿಂತ ಚಿಕ್ಕವನಾದ ಗೆಳೆಯನೊಬ್ಬನಿಗೆ ಮುನ್ನುಡಿಯನ್ನು ಬರೆದುಕೊಡುವಂತೆ ಕೇಳಿಕೊಂಡಿದ್ದ. ತಾವಿಬ್ಬರೂ ಬ್ರಾಹ್ಮಣರಾದ್ದರಿಂದ ತಾನು ಮುನ್ನುಡಿ ಬರೆಯುವುದರಿಂದ ನಿನಗೆ ಹಾನಿಯೇ ಆದೀತೇ ಹೊರತು ಯಾವುದೇ ರೀತಿಯ ಸಹಾಯ ಆಗಲಾರದು. ಮೇಲಾಗಿ ಸಣ್ಣಕತೆಯ ಕ್ಷೇತ್ರದಲ್ಲಿ ಈಗಾಗಲೇ ಮಾನದ ಸ್ಥಾನ ಗಳಿಸಿದ ನಿನ್ನ ಕತೆಗಳಿಗೆ ಮುನ್ನುಡಿಯಾದರೂ ಯಾಕೆ? ಎಂಬಂತಹ ಪತ್ರ ಬಂದಾಗ ಅದಕ್ಕೆ ಯಾವ ರೀತಿಯಿಂದ ಪ್ರತಿಕ್ರಿಯಿಸಬೇಕೆಂಬುದೇ ತಿಳಿಯದೆ ಸುಮ್ಮನಾದ. ಮುಂದೆ ಕಥಾ ಸಂಗ್ರಹ ಪ್ರಕಟವಾದ ಮೇಲೆ ಬಂದ ಪ್ರತಿಕ್ರಿಯೆಯಿಂದಂತೂ ದಂಗುಬಡೆದ. ಕತೆಗಳಿಗಿಂತ ಅವುಗಳ ಹಿಂದೆ ಇವರು ಕಂಡುಹಿಡಿದ ಬ್ರಾಹ್ಮಣ-ಪ್ರಜ್ಞೆಯೇ ಚರ್ಚೆಯ ವಿಷಯವಾಯಿತು. ಇಷ್ಟು ದಿನ, ತಾನು ತನ್ನ ಗೆಳೆಯರೆಂದು ತಿಳಿದವರೇ ಈಗ ಈ ವಿಮರ್ಶೆಯ ನೆಪದಲ್ಲಿ ಪ್ರಕಟಿಸಿದ ಕ್ರೌರ್ಯದಿಂದ ನಾಗಪ್ಪ ದಿಗ್ಭ್ರಮೆಗೊಂಡ. ಇಂಥವರ ಸಾಹಿತ್ಯವನ್ನು ಸುಟ್ಟುಹಾಕಬೇಕು ಎನ್ನುವಷ್ಟರ ಮಟ್ಟಿಗೆ ಈ ಕ್ರೌರ್ಯ ವಿಕೋಪಕ್ಕೆ ಹೋದಾಗ ಕತೆ ಬರೆಯುವ ಹುರುಪನ್ನೇ ಕಳಕೊಂಡನೇ ಹೊರತು ಈ ಕ್ರೌರ್ಯವನ್ನು ಪ್ರತಿಭಟಿಸುವ ಗೋಜಿಗೆ ಹೋಗಲಿಲ್ಲ. ಸದ್ಯ, ಆಗೀಗ ಬರೆಯದೇ ಇರುವದು ಅಸಾಧ್ಯವಾದಾಗ ಕವಿತೆ ಗೀಚುತ್ತಾನೆ; ಕತೆ ಬರೆಯುತ್ತಾನೆ. ಆದರೆ ಪ್ರಕಟಣೆಗೆ ಕಳಿಸುವುದನ್ನು ಬಿಟ್ಟುಕೊಟ್ಟಿದ್ದಾನೆ. ಯಾಕಾದರೂ ಪ್ರಕಟಿಸಬೇಕು ಎಂಬ ಪ್ರಶ್ನೆಗೆ ವಿವೇಕ ಪೂರ್ಣವಾದ ಉತ್ತರ ಕಂಡುಕೊಂಡಿಲ್ಲವಾದರೂ ಬರೆಯುವಾಗ, ಬರೆಯುವ ಅನುಭವ, ಸೃಷ್ಟಿಸುವ ಅನುಭವ ಕೊಡುವ ಆನಂದವನ್ನು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವದು,

ಅವರು ಮೆಚ್ಚಿಕೆ ವ್ಯಕ್ತಪಡಿಸಿದಾಗ ಸುಖಪಡುವದು ಮಾನವ ಸಹಜವಾದದ್ದೇನೋ ಎಂದೆನ್ನಿಸಿದೆ. ಒಮ್ಮೊಮ್ಮೆ, ತಾನು ಅನುಭವಿಸುತ್ತಿದ್ದ ಈ ಯಾತನೆಯನ್ನು ಸಾಹಿತ್ಯದಲ್ಲಿ ರೂಪಾಂತರಗೊಳಿಸುವ ಶಕ್ಯತೆಯಿದ್ದರೆ—ಅಂದರೆ ಸಾಹಿತ್ಯವಾಗಿ ಇನ್ನೊಬ್ಬರಿಗೆ ಮುಟ್ಟುವ ಶಕ್ಯತೆ ಇದ್ದರೆ ಇದನ್ನೆಲ್ಲ ಇದಿರಿಸುವ ತನ್ನ ಧೈರ್ಯ ಹೆಚ್ಚಾಗುತ್ತಿತ್ತೇನೋ ಎಂದನ್ನಿಸಿದಾಗ ತನ್ನಷ್ಟಕ್ಕೇ ನಗುತ್ತಾನೆ; ಬರಿಯೆ ನನ್ನ ಅಪ್ಪ-ಅಮ ಜಾತಿಯೇ ನನ್ನ ಸೃಷ್ಟಿಶೀಲತೆಗೆ ಮಾರಕವಾಗುತ್ತಿದ್ದರೆ. ಬೇರೆಯೇ ಒಂದು ಕಾವ್ಯನಾಮದಿಂದ ಬರೆದರೆ ಹೇಗೆ? ಆದರೆ ಬಿಟ್ಟಾರೆಯೇ? ಜಗತ್ತಿನಲ್ಲಿಯ ಎಲ್ಲ ಕಾಳಜಿಗಳಿಗೆ, ಜವಾಬ್ದಾರಿಗಳಿಗೆ ಕಂತ್ರಾಟು ಹಿಡಿದ ನಮ್ಮ ವಿಮರ್ಶಕರು ಈ ಕಾವ್ಯನಾಮದ ಹಿಂದಿನ ಗುಟ್ಟನ್ನು ಶೋಧಿಸದೇ ಸುಮ್ಮಗುಳಿದಾರೆಯೇ? ಇವರಲ್ಲನೇಕರು ಸ್ವತಃ ಕವಿತೆ, ಕತೆ ಬರೆಯುವವರೇ. ಇಷ್ಟೇ, ಊರಿಗೇ ಬೆಂಕಿ ಬಿದ್ದಾಗ ಗುಲಾಬಿ ಗಿಡದ ಮೇಲೆ, ಚಂದ್ರೋದಯದ ಮೇಲೆ, ಇವರು ಕವಿತೆ ಬರೆಯುವದಿಲ್ಲ, ದೇವರಾಣೆಗೂ. ಬೆಂಕಿಗೇ ನೇರವಾಗಿ ಪ್ರತಿಕ್ರಿಯಿಸುತ್ತಾರೆ—ಶಬ್ದಗಳಲ್ಲಿ. ಬೆಂಕಿಯ ಮೇಲೆ ಕವಿತೆ ಬರೆಯುತ್ತಾರೆ. ಅಂತೂ ಊರಿಗೇ ಬೆಂಕಿಬಿದ್ದಾಗ ಕವಿತೆ ಬರೆಯುತ್ತಾರೆ ಈ ನನ್ನ ಶೂರಮಕ್ಕಳು. ನನ್ನ ಹೊಟ್ಟೆಕಿಚ್ಚಿಗೆ ಕಾರಣವಾಗುತ್ತಾರೆ...ಈ ಎಲ್ಲ ಶೂರ ಶಿಕಾರಿಯವರಿಂದ ನನಗೆ ಸಲ್ಲಬೇಕಾದ ನ್ಯಾಯ ದೊರಕೀತೆ? ಇದು 'ಅನ್ಯಾಯ' ಎಂಬ ಪ್ರಜ್ಞೆಯೇ ಈ ಎಲ್ಲ ನೋವಿಗೆ ಮೂಲ. ಪ್ರಜ್ಞೆಯೇ ಇಲ್ಲದಲ್ಲಿ ನೋವೆಲ್ಲಿ? ಅದ್ಭುತ ಸಂಗತಿಯೆಂದರೆ, ಪ್ರಜ್ಞೆ ಒಮ್ಮೆ ಹುಟ್ಟಿದ ಮೇಲೆ ಅದನ್ನು ಕಳೆದುಕೊಳ್ಳುವದು, ಇಲ್ಲವಾಗಿಸುವದು ಕಷ್ಟ. ಆದರೂ ಬರೆಯಬೇಕು. ಈ ಶ್ರೀನಿವಾಸರಿಂದ, ಈ ಫಿರೋಜರಿಂದ ನಾನು ಅನುಭವಿಸುತ್ತಿದ್ದ ಎಲ್ಲ ನೋವಿಗೆ ಆಕಾರ ಕೊಡಬೇಕು; ಮಾನವೀಯ ಯಾತನೆಗೆ ಮಿಡುಕಾಡಬಲ್ಲ ಯಾವ ಅಂತಃಕರಣಕ್ಕೂ ಅರ್ಥ ಪೂರ್ಣವಾಗುವಂತೆ ಬರೆಯಬೇಕು. ನನ್ನ ಹೆಸರಿನಲ್ಲೇ ಪ್ರಕಟಿಸಬೇಕು; ಒಂದು ವಿಶಿಷ್ಟ ಮೂಡಿನಲ್ಲಿ ಹುಟ್ಟಿದ ಈ ಧೈರ್ಯವನ್ನು ಸ್ಥಾಯಿಯಾಗಿಸುವಂತೆ ದೃಢಪಡಿಸುತ್ತಾನೆ. ಇದೀಗ ಗೆಲ್ಲುತ್ತಾನೆ. ಮರುಗಳಿಗೆ ಸೋಲುತ್ತಾನೆ. ಇದೀಗ ಖುಶಿಯಿಂದ ಉಬ್ಬುತ್ತಾನೆ. ಮರುಗಳಿಗೆ ಕುಗ್ಗುತ್ತಾನೆ. ತನ್ನ ವ್ಯಕ್ತಿತ್ವದಲ್ಲೇ ಒಂದು ಮೂಲಭೂತವಾದ ಬದಲು ಒದಗಿಬರದೇ ಈ ಹೊಯ್ದಾಟ ನಿಲ್ಲದು ಎಂಬುದರ ಅರಿವು ನಾಗಪ್ಪನಿಗಿದೆ. ಯಾರಿಗೆ ಗೊತ್ತು; ಸದ್ಯ ತಾನು ಅನುಭವಿಸುತ್ತಿದ್ದುದರಲ್ಲೇ ಇಂತಹ ಬದಲಿಗೆ ಪ್ರಚಂಡ ಪ್ರಚೋದನೆಯಾಗಬಲ್ಲಂತಹದೇನಾದರೂ ಅಡಗಿರಬಹುದೆಂಬ ಅಸ್ಪಷ್ಟವಾದ

ಭರವಸೆಯಿಂದಲೇ ಆಗೀಗ ಪುಲಕಿತನಾಗುತ್ತಾನೆ. ಇಂತಹ ಬದಲು ಒಮ್ಮೊಮ್ಮೆ ಉದ್ದವಾಗಿಬಿಟ್ಟ, ಗಡ್ಡಮೀಸೆಗಳಾಗಿ, ಇಲ್ಲ ಯೂಲ್‌ಬ್ರೈನರ್ ತರಹ ತಕತಕನೆ ಹೊಳೆಯುವಂತೆ ಬೋಳಿಸಿಕೊಂಡ ತಲೆಯಾಗಿ ದೇಹಧಾರಣೆ ಮಾಡಿದಾಗ ತನ್ನಷ್ಟಕ್ಕೆ ನಗುತ್ತಾನೆ...

ಈಗಲೂ ಹಾಸಿಗೆಯಲ್ಲಿ ಬಿದ್ದಲ್ಲೇ ಬಂದ ಇಂತಹ ಒಂದು ವಿಚಾರಕ್ಕೆ ತನ್ನಷ್ಟಕ್ಕೇ ನಗುತ್ತ ಇನ್ನೂ ನಿದ್ದೆಯೋ ಬಿಯರಿನ ಅಮಲೋ ಸಂಪೂರ್ಣವಾಗಿ ಬಿಟ್ಟಿರದ ಕಣ್ಣುಗಳನ್ನು ಉಜ್ಜುತ್ತ, ತಲೆಬದಿಯ ಗೋಡೆಯ ಮೇಲಿನ ಸ್ವಿಚ್‌ಬೋರ್ಡ್ ಮೇಲಿನ ಸ್ವಿಚ್ ಒಂದನ್ನೊತ್ತಿ ಕರೆ-ಗಂಟೆ ಬಾರಿಸಿದ. ಕೆಲ ಹೊತ್ತಿನಲ್ಲಿ ಕೃಷ್ಣ ಕದ ದೂಡಿ ಒಳಗೆ ಬಂದಾಗ, ಗಂಟೆಯೆಷ್ಟಾಯಿತು? ಒಂದು ಕಪ್ ಚಹ ತರುತ್ತೀಯಾ ಎಂದು ಕೇಳಿದ. “ಗಂಟೆ ಒಂಬತ್ತರ ಮೇಲಾಗಿರಬೇಕು ಸರ್! ಗಾಢನಿದ್ದೆ ಹತ್ತಿರಬೇಕು. ಬೆಳಿಗ್ಗೇ ಮುಂಬಯಿಂದ ಫೋನ್ ಬಂದಿತ್ತು. ಕದವನ್ನು ಎಷ್ಟು ಸರತಿ ಬಡೆದರೂ ನಿಮಗೆ ಎಚ್ಚರವಾಗಲಿಲ್ಲ. ಕರೆದವರು ತಮ್ಮ ಹೆಸರನ್ನೂ ಹೇಳಲಿಲ್ಲ. ಇನ್ನೊಮ್ಮೆ ಫೋನ್ ಮಾಡುತ್ತೀರಾ ಎಂದು ಕೇಳಿದಾಗ, ನಿನಗೇಕೆ ಇಲ್ಲದ ಉಪದ್ವ್ಯಾಪ. ಈಗ ಅನುವು ದೊರೆತಾಗಲೇ ಗಡದ್ದಾಗಿ ನಿದ್ದೆಮಾಡಲು ಹೇಳು ಎಂದು ನನ್ನನ್ನೇ ಗದರಿಸಿದರು ಸರ್! ಅವರಿಗೆ ಹಿಂದಿ ಸರಿಯಾಗಿ ಬರುವದಿಲ್ಲವೇನೋ. ಆದರೆ ಸಿಟ್ಟು ಮಾತ್ರ...” ತನ್ನ ವರದಿ ಬೇಕಾದದ್ದಕ್ಕಿಂತ ಉದ್ದವಾಯಿತೇನೋ ಎಂಬ ಅಳುಕಿನಿಂದೆಂಬಂತೆ, “ಕ್ಷಮಿಸಿ ಸರ. ಚಹವನ್ನು ಕೂಡಲೇ ತರುತ್ತೇನೆ,” ಎಂದು ಅಲ್ಲಿಂದ ಹೊರಟ. ನಾಗಪ್ಪ ಈ ವರದಿಯಿಂದ ವಿಚಲನಾಗಲಿಲ್ಲ. ಬದಲು, ತಾನು ಇಷ್ಟು ದಿನ ತುಂಬ ಆತಂಕದಿಂದ ದಾರಿಕಾಯುತ್ತಿದ್ದ ಬದಲು ಈಗಾಗಲೇ ತನ್ನೊಳಗೆ ಆಗಹತ್ತಿದೆ ಎಂಬ ಅನ್ನಿಸಿಕೆಯಿಂದ ಬಹಳ ಖುಶಿಪಟ್ಟವನ ಹಾಗೆ—ಭಂಭೋದ್! ಫಿರೋಜ್ ಅಥವಾ ಅವನ ಅರೆ ಮಳ್ಳು ಚೇಲಾ ಖಂಬಾಟಾ ಫೋನ್ ಮಾಡಿರಬೇಕು ಎಂದುಕೊಂಡ. ಮಾಡಲೀ ತನಗೇನಂತೆ. ತನಗೀಗ ಇವರಾರ ಬಿಸಾತೂ ಇಲ್ಲ! ಇಲ್ಲ! ಇಲ್ಲ! ಇಲ್ಲ! ಪದೇ ಪದೇ ಹಾಗೆ ಹೇಳಿಕೊಳ್ಳುವುದರಿಂದಲೇ, ಒಳಗೆ ಕುದುರಹತ್ತಿದ ಧೈರ್ಯ ಗಟ್ಟಿಯಾದೀತು ಎಂಬ ಭರವಸೆಯಿಂದೆಂಬಂತೆ ಅದನ್ನು ಮಂತ್ರದಂತೆ ಜಪಿಸಹತ್ತಿದ. ನಿಜವಾಗಿ ನೋಡಿದಲ್ಲಿ ಈ ಶಾಬ್ದಿಕ ಮಂತ್ರದ ಗರಜು ನಾಗಪ್ಪನಿಗಿರಲೇ ಇಲ್ಲ; ನಿಜಕ್ಕೂ, ಮನಸ್ಸಿನ ಆಳದಲ್ಲಿ ಅರಿವಿಗೆ ಬರಲು

ಶಕ್ಯವಿಲ್ಲದ ಒಂದು ಕೇಂದ್ರ ಇಷ್ಟು ದಿನ ಗಟ್ಟಿಯಾಗಿ ಬಿಗಿ ಹಿಡಿದ ಬಾಯನ್ನು ಈಗ ಅತಿ ಸಹಜವಾದ, ಸುಲಭವಾದ ರೀತಿಯಲ್ಲಿ ತೆರೆದಿತ್ತು; ಅನ್ಯಾಯವನ್ನು ಪ್ರತಿಭಟಿಸುವ ಧೈರ್ಯ ತಾನೇ ತಾನಾಗಿ ತಲೆಯೆತ್ತಿ ನಿಲ್ಲುವ ಹವಣಿಕೆಯಲ್ಲಿತ್ತು; ಹೌದು, ನನಗೂ ಈ ಕಂಪನಿಗೂ ಇರುವ ಸಂಬಂಧ ಕೂಡ ಇಲ್ಲಿಗೆ ಕಡಿಯಿತು. ಈ ಎಲ್ಲ ಸುಳ್ಳು ಸಂಬಂಧಗಳನ್ನು, ಮನುಷ್ಯನನ್ನೇ ಸುಳ್ಳುಮಾಡುವ ಸಂಬಂಧಗಳನ್ನು ಕಡಿಯುತ್ತ ಹೋಗಬೇಕು ಅಂದರೇನೇ ನಿಜವಾದ, ನಿಸ್ಪೃಹವಾದ ಸಂಬಂಧಗಳು ಹುಟ್ಟಬಹುದೇನೋ. ಯಾವುದೇ ರೀತಿಯ ಸ್ವಾರ್ಥಕ್ಕೆ, ಹಿತಾಸಕ್ತಿಗಳ ರಕ್ಷಣೆಗೆ ಕಟ್ಟಿಬಿದ್ದಿರದ ಸಂಬಂಧಗಳು ಇದ್ದಲ್ಲಿ ಮಾತ್ರ ಮನುಷ್ಯನೇ ಮನುಷ್ಯನ ಹಿಂಸೆಗೆ ಕಾರಣವಾಗುವದು ತಪ್ಪಬಹುದೇನೋ... ತಿರುಗಿ. ಬೇರಿನವರೆಗೆ ಅಲ್ಲಾಡಿಸಿದ್ದನ್ನು ಕೂಡ ನಿರ್ಜೀವ ಶಬ್ದಗಳಲ್ಲಿ ಹಿಡಿಯಹೊರಟ ತನ್ನ ಹುಚ್ಚು ಹವ್ಯಾಸಕ್ಕೆ ತಾನೇ ಬೇಜಾರುಪಟ್ಟು ಹಾಸಿಗೆಯಿಂದ ಧಡಕ್ಕನೆ ಎದ್ದ.

ಎದ್ದವನೇ ಕಿಡಕಿಗೆ ಬಂದು, ಪರದೆಗಳನ್ನು ಬದಿಗೆ ಎಳೆದ. ಆಗಲೇ ಏರಿದ ಬಿಸಲಲ್ಲಿ ಮುಂದಿನ ಕಣಿವೆಯೆಲ್ಲ ಬೆಚ್ಚಗೆ ಬೆಳಗಿ ನಿಂತಿತ್ತು. ಎಷ್ಟು ಲಕ್ಷ ವರ್ಷಗಳ ಹಿಂದೆ ನೆಲದ ಹೊಟ್ಟೆಯೊಳಗಿಂದ ಸಿಡಿದೆದ್ದು ಬಂದ ಲಾವಾ ತಣ್ಣಗಾಗಿ ಹುಟ್ಟಿದ ಬಂಡೆಗಳೋ ಇವು! ಎಷ್ಟು ಸಾವಿರ ವರುಷಗಳಿಂದ ಹೀಗೆ ಗಾಳಿ, ಮಳೆ ಬಿಸಿಲುಗಳಿಗೆ ಮೈಯೊಡ್ಡಿ ನಿಂತಿವೆಯೋ! ಪ್ರಥಮ ಬಾರಿಯೇ ಈ ಬಂಡೆಗಳನ್ನು ತಾನು ನೋಡುತ್ತಿದ್ದೇನೆ ಎನ್ನುವ ಕುತೂಹಲದಿಂದ ಅವುಗಳನ್ನು ನೋಡುತ್ತ ನಿಂತ; ಮನುಷ್ಯ ತನ್ನ ಯಾತನೆಗಳ ವಿಚಾರದಲ್ಲೇ ತೊಡಗಿರದೇ ಹೊರಗೆ ಬಂದಾಗ ಈ ಹೊರಗಿನ ಸೃಷ್ಟಿ ಎಷ್ಟೊಂದು ಸುಂದರ! ನಾಗಪ್ಪ, ಆ ನಿರ್ಜೀವ ಮೂಕ ಬಂಡೆಗಳನ್ನೇ ನೋಡುತ್ತ ಎಷ್ಟು ಹೊತ್ತು ನಿಂತಿದ್ದನೋ. ತಿರುಗಿ ಕೋಣೆಯತ್ತ ಕಣ್ಣು ಹಾಯಿಸಿದಾಗ ಕೃಷ್ಣ, ಚಹದ ಟ್ರೇಯನ್ನು ಇಡುತ್ತ ತನ್ನ ಲಕ್ಷ್ಯ ಸೆಳೆದದ್ದು ಈಗ ನೆನಪಿಗೆ ಬಂದು ಕಿಟ್ಲಿಯನ್ನು ಮುಟ್ಟಿ ನೋಡಿದ. ಕೋಸಿಯ ಹೊದಿಕೆಯೊಳಗೂ ಅದು ತಣ್ಣಗಾಗಿತ್ತು. ಕೃಷ್ಣನಿಗೆ ಇನ್ನೊಂದು ಕಪ್ ಬಿಸಿಬಿಸಿ ಚಹ ತರಲಿಕ್ಕೆ ಹೇಳಿ ಹಾಸಿಗೆಯಲ್ಲಿ ಒರಗಿದ. ಗಂಟೆ ಹತ್ತನ್ನು ಸಮೀಪಿಸುತ್ತಿತ್ತು. ಆದರೂ. ಏಳಬೇಕೆಂಬ ಕಾತರವಿರಲಿಲ್ಲ. ತನ್ನ ಇಂದಿನ ನಿರ್ಧಾರ ಎಂದಿನಂತಹದಲ್ಲ ಎಂಬ ಸ್ಪಷ್ಟವಾದ ಅರಿವು ಮನಸ್ಸಿಗೆ ಸಂತೋಷ ಕೊಡುತ್ತಿತ್ತು. ಕಿಡಕಿಯೊಳಗಿಂದ ನೋಡಿದ ಗೋಲು ಗೋಲಾದ, ಬೋಳುಬೋಳಾದ ಬೃಹದಾಕಾರದ ಬಂಡೆಗಳಿಗೂ ತನ್ನ ಇದೀಗಿನ

ಸಮಾಧಾನ ತುಂಬಿದ ಮನೋಭಾವಕ್ಕೂ ಏನೋ ಸಂಬಂಧವಿದೆಯೆಂಬಂತೆ...ಬೇಡ. ಇಂತಹ ಯಾವ ಭಾವುಕತೆಯೂ ಬೇಡ. ಫಿರೋಜ್ ಮತ್ತೆ ಫೋನ್ ಮಾಡಿದರೆ ಹಾಳಾಗಿ ಹೋಗು ಬೋಳೀಮಗನೇ. ನಿನ್ನ ಈ ತನಿಖೆಗೂ ನನಗೂ ಯಾವ ಸಂಬಂಧವೂ ಇಲ್ಲ ಎಂದು ಹೇಳಿಬಿಡಬೇಕು ಎಂದುಕೊಂಡ. ಹಾಗೆ ಹೇಳಿಕೊಳ್ಳುವಾಗ ಎಂದಿನ ಹಾಗೆ ಅವುಡುಕಚ್ಚಲಿಲ್ಲ. ಶ್ವಾಸ ಬಿಗಿಹಿಡಿಯಲಿಲ್ಲ. ಕೃಷ್ಣ ಹೊಸತಾಗಿ ತಂದ ಚಹದ ಬಿಸಿ ಗುಟುಕನ್ನು ಸವಿಯುತ್ತಿರುವಾಗ ನಿನ್ನೆ ಪ್ಲೇನಿನಲ್ಲಿ ಡಾಯನಾಳ ಹತ್ತಿರ ಕೂತಾಗಿನ ಸಿಹಿ ಕ್ಷಣಗಳ ನೆನಪು; ಅವಳು ತನ್ನನ್ನು ಗುರುತಿಸಿದ ಬಗೆಯ ನೆನಪು; ತಾನು ಎದೆಗವಚಿ ಹಿಡಿದ ಗುಟ್ಟು ಗಟ್ಟಿಯಾದ ವಾಸ್ತವ ಜಗತ್ತಿನದೊ ಅಥವಾ ಬರಿಯೆ ತನ್ನ ಭ್ರಮೆಯಲ್ಲಿ ಹುಟ್ಟಿದ್ದೊ ಎನ್ನುವುದನ್ನು ತಾನು ತಿರುತಿರುಗಿ ಎದೆ ಮುಟ್ಟಿ ಖಾತ್ರಿಮಾಡಿಕೊಳ್ಳುತ್ತಿರಬೇಕು. ಆದರೆ ಅದು ಈಗ ಒಂದು ಚಟವಾಗಿಬಿಟ್ಟಿದೆ ಎನ್ನುವುದು ಲಕ್ಷ್ಯಕ್ಕೆ ಬಂದದ್ದು ಮಾತ್ರ ನಿನ್ನೆ ಡಾಯನಾ ಹೇಳಿದ ಮೇಲೆಯೇ. ಡಾಯನಾ ತಾನು ರಿಕ್ಷಾ ಹತ್ತುವಾಗ! ನೋಡಿದ್ದರ ನೆನಪು; ಅವಳೂ ಪಾರಸೀ. ಈ ಡ್ರೈವರ್ ಹಾಗೂ ಬಂದೂಕವಾಲರಿಗೆ ಸಂಬಂಧ ಇಲ್ಲ ತಾನೇ ಎಂದು ಅದೇ ಮೂಡಿದ ಶಂಕೆ-ಯಾವವೂ ಕಾಡುವ ಜಾತಿಯವಾಗಿರಲಿಲ್ಲ; ಡಾಯನಾಳನ್ನು ತಾನು ಯಾವುದೇ ರೀತಿಯಿಂದ ಉಪಯೋಗಿಸಿಕೊಳ್ಳುವುದಿರಲಿಲ್ಲವಲ್ಲ. ಮೇಲುಮೇಲಿನ ಮೆದುಳ ಭಾಗ ಪ್ರಸ್ತುತದ ವಿಚಾರದಲ್ಲಿ ತೊಡಗಿದಂತೆ ತೋರಿದರೂ ಆಳದಲ್ಲೆಲ್ಲೋ ಇನ್ನಾವುದನ್ನೋ ಕುರಿತು ಚಿಂತನೆ ನಡೆದಂತಿತ್ತು; ಹೊಟ್ಟೆಯ ಮಕ್ಕಳನ್ನೇ ಕೊನೆಗಾಣಿಸುವ ಭೀಕರ ಕೃತ್ಯಕ್ಕೆ ಅಪ್ಪನನ್ನು ದೂಡಿದ ಸನ್ನಿವೇಶವಾದರೂ ತಿಳದಿದ್ದರೆ...ಒಂದು ದಿನ ಹುಡುಕಿ ತೆಗೆಯಬೇಕು. ಇನ್ನುಮುಂದೆ ಬೇರುಗಳನ್ನು ಹುಡುಕುವಂತಹ, ತನ್ನ ಮುಟ್ಟಿಗೆ ಮಹತ್ವದ್ದೆಂದು ಅನ್ನಿಸುವ ಇಂತಹ ನಿಷ್ಪಾಪ-ಚಟುವಟಿಕೆಗಳಲ್ಲೆ ತನ್ನನ್ನು ತೊಡಗಿಸಿಕೊಳ್ಳಬೇಕು. ತನ್ನ ವ್ಯಕ್ತಿತ್ವದ ಇತಿಮಿತಿಗಳನ್ನು ಅರಿಯಬೇಕು. ಸ್ಪಷ್ಟವಾಗಿ ಒಪ್ಪಿಕೊಳ್ಳಬೇಕು...

ಆದಾಗ, ಟೆಲಿಫೋನ್ ಗಂಟೆ ಮುಂಬಯಿಯದಿರಬಹುದೇ ಎಂಬ ಅನುಮಾನದಿಂದ ಎದೆ ಡವಗುಟ್ಟಲಿಲ್ಲ. ಫಿರೋಜನೇ ಆದರೆ ಏನೇನು ಹೇಳಲಿ ಎಂಬುದರ ಬಗ್ಗೆ ರಿಸೀವರನ್ನು ಎತ್ತುವ ಮೊದಲೇ ವಿಚಾರಮಾಡಬೇಕು ಎನ್ನುವ ಆತಂಕ ಹುಟ್ಟಲಿಲ್ಲ. ಸನ್ನಿವೇಶ ಬೇಡುವ ಉತ್ತರವನ್ನು ಕೊಟ್ಟರಾಯಿತು ಎನ್ನುವ

ನಿರಂಬಳತೆಯಿಂದ ಕೃಷ್ಣ ಫೋನ್ ಯಾರದೆಂಬುದನ್ನು ಹೇಳುವ ಕ್ಷಣವನ್ನು ಕಾಯಹತ್ತಿದ. ನಾಗಪ್ಪನ ಅನುಮಾನ ನಿಜವಾಗಿತ್ತು. ಮುಂಬಯಿಯಿಂದ ಟ್ರಂಕ್‌ಕಾಲ್ ನಾಗಪ್ಪನಿಗೆ: ರಿಸೀವ್ಹರ್ ಕೈಗೆತ್ತಿಕೊಳ್ಳುವಾಗಿನ ತನ್ನ ಚಿತ್ತ-ಸ್ವಾಸ್ಥ್ಯಕ್ಕೆ ತಾನೇ ಆಶ್ಚರ್ಯಪಟ್ಟ. ಆ ಬದಿಯ ಗಂಡುದನಿ ನೋಶೀರ್ ಖಂಬಾಟಾನದಾಗಿತ್ತು. ಆದರೂ ಅದರ ಪರಿಚಯ ಸಿಗದವನ ಹಾಗೆ. "ಹಲ್ಲೋ ಫಿರೋಜ್, ನಿನ್ನ ದನಿ ಕೇಳಿ ಬಹಳ ಸುಖವಾಯಿತು." ಎಂದ- ಆ ಬದಿಯಿಂದ, ಇದು ಟ್ರಂಕ್‌ಕಾಲ್, ಆದಷ್ಟು ಬೇಗ ತನಗೆ ಕೊಡಬೇಕಾಗಿದ್ದ ಸಂದೇಶವನ್ನು ಕೊಟ್ಟು ಮುಗಿಸಬೇಕು ಎಂಬ ಆತುರ ವ್ಯಕ್ತಪಡಿಸಿದ ದನಿ- "ಹಲ್ಲೋ ಹಲ್ಲೋ, ನಾನು ನಾನೂ, ಫಿರೋಜ್ ಅಲ್ಲ-ನೋಶೀರ್ ಖಂಬಾಟಾ" ಎಂದಿತು. ನಾಗಪ್ಪ, ಅಷ್ಟೇ ಶಾಂತಚಿತ್ತನಾಗಿ, ಗಂಟೆಗಟ್ಟಲೆ ಮಾತನಾಡೋಣವಲ್ಲ. ಯಾರೂ ಮಾತನಾಡಲು ಸಿಗದೇ ಬೇಸರಬಂದುಬಿಟ್ಟಿತ್ತು ನೋಡು. ಯಾಕೆ ಇಷ್ಟೊಂದು ಅವಸರ ಎನ್ನುವ ಸಾವಧಾನದಿಂದ, "ಹೆಲ್ಲೋ ನೋಶೀರ್. ಇಲ್ಲಿ ಎಷ್ಟೊಂದು ಬೋರ್ ಆಗಿದ್ದೆನೆಂದು ಹೇಳಲೀ. ನಿನ್ನ ಸುಮಧುರ ಕಂಠನಾದ ಕೇಳಿದ್ದೇ ಬಹಳ ಸುಖವಾಯಿತು ನೋಡು; ಅಂದ ಹಾಗೆ, ಮರೆಯುವ ಮೊದಲೇ ನಿನಗೆ ಥೆಂಕ್ಸ್ ಕೊಟ್ಟುಬಿಡುತ್ತೇನೆ: ವಿಮಾನ-ನಿಲ್ದಾಣದಲ್ಲಿ ನನ್ನನ್ನು ಇದಿರುಗೊಳ್ಳಲು ಮಾಡಿದ ಏರ್ಪಾಡು; ಗೆಸ್ಟ್‌ಹೌಸಿನಲ್ಲಿ ಉಳಿಯುವ ವ್ಯವಸ್ಥೆ ಆಹಹ! ಏನೆಂದು ಹೊಗಳಲಿ, ನೋಶೀರ್. Only you could do it..."

"Hello, hello Nag, the matter is serious."

"Who is serious? What is wrong? Which hospital?"

"ಹೆಲ್ಲೋ ಹೆಲ್ಲೋ ನಾಗ್, ಫಿರೋಜ್..."

"My God! What is wrong with him? ಅದೇ ಹೇಳುತ್ತೇನೆ. ಇಲ್ಲವಾದರೆ ನನ್ನನ್ನು ಇಲ್ಲಿ ಕರೆಯಿಸಿ ಫಿರೋಜ್ ಒಮ್ಮೆಲೇ ಹೀಗೆ ಮುಂಬಯಿಗೆ ಹೋಗುವವನಲ್ಲ. What is the complaint? What can I do for him?"

"Listen Nag, listen please..."

“ಸರಿಯಾಗಿ ಕೇಳಿಸುತ್ತಿಲ್ಲವೆ? ಅದೇ…ಇಂದಿನ ದಿನಗಳಲ್ಲಿ ಟೆಲಿಫೋನ್ ಲೈನ್‌ಸೇ…ಕೇಳಿದೆಯಾ ಮೂರು ಮಿನಿಟುಗಳು ಮುಗಿದುವಂತೆ…operator, extend please…” ನಾಗಪ್ಪನ ಈ ಮಾತಿಗೆ ಆ ತುದಿಯಲ್ಲಿ ಕೇಳುತ್ತಿದ್ದ ಖಂಬಾಟಾ ಹತಾಶನಾಗಿ: “ಓ ನೋನೋನೋ. ಇದು ಅರ್ಜ್‌ಂಟ್ ಪೀಪೀ ಕಾಲ್.” ಎನ್ನುತ್ತಿರವಾಗಲೇ, ಆಪರೇಟರ್ ನಡುವೆಯೇ ಬಾಯಿಹಾಕಿ,

“Ok…continue please,” ಎಂದಾಗಿಬಿಟ್ಟಿತ್ತು.

“Listen Nag. I will send you a telex to the factory.”

“ಏನಂದಿ? ನಾನು ಫ್ಯಾಕ್ಟರಿಗೆ ಹೋಗಬೇಕೆ? ಹೋಗಿ ಯಾರನ್ನು ಕಾಣಲಿ? ಇಲ್ಲಿ ಬಂದಾಗ ಗೊತ್ತಾಯಿತು. ಏನೋ ದೊಡ್ಡ ಘೋಟಾಳೆಯಾಗಿದೆಯಂತೆ…”

ಟೆಲಿಫೋನ್ ಲಾಯ್ನ್ ಒಮ್ಮೆಲೇ ಕಡಿದುಹೋಗಿತ್ತು. ಟೆಲಿಫೋನ್ ಕೆಳಗಿಡುತ್ತಲೇ ನಾಗಪ್ಪನಿಂದ ತನಗೆ ಬಂದ ನಗುವನ್ನು ತಡೆಯಲಾಗಲಿಲ್ಲ. ಇದ್ದಕ್ಕಿದ್ದಂತೆ ಖಂಬಾಟಾನ ಫಜೀತಿ ಮಾಡುವ ಈ ಹುಕ್ಕಿ ತನಗೆ ಹೇಗೆ ಬಂದಿತೋ ಎಂದು ಆಶ್ಚರ್ಯಪಟ್ಟ. ಫೋನಿನ ಮೇಲೆ ಏನು ನಾಟಕ ನಡೆಯಿತು ಎಂಬುದನ್ನು ಫಿರೋಜನಿಗೆ ಹೇಳುವ ಧೈರ್ಯ ಕೂಡ ಆಗಲಿಕ್ಕಿಲ್ಲ, ಒಂದೂ ಮಗನಿಗೆ. ಲೈನೇ ಸಿಗಲಿಲ್ಲವೆಂದೋ, ಸಿಕ್ಕರೂ ಸರಿಯಾಗಿ ಕೇಳಿಸುತ್ತಿರಲಿಲ್ಲವೆಂದೋ ಸುಳ್ಳುಹೇಳುವಾಗಿನ ಖಂಬಾಟಾನ ದೀನ ಮೋರೆ ಕಣ್ಣಮುಂದೆ ನಿಂತಾಗಂತೂ ಇನ್ನೊಮ್ಮೆ ನಗಬೇಕು ಅನ್ನಿಸಿತು. ಈ ಒಂದೂ ಮಕ್ಕಳೆಲ್ಲ ಯಾವ qualifications ಇಲ್ಲದೇನೆ ಇಷ್ಟೆಲ್ಲ ಸಂಖ್ಯೆಯಲ್ಲಿ ಈ ಕಂಪನಿಯಲ್ಲಿ ತುಂಬಿದ್ದು ಬರೇ ಫಿರೋಜನ ವಶೀಲೀಬಾಜಿಯಿಂದ. ಈಗ ಅವನ ಬೂಟು ನೆಕ್ಕುತ್ತವೆ. ಸ್ವಾಭಿಮಾನವಿಲ್ಲದ ಧಡ್ಡ ಎರಡೂ ಮಕ್ಕಳು…ಫ್ಯಾಕ್ಟರಿಯಲ್ಲಿಯ ಘೋಟಾಳೆಯ ಮಾತು ತೆಗೆದ ಕೂಡಲೇ ಖಂಬಾಟಾ ಒಮ್ಮೆಲೇ ಫೋನ್ ಕೆಳಗಿಟ್ಟ ರೀತಿ ಅರಿವಿಗೆ ಬಂದಾಗ ತುಸು ಗಂಭೀರನಾದ: ಅಂದೆನಲ್ಲ. ಫಿರೋಜನಲ್ಲಿ ತುಂಬಿದ್ದು ತನ್ನ ಸ್ಥಾನಮಾನಗಳ ಬಗೆಗಿನ ಅವಾಸ್ತವವಾದ ದುರಭಿಮಾನವೇ ಹೊರತು ಕೆಲಸದ ಬಗ್ಗೆ ಇರಬೇಕಾದ ದಕ್ಷತೆಯಲ್ಲ. ಕಾರಖಾನೆಯ ಮುಖ್ಯಸ್ಥಾನಗಳಲ್ಲೆಲ್ಲ ಅವನಂತಹರೇ ತುಂಬಿದ್ದಾರೆ. ಬೋಳೀಮಗನಿಗೆ ತನ್ನ ಜಾತಿಯವರೆಂದರರೆ ಮುಗಿದೇಹೋಯಿತು. ಈ ಎಲ್ಲ

ಧಡ್ಡರಿಂದಾಗಿ ಎಂತಹ ಪೇಚಿಗೆ ಸಿಕ್ಕಿ ಬಿದ್ದಿದ್ದಾನೋ. ತನಿಖೆಗಿನಿಖೆಯ ನೆಪ ಮಾಡಿ ನನ್ನನ್ನು ಬೆದರಿಸುತ್ತಿದ್ದುದರ ಹಿಂದಿನ ಕಾರಣ ಬಹುಶಃ ಈ ಪೇಚಿನಿಂದ ನನ್ನಿಂದೇನಾದರೂ ಸಹಾಯ ಬೇಕಾದ್ದದ್ದಿರಬೇಕು... ಅರೇ! ಸನ್ನಿವೇಶದ ಈ ಮಗ್ಗಲು ನನಗೆ ಹೊಳೆದಿರಲೇ ಇಲ್ಲವಲ್ಲ... ನಾಗಪ್ಪನಿಗೆ ಈ ನಿಗೂಢ ಸಂಗತಿಗಳೆಲ್ಲ ಬೆದರಿಸುವ ಬದಲು ಅವುಗಳ ಬಗ್ಗ ಹೆಚ್ಚಿನದನ್ನು ತಿಳಿಯುವ ಕುತೂಹಲ ಉಂಟಾಗುತ್ತಿದೆ ಎಂಬ ಅನ್ನಿಸಿಕೆಯಿಂದಲೇ ಸುಖವೆನಿಸಿತು.

ಕೃಷ್ಣನನ್ನು ಕರೆದು ಮುತ್ತೂಸ್ವಾಮಿ ಬಂದಿದ್ದಾನೆಯೆ ಎಂದು ಕೇಳಿದ. ಮುತ್ತೂಸ್ವಾಮಿ ಕೆಲ ಹೊತ್ತಿನ ಮೊದಲಷ್ಟೇ ಬಂದವನು, ತನ್ನ ಹೆಸರನ್ನು ಹಿಡಿದು ಮಾತನಾಡಿದ್ದು ಕೇಳಿಸಿ ಒಳಗೆ ಬಂದು ಕೈಮುಗಿದು ನಿಂತು, ನಿನ್ನೆಯ ತನ್ನ ಗೈರುಹಾಜರಿಯ ಬಗ್ಗೆ ಕ್ಷಮೆ ಯಾಚಿಸಿದ! "ನಿನ್ನೆಯ ಗೈರುಹಾಜರಿಗೆ ಒಂದೇ ಕ್ಷಮೆ: ಈವತ್ತಿನ ಲಂಚ್ ಏಕದಮ್ ಪಸಂದಾಗಿರಬೇಕು...." ನಾಗಪ್ಪ ತನ್ನ ವಾಕ್ಯವನ್ನು ಪೂರ್ತಿಗೊಳಿಸುವ ಮೊದಲೇ ಮುತ್ತೂಸ್ವಾಮಿ ಹೇಳಿದ... "ಅದರ ಬಗ್ಗೆ ಕಾಳಜಿ ಬೇಡ ಸರ್...ಚಿಕನ್‌ಬಿರ್ಯಾಣಿ, ಮಟನ್‌ಕಟ್ಲೆಟ್ ಮತ್ತು..." ಕೃಷ್ಣ ನಡುವೆಯೇ ಬಾಯಿಹಾಕಿ, "ಇಂದು ಫ್ಯಾಕ್ಟರಿಗೆ ಹೋಗುವವದಿಲ್ಲವಾದರೆ. ಬಿಯರ್ ತರಲೇ ಸರ್...ನಿನ್ನೆ, ಮುಂಬಯಿಯಿಂದ ಸಾಹೇಬರು ಬಂದಿದ್ದಾರೆ. ಬಿಯರ್ ಏಕದಮ್ ತಂಪಾದದ್ದಿರಬೇಕು ಎಂದರೂ ಆ ಕಳ್ಳ ಬೆಚ್ಚನೆಯ ಬಿಯರನ್ನೇ ಕೊಟ್ಟ. ಈವತ್ತು ಅವನನ್ನು ಚೆನ್ನಾಗಿ ಥಳಿಸಿ..." ನಿನ್ನೆಯ ಬಿಯರಿಗಿಂತ ಹೆಚ್ಚು ತಣ್ಣಗಿನ ಬಿಯರ್ ಕುಡಿದ ನೆನಪು ನಾಗಪ್ಪನಿಗಿರಲಿಲ್ಲ. ಇಂದೂ ಕೂಡ ಬಿಯರ್ ಜತೆಗೆ ಬಕ್ಷೀಸು ಸಿಗಬಹುದೆಂಬ ಆಸೆಯೇನೋ... ಮತ್ತೆ ಬಿಯರ್ ಕುಡಿಯುವ ಇಚ್ಛೆ ನಾಗಪ್ಪನಿಗಿರಲಿಲ್ಲ. ಆದರೂ ಈ ದಿನ ತಾನು ಫಿರೋಜ್ ಹಾಗೂ ಖಂಬಾಟಾರ ಮೇಲೆ ಸಾಧಿಸಿದ ಪ್ರಥಮ ವಿಜಯವನ್ನು ಆಚರಿಸುವ ಉಮೇದಿನಿಂದಲೋ ಮುತ್ತೂಸ್ವಾಮಿಯ ಅಡಿಗೆಯ ನೆನಪಿನಿಂದಲೋ ಕೃಷ್ಣ ತಾನಾಗಿಯೇ ಬಿಯರಿನ ಮಾತು ತೆಗೆದಾಗ ಬೇಡವೆನ್ನುವ ಗಟ್ಟಿತನ ಮನ್ಸುಗೆ ಉಳಿಯಲಿಲ್ಲ: ಹೌದು ಕೃಷ್ಣ, ಎರಡು ಬಾಟಲಿ ಬಿಯರ್ ತರುವಿಯಂತೆ. ಅದಕ್ಕೆ ಮೊದಲು ನಾಸ್ತಾ ಆಗಬೇಕು. ಸ್ನಾನಗೀನ ಮುಗಿಸಿ ಬರುತ್ತೇನೆ. ನಾಸ್ತಾಗೆ ಸಿಂಗಲ್ ಫ್ರಾಯ್ಡ್ ಎಗ್, ಎರಡು ಟೋಸ್ಟ್ ಮತ್ತು ಚಹ. ನಾನು ನಾಸ್ತಾ ಮುಗಿಸಿದ ಮೇಲೇ ನೀನು ಬಿಯರ್ ತರಲು ಹೋಗುವಿಯಂತೆ. ಅಡಿಗೆಗೆ ಬೇಕಾದ ಸಾಮಾನು ಇದೆಯೊ ನೋಡು. ಇಲ್ಲವಾದರೆ

ಬಿಯರ್ ತರಲು ಹೋದಾಗ ನೀನೇ ತರುವಿಯಂತೆ... ಎಂದು ಹೇಳಿ ಖುಶಿಯಲ್ಲಿ ತನ್ನ ಪ್ರಾತರ್ವಿಧಿಗಳನ್ನು ಮುಗಿಸಲು ಹೊರಟ.

ತನ್ನ ಈ ಖುಶಿಗೆ ಕಾರಣವಾದದ್ದನ್ನು ಮನಸ್ಸಿನಲ್ಲೇ ಟಿಪ್ಪಣಿ ಮಾಡುವ ಹುಚ್ಚು ಹಂಬಲವನ್ನು ಬಿಟ್ಟುಕೊಟ್ಟರೂ, ತಾನು ಎಂದೂ ಓದಿರದ ಡೇಲ್ ಕಾರ್ನೆಜಿಯ ಒಂದೆರಡು ವಾಕ್ಯಗಳು ಎಲ್ಲೋ ಇದ್ದ ಉದ್ಧೃತವಾದದ್ದನ್ನು ಓದಿದ್ದರ ನೆನಪು ಬರದಿರಲಿಲ್ಲ: ಮನುಷ್ಯ ಯಾವುದೇ ಸಂಕಟದಲ್ಲಿ ಸಿಕ್ಕಿಕೊಂಡಾಗ ಅದರಿಂದಾಗಬಹುದಾದ ದುಷ್ಟತಮ ಪರಿಣಾಮವನ್ನು ಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡಿಸಿಕೊಂಡು ಅದನ್ನು ಇದಿರಿಸುವ ಧೈರ್ಯ ತಂದುಕೊಳ್ಳಬೇಕು. ಆಗ ಕಣ್ಣೆದುರಿನ ಆಪತ್ತು ನಮ್ಮ ಆತಂಕಕ್ಕೆ ಕಾರಣವಾಗುವ ತಾಕತ್ತನ್ನು ತಂತಾನೆ ಕಳಕೊಳ್ಳುತ್ತದೆ.

ಹೆಚ್ಚೆಂದರೇನಾದೀತು? ನೌಕರಿಯನ್ನು ಕಳಕೊಂಡೇನು ತಾನೆ ! ಹೆದರುವ ಗರಜಿಲ್ಲ. ಖೇತವಾಡಿಯ ಗಲ್ಲಿಯೊಂದರಲ್ಲಿ ನ್ಯೂಸ್‌ಪೇಪರ್ ಮಾರುವ ಅಂಗಡಿ ತೆರೆದೇನು...

ಒಂದು ತೀರ ಅನಪೇಕ್ಷಿತ ಮುಹೂರ್ತದಲ್ಲಿ ಹುಟ್ಟಿದ ಈ ನಿಶ್ಚಯಕ್ಕೀಗ ಸಾವಿರಾರು ವರುಷಗಳಿಂದ ಗಾಳಿ, ಮಳೆ, ಬಿಸಿಲುಗಳಿಗೆ ಮೈಯೊಡ್ಡಿನಿಂತ ಬಂಜಾರಾ ಹಿಲ್ಲಿನ ಪಾಷಾಣದ ಬಂಡೆಗಳ ಗಟ್ಟಿತನ ಬಂದಿದೆ ಎಂಬುದರ ಸಂಪೂರ್ಣ ಅರಿವು ಮಾತ್ರ ನಾಗಪ್ಪನಿಗಿರಲಿಲ್ಲ.

## ಅಧ್ಯಾಯ ನಾಲ್ಕು

ನಾಸ್ತಾ ಮುಗಿಸಿ, ಡ್ರಾಯಿಂಗ್ ರೂಮಿನ ಸೋಫಾ ಒಂದರಲ್ಲಿ ಮೈಚೆಲ್ಲಿ ಬೆಳಗ್ಗಿನ ನ್ಯೂಸ್‌ಪೇಪರ್ ಓದುತ್ತಿರುವಾಗ ಟೆಲಿಫೋನ್ ಗಂಟೆ ಬಾರಿಸಿತು. ಮುತ್ತೂಸ್ವಾಮಿ ಹೋಗಿ ಕರೆಯನ್ನು ಸ್ವೀಕರಿಸಿದ. ಟೆಲಿಫೋನ್ ಕರೆ ನಾಗಪ್ಪನಿಗೇ ಬಂದದ್ದಾಗಿತ್ತು. ಯಾವುದೇ ರೀತಿಯಿಂದ ಕ್ಷೋಭೆಗೊಳಗಾಗದೇ ಶಾಂತಚಿತ್ತನಾಗಿ ರಿಸೀವ್ವರ್ ಕೈಗೆತ್ತಿಕೊಂಡು ಹೆಲ್ಲೋ ಎಂದ. ಆ ಬದಿಯಿಂದ ಬಂದ ದನಿ ರಾಮಕೃಷ್ಣನ ಅಸಿಸ್ಟಂಟ್ ಮೂರ್ತಿಯದಾಗಿತ್ತು. ಯಾವಾಗಲೂ ನಮ್ರತೆಯಿಂದ ಆದರದಿಂದ "ಸರ್" ಎಂದು ಸಂಬೋಧಿಸುತ್ತಿದ್ದ ಮೂರ್ತಿ, "Is that Mr. Nag." ಎಂದು ಕೇಳಿದ್ದು ಊಟದ ಮೊದಲಿನ appetizer ಆಗಬಹುದಾದ ಸನ್ನಿವೇಶಕ್ಕೆ ಆಹ್ವಾನವಾಯಿತು: "Who is that?" ಎಂದು ಕೇಳಿದಾಗ, "I am Murthy here." ಎಂದು ಒಂದು ಬಗೆಯ ಗರ್ವದಿಂದ ಸಾರಿದಾಗ, ಹೆಲ್ಲೋ ಮಿಸ್ಟರ್ ಮೂರ್ತಿ, ಎಂದು ಮಿಸ್ಟರ್ ಈ ಶಬ್ದದ ಮೇಲೆ ವ್ಯಂಗ್ಯ ತುಂಬಿದ ಒತ್ತು ಹಾಕಿ- What is wrong with your voice-it sounded so peculiarly devilish," ಎಂದಾಗ ಆ ತುದಿಯಲ್ಲಿ ರಿಸೀವ್ವರ್ ಹಿಡಿದ ಕೈ ದಡಬಡಿಸಿ, ಗೊಗ್ಗರುದನಿಯಲ್ಲಿ ನಡುಗಿದ ಮಾತುಗಳು ನಾಗಪ್ಪನಿಗೆ ಸರಿಯಾಗಿ ಕೇಳಿಸಲಿಲ್ಲ. "Did you say something ಮಿಸ್ಟರ್ ಮೂರ್ತಿ?"ಎಂದು ಕೇಳುವಾಗ ಮಿಸ್ಟರ್ ಶಬ್ದದ ಮೇಲಿನ ಒತ್ತು ಇನ್ನೂ ಹೆಚ್ಚಿತ್ತು. ಮೂರ್ತಿ ಮೆತ್ತಗಾಗಿ ತನ್ನ ನಿತ್ಯದ ಆಕಾರಕ್ಕೆ ಇಳದು, "ಕ್ಷಮಿಸಿ ಸರ್, ಮುಂಬಯಿಯಿಂದ ನಿಮಗೊಂದು ಟೆಲೆಕ್ಸ್ ಇದೆ." ಎಂದ. "Would you mind sending it to the guest-house Mr. Murthy?" ನಾಗಪ್ಪ 'ಮಿಸ್ಟರ್' ಮೇಲಿನ ಒತ್ತನ್ನು ಸಡಿಲುಗೊಳಿಸಲಿಲ್ಲ. ಮೂರ್ತಿ ಇನ್ನಷ್ಟು ಕುಗ್ಗಿದ ದನಿಯಲ್ಲಿ, "May I read it to you on the phone, Sir?" ಎಂದು ಕೇಳಿದ.

"ನೀವು ಈಗ ಫೋನ್ ಮೇಲೆ ಓದಬಹುದು. ಆದರೆ ಆಮೇಲೆ ಅದನ್ನು ಗೆಸ್ಟ್‌ಹೌಸಿಗೆ ಕಳಿಸುವುದು ಅತ್ಯವಶ್ಯ ಯಾಕಂದರೆ: ಮೊದಲನೆಯದಾಗಿ, ನನ್ನ ಹೆಸರಿಗೆ ಬಂದ ಟೆಲೆಕ್ಸ್ ನನ್ನ ಕೈಸೇರಬೇಕು. ಎರಡನೆಯದಾಗಿ, ಬರೇ ಟೆಲಿಫೋನ್

ಮೇಲೆ ಬಂದ ಸಂದೇಶಗಳನ್ನು ನಂಬಿ ನಾನು ಯಾವ ಎಕ್ಷನ್‌ಊ ತೆಗೆದುಕೊಳ್ಳಲಾರೆ. ಮೂರನೆಯದಾಗಿ, ಟೆಲಿಫೋನ್ ಮೇಲೆ ಇಂಥವರೇ ಮಾತನಾಡುತ್ತಿದ್ದಾರೆ ಎಂಬುದರ ಬಗ್ಗೆ ನನಗಿನ್ನೂ ಖಾತ್ರಿಯಿಲ್ಲ. ಸದ್ಯ ಟೆಲೆಕ್ಸ್ ಓದಿಹೇಳಿ, ಅಂದಾಗ, ಇವನು ಎಂದಿನ ನಾಗನಾಥನಲ್ಲ ಎಂದು ಮನಗಂಡ ಮೂರ್ತಿ ಹೆಚ್ಚು ವಿಲಂಬ ಮಾಡದೇನೇ ಟೆಲೆಕ್ಸ್ ಓದಿದ: "DMD needs your presence in Bombay immediately. Return by today evening flight or latest by tomorrow morning flight—Khambata."

"ಥೆಂಕ್ಸ್ ಮಿಸ್ಟರ್ ಮೂರ್ತಿ, ನಿಮ್ಮಿಂದೀಗ ಮೂರು ಕೆಲಸಗಳಾಗಬೇಕು: ಒಂದು, ಟೆಲೆಕ್ಸನ್ನು ಕೂಡಲೇ ಗೆಸ್ಟ್ ಹೌಸಿಗೆ ಕಳಿಸಿಕೊಡಬೇಕು. ಎರಡು, ಮುಂಬಯಿಗೆ ಹೋಗುವ ವಿಮಾನದ ಟಿಕೆಟ್ಟಿನ ವ್ಯವಸ್ಥೆ ಮಾಡಬೇಕು. ಮೂರು, ಯಾವ ಫ್ಲೈಟ್‌ಗೆ ರಿಝುರ್ವೇಶನ್ ಆಗಿದೆಯೋ ಆ ಫ್ಲೈಟ್‌ನ ಸಮಯಕ್ಕೆ ಸರಿಯಾಗುವಂತೆ ವಿಮಾನ-ನಿಲ್ದಾಣಕ್ಕೆ ಹೋಗುವದಕ್ಕೆ ಕಾರಿನ ವ್ಯವಸ್ಥೆಯಾಗಬೇಕು."

ನಾಗಪ್ಪನ ದನಿಯಲ್ಲಿ ಅವನೇ ಅಪೇಕ್ಷಿಸಿರದ ಆತ್ಮವಿಶ್ವಾಸ, ದೃಢತೆ ಪ್ರಕಟವಾಗಿದ್ದುವು. ತುಂಬ ಖುಶಿಪಟ್ಟು, "Did you hear me Mr. Murthy?" ಎಂದು ಕೇಳಿದಾಗ ಹೇಗೆ ಉತ್ತರಿಸಬೇಕೋ ಎಂದು ತಿಳಿಯದೇ ಮೂರ್ತಿ ಗೊಂದಲಿಸಿದ. ಯಾಕಂದರೆ, ಟಿಲೆಕ್ಸಿನ ಹಿಂದೆಯೇ ಬಂದ ರಾಮಕೃಷ್ಣನ ಟೆಲಿಫೋನ್ ಕರೆಯಲ್ಲಿ ಮೂರ್ತಿ ಏನೇನು ಮಾಡಬಾರದು ಎಂಬುದರ ಬಗ್ಗೆ ಸ್ಪಷ್ಟ ಮಾತಿನಲ್ಲಿ ಅಪ್ಪಣೆಕೊಟ್ಟಿದ್ದ. ಮುಖ್ಯವಾಗಿ, ಟಿಕೆಟ್ಟಿನ ವ್ಯವಸ್ಥೆ ಬೇಕಾದರೆ ಮಾಡಬಹುದು. ಆದರೆ ಕಾರನ್ನು ಮಾತ್ರ ಸರ್ವಥಾ ಕಳಿಸಬಾರದು. ಟ್ಯಾಕ್ಸಿಯಿಂದಲೇ ಹೋಗಲಿ. ಕೊಡಬಹುದಾದ ಕಾರಣ: ಕಾರುಗಳೆರಡೂ ಸರ್ವಿಸಿಂಗ್ ಸಲುವಾಗಿ ಗರಾಜಿಗೆ ಹೋಗಿವೆ. ಅವನು ಹೇಳಿದ ಇನ್ನೊಂದು ಮಾತನ್ನು ನಾಗಪ್ಪನಿಗೆ ತಿಳಿಸುವ ಧೈರ್ಯ ಮಾತ್ರ ಮೂರ್ತಿಗೆ ಆಗುತ್ತಿರಲೇ ಇಲ್ಲ; ಪ್ಲೇನ್ ಸೀಟು ಸಿಗದಿದ್ದರೆ ಟ್ರೇನಿನಿಂದ ಬರಲು ಹೇಳು...

ಮೂರ್ತಿ ಸುಮ್ಮನಾದುದನ್ನು ಗಮನಿಸಿ ನಾಗಪ್ಪನೇ, "ನೋಡಿ ಸುರ್ ಮೂರ್ತಿ." ಎನ್ನುವಷ್ಟರಲ್ಲಿ, ಮೂರ್ತಿ ಅಳುಬುರುಕ ದನಿಯಲ್ಲಿ, "ಸರ್, ಹಾಗೆ

ನನ್ನನ್ನು ಮಿಸ್ಟರ್ ಮಿಸ್ಟರ್ ಎಂದು ಕರೆಯಬೇಡಿ. ನಾನು ನಿಮ್ಮ ಎಂದಿನ ಸಾದಾ ಮೂರ್ತಿಯೇ... ಇಷ್ಟೇ, ರಾಮಕೃಷ್ಣನಿಗೆ ಇದಿರು ನಿಂತು ನೌಕರಿ ಕಳಕೊಳ್ಳುವ ಧೈರ್ಯವಿಲ್ಲ ಸರ್...ಕಾರು.. ಟಿಕೆಟ್ಟು ಕಳಿಸಿ ಕೊಡುತ್ತೇನೆ...ದಯಮಾಡಿ ರಾಮಕೃಷ್ಣನಿಗೆ ಮಾತ್ರ ತಿಳಿಸಬೇಡಿ. ಅವನೀಗ ಮೊದಲಿನ ರಾಮಕೃಷ್ಣನಲ್ಲ ಸರ್... ಪ್ರತಿಯೊಂದು ಮಾತಿಗೂ DMD ಅವನ ಸಲಹೆ ಪಡೆಯುತ್ತಾರೆ. ಆದ್ದರಿಂದ ಅವರ ನಂತರ ತಾನೇ DMD ಆಗುತ್ತೇನೆ ಎಂಬಂತೆ ಜಂಭ ಕೊಚ್ಚುತ್ತಾನೆ, ಸರ್..."

"ಹೆದರಬೇಡಿ ಮೂರ್ತಿ... ಇದರ ಜವಾಬ್ದಾರಿ ನಿಮ್ಮ ಮೇಲೆ ಹಾಕಲಾರೆ, ಒಂದು ಕೆಲಸ ಮಾಡಿ. ಕೂಡಲೆ ರಾಮಕೃಷ್ಣನಿಗೆ ಫೋನ್ ಮಾಡಿ ಹೀಗೆ ಹೀಗೆ ಹೇಳಿದೆ ಎಂದು ತಿಳಿಸಿ. ಕಾರಿನ ವ್ಯವಸ್ಥೆಯಾಗದ ಹೊರತು ಏರ್‌ಪೋರ್ಟಿಗೆ ನಾನು ಹೊರಡುವದಿಲ್ಲವೆಂದು, ಅದರಿಂದಾಗಿ ಟಿಕೆಟ್ ಕೆನ್ಸಲ್ ಆಗಿ ಹಣ ನಷ್ಟವಾದದ್ದಕ್ಕೆ, ಮುಂಬಯಿಗೆ ಬರುವುದರಲ್ಲಿ ವಿಲಂಬವಾದದ್ದಕ್ಕೆ ನಾನು ಜವಾಬ್ದಾರನಲ್ಲವೆಂದೂ ತಿಳಿಸಿದ್ದೇನೆಂದು ಹೇಳಿರಿ. ಇಷ್ಟೇ ಅಲ್ಲ, ನಾಳೆಯ ತನಕ ಹೈದ್ರಾಬಾದನ್ನು ಬಿಡುವದು, ಶಕ್ಯವಾಗದೇ ಇದ್ದಲ್ಲಿ ನಾಡಿದ್ದಿನಿಂದ ನಾನು ಫ್ಯಾಕ್ಟರಿಗೆ ಹೋಗಲು ಸುರುಮಾಡುತ್ತೇನೆಂದೂ ತಿಳಿಸಿರಿ... ಇದೆಲ್ಲ ನಿಮಗೆ ಅಸಾಧ್ಯವೆನಿಸಿದರೆ ರಾಮಕೃಷ್ಣನಿಗೆ ನೇರವಾಗಿ ನನಗೆ ಫೋನ್ ಮಾಡಲು ಹೇಳಿ..."

ಫೋನ್ ಕೆಳಗಿಡುವ ಹೊತ್ತಿಗೆ ಕೃಷ್ಣ ಬಿಯರಿನೊಂದಿಗೆ ಹಾಜರಾದ. ಒಳಗೆ ಅಡಿಗೆಮನೆಯಿಂದ ಹೊರಟ ಬಿರ್ಯಾಣಿಯ ಸಲುವಾಗಿ ಸಿದ್ಧವಾಗುತ್ತಿದ್ದ, ಮಸಾಲೆಯ ಖಮಂಗವಾಸನೆ ತನಗೆ ಕಾದಿರುವ ಊಟದ ಪೂರ್ವ ಇಷಾರೆ ಕೊಡುತ್ತ ಬಾಯಲ್ಲಿ ನೀರು ತರಿಸುತ್ತಿತ್ತು. ಬಿಯರಿನ ಬಾಟಲಿಗಳೆರಡನ್ನೂ ನಾಗಪ್ಪನ ಇದಿರಿನ ಟೀಪಾಯಿಯ ಮೇಲೆ ಇಡುತ್ತ "ಮುಟ್ಟಿ ನೋಡಿ ಸರ್...ಎಷ್ಟು ತಂಪಾಗಿವೆ. ನೋಡಿ. ನಿನ್ನೆ ಆ ಲಫಂಗ ಟೊಪ್ಪಿಗೆ ಹಾಕಿದ," ಎಂದ. ನಾಗಪ್ಪ ಅವನ ಖುಶಿಗಾಗಿ ಮುಟ್ಟಿ ನೋಡಿ, ಅವು ನಿನ್ನೆ ತಂದವುಗಳಿಗಿಂತ ಹೆಚ್ಚು ತಂಪಾಗಿರದಿದ್ದರೂ very good, very good ಎಂದು ಪ್ರಶಂಸಿಸಿ, "ಒಂದನ್ನು ಈಗ ತೆರೆ; ಇನ್ನೊಂದನ್ನು ಫ್ರಿಜ್ಜನಲ್ಲಿಡು." ಎನ್ನುತ್ತಿರುವಾಗ ಬಾಕಿ ಉಳಿದ ನಾಲ್ಕು ರೂಪಾಯಿಗಳನ್ನು ಜಾಗ್ರತೆಯಿಂದ ಕಿಸೆಯಿಂದ ತೆಗೆಯುತ್ತಿರುವುದನ್ನು ನೋಡಿ, ಕೃಷ್ಣನ ಈ ನಾಟಕದ ಅರ್ಥಮಾಡಿಕೊಂಡು, "ಅದನ್ನು ನೀನೇ ಇಟ್ಟುಕೋ

ಎಂದಾಗ, "ಥೆಂಕ್ಸ್ ಸರ್, ಇದೀಗ ಒಂದು ಬಾಟಲಿಯನ್ನು ತೆರೆದು ತರುತ್ತೇನೆ" ಎಂದು ಒಳಗೆ ಹೋದ. ಸಾಹೇಬರನ್ನು ಇಷ್ಟೊಂದು ಖುಶಿಯಲ್ಲಿ ಹಿಂದೆಂದೂ ನೋಡಿರಲಿಲ್ಲ ಎಂಬುದು ಲಕ್ಷ್ಯಕ್ಕೆ ಬಂದ ಕೃಷ್ಣನಿಗೆ ಹಿಂದೊಮ್ಮೆ ಮಾಡಿ ಗದರಿಸಿಕೊಂಡ ಸೂಚನೆ ಈಗ ಮತ್ತೆ ಮಾಡಿ ನೋಡಲೇ ಎನ್ನುವ ಆಸೆ ಹುಟ್ಟಿತ್ತು. ಇನ್ನೂ ಹತ್ತು ರೂಪಾಯಿ ಕಮಿಶನ್ ಗಳಿಸಬಹುದಾಗಿತ್ತು. ಮುಂಬಯಿಗೋ ಕಲಕತ್ತೆಗೋ ಹೋಗಿದ್ದ ಫರಿದಾಬಾನೂ ಈಗ ತಿರುಗಿ ಹೈದ್ರಾಬಾದಿಗೆ ಬಂದಿದ್ದ ಸುದ್ದಿ ಎಂಟು ದಿನಗಳ ಹಿಂದಷ್ಟೇ ಸಿಕ್ಕಿತ್ತು. ಆದರೆ ಈ ಸಾಹೇಬರ ಮೋರೆಯ ಮೇಲೆ ವ್ಯಕ್ತವಾದ ಖುಶಿಯಲ್ಲಿ ರಂಗೇಲತನದ ಲವಲೇಶವೂ ಇಲ್ಲದ್ದನ್ನೋ, ತುಂಬ ಸರಳನಂತೆ ಕಂಡರೂ ಕಣ್ಣುಗಳಿಂದ ಹೊರಸೂಸುವ ಹೊಳಪಿನಲ್ಲಿ ತನ್ನನ್ನು ಹದರಿಸುವಂತಹದೇನನ್ನೋ ಕಂಡ ಕೃಷ್ಣನಿಗೆ ಕೇಳುವ ಧೈರ್ಯವಾಗಲಲ್ಲ...

ಇಂದು, ಬಿಯರ್ ಕುಡಿಯುವುದರ ಹಿಂದೆ ಯಾವುದೇ ಬಗೆಯ ನೋವನ್ನು ಮುಳುಗಿಸುವಂತಹ ಉದ್ದೇಶವಿರಲಿಲ್ಲವಾದ್ದರಿಂದ ಅದರ ಮತ್ತು ಏರುವಾಗಿನ ಗೆಲುವಿನ ಜಾತಿಯೇ ಬೇರೆಯಾಗಿತ್ತು: ಹಿಂದಿನ ಗಚ್ಚಿಯಲ್ಲಿ ಹರಡಿದ ಮಧ್ಯಾಹ್ನದ ಬಿಸಿಲು; ಈಗ ಬೆಳಕಿನಂತೆಯೇ ಅದರ ಜಳವನ್ನೂ ಪ್ರತಿಫಲಿಸುತ್ತಿದ್ದ ಗುಡ್ಡದ ಬಂಡೆಗಳು; ದೂರ, ಆಕಾಶದಲ್ಲಿ ಆಗೊಮ್ಮೆ ಈಗೊಮ್ಮೆ ಮೈಯನ್ನು ಬಿಸಿಲಲ್ಲಿ ಮಿಂಚಿಸುತ್ತ ಏರ್‌ಪೋರ್ಟನ್ನು ಸಮೀಪಿಸುತ್ತಿದ್ದಂತೆ ಕಣ್ಣಿಗೆ ಕಾಣಿಸಿಕೊಂಡದ್ದೇ ಸದ್ದನ್ನೂ ಕೇಳಿಸುತ್ತ ಕೆಳಗಿಳಿಯುವ ವಿಮಾನ; ಗಚ್ಚಿಯ ಒಂದು ಮೂಲೆಯಲ್ಲಿ, ಗಾಳಿಯಲ್ಲಿ ಎಲೆಗಳನ್ನು ಗಿಲಿಗಿಲಿ ಸುತ್ತನಿಂತ ಬೇವಿನಗಿಡ; ಗಚ್ಚಿಯನ್ನು ಡ್ರಾಯಿಂಗ್ ರೂಮಿನಿಂದ ಬೇರ್ಪಡಿಸುವ ಕಾಚಿನ ಪಾರ್ಟಿಶನ್: ಬಿಸಿಲು ಕಣ್ಣನ್ನು ನೋಯಿಸಹತ್ತಿದ್ದರಿಂದ ಕೃಷ್ಣನನ್ನು ಕರೆದು ಪರದೆಗಳನ್ನು ಪಸರಿಸಲು ಹೇಳಿದ. ಅವನು ಹಾಗೇ ಮಾಡಿದಾಗ, ಪರದೆಗಳ ಹಸಿರುಬಣ್ಣದೊಳಗಿಂದ ತೂರಿ ಬಂದು ಕೋಣೆಯಲ್ಲಿ ಹರಡಿದ ಬೆಳಕು ಅಮಲೇರುತ್ತಿದ್ದ ಕಣ್ಣುಗಳಿಗೆ ಇನ್ನಷ್ಟು ಸುಖ ಕೊಡಹತ್ತಿತು...

ಮ್ಯಾನೇಜಿಂಗ್ ಡ್ಯಾರೆಕ್ಟರ್ ಒಮ್ಮೆಲೇ ಅಮೇರಿಕಾಕ್ಕೆ ಹೋಗಬೇಕಾಗಿ ಬಂದದ್ದು...ಬೇಡ. ಯಾವುದರ ಬಗೆಗೂ ಈಗ ಊಹಾಪೋಹ... ಪ್ರಸ್ತಾತ ಕ್ಷಣಕ್ಕಷ್ಟೇ ಪ್ರತಿಕ್ರಿಯಿಸುತ್ತ ನಡೆಯುವುದು. ಎಲ್ಲದರ ಮೋಹವನ್ನೂ ಕಳಚಿಕೊಳ್ಳಲು ನಿಶ್ಚಯಿಸಿದ ಮೇಲೆ ಇನ್ನು ದುಡಿಮೆಯ ಕ್ಷೇತ್ರದ ಬಗ್ಗೆ ವಿಚಾರ

ಮಾಡುವದು ಬೇಡ. ಹೌದು, ಇದೀಗಿನ ಈ ಕ್ಷಣದಿಂದ ದೂರ ಹೋಗಕೂಡದು. ಜೀವಂತವಾಗಿ ಅನುಭವಿಸಿದ ಈ ಕ್ಷಣದಿಂದ ಇನ್ನೊಂದು ಕ್ಷಣಕ್ಕೆ...ಹೊರಗೆ ಕಾರು ಬಂದು ನಿಂತ ಸದ್ದು: ಬಾಗಿಲು ತೆರೆದು ಕೆಳಗಿಳಿದ ಸದ್ದು. "ಅವುಗಳ ಹಿಂದೆಯೇ ಸರ್ದಾರ್ ಡ್ರೈವರ್ ಡ್ರಾಯಿಂಗ್ ರೂಮಿಗೆ ಬಂದು ಸಲಾಮ್ ಮಾಡಿದ. ಎಂದಿನ ಆತ್ಮೀಯತೆಯಿಂದ, ಹ್ಯಾಗಿದ್ದೀ ಸರ್ದಾರ್," ಎಂದು ಕೇಳಿದಾಗ ಆ ಪ್ರಶ್ನೆಯಲ್ಲಿ ಇನ್ನೇನೋ ಕೇಳಿಸಿದಂತಾಗಿ, "ನಿನ್ನೆ ಬಂದಿರಂತೆ ಸಾಹೇಬರು. ನನಗೆ ಯಾರೂ ಹೇಳಲೇ ಇಲ್ಲ ಸರ್...ಈಗ ಮೂರ್ತಿ ಹೇಳಿದ ಮೇಲೇ ಗೊತ್ತು. ಈವತ್ತಿನ ಸಂಜೆಯ ಫ್ಲೈಟಿನ ಟಿಕೆಟ್ ಹಾಗೂ ಈ ಕವರನ್ನು ಕೊಟ್ಟಿದ್ದಾರೆ." ಎಂದು ಎರಡನ್ನೂ ನಾಗಪ್ಪನ ಕೈಗೆ ಒಪ್ಪಿಸಿದ. ಕವರಿನಲ್ಲಿ ಇದ್ದದ್ದು ಮುಂಜಾನೆಯ ಟೆಲೆಕ್ಸ್ ಇರಬೇಕು ಎಂದು ತೆರೆಯುವ ಮೊದಲೇ ಊಹಿಸಿಕೊಂಡ. ಮೂರ್ತಿ ಮತ್ತೇನನ್ನಾದರೂ ಹೇಳಿದರೇ ಎಂದು ಕೇಳಿದಾಗ: "ಇಲ್ಲಾ ಸರ್. ಸಂಜೆ ವಿಮಾನ-ನಿಲ್ದಾಣಕ್ಕೆ ನಿಮ್ಮನ್ನು ಕರೆದೊಯ್ಯಲು ನನಗೆ ಹೇಳಿದ್ದಾರೆ. ಅವರಿಗೆ ಪಾಪ, ಮೈಯಲ್ಲಿ ಹುಷಾರಿಲ್ಲವಂತೆ. ಅರ್ಧ ದಿನದ ರಜೆ ಪಡೆದು ಮನೆಗೆ ಹೋದರು. ಬರುವಾಗ ಅವರನ್ನು ಮನೆಯಲ್ಲಿ ಬಿಟ್ಟೇ ಇಲ್ಲಿಗೆ ಬಂದೆ." ಎಂದ. "ಸಂಜೆ ಆರೂವರೆಯ ಸುಮಾರಿಗೆ ಬರುತ್ತೇನೆ ಸರ್. ೭-೫೦ರ ಫ್ಲೈಟ್. ಆ ಮೊದಲು ನಿಮಗೆ ಕಾರುಬೇಕಾದರೆ ಹೇಳಿ, ಬರುತ್ತೇನೆ " ಎಂದ. ಇವರು ಬೇಡವೆಂದಾಗ ಇನ್ನೊಮ್ಮೆ ಸಲಾಮು ಮಾಡಿ ಅಲ್ಲಿಂದ ಹೊರಟುಹೋದ.

ಅವನು ಹೊರಟು ಹೋದ ಮೇಲೆ, ಲಕ್ಕೋಟೆಯನ್ನು ತೆರೆದು ನೋಡಿದರೆ ಊಹಿಸಿಕೊಂಡಂತೆ ಮುಂಬಯಿಯಿಂದ ಬಂದ ಟೆಲೆಕ್ಸ್ ಏ ಆಗಿತ್ತು. ಇಷ್ಟೇ, ಮೂರ್ತಿಯ ಹೆಸರಿಗೇ ಬಂದಿತ್ತು; ನಾಗಪ್ಪನ ಹೆಸರಿಗಲ್ಲ. "Please read the following message to Nag on phone." ಎಂದು ಆರಂಭವಾಗಿತ್ತು. ಮೂರ್ತಿಯ ದೇಹಾಲಸ್ಯಕ್ಕೆ ಬಹುಶಃ ರಾಮಕೃಷ್ಣನಿಂದ ಫೋನಿನ ಮೇಲೆ ಬೈಸಿಕೊಂಡದ್ದು ಕಾರಣವಾಗಿರಬೇಕು. ತನ್ನ ಮೇಲೆ ಬಂದ ಸಿಟ್ಟನ್ನು ಆ ಹುಡುಗನ ಮೇಲೆ ತೆಗೆದಿರಬೇಕು ಎಂದು ಬಗೆದಾಗ ಕೆಡುಕೆನಿಸಿತು.

ಪಸಂದಾಗಿ ಊಟ ಮುಗಿಸಿದ್ದೇ ಮುತ್ತೂಸ್ವಾಮಿಯ ಅಡಿಗೆಯನ್ನೂ, ಕೃಷ್ಣ ತಂದ ಬಿಯರನ್ನೂ ಬಾಯಿತುಂಬ ಹೊಗಳಿ, ನಾಲ್ಕುಗಂಟೆಯವರೆಗೆ ಎಬ್ಬಿಸುವುದು ಬೇಡವೆಂದು ಹೇಳಿ ಮಲಗುವ ಕೋಣೆಗೆ ನಡೆದ. ಹಾಸಿಗೆಗೆ ಮೈ

ತಾಕಿಸಿದಷ್ಟೇ ಗೊತ್ತು, ಯಾವಾಗ ನಿದ್ದೆಹತ್ತಿತೋ ಪತ್ತೆಹತ್ತಲಿಲ್ಲ. ನಿದ್ದೆಯಿಂದ ಎಚ್ಚರವಾಗಿ ಹಾಸಿಗೆಯಿಂದ ಏಳಬೇಕೋ ಬಾರದೋ ಎಂಬುದನ್ನು ಇನ್ನೂ ನಿಶ್ಚಯಿಸುವ ಸ್ಥಿತಿಯಲ್ಲಿದ್ದಾಗ- ಸಂಜೆಯ ಫ್ಲೈಟ್ ಮೇಲೆ ಡಾಯನಾ ಇದ್ದರೆ...ಎಂಬ. ಆಸೆ ತುಂಬಿದ ವಿಚಾರದಿಂದಲೇ ಪುಲಕಿತನಾಗಿ ಎದ್ದವನೇ ಹೊರಡುವ ತಯಾರಿಗೆ ತೊಡಗಿದ.

## ಅಧ್ಯಾಯ ಐದು

ವಿಮಾನ-ನಿಲ್ದಾಣ ಗೆಸ್ಟ್ ಹೌಸಿನಿಂದ ಹದಿನೈದೇ ಮಿನಿಟುಗಳ ಹಾದಿ. ಆದರೆ ನಡುವೆ ರೇಲ್ವೇ ಕ್ರಾಸಿಂಗ್ ಒಂದು ಇದ್ದುದರಿಂದ ಕಾರು ಬಂದದ್ದೇ ಹೊರಡುವುದನ್ನು ನಿರ್ಧರಿಸಿ ಹಾಗೇ ಸಿದ್ಧವಾಗಿ ಕುಳಿತಿದ್ದ. ಸರ್ದಾರ ಡ್ರೈವರ್ ಸರಿಯಾಗಿ ೬-೩೦ಕ್ಕೆ ಬಂದದ್ದೇ ಹೊರಟೇಬಿಟ್ಟ. ಏಕೋ, ಹೈದ್ರಾಬಾದಿಗೆ, ಮುಖ್ಯತಃ ಈ ಗೆಸ್ಟ್‌ಹೌಸಿಗೆ, ಬಹುಶಃ ಇದೆ ತನ್ನ ಕೊನೆಯ ಭೇಟಿಯೇನೋ, ಎಂಬ ಭಾವನೆಯಿಂದೆಂಬಂತೆ ಮುತ್ತೂಸ್ವಾಮಿಗೆ ಹತ್ತು ರೂಪಾಯಿ, ಕೃಷ್ಣನಿಗೆ ಐದು ರೂಪಾಯಿ ಬಕ್ಷೀಸು ಕೊಟ್ಟ. ಅವರು ಕೃತಜ್ಞತೆಯನ್ನು ಪ್ರಕಟಿಸಿ ಬೀಳ್ಕೊಟ್ಟ ಮೇಲೆ ಕಾರಿನಲ್ಲಿ ಬಂದು ಕೂತಾಗ ಮನಸ್ಸು ಅರ್ಥವಾಗದ ರೀತಿಯಲ್ಲಿ ಭಾರವಾಗಿತ್ತು. ಹದಿನೆಂಟು ವರ್ಷಗಳ ದೀರ್ಘ ಅವಧಿಯಲ್ಲಿ ಮ ಸಂಬಂಧಗಳನ್ನು ಒಮ್ಮೆಲೇ ಕಡಿದುಕೊಳ್ಳುವದು ಅಷ್ಟೊಂದು ಸುಲಭವಲ್ಲವೇನೋ: ಸರ್ದಾರ್ ಕಾರನ್ನು ಸ್ಟಾರ್ಟ್ ಮಾಡಿದ್ದೇ ತಿರುಗಿ ಅಂತರ್ಮುಖಿಯಾಗಲು ಹವಣಿಸುತ್ತಿದ್ದ ಮನಸ್ಸನ್ನು ಹಾಗೆ ಆಗಲು ಬಿಡದ ದೃಢ ನಿರ್ಧಾರದಿಂದ, ದೃಷ್ಟಿಯನ್ನು ಸಂಜೆಯ ಎಳೆಬಿಸಿಲಲ್ಲಿ ಅವರ್ಣನೀಯವಾದ ಸೌಂದರ್ಯದಿಂದ ಬೆಳಗಿನಿಂತ ಸುತ್ತಲಿನ ಬಂಡೆಗಳ ಮೇಲೆ; ಇಕ್ಕೆಲದ ಗುಲ್‌ಮೋಹರ್, ದೇವದಾರು ಗಿಡಗಳ ಮೇಲೆ; ಆಳೆತ್ತರದ ಬೇಲಿಗಳಿಂದ ಸುತ್ತುವರಿದ ಕಂಪೌಂಡುಗಳೊಳಗಿನ ಮನೆಗಳ ಮೇಲೆ; ನಡುವೆಯೇ ರಸ್ತೆಯೊಳಗಿನ ಸಂಕಕ್ಕೆ ರಿಪೇರಿ ನಡೆದದ್ದರಿಂದ ಕಚ್ಚಾ ರಸ್ತೆಯಿಂದ ಹೋಗುವಾಗ ಹತ್ತುವ ನೀರಿನ ಹೊಂಡದ ಮೇಲೆ ಊರಿರವಾಗಲೂ ಇವುಗಳನ್ನು ಕೂಡ ತಾನು ನೋಡುವದು ಇದೇ ಕೊನೆಯ ಬಾರಿಯೇನೋ ಎಂಬ ಅನ್ನಿಸಿಕೆ ಕಾಡುವದನ್ನು ನಿಲ್ಲಿಸಲಿಲ್ಲ...ರೇಲ್ವೇ ಕ್ರಾಸಿಂಗಿಗೆ ಬಂದಾಗ ಅದು ತೆರೆದೇ ಇತ್ತು. ವಿಮಾನ-ನಿಲ್ದಾಣಕ್ಕೆ ಬಂದಾಗ ಬರೇ ೬-೪೫. ಸರ್ದಾರನಿಗೂ ಐದು ರೂಪಾಯಿ ಬಕ್ಷೀಸು ಕೊಡುತ್ತ, ಥೆಂಕ್ಸ್ ಸರ್ದಾರ ಎಂದು ಹಸ್ತಾಂದೋಲನ ಮಾಡುವಾಗ ಹಿಂದೆಂದೂ ಸಾಹೇಬರು ಹೀಗೆ ಮಾಡಿರಲಿಲ್ಲ ಎಂಬುದು ಲಕ್ಷ್ಯಕ್ಕೆ ಬಂದ ಡ್ರೈವರ್ ಇವನನ್ನು ಬೀಳ್ಕೊಡುವಾಗ ತುಂಬ ಭಾವುಕನಾಗಿದ್ದ.

ನಿಲ್ದಾಣದ ಒಳಗೆ ಬಂದಾಗ ಕೌಂಟರ್ ಇನ್ನೂ ತೆರೆದಿರಲಿಲ್ಲ. ಕೌಂಟರಿನ ಇದಿರು ತನ್ನ ಸೂಟ್‌ಕೇಸ್ ಇಟ್ಟು, ಸಮಯ ಕಳೆಯುವ ಉದ್ದೇಶದಿಂದ ಬದಿಯ

ಕೈಗಾರಿಕೆಯ ವಸ್ತುಗಳನ್ನು ಮಾರುವ ಅಂಗಡಿಗೆ ಹೋಗಬೇಕು ಎನ್ನುವಷ್ಟರಲ್ಲಿ, ಆಗಿನಿಂದಲೂ ಇವನ ಬರವಿನ ಹಾದಿಯನ್ನೇ ಕಾಯುತ್ತಿದ್ದ, ಕಪ್ಪು ಕನ್ನಡಕವನ್ನು ಧರಿಸಿದ ವ್ಯಕ್ತಿ ಇವನನ್ನು ನೇರವಾಗಿ ಸಂಧಿಸಿ, "Good evening Mr. Nagnath, ನಿಮ್ಮ ಹತ್ತಿರ ಗುಟ್ಟಿನಲ್ಲಿ ಒಂದು ವಿಷಯ ಮಾತನಾಡುವದಿತ್ತು." ಎಂದ. ಇವನ ಪರಿಚಯ ಸಿಕ್ಕಿರದ ನಾಗಪ್ಪ ಈ ಅಚಾನಕ ಮುಖಾಮುಖಿಯಿಂದ ಗಲಿಬಿಲಿಗೊಂಡು, "ನೀವು ಯಾರೆನ್ನುವದು ತಿಳಿಯಲಿಲ್ಲ?" ಎಂದಾಗ, "ಇಲ್ಲಿ ಬೇಡ. ಅದಾಗಲೇ ಜನ ಸೇರುತ್ತಿದ್ದಾರೆ. 'ಚೆಕ್ ಇನ್' ಮಾಡಿದ್ದೇ ಮೇಲಿನ ರೆಸ್ಟೋರೆಂಟಿಗೆ ಬನ್ನಿ. ಮೂಲೆಯಲ್ಲಿಯ ಟೇಬಲ್ ಕಡೆ ನಿಮ್ಮ ದಾರಿಕಾಯುತ್ತೇನೆ." ಎಂದು ಹೇಳಿದವನೇ. ಅವನು ಬಂದೆ ಬರುತ್ತಾನೆ ಎಂಬಂಥ ಪ್ರಚಂಡ ಆತ್ಮವಿಶ್ವಾಸ ಪ್ರಕಟಿಸುತ್ತ ರೆಸ್ಟೋರೆಂಟಿನತ್ತ ನಡೆಯಹತ್ತಿದ: ಸ್ವಚ್ಛವಾಗಿ ತೊಳೆದು ಖಡಕ್ ಇಸ್ತ್ರೀ ಮಾಡಿದ ಬೆಳ್ಳಗಿನ ಪೈಜಾಮಾ; ಕಪ್ಪ ಕೂದಲಿನಿಂದ ಆಚ್ಛಾದಿತವಾದ ಎದೆಯ ಬಹುಭಾಗವನ್ನು ಪ್ರದರ್ಶಿಸುವಂತೆ ತೊಟ್ಟ ಖಾಸಾ ಹೈದ್ರಾಬಾದೀ ಶೈಲಿಯ ಸ್ವಚ್ಛ ಬಿಳಿಯ ಕುರ್ತಾ; ಗಂಡುದರ್ಪವನ್ನು ಸೂಸುವ ಅಚ್ಚ ಕಪ್ಪುಬಣ್ಣದ ಮೋರೆಯಲ್ಲಿ ಆ ದರ್ಪಕ್ಕೆ ಕಳೆ ತಂದಂತಹ ದಪ್ಪಮೀಸೆಯ ಸಾಲು. ಈಗಿನ ಫ್ಯಾಶನ್ನಿಗೆ ತಕ್ಕಂತೆ ಉದ್ದವಾಗಿ ಬಿಟ್ಟ ದಟ್ಟ ಕೂದಲ ರಾಶಿ. ಇಡುವ ಪ್ರತಿ ಹೆಜ್ಜೆಯಲ್ಲಿ ವ್ಯಕ್ತವಾಗುತ್ತಿದ್ದ ಈ ಅಪರಿಚಿತನ ದರ್ಪ 'ಬಾ' ಎಂದು ಇತ್ತ ಆಹ್ವಾನವನ್ನು ಸ್ವೀಕರಿಸಬೇಕೇ ಎನ್ನುವ ಸಂದಿಗ್ಧಕ್ಕೊಳಗಾಗಿರುವಾಗಲೇ ಮುಂಬಯಿಯ ಕೌಂಟರ್ ತೆರೆದಿತ್ತು. ಕ್ಯೂದಲ್ಲಿ ಅವನದೇ ಮೊದಲ ಸ್ಥಾನ. 'ಚೆಕ್ ಇನ್' ಮಾಡಿದಾಗ ಏಳು ಗಂಟೆ. 'ಸೆಕ್ಕುರಿಟೀ ಚೆಕ್' ಆಗಲು ಇನ್ನೂ ಅರ್ಧ ಗಂಟೆಯಾದರೂ ಇದೆ. ಈ ಹೊಸ ಆಗಂತುಕನು ತನ್ನ ಹತ್ತಿರ ಮಾತನಾಡಲು ಬಂದದ್ದು ಫ್ಯಾಕ್ಟರಿಗೆ ಸಂಬಂಧಪಟ್ಟ ವಿಷಯ ಎಂಬುದರ ಬಗ್ಗೆ ನಾಗಪ್ಪನಿಗೆ ಅನುಮಾನವಿರಲಿಲ್ಲ: ಇಷ್ಟೊಂದಕ್ಕೆ ಯಾಕೆ ಹೆದರಬೇಕು-ಹೇಗೂ ಈ ಕಂಪನಿಯ ನಡುವಿನ ಸಂಬಂಧದ ವಿಷಯದಲ್ಲಿ ಒಂದು ನಿಲುಗಡೆಗೆ ಬಂದು ಮುಟ್ಟಿದ ಮೇಲೆ!

ನಾಗಪ್ಪ ರೆಸ್ಟೋರೆಂಟಿಗೆ ಹೋಗಿ ಅಪರಿಚತನು ಸೂಚಿಸಿದ ಮೂಲೆಯ ಕಡೆಗೆ ದೃಷ್ಟಿ ಚೆಲ್ಲಿದಾಗ ಕಣ್ಣಿಗೆ ಬಿದ್ದ: ಇವನನ್ನು ಕಂಡಕೂಡಲೇ ಎದ್ದು ನಿಂತು ತಾನು ಎಲ್ಲಿದ್ದೇನೆ ಎನ್ನುವುದನ್ನು ತೋರಿಸಿಕೊಟ್ಟ. ರೆಸ್ಟೋರೆಂಟಿನಲ್ಲಿ ಕೂತಾಗಲೂ ಕಪ್ಪ ಕನ್ನಡಕವನ್ನು ತೆಗೆಯದೇ ಇದ್ದುದಕ್ಕೆ ತನ್ನ ಮುಖ ಪರಿಚಯ ಸಿಗದಿರಲೀ

ಎಂಬ ಇಚ್ಛೆಯೇ ಕಾರಣವಾಗಿರಬೇಕು. ಆದರೆ, ಅವನು ತನ್ನ ಹೆಸರನ್ನು ಹೇಳುವುದಕ್ಕೂ ಹಿಂಜರಿದರೆ ಅವನೊಡನೆ ಮಾತನಾಡಲು ಒಪ್ಪಕೂಡದು ಎಂದು ನಿಶ್ಚಯಿಸಿದ. ಇವನು ಟೇಬಲ್ ಸಮೀಪಿಸಿದ್ದೇ ಕುರ್ಚಿಯೊಂದನ್ನು ಸರಿಪಡಿಸಿ ಕೂಡ್ರುವಂತೆ ನಮ್ರತೆಯಿಂದ ಕೇಳಿಕೊಂಡ: “ಕುಡಿಯಲಿಕ್ಕೇನಾದರೂ?” ಇವನು ಬೇಡವೆಂದಾಗ, “ಹೌದು ಸಮಯವೂ ಹೆಚ್ಚಿಲ್ಲ. ಸರ್, ನನಗೆ ತಿಳಿಯುತ್ತದೆ, ನನ್ನ ಪರಿಚಯ ಮಾಡಿಕೊಡದೇನೇ ಮಾತನಾಡುವದು ನಮ್ರತೆಯ ಲಕ್ಷಣವಲ್ಲ ಎನ್ನುವದು. ಆದರೆ, ಹಾಗೆ ಮಾಡಲು ನಾನೇಕೆ ನಿರುಪಾಯನಾಗಿದ್ದೇನೆ ಎನ್ನುವದು ನಿಮಗೇ ಕೊನೆಗೆ ಗೊತ್ತಾದೀತು. ಸದ್ಯ, ನಾನು ನಿಮ್ಮ ಬಗ್ಗೆ ಬಹಳ ಆದರವಿದ್ದ ಅಭಿಮಾನವಿದ್ದ ಫ್ಯಾಕ್ಟರಿಯ ಒಬ್ಬ ಕೆಲಸಗಾರನೆಂದಿಷ್ಟೇ ತಿಳಿದುಕೊಳ್ಳಿ. ಉರ್ದೂ ಪ್ರಭಾವ ದಟ್ಟವಾದ ಅವನ ಹೈದ್ರಾಬಾದೀ ಹಿಂದೀ ಅವನ ಗಂಡುದನಿಯಲ್ಲಿ ಮೂಡಿದಾಗ ನಾಗಪ್ಪನಿಗೆ ಮೈಮೇಲೆ ಮುಳ್ಳು ನಿಲ್ಲುತ್ತಿದ್ದ ಅನುಭವ. ಅವನ ಹೆಸರನ್ನು ಕೇಳದೇನೇ, ಅವನು ಹೇಳಲು ಬಂದದ್ದನ್ನು ಕೇಳಲು ಆತುರಪಟ್ಟ: ’ಸ್ಟೋರ್ಸ್‌ನಲ್ಲಿ ಕೆಲಸಮಾಡುತ್ತಿದ್ದೇನೆ. ಅಲ್ಲಿಕೆ ಕೆಲವು ತಿಂಗಳಿಂದ ನಡೆಯುತ್ತಿದ್ದ ವಿದ್ಯಮಾನಗಳಿಗೆ ದಂಗುಬಡೆದು ಹೋಗಿದ್ದೇನೆ ಸರ್...ಅವು ನಡೆಯುತ್ತಿದ್ದ ರೀತಿ ನೋಡಿದರೆ ಈ ಸಂಗತಿಗಳು ಇತ್ತೀಚಿನವು ಎಂದು ಅನ್ನಿಸುವದಿಲ್ಲ. ನಾನೋ ಸ್ಟೋರ್ಸಿಗೆ ಹೊಸಬ. ಈ ಮೊದಲು ಪ್ಯಾಕಿಂಗ್ ಡಿಪಾರ್ಟಮೆಂಟಿನಲ್ಲಿದ್ದೆ. ಈಗ ಹತ್ತು ತಿಂಗಳಿಂದಷ್ಟೇ ಸ್ಟೋರ್ಸಿನಲ್ಲಿ ಒಬ್ಬ ಕ್ಲಾರ್ಕನಾಗಿ ಕೆಲಸ ಮಾಡ್ತಾ ಇದ್ದೇನೆ. ಸರ್... ಬರೇ ಬಾಯ ಹೊಗಳಿಕೆಗಾಗಿ ಹೇಳುವದಿಲ್ಲ: ನಿಮ್ಮ ಬಗ್ಗೆ ಇಡೀ ಕಾರಖಾನೆಯಲ್ಲಿ ಬಹಳ ಒಳ್ಳೆ ಅಭಿಪ್ರಾಯ ಇದೆ ಸರ್... ಇಲ್ಲಿ ಕೆಲವು ತಿಂಗಳಿಂದ ನಡೆಯುತ್ತಿದ್ದ ಅಂಧಾದುಂದಿಗೆ ಎಲ್ಲರೂ ರೋಸಿಹೋಗಿದ್ದಾರೆ ಸರ್...ಆದರೆ ಡಿಎಮ್‌ಡೀ ಹಾಗೂ ಅವರ ಬಲಗೈ ಚೇಲಾ ರಾಮಕೃಷ್ಣರ ಕ್ರೂರ ಸತ್ತೆಗೆ ಎಲ್ಲರೂ ಥರ್ ಹೆದರುತ್ತಾರೆ. ಹಾಗೆಂದೇ ಎಲ್ಲ ಗೊತ್ತಿದ್ದೂ ಏನೂ ಗೊತ್ತಿಲ್ಲದವರ ಹಾಗೆ ಬಾಯಿಮುಚ್ಚಿಕೊಂಡಿದ್ದಾರೆ. ಆದರೆ ಪರಿಸ್ಥಿತಿ ಎಷ್ಟೊಂದು ವಿಕೋಪಕ್ಕೆ ಹೋಗಿದೆಯೆಂದರೆ ಗೇಟಮನ್ನನನ್ನು ಹಿಡಿದು. ಫ್ಯಾಕ್ಟರಿ ಮೆನೇಜರನವರೆಗೆ ಎಲ್ಲರೂ - ಇಲ್ಲಿಯ ಪ್ರಕರಣಗಳಿಗೆ ಕಾರಣರಾದ ದೊಡ್ಡ ದೊಡ್ಡ ಕುಳಗಳೇ ಇದೆಲ್ಲದರಿಂದ ಜಾರಿಕೊಂಡು ತಾವು ಮಾತ್ರ ಎಲ್ಲಿ ಸಿಕ್ಕಿಬೀಳುತ್ತೇವೋ ಎಂದು ಭಯಭೀತರಾಗಿದ್ದಾರೆ. ಕೊನೆಗೇ ನಾವೇ ಹತ್ತು ಮಂದಿ ಒಂದೆಡೆ ಕೂಡಿ ವಿಚಾರಮಾಡಿ ಒಂದು ಟೈಪ್ ಮಾಡಿ ಸಹಿ ಮಾಡಿರದ ಪತ್ರವನ್ನು ಎಮ್ ಡೀ

ಅವರಿಗೆ ಕಳಿಸಿದೆವು. ಆ ಮಾತಿಗೆ ಈಗ ಮೂರು ತಿಂಗಳ ಮೇಲೇ ಆಯಿತು. ನಮ್ಮ ಲಕ್ಷ್ಯಕ್ಕೆ ಬಂದ ಸಂಗತಿಗಳ ವಿವರಗಳನ್ನು ಕೊಟ್ಟು, ಕೂಡಲೇ ಬಂದು ತನಿಖೆ ನಡೆಸಬೇಕು ಎಂದು ಕೇಳಿಕೊಂಡಿದ್ದೆವು. ಇಷ್ಟೇ ಅಲ್ಲ, ನಿಮ್ಮನ್ನು ಮತ್ತೆ ಮೊದಲಿನ ಜಾಗಕ್ಕೇ ನಿಯಮಿಸಬೇಕೆಂದೂ ಸೂಚಿಸಿದ್ದೆವು. ನೀವು ಬರೇ ಆರ್ ಎಂಡ್ ಡೀ ಮೆನೇಜರರಾಗಿರುವಾಗಲೂ ನಿಮ್ಮ ವರ್ಚಸ್ಸು ನಮಗೇ ಗೊತ್ತಾಗದಂತೆ ನಮ್ಮೆಲ್ಲರ ಮೇಲಿತ್ತೆಂದು ತೋರುತ್ತದೆ ಸರ್…" ಎನ್ನುವಾಗ ಸೆಕ್ಯುರಿಟೀ ಚೆಕ್ ಸಲುವಾಗಿ ಮುಂಬಯಿಗೆ ಹೋಗುವ ಪ್ರಯಾಣಿಕರಿಗೆ ಮೈಕ್ ಮೇಲೆ ಮೊದಲನೇ ಕರೆ ಬಂದಿತ್ತು. ತದೇಕಚಿತ್ತದಿಂದ, ಕೆಲವೊಮ್ಮೆ ಶ್ವಾಸವನ್ನು ತಡೆಹಿಡಿದು ಕೂಡ, ಕೇಳುತ್ತಿದ್ದ ನಾಗಪ್ಪ ಕುರ್ಚಿಯಲ್ಲಿ ಅರೆನಿಮಿಷ ದಡಬಡಿಸಿದ. "ಹೆಚ್ಚು ಹೊತ್ತು ನಿಮ್ಮನ್ನು ತಡೆಯುವದಿಲ್ಲ ಸರ್…ಎಮ್ ಡೀ ಅವರು ನಾವು ಕಳಿಸಿದ ಪತ್ರವನ್ನು ಸೀರಿಯಸ್ಸಾಗಿ ತೆಗೆದುಕೊಂಡಿಲ್ಲ… ಯಾಕಂದರೆ ತನಿಖೆ ನಡೆಸುವದಿರಲಿ, ಅವರು ಆಮೇಲೆ ಹೈದ್ರಾಬಾದಿಗೇ ಬರಲಿಲ್ಲ. ಅಥವಾ…ಅವರಿಗೆ ನಮ್ಮ ಪತ್ರವೇ ಮುಟ್ಟಿರಲಿಕ್ಕಿಲ್ಲ. ನಮಗಾದ ನಿರಾಸೆ ಅಷ್ಟಿಷ್ಟಲ್ಲ. ಇಲ್ಲೆಲ್ಲ ಹಬ್ಬಿದ ಸುದ್ದಿಯೆಂದರೆ ಬೋರ್ಡ್ ಮೇಲಿನ ಡೈರೆಕ್ಟರರಲ್ಲೆಲ್ಲ ಡಿ ಎಮ್ ಡಿ ಯವರ ವರ್ಚಸ್ಸೇ MDಯವರ ವರ್ಚಸಿಗಿಂತ ದೊಡ್ಡದಾದದ್ದು. ಅವರಲ್ಲಿ ಹೆಚ್ಚಿನ ಮಂದಿ ಹೈದ್ರಾಬಾದ್ ಇಲ್ಲವೇ ದಕ್ಷಿಣ ಪ್ರಾಂತದವರಾಗಿದ್ದರಿಂದ DMD ಅವರಿಗೆ ಅವರೊಡನೆ ನಿಕಟವಾದ ಸಂಬಂಧ ಇಟ್ಟುಕೊಳ್ಳುವದು ಸುಲಭವಾಯಿತು. ಪಾರ್ಟೀ ಕೊಡುವುದರಲ್ಲಿ ಒಳ್ಳೇ ಪಳಗಿದ ಕೈಯಾದ ಅವರು ಎಲ್ಲರನ್ನೂ ಸರಬರಾಯಿ ಮಾಡಿ ಖುಶಿಯಲ್ಲಿಟ್ಟಿದ್ದಾರೆ. ಇವರ ಬಲಾಢ್ಯ ಮಹತ್ವಾಕಾಂಕ್ಷೆಯ ಮುಂದೆ M.Dಯವರು ಏನೂ ಮಾಡದವರಾಗಿದ್ದಾರೆಂಬ ಗಾಳಿಸುದ್ದಿ ಇಲ್ಲೆಲ್ಲ. ಇಷ್ಟೇ ಅಲ್ಲ. ಈ ಮೊದಲಿನ ಬೋರ್ಡ್ ಮೀಟಿಂಗಿನಲ್ಲಿ DMDಯವರು ಫ್ಯಾಕ್ಟರಿಯ ಎಲ್ಲ ವ್ಯವಹಾರಗಳನ್ನು ಸಂಪೂರ್ಣವಾಗಿ ತಾವೇ ನೋಡಿಕೊಳ್ಳುತ್ತೇವೆಂದೂ M.Dಯವರು ಬರೇ ಉಳಿದೆಲ್ಲ ವ್ಯವಹಾರಗಳನ್ನು—ಬಹುಮುಖ್ಯವಾಗಿ ಮಾರ್ಕೆಟಿಂಗ್—ನೋಡಿಕೊಳ್ಳಬೇಕೆಂದೂ ಸೂಚನೆ ಮಾಡಿದರಂತೆ. M.Dಯವರು ಈ ಉದ್ಧಟತನದ ಸೂಚನೆಯಿಂದ ಕೆಣಕಲ್ಪಟ್ಟು ಸಿಟ್ಟಿನಿಂದ ಮೇಜು ಗುದ್ದಿದರೇ ಹೊರತು… ಅವರ ಬಾಯಿಂದ ಮಾತೇ ಹೊರಡದಾಯಿತಂತೆ. ಹೌದೇ ಸರ್ ಇದೆಲ್ಲ?…ಇವರು ತಮ್ಮ ಮನಸ್ಸಿನ ತೋಲವನ್ನು ಬಿಟ್ಟು ಕೊಟ್ಟು ಮೇಜು ಗುದ್ದಿದ್ದೇ

ದೊಡ್ಡ ಅಪರಾಧವಾಗಿ ತೋರಿತಂತೆ, ಬೋರ್ಡ್ ಸದಸ್ಯರಿಗೆ DMDಯವರು ಮಾತ್ರ ಬಹಳ ಶಾಂತಚಿತ್ತರಾಗಿ ಕಾರಣ ಸಮೇತ ಮಂಡಿಸಿದ ವಿಚಾರಗಳು ಎಲ್ಲರ ಮೇಲೆ ತುಂಬ ಪರಿಣಾಮ ಮಾಡಿದುವಷ್ಟೇ ಅಲ್ಲ, ಎಲ್ಲರೂ ತಮ ತಮ್ಮ ರೀತಿಯಲ್ಲಿ ಪ್ರಶಂಸಿಸುತ್ತ —DMD ಕಳೆದ ೨೦ ವರ್ಷಗಳಲ್ಲಿ ಕಾರಖಾನೆಯನ್ನು ಇಂದಿನ ಊರ್ಜಿತ ಸ್ಥಿತಿಗೆ ತರುವಲ್ಲಿ ತೋರಿಸಿದ ಕುಶಲತೆ, ಪರಿಶ್ರಮ ನಿರ್ವಿವಾದ; ಅವರ ಪ್ರಚಂಡವಾದ ಅನುಭವ ಹಾಗೂ ಕಂಪನಿಯ ಉತ್ಪಾದನೆಯ ಟೆಕ್ನಾಲಾಜಿಯ ಬಗ್ಗೆ ಅವರಿಗೆ ಇರುವ ಅಗಾಧವಾದ ಜ್ಞಾನ ಇವುಗಳ ಸಂಪೂರ್ಣ ಲಾಭ ಕಂಪನಿಗೆ ಸಿಗಬೇಕಾದರೆ ಅವರು ಬೇಡುವ ಈ ಸಣ್ಣ ಸವಲತ್ತನ್ನು ಅನೌಪಚಾರಿಕವಾಗಿಯಾದರೂ ಬೋರ್ಡು ಆವರಿಗೆ ಕೊಡಬೇಕು ಎಂದು ಶಿಫಾರಸ್ಸು ಮಾಡಿದರಂತೆ. M.Dಯವರು ಮತ್ತೆ ಕ್ಷೋಭೆಗೊಂಡು, 'This won't work' ಎಂಬ ಮೂರೇ ಮೂರು ಶಬ್ದಗಳನ್ನು ಉಚ್ಚರಿಸುವದು ಕಷ್ಟವಾಯಿತಂತೆ. ಒಂದನ್ನು ನಾವು ಒಪ್ಪಿಕೊಳ್ಳಲೇಬೇಕು ಸರ್... ಚೆಂದವಾಗಿ, ಸಮಯಕ್ಕೆ ತಕ್ಕಂತೆ ಮಾತನಾಡಿ ಮರಳುಗೊಳಿಸುವ ಕಲೆಯಲ್ಲಿ ನಮ್ಮ DMDಯವರನ್ನು ಹಿಂದೆ ಹಾಕುವ ಯಾರೂ ಇನ್ನೂ ಹುಟ್ಟೇ ಇರಲಿಕ್ಕಿಲ್ಲ—ಅಲ್ಲವೇ ಸರ್...?" ಮೈಕ್ ಮೇಲೆ ತಿರುಗೊಮ್ಮೆ ಸೆಕ್ಯುರಿಟೀ ಚೆಕ್ ಸಲುವಾಗಿ ಕರೆಬಂದಿತು. ಕೈಗಡಿಯಾರ ನೋಡಿಕೊಂಡಾಗ ೭-೨೪. "ಚಿಂತೆ ಮಾಡಬೇಡಿ ಸರ್... ಇನ್ನೂ ಹತ್ತು ಮಿನಿಟು ಆರಾಮವಾಗಿ ಕೂಡ್ರಬಹುದು...M.Dಯವರಿಂದ ಯಾವ ಪ್ರತಿಕ್ರಿಯೆಯೂ ಆಗಲಾರದೆಂದು ಮನಗಂಡ ನಾವು ಕೆಲವು ದಿನಗಳ ಹಿಂದೆ M.Dಯವರಿಗೆ ಕಳಿಸಿದ ಪ್ರತಿಗಳನ್ನು ಮಾಡಿ ಎಲ್ಲ ಡೈರೆಕ್ಟರರಿಗೂ ಕಳಿಸಿದ್ದೇವೆ—ಅಮೇರಿಕೆಗೂ ಕೂಡ. ಇದರ ಪರಿಣಾಮ ತತ್‌ಕ್ಷಣವಾದಂತೆ ತೋರುತ್ತದೆ: ನಿನ್ನೆಯೇ DMDಯವರು ರಾಮಕೃಷ್ಣನೊಂದಿಗೆ ಮುಂಬಯಿಗೆ ಹೋಗಿದ್ದಾರೆ. ನೀವು ಇಲ್ಲಿ ಬಂದಿದ್ದೀರಿ. ಈ ಫ್ಲೈಟ್‌ನಿಂದ ಮುಂಬಯಿಗೆ ಹೊರಟಿದ್ದೀರಿ ಎನ್ನುವದು ಗೊತ್ತಾದೊಡನೆ ಓಡಿಬಂದೆ ಸರ್... ಇದು ನೋಡಿ, ಆ ಪತ್ರದ ಒಂದು ಪ್ರತಿಯನ್ನು ತಂದಿದ್ದೇನೆ," ಎನ್ನುತ್ತ ಆಗಿನಿಂದಲೂ ಕಿಸೆಯಲ್ಲೇ ಇಟ್ಟುಕೊಂಡ ನೀಲಿ ಬಣ್ಣದ ಲಕ್ಕೋಟೆಯನ್ನು ಹೊರತೆಗೆದು ಜಾಗ್ರತೆಯಿಂದ ನಾಗಪ್ಪನ ಕೈಗೆ ಕೊಟ್ಟ. ನಾಗಪ್ಪ ಕೂಡಲೇ ಅದನ್ನು ತನ್ನ ಬ್ರೀಫ್‌ಕೇಸಿಗೆ ಸೇರಿಸಿದ. "ನಿಮ್ಮ ಮನೆಯ ವಿಳಾಸ ಗೊತ್ತಿದ್ದರೆ ಪೋಸ್ಟಿನಿಂದಲೇ ಕಳಿಸುವವರಿದ್ದೆವು. ಆಫೀಸಿನ ಪತ್ತೆಗೆ ಕಳಿಸಿದರೆ...

ಅಲ್ಲಿಯೂ ಇದ್ದಾನಲ್ಲ ಬಾವಾಜೀ... ಇಡೀ ಕಾರಖಾನೆಯ ಕೆಲಸಗಾರರಲ್ಲಿ ನಿಮ್ಮ ಕಡೆ ನೋಡುತ್ತಿದ್ದಾರೆ ಸರ್... ಗರಜುಬಿದ್ದರೆ ಸ್ಟ್ರೈಕ್‌ಮಾಡಲೂ ನಾವು ಸಿದ್ಧರಿದ್ದೇವೆ, ಬರೀ ಕಾರ್ಮಿಕರಷ್ಟೇ ಅಲ್ಲ; ಮೇನೇಜರರವರೆಗೆ ಎಲ್ಲರೂ..." ಸೆಕ್ಯುರಿಟೀಯ ಕೊನೆಯ ಕರೆ ಮೈಕ್ ಮೇಲೆ ಕೇಳಿಸಿದ್ದೇ, "ಕಾಳಜಿ ಮಾಡಬೇಡಿ, ನನ್ನ ಕೈಯಿಂದ ಸಾಧ್ಯವಾದದ್ದನ್ನು ಮಾಡುತ್ತೇನೆ. ನೀವು, ನಿಮ್ಮ ಗೆಳೆಯರು ನನ್ನ ನನ್ನ ಬಗ್ಗೆ ವ್ಯಕ್ತಪಡಿಸಿದ ವಿಶ್ವಾಸಕ್ಕಾಗಿ ತುಂಬ ಆಭಾರಿಯಾಗಿದ್ದೇನೆ..." ಅಪರಿಚಿತನ ಕೈಕುಲುಕುತ್ತ ಅವನಿಂದ ಬೀಳ್ಕೊಂಡು ಸೆಕ್ಯುರಿಟೀ ಗೇಟಿನತ್ತ ನಡೆಯಹತ್ತಿದ, ನಾಗಪ್ಪ.

## ಅಧ್ಯಾಯ ಆರು

ವಿಮಾನವನ್ನು ಸಮೀಪಿಸುವಾಗ, ನಿನ್ನೆ ಡಾಯನಾ ಮಾಡಿದ ತನ್ನ ಒಂದು ವೈಶಿಷ್ಟದ ವರ್ಣನೆ ನೆನಪಿಗೆ ಬಂದು ಬಲಗೈಯಲ್ಲಿಯ ಬ್ರೀಫ್‌ಕೇಸನ್ನು ಎಡಗೈಗೆ ರವಾನಿಸಿದ. ಹಾಗೆ ಮಾಡುವಾಗ ತನ್ನಷ್ಟಕ್ಕೆ ಮುಗುಳು ನಕ್ಕ. ವಿಮಾನವನ್ನು ಪ್ರವೇಶಿಸುವ ನಿಚ್ಚಣಿಕೆ ಹತ್ತಿರವಾದಾಗ ಬಾಗಿಲಲ್ಲಿ ಸ್ವಾಗತಕ್ಕೆ ನಿಂತವಳು ಡಾಯನಾ ಇರಬಹುದೇ ಎಂದು ಆಸೆಯಿಂದ ಕಣ್ಣೆತ್ತಿ ನೋಡಿದ. ಇಲ್ಲ. ನಿಂತವಳು ಹೊಸಬಳಾಗಿದ್ದಳು. ಅವಳನ್ನು ನಮಸ್ಕರಿಸಿ ಒಳಗೆ ಕಾಲಿಡುವಾಗ, “Is Diana Driver on duty today?” ಎಂದು ಮೆಲ್ಲಗೆ ಕೇಳಿದ. “No Sir” ಎಂದು ಚಿಕ್ಕದಾಗಿ ಉತ್ತರ ಕೊಟ್ಟ ಹುಡುಗಿ ನಗಲಿಲ್ಲ. Air hostile ಎಂದು ತೋರುತ್ತದೆ ಎಂದಕೊಂಡು ತನ್ನಷ್ಟಕ್ಕೇ ನಗುತ ತನ್ನ ಸೀಟಿನ ಕಡೆಗೆ ನಡೆಯುತ್ತಿರುವಾಗ ಇನ್ನೊಬ್ಬ ಪರಿಚಾರಿಕೆ May I help you, Sir ಎನ್ನುತ್ತ ಇವನ ಬೋರ್ಡಿಂಗ್ ಕಾರ್ಡನ್ನು ತೆಗೆದುಕೊಂಡು This is 13-C Sir, ಎಂದು ಸೀಟು ತೋರಿಸಿದಳು... ಆ ಇಡೀ ಸಾಲು ಖಾಲಿಯಿತ್ತೋ ಅಥವಾ ಇನ್ನೂ ಯಾರೂ ಬಂದಿರಲಿಲ್ಲವೋ: ಹದಿಮೂರು ತನ್ನ ಪಾಲಿಗಂತೂ ಶುಭವಾಗಿರಲಿಲ್ಲ—ಅಪ್ಪ ಸತ್ತದ್ದು ವಯಸ್ಸಿನ ಹದಿಮೂರನೇ ವರ್ಷಕ್ಕೆ! ಸೀಟಿನಲ್ಲಿ ಕೂಡ್ರುವಾಗಲೇ ಭೂತಕಾಲದತ್ತ ಬಗ್ಗಿ ನೋಡಲು ಹವಣಿಸುತ್ತಿದ್ದ ನೆನಪನ್ನು ಪ್ರಯತ್ನ ಪೂರ್ವಕವಾಗಿ ಹತ್ತಿಕ್ಕಿ ಮಗ್ಗಲಿನ ಸೀಟು ಖಾಲಿಯೇ ಉಳಿದರೆ ಸೀಟು ತೋರಿಸಿದ ಪರಿಚಾರಿಕೆಯ ಹತ್ತಿರ ಹರಟೆಹೊಡೆಯುವದಾದರೂ ಸಾಧ್ಯವಾದೀತು ಎಂದುಕೊಂಡ. ಅವಳು ಬಾಗಿಲಲ್ಲಿ ಸ್ವಾಗತಕ್ಕೆ ನಿಂತವಳಷ್ಟು ಗಂಭೀರಳಲ್ಲ. ನಗಿಸಿದರೆ ನಗಬಹುದೇನೋ! ಸೀಟ್‌ಬೆಲ್ಟ್ ಧರಿಸುವಾಗ ಹಿಂದಕ್ಕೆ ಮುಂದಕ್ಕೆ ದೃಷ್ಟಿ ಹಾಯಿಸಿ ನೋಡಿದ: ಪ್ಲೇನಿನಲ್ಲಿಯ ಅನೇಕ ಸೀಟುಗಳು ಖಾಲಿಯಿದ್ದುವು. ಪರಿಚಾರಿಕೆಯ ಹತ್ತಿರ ಹರಟುವ ಉತ್ಕಂಠೆಯಲ್ಲಿ ಇನ್ನೇನನ್ನೋ ಮರೆಯುವ ಪ್ರಯತ್ನ ಅಡಗಿದೆಯೇ ಎಂಬ ಅನುಮಾನ ಅರಿವಿಗೆ ಬರುತ್ತಿರುವಾಗ ಬೆಚ್ಚಿಬಿದ್ದ.....

ನಾಗಪ್ಪನ ಅಸ್ವಸ್ಥತೆಗೆ ಕಾರಣವಾದದ್ದು ಬ್ರೀಫ್‌ಕೇಸಿನಲ್ಲಿಟ್ಟ—ಆಗ ಏರ್‌ಪೋರ್ಟಿನಲ್ಲಿ ಅಚಾನಕವಾಗಿ ಭೆಟ್ಟಿಯಾಗಿ, ಗುಟ್ಟಿನಲ್ಲಿ ಮಾತನಾಡಿಸಿ

ಕೊಟ್ಟ—ಪತ್ರ: ಲಕ್ಕೋಟೆಯಲ್ಲಿ ಭದ್ರವಾಗಿ ಮುಚ್ಚಿಕೊಂಡಿತ್ತು. ತೆರೆದು ಓದಲೇ? ಕಳೆದ ಏಳು ದಿನಗಳ ಯಾತನೆಗೆ ಕಾರಣವಾದ ಹೊಯ್ದಾಟದ ನಂತರ ಒಂದು ಗಟ್ಟಿಯಾದ ನಿರ್ಧಾರಕ್ಕೆ ಬಂದ ಮನಸ್ಸನ್ನು ಮತ್ತೆ ವಿಚಲಗೊಳಿಸುವ ಧೈರ್ಯ ನಾಗಪ್ಪನಿಗಿರಲಿಲ್ಲ. ಮುಟ್ಟಿದ ನಿಶ್ಚಯವನ್ನು ಬದಲಿಸುವಾಗಿನ ಹೊಸ ನಿಶ್ಚಯಕ್ಕೆ ಬರುವಾಗಿನ ಆತಂಕದ ನೋವಿನಂತಹ ನೋವು ಇನ್ನೊಂದಿಲ್ಲ ಎಂದು ಅನುಭವದಿಂದ ಬಲ್ಲ ನಾಗಪ್ಪನಿಗೆ ಈವರೆಗೂ ತನ್ನ ದೃಷ್ಟಿಗೆ ಬಿದ್ದಿರದ ಹೊಸ ಕ್ಷೇತ್ರದಲ್ಲಿ ಕಾಲಿಡುವ ಮನಸ್ಸಿರಲಿಲ್ಲ. ಒಬ್ಬನು ಇನ್ನೊಬ್ಬನನ್ನು ಉಪಯೋಗಿಸಿಕೊಳ್ಳುವುದರಿಂದ ಸುಳ್ಳಾದ ಸಂಬಂಧಗಳನ್ನೆಲ್ಲ ಒಂದೊಂದಾಗಿ ತೊಡೆದು, ಉಳಿದ ಆಯುಷ್ಯವನ್ನಾದರೂ—ಅಪ್ಪಟವಾದ, ನಿಜವಾದ ಸಂಬಂಧಗಳನ್ನು (ಹಾಗೆಂದರೇನು ಎನ್ನುವದೇ ಇನ್ನೂ ಸ್ಪಷ್ಟವಾಗಿರದಿದ್ದರೂ ಕೂಡ) ಹುಟ್ಟಿಸಿಕೊಳ್ಳುವುದರಲ್ಲಿ ಕಳೆಯುವುದಿತ್ತು. ಅವನಿಗೆ. ಸಾಹಿತ್ಯ ಇಂತಹ ಒಂದು ಗುರಿಗೆ ನೆರವು ನೀಡಬಹುದಾಗಿತ್ತಾದರೂ ತನ್ನ ಅಳವಿನ ಆಚೆಯ ಒಂದು ಕಾರಣದಿಂದ ತಾನಿಂದು ಅದಕ್ಕೆ ವಂಚಿತನಾಗುತ್ತಿದ್ದೇನೆಯೆ ಎಂಬ ಭಯದಿಂದ ಮ್ಲಾನಗೊಳ್ಳುತ್ತಿದ್ದ ಮನಸ್ಸು ಮೇರಿ ನೆನಪಿಗೆ ಬರತೊಡಗಿದ್ದೇ ಮತ್ತೆ ಗೆಲುವಾಯಿತು: ತನ್ನ ಮುಸ್ಸಿನಲ್ಲಿದ್ದೂ ಮಾತಿನ ತಕ್ಕೆಗೆ ಒಳಪಡಲು ಒಪ್ಪದ ಸಂಬಂಧ ಇಲ್ಲಿ ಹುಟ್ಟಬಹುದೇನೋ. ಈ ಹೊಸ ಸಾಧ್ಯತೆಯ ಕಲ್ಪನೆಯಿಂದಲೇ ಒಳಗೆ ಹುಟ್ಟಿದ ಸುಖಮೋರೆಯನ್ನು ಬೆಳಗಿ ನಿಂತ ಮಂದಸ್ಮಿತವಾಗಿ sweets ಕೊಡಲು ಬಂದ ಪರಿಚಾರಿಕೆಯ ಮೋರೆಯ ಮೇಲೂ ಪ್ರತಿಫಲಿಸಿತು. ಟೊಫೀಯೊಂದನ್ನು ಕೈಗೆ ತೆಗೆದುಕೊಳ್ಳುತ್ತ, ಪರಿಚಾರಿಕೆಯ ಕಣ್ಣುಗಳಲ್ಲಿ ಕಣ್ಣುನೆಟ್ಟು—ಥೆಂಕ್ಸ್ ಎಂದಾಗ ಅವಳೂ ತುಂಬ ಖುಶಿಯಲ್ಲಿ—You are welcome ಎಂದಳು. I know it ಎಂದು ಒಂದು ಬಗೆಯ ತುಂಟತನದಿಂದ ತನ್ನಷ್ಟಕ್ಕೇ ಅಂದುಕೊಂಡ ನಾಗಪ್ಪ ಮುಂಬಯಿಗೆ ಹೋದಮೇಲೆ ಮೊಟ್ಟ ಮೊದಲು ಮಾಡಬೇಕಾದ ಕೆಲಸವೆಂದರೆ ಮೇರಿಯನ್ನು ಅವಳ ಬಾಂದ್ರಾದ ಮನೆಯಲ್ಲೇ ಕಾಣುವದು ಎಂಬ ನಿರ್ಧಾರಕ್ಕೆ ಬಂದಿದ್ದ.

ವಿಮಾನ ಹೊರಡುವ ಸಮಯವಾಯಿತು ಎನ್ನುವದನ್ನು ಮೈಕ್ ಮೇಲೆ ಸಾರುತ್ತ, ಪ್ರಯಾಣಿಕರಿಗೆ ಹಾರ್ದಿಕ ಸ್ವಾಗತ ಬಯಸುವ, ಸುಖಕರವಾದ ಪ್ರಯಾಣ ಬಯಸುವ ಪರಿಚಾರಿಕೆಯ ಕಂಠ ಹಾಗೂ ಹಿಂದೀ ಭಾಷೆಯ ಮೇಲಿನ

ಪ್ರಭುತ್ವ ತುಂಬ ಇಷ್ಟವಾದವು. ಆಗ ಬಾಗಿಲಲ್ಲಿ ಸ್ವಾಗತಕ್ಕೆ ನಿಂತ ಹುಡುಗಿ ಇವಳು. ಅಡ್ಡಿಯಿಲ್ಲ. ಅವಕಾಶ ಸಿಕ್ಕರೆ ಅವಳನ್ನು ಮಾತನಾಡಿಸಬೇಕು ಎಂದುಕೊಂಡವನು ಮಾತನಾಡಿಸಿಯೇ ಬಿಟ್ಟ. ಅವಳು ಚಹ ಕೊಡಲು ಬಂದಾಗ, “You have a marvellous voice and by far the best announcing style I had ever, had the pleasure of listening to“ ಎಂದ. ಅವಳು ತನ್ನ ಮೊದಲಿನ ಗಾಂಭೀರ್ಯವನ್ನು ಬಿಟ್ಟುಕೊಟ್ಟು ಬಹಳ ಸುಂದರವಾಗಿ ಖುಕ್ ಎಂದು ನಕ್ಕು. “Thank you so much” ಎಂದಾಗ, ನಾಗಪ್ಪನೇ ಆಶ್ಚರ್ಯಪಟ್ಟ: ಅವಳು ಅಷ್ಟೊಂದು ಸುಂದರವಾಗಿ ನಗಬಲ್ಲಳು ಎಂಬ ಕಲ್ಪನೆಯೇ ನಾಗಪ್ಪನಿಗೆ ಇರಲಿಲ್ಲ...

ಹೊತ್ತು ಹೋದ ಹಾಗೆ ಏರ್‌ಪೋರ್ಟ್ ರೆಸ್ಟೊರೆಂಟಿನಲ್ಲಿ ಮಾತನಾಡಿಸಿದ ಆ ಅಪರಿಚಿತ (ಕಲ್ಪನೆಯಲ್ಲೇ ಆತನಿಗೆ ರೆಡ್ಡಿ ಎಂದು ಹೆಸರಿಟ್ಟ) ಮನಸ್ಸನ್ನು ತುಂಬಹತ್ತಿದ. ಅವನ ಒಂದೊಂದೇ ಮಾತು ನೆನಪಿಗೆ ಬಂದಂತೆ ಇವನೂ ಫಿರೋಜನ ಪಿತೂರಿಯದೇ ಭಾಗೀದಾರನಲ್ಲ ತಾನೇ ಎಂದು ಅನ್ನಿಸಹತ್ತಿತ್ತು.... ಅಥವಾ ಫಿರೋಜನ ಅಂದಾದುಂದಿಯ ಕಾರುಭಾರದ ದುಷ್ಟ ಫಾಯದೆಯನ್ನು ಪಡೆದ ಇವರೆಲ್ಲ ಈಗ ಅನಿರೀಕ್ಷಿತವಾಗಿ ಉದ್ಭವಿಸಿದ ಪೇಚು-ಪ್ರಸಂಗದಿಂದ ತಪ್ಪಿಸಿಕೊಳ್ಳಲು ನನ್ನನ್ನು ಉಪಯೋಗಿಸುವ ಹಂಚಿಕೆ ಮಾಡುತ್ತಿರಬಹುದೇ? ಇಷ್ಟೊಂದು ನಿಜ: Typical ರಾಜಕಾರಣಿಯ ಜಾತಿಯ ವ್ಯಕ್ತಿ: ಮಾತನಾಡುವ ಶೈಲಿ; ಮಾತನಾಡುವಾಗ ಮೋರೆಯ ಮೇಲೆ ವ್ಯಕ್ತವಾಗುವ – ತನ್ನ ಮಾತಿನ ಬಗೆಗೆ ತನಗೇ ಇದ್ದ ಮೋಹ; ಅತ್ಯಂತ ನಮ್ರವಾದ ನಯ ನಾಜೂಕಿನ ಮಾತುಗಳನ್ನು ಆಡುವಾಗಲೂ ಎಂತಹ ಕಪಟವನ್ನೂ ಅಡಗಿಸಿಡುವ ತಾಕತ್ತು; ಮೀಸೆಯ ಮೂಲೆಯಲ್ಲಿ ನೆಲೆಸಿದೆಯೇನೋ ಎನ್ನುವಂತೆ ಮೀಸೆಯ ಕುಡಿಗಳನ್ನು ಆಗೀಗ ನೇವರಿಸಿಕೊಳ್ಳುವ ಠೀವಿ; ಎದೆಯ ಕೂದಲ ರಾಶಿ ಸಾರುವ ದರ್ಪದ ಪ್ರದರ್ಶನ ಸಾಲದೆಂಬಂತೆ ಕುರ್ತಾದ ಕೈಗಳನ್ನು ಮೊಣಕೈಯವರೆಗೆ ಜಗ್ಗ ಕಪ್ಪು ರೊಣೆ ತುಂಬಿದ ದಪ್ಪ ಕೈಗಳನ್ನು ತೋರಿಸಿ ತಿರುಗಿ ಮುಚ್ಚಿಕೊಳ್ಳುವ ಫಾಜೀಲ ಹವ್ಯಾಸ- ಎಲ್ಲ ಆ ಜಾತಿಗೇ ಶೋಭಿಸುವಂತಹವು. ನನ್ನ ಬಗ್ಗೆ ಕಾರಖಾನೆಯ ತುಂಬ ಒಳ್ಳೇ ಮತವಿದೆಯಂತೆ. ಬರೇ ಆರ್ ಎಂಡ್ ಡೀ ಮೆನೇಜರನಾಗಿ ಕೆಲಸಮಾಡಿದರೂ ನನ್ನ ವರ್ಚಸ್ಸು.... ಒಂದೂ ಮಕ್ಕಳಿರಾ. ಎರಡೂ ಮಕ್ಕಳಿರಾ... ಹೋದ ಏಳು

ದಿನಗಳಿಂದ ಅನುಭವಿಸಿದ ನೋವು ಹದಿನೆಂಟುವರುಷ ಫಿರೋಜನ ಕೈಯಲ್ಲಿ ಮೂಕವಾಗಿ ಪಡುತ್ತ ಬಂದ ಯಾತನೆ-ಅವುಗಳನ್ನು ಅದುಮಿ ಹಿಡಿದ ಸಂಯಮದ ಕವಚವನ್ನು ಒಡೆದು ಹೊರಗೆ ಆಸ್ಫೋಟಿಸಿದಾಗಿನ ರೋಷವನ್ನು ಹಿಡಿದಿಡುವದು ಕೋಳೀ ಗಿರಿಯಣ್ಣನಿಂದ ಕಲಿತ ಎಲ್ಲ ಮಂತ್ರಗಳ ಘೋಷಣೆಯನ್ನು ಒಂದೇ ಕಾಲಕ್ಕೆ ಮಾಡುವದರಿಂದ ಕೂಡ ಶಕ್ಯವಾಗಿ ತೋರಲಿಲ್ಲ: ಫಿರೋಜ್, ಶ್ರೀನಿವಾಸ, ಜಲಾಲ, ಖಂಬಾಟಾ, ರಾಮಕೃಷ್ಣ, ಫಿರೋಜನ ತಾಂತ್ರಿಕಜ್ಞಾನವನ್ನು ಹೊಗಳಿದ ಡೈರೆಕ್ಟರರು, ಹಾಗೇ ಕಪ್ಪುಕನ್ನಡಕದ ಹಿಂದೆ ತನ್ನ ಗುರುತು ಮರೆಸಿ ಮಾತನಾಡಿದ ಧೂರ್ತ ರಾಜಕಾರಣಿ ರೆಡ್ಡೀ.... ಒಬ್ಬೊಬ್ಬರದೇ ಹೆಸರನ್ನು ಒದರಿ ಲಬೋ ಲಬೋ ಎಂದು ಬೊಬ್ಬೆಯಿಡಬೇಕು ಎನ್ನುವ ವಿವೇಕಶೂನ್ಯವಾದ ರೋಷವನ್ನು—ತಾನಿನ್ನೂ ವಿಮಾನದಲ್ಲಿದ್ದೇನೆ ಎಂಬ ಅರಿವು ಬಂದದ್ದೇ—ಅವುಡುಗಚ್ಚಿ ಅದುಮಿ ಹಿಡಿದ ರೀತಿಗೆ ತುಟಿಯಲ್ಲಿ ಹಲ್ಲು ಕಚ್ಚಿ ರಕ್ತ ಚಿಮ್ಮಿತು. ತನ್ನ ಈ ಸ್ಥಿತಿ ಹೀಗೇ ಮುಂದುವರಿದರೆ ತನಗೆ ಹುಚ್ಚೇ ಹಿಡಿದೀತೇನೋ ಎಂಬ ಭಯವಾಗುತ್ತಿರುವಾಗ ರಕ್ತದ ಬಿಂದುಗಳೆರಡು ಅಂಗಿಯ ಮೇಲೆ ಬಿದ್ದು ಕಲೆ ಮೂಡಿಸಿದುವು: "Take this ice. You must have cut your lips..." ಎನ್ನುತ್ತ ಆಗ, ಚಹ ಕೊಡುವಾಗ ಮಾತನಾಡಿಸಿದ ವಿಮಾನ-ಪರಿಚಾರಿಕೆ ಒಂದು ಟವೆಲ್ಲಿನಲ್ಲಿ ಬರ್ಫವನ್ನು ತಂದುಕೊಟ್ಟಳು.

ತುಟಿ ಒಡೆದ ಜಾಗದಲ್ಲಿ ಕೆಲ ಹೊತ್ತು ಬರ್ಫ್ ಹಿಡಿದು ಕೂತವನು ಬದಿಯಲ್ಲಿ ಮುಗುಳುನಗುತ್ತ, ತನ್ನನ್ನು ಮಾತನಾಡಿಸುವ ದಾರಿ ಕಾಯುತ್ತಿದ್ದ ಪರಿಚಾರಿಕೆಗೆ ಕಣ್ಣಿನಿಂದಲೇ ಆದರ ವ್ಯಕ್ತಪಡಿಸಿದ. ರಕ್ತ ಬಸಿಯುವದು ನಿಂತ ಮೇಲೆ 'many thanks' ಎನ್ನುವಾಗ ಕಣ್ಣುತುಂಬಿಬರುತ್ತಿದ್ದ ಅನ್ನಿಸಿಕೆ. "You spoilt your shirt. How did you manage to do that?" ಎಂದು ಒಡೆದ ತುಟಿಯ ಕಡೆಗೆ ಬೆರಳು ತೋರಿಸಿದಳು, "ಇಲ್ಲವಾದರೆ ನೀನೇಕೆ ನಾನು ಕೂತಲ್ಲಿಗೆ ಬರುತ್ತಿದ್ದೀ," ಎಂದು ಎನ್ನಬೇಕೆನ್ನಿಸಿದ್ದನ್ನು ಯಾವುದೋ ಸಿನೇಮಾದಲ್ಲಿ ಇಂತಹದೇ ಸನ್ನಿವೇಶವಿದ್ದದ್ದು ನೆನಪಿಗೆ ಬಂದದ್ದರಿಂದ ತಡೆದು ಸರಳವಾಗಿ, "ನನಗೆ ಯಾರ ಮೇಲೋ ಸಿಟ್ಟು ಬಂದಿರಬೇಕು," ಎಂದಾಗ ಬದಿಗೆ ಕೂತವಳು ನಗುವದನ್ನು ನಿಲ್ಲಿಸಿ ತುಸು ಗಂಭೀರಳಾದಳು. "ಹಾಗೇಕೆ ನೋಡುತ್ತೀ, ನಂಬಿಕೆಯಾಗುತ್ತಿಲ್ಲವೆ? ನಿನ್ನೆ ರಾತ್ರಿಯ ಪ್ಲೇನಿಗೆ ಹೈದ್ರಾಬಾದಿಗೆ ಬಾ. ಎಂದರು—

ಬಂದೆ. ಇಂದಿನ ರಾತ್ರಿಯ ಪ್ಲೇನಿಗೇ ಮುಂಬಯಿಗೆ ಬಾ ಎಂದರು—ಹೋಗುತ್ತಿದ್ದೇನೆ. Ask your colleague Miss Diana Driver ಅವಳಿದ್ದಳು ನಿನ್ನೆಯ ಫ್ಲೈಟ್ ಮೇಲೆ ಎಂದ. "Are you...?" ಎಂದು ಆರಂಭವಾದ ಅವಳ ಪ್ರಶ್ನೆ ಪೂರ್ತಿಯಾಗುವ ಮೊದಲೇ ತಾನೇ ಉತ್ತರ ಪೂರೈಸಿದ: "ಮಿಸ್ಟರ್ ನಾಗನಾಥ," ನನಗೆ ಆಗಲೇ ಅನ್ನಿಸಿತ್ತು ಎನ್ನುವಂತಹ ಕೌತುಕ ತುಂಬಿದ ದೃಷ್ಟಿಯಿಂದ ತನ್ನನ್ನು ನೋಡುತ್ತಿದ್ದಾಗ ಡಾಯನಾ ಇವಳಿಗೆ ತನ್ನ ಬಗ್ಗೆ ಏನೋ ಹೇಳಿರಬೇಕು ಎಂಬ ಗುಮಾನಿಯಿಂದ "Do I have a sweet sad face?" ಎಂದು ಕೇಳಿದ, ಈ ಪ್ರಶ್ನೆಯ ಅರ್ಥ ಹೊಳೆದ ಪರಿಚಾರಿಕೆ ಸಿಹಿಯಾಗಿ ನಗುತ್ತ, "...and brilliant eyes" ಎಂದು ಡಾಯನಾ ಮಾಡಿದ ವರ್ಣನೆಯನ್ನು ಪೂರ್ತಿಗೊಳಿಸಿದಳು. ಹಾಗೂ. "ಕ್ಷಮಿಸಿ ಮತ್ತೆ ಬಂದು ನಿಮ್ಮನ್ನು ಕಾಣುತ್ತೀನಿ." ಎಂದು ಕೂತಲ್ಲಿಂದ ಎದ್ದು ನಿಂತಳು. "ನಿನ್ನ ಹೆಸರನ್ನು ಹೇಳಲಿಲ್ಲ?" ಎಂದಾಗ, "ಮಿಸ್ ಇರಾನೀ—ಥ್ರೀಟೀ ಇರಾನೀ," ಎಂದಂ ಅಲ್ಲಿಂದ ಹೊರಟುಹೋದಳು: ಇನ್ನೊಬ್ಬ ಫಿರೋಜನ ಜಾತಿಯವಳು!...

ರೆಡ್ಡಿ ಹೇಳಿದ ಒಂದು ಮಾತು ನೆನಪಿಗೆ ಬಂತು: ಬೋರ್ಡ್ ಮೀಟಿಂಗಿನಲ್ಲಿ ಫಿರೋಜ್ ಎಲ್ಲರ ಮೇಲೆ ಛಾಪು ಹೊಡೆದದ್ದನ್ನು ವರ್ಣಿಸುವಾಗ ಶಾಂತಚಿತ್ತನಾಗಿ ಮಾತನಾಡಿದ ಎಂದದ್ದು. ಹೀಗೆ, ಉಳಿದವರ ಮೇಲೆ ಛಾಪು ಹೊಡೆಯುವಂತೆ ಮಾತನಾಡುವ ಕಲೆಯಿದ್ದರೇನೇ ಬದುಕಬಹುದೇನೋ. M.Dಯವರು ಮನಸ್ಸಿನ ತೋಲವನ್ನು ಕಾಪಾಡಿಕೊಳ್ಳದೇ ಮೇಜು ಗುದ್ದಿದ್ದೇ ದೊಡ್ಡ ಅಪರಾಧವಾಗಿ ತೋರಿತಂತೆ.... ಇದು ಫಿರೋಜನ ಖಾಸಾ ವೈಶಿಷ್ಟ್ಯ: ತಾನು ಏನನ್ನೂ ಮಾತನಾಡದಿರುವಾಗಲೂ ಇದಿರಾಳಿಯನ್ನು ತಪ್ಪು ಹೆಜ್ಜೆ ಹಿಡಿಯುವಷ್ಟರ ಮಟ್ಟಿಗೆ ಕ್ಷೋಭೆಗೊಳ್ಳುವಂತೆ ಮಾಡುವ ಕಲೆ!...ಕಂಪೆನಿಯ ಟೆಕ್ನಾಲಜೀ" ಈ ವಿಷಯದಲ್ಲಿ ರೆಡ್ಡಿ ಹೇಳಿದ ಮಾತಿನ ನೆನಪಿನಿಂದಲೇ ತಿರುಗೆಲ್ಲಿ ತುಟಿ ಕಚ್ಚಿಕೊಂಡೇನೋ ಎಂಬ ಭಯವಾದಾಗ ಅದನ್ನೆಲ್ಲ ಮರೆತುಬಿಡುವ ಪ್ರಚಂಡ ಪ್ರಯತ್ನದಲ್ಲಿ ಮೈ ಬಿಸಿಯಾಗುತ್ತಿದ್ದ ಅನುಭವವಾಗಿ ತಲೆಯ ಮೇಲಿನ 'ಎರ್‌ಜೆಟ್' ನ್ನು ಸರಿಪಡಿಸಿ ತಂಪು ಗಾಳಿ ತನ್ನ ಮೇಲೆಯೇ ಬರುವಂತೆ ಮಾಡಿದ: ನಾಗಪ್ಪ ತನ್ನ ಕಂಪನಿಯಲ್ಲಿ ಇಂದಿನದಲ್ಲಿಂತ ಮೇಲಿನ ಸ್ಥಾನವನ್ನು ಪಡೆಯದೇ ಇರಲು ಬೇರೆ ಏನೇ ಕಾರಣವಿದ್ದರೂ ಕಂಪನಿಯ ಇಂದಿನ ಉತ್ತಮ ಸ್ಥಿತಿಗೆ ಕಾರಣವಾದ ಟೆಕ್ನಾಲಜಿ

ಮಾತ್ರ ನಾಗಪ್ಪನ ಸೃಷ್ಟಿಶೀಲ ಮನಸ್ಸಿನ ಫಲವಾಗಿತ್ತು ಎನ್ನುವುದನ್ನು ಗೊತ್ತಿದ್ದ ಯಾರೂ ಅಲ್ಲಗಳೆಯರು. ಅಸಾಧಾರಣ ಪ್ರತಿಭೆ ಇದ್ದರಷ್ಟೇ ಸಾಲದು; ಪ್ರತಿಭೆಗೆ ಅಧಿಕಾರಿಯಾದವನಿಗೆ ತನಗೆ ಸಲ್ಲಬೇಕಾದ ನ್ಯಾಯವನ್ನು ದೊರಕಿಸಿಕೊಳ್ಳುವ ಹಿಮ್ಮತ್ತೂ ಇರಬೇಕು: ಸತ್ಯವೇ ಗೆಲ್ಲಬೇಕಾದರೆ ಸತ್ಯದ ಪ್ರಜ್ಞೆ ಇದ್ದವನು ಸತ್ಯದ ಗೆಲುವಿಗಾಗಿ ಹೋರಾಡಬೇಕಾಗುತ್ತದೆ...ನಾಗಪ್ಪ ಹಲವು ಸರತಿ ತಾನೇ ಟಿಪ್ಪಣಿ ಮಾಡಿಕೊಂಡ ಈ ಅರಿವನ್ನು ಆಚರಣೆಯಲ್ಲಿ ತರುವಾಗ, ಪ್ರತ್ಯಕ್ಷ ಹೋರಾಟಕ್ಕೆ ಇಳಿಯುವಾಗ ತನ್ನ ವ್ಯಕ್ತಿತ್ವದ ಮೂಲಭೂತ ಅಂಗವಾದದ್ದೇನೋ ಅಡ್ಡಬಂದಂತಾಗಿ ನಿಷ್ಕ್ರಿಯನಾಗಿದ್ದಾನೆ; ತನ್ನ ಪ್ರತಿಭೆಯ ಫಲಕ್ಕೆ ತಾನೇ ನಿರಾಸಕ್ತನಾಗಿದ್ದೇನೆ ಎಂಬಂತಹ ಭಾವನೆ ಹುಟ್ಟಿಸಿಕೊಂಡು ತನ್ನ ನಿಷ್ಕ್ರಿಯತೆಯನ್ನು ಸಮರ್ಥಿಸಿಕೊಂಡಿದ್ದಾನೆ. ಹಾಗೇ, ಅನಿರೀಕ್ಷಿತ ಕ್ಷಣಗಳಲ್ಲಿ, ತನ್ನ ಪ್ರತಿಭೆಯ ಲಾಭವನ್ನು ಬೇರೆ ಯಾರೋ ಪಡೆಯುತ್ತಿದ್ದಾರೆ ಎಂಬುದು ಲಕ್ಷ್ಯಕ್ಕೆ ಬಂದಾಗ ಮಾತ್ರ ಷಂಢ ಸಿಟ್ಟಿನಿಂದ ಸಿಡಿಮಿಡಿಗೊಂಡಿದ್ದಾನೆ. ರೆಡ್ಡಿಯಿಂದ, ಕೆಂಪನಿಯ ಟೆಕ್ನಾಲಾಜಿಯನ್ನು ಇಂದಿನ ಸ್ಥಿತಿಗೆ ತಂದದ್ದರ ಮಾನವನ್ನು ಕಂಪನಿಯ ಡೈರೆಕ್ಟರರು ಎಲ್ಲರನ್ನು ಬಿಟ್ಟು ಫಿರೋಜನ ತಲೆಗೆ ಒಪ್ಪಿಸಿದ್ದು ತಿಳಿದಾಗ ಸಂಯಮದ ಕಟ್ಟೆಯೊಡೆದು ಹೊರಗೆ ಬಂದು ಹೆಡೆ ಬಿಚ್ಚಿದ ಸಿಟ್ಟಿನಿಂದಾಗಿ ತಾನು ಕೆಲ ಹೊತ್ತಿನ ಮೊದಲಷ್ಟೇ ಅವಡುಗಚ್ಚಿದ ರಭಸಕ್ಕೆ ತಾನೇ ಮೊದಲೊಮ್ಮೆ ಅಪ್ರತಿಭನಾಗಿ ಈಗ ಅತ್ಯಂತ ವ್ಯಾಕುಲನಾಗಿದ್ದೇನೆ: ಕಳೆದ ಹದಿನೆಂಟು ವರ್ಷಗಳಲ್ಲಿ....ಬೇಡ ಮತ್ತೆ ಈ ಹಿನ್ನೋಟದ ಪ್ರಲೋಭನೆ. ನೌಕರಿಯನ್ನು ಬಿಟ್ಟುಕೊಟ್ಟು ಖೇತವಾಡಿಯ ಮೂಲೆಯೊಂದರಲ್ಲಿ ನ್ಯೂಸ್‌ಪೇಪರ್ ಇಲ್ಲವೇ ರದ್ದೀ ಮಾರುವ ಆಂಗಡಿಯನ್ನೋ ಇಲ್ಲ, ಸ್ಟೆಂಡ್-ಬುಕ್-ಸ್ಟಾಲಿನಂತಹ ಪುಸ್ತಕ ಅಂಗಡಿಯನ್ನೋ ತೆರೆದು ಬಿಡುವಿನ ವೇಳೆಯನ್ನು ತನಗೆ ಅತ್ನಂತ ಪ್ರಿಯವಾದ ಸಾಹಿತ್ಯರಚನೆಯಲ್ಲಿ ಕಳೆಯಬಹುದಿತ್ತು. ಅಲ್ಲಿಯೂ ಸದ್ಯ ತನ್ನ ಬಾಯಿ ಕಟ್ಟಿದ್ದಾರೆ. ಬರಿಯೆ ಬೇರೆಯವರು ಸೂಚಿಸಿದ ಉದ್ದೇಶಗಳಿಗಾಗಿ ಸಾಹಿತ್ಯಸೃಷ್ಟಿ ತನ್ನಿಂದ ಸಾಧ್ಯವಿಲ್ಲ. ತನ್ನ ಅನುಭವದಲ್ಲಿ ಹುಟ್ಟದೇ ಇದ್ದುದನ್ನು; ಬರೆಯದೇ ಇರುವುದು ಸಾಧ್ಯವೇ ಇಲ್ಲ ಎನ್ನುವಂತಹ ಉತ್ಕಟ ಕ್ಷಣಕ್ಕಾಗಿ ಕಾಯದೇ ಇರುವಂಥದ್ದನ್ನು ಶಬ್ದಗಳಲ್ಲಿ ಮೂಡಿಸುವದು ತನಗೆ ಶಕ್ಯವಿಲ್ಲ: ತನ್ನ ಸೃಜನಶೀಲತೆ ಅಭಿವ್ಯಕ್ತಿಯ ಹೊರದಾರಿಯನ್ನು ಕಾಣದೇ ಒಳಗೊಳಗೇ ಉಸಿರುಗಟ್ಟಿ ಸಾಯುತ್ತಿದೆ ಎಂಬ ಅನ್ನಿಸಿಕೆಯಿಂದ ತನ್ನ ಬಗ್ಗೆ ತನಗೇ ಕೆಡುಕೆನಿಸಿದೆ....

ಇವನು ಉದಾಸೀನಗೊಂಡು ಕೂತರೀತಿಯನ್ನು ನೋಡಿ, ಹತ್ತಿರ ಬಂದು ಕುಳಿತು—“What are you brooding about?”-ಎಂದು ಕೇಳಿದ ಪರಿಚಾರಿಕೆಯ ದನಿಗೆ ಬೆಚ್ಚಿಬಿದ್ದ. ಮರುಗಳಿಗೆ, ಸೀಟಿನ ಕೈಯ ಮೇಲೆ ಮುಗ್ಧವಾಗಿ ಊರಿದ ಬೆಳ್ಳಗಿನ ಹೆಣ್ಣು ಅಂಗೈಯನ್ನು ಮೃದುವಾಗಿ ಒತ್ತಿ-“thank you my friend” ಎಂದ. ದನಿಯಲ್ಲಿಯ ಆರ್ದ್ರತೆಯಿಂದ ತಟ್ಟಿದವಳಾಗಿ ಥ್ರೀಟೀ ಕೇಳಿದಳು: “thanks for what?” ನಾಗಪ್ಪನಿಂದ ಕೆಲಹೊತ್ತು ಮಾತೇ ಹೊರಡಲಿಲ್ಲ. ಆಮೇಲೆ ಮೆಲ್ಲಕ್ಕೆ: “for everything especially this tender kindness which restores one's faith in living,” ಎಂದ. "Nonsense! Why should you lose faith in living? You are young, talented...well-placed in life...” ಕೊನೆಯ ಮಾತಿಗೆ ನಾಗಪ್ಪ ಚಕಿತನಾದ: ವೇಳೆ ಕಳೆಯುವುದಕ್ಕೆ ಬೇರೆ ಕೆಲಸವಿಲ್ಲದ್ದರಿಂದ ಹತ್ತಿರ ಕೂತು ಹೀಗೆ ಸಿಹಿಸಿಹಿ ಮಾತನಾಡುತ್ತಿದ್ದಾಳೋ ಅನ್ನಿಸಿ ಥ್ರೀಟೀಯತ್ತ ನೋಡಿದಾಗ, ನಾಗಪ್ಪನು ತನ್ನತ್ತ ನೋಡುವ ಕ್ಷಣವನ್ನೇ ಕಾಯುತ್ತಿದ್ದವಳು, ಅವನು ಚಕಿತನಾದ ಕಾರಣ ಅರಿತವಳ ಹಾಗೆ, “ನನಗೆಲ್ಲ ಗೊತ್ತಿದೆ; ಡಾಯನಾ ಹೇಳಿದ್ದಾಳೆ,” ಎಂದಾಗ ಮಾತ್ರ ನಾಗಪ್ಪ ಸಂಪೂರ್ಣವಾಗಿ ಗೊಂದಲಿಸಿದ: ಯಾವಾಗಲಾದರೂ ಒಮ್ಮೆ, ಇಂತಹ ಪ್ರವಾಸದಲ್ಲಿ ಆಕಸ್ಮಿಕವಾಗಿ ಭೆಟ್ಟಿಯಾದ ಇವರಿಗೇಕೆ ತನ್ನ ಬಗ್ಗೆ ಇಷ್ಟೊಂದು ಆಸ್ಥೆ? ತಿರುಗಿ ಭೆಟ್ಟಿಯಾಗುವ ಶಕ್ಯತೆ ಕಡಿಮೆಯಾದದ್ದೇ ಆಗಿರಬಹುದೆ? ಸ್ವತಃ ತಾನೇ ಸಿಕ್ಕಿಬೀಳುವ ಸಂಭವವಿಲ್ಲದ ಸನ್ನಿವೇಶದ ಬಗೆಗೇ ಇವರ ಸಹಾನುಭೂತಿ ಇರಬಹುದೇ: ಹೇಗಾದರೂ ಯಾತನೆ ಪಡುವ ದುರ್ಭಾಗ್ಯ ಸದ್ಯಕ್ಕಂತೂ ತನ್ನದಲ್ಲವಲ್ಲ ಎಂಬ ಭಾವನೆಯಲ್ಲಿ ಬೇರುಬಿಟ್ಟ ಸಹಾನುಭೂತಿಯೇ ಇದು? ಉಳಿದವರ ನೋವಿನಲ್ಲಿ ತೊಡಗಿಸಿಕೊಳ್ಳದೇ ಇರುವುದರಿಂದಲೇ ನಾವು ನಮ್ಮ ಭಾವನೆಗಳ ಸಹಜ ಉತ್ಸಾಹವನ್ನು ಕಳಕೊಳ್ಳುತ್ತಿರಬಹುದೇ? ಈ ವಿಮಾನ ಪರಿಚಾರಿಕೆಯರಿಗೆ ತಮ್ಮ ವ್ಯವಸಾಯದ ಆತ್ಮೀಯ ಅಂಗವಾದ ಈ ಕಲೆ- ನಗುನಗುತ್ತ, ನಿನ್ನೊಬ್ಬನ ಹತ್ತಿರ ಮಾತ್ರ ನಾನು ಹೀಗೆ ಮಾತನಾಡುತ್ತೇನೆ, ಎಂಬಂತಹ ಭಾವನೆಯನ್ನು ಪ್ರತಿಯೊಬ್ಬನಲ್ಲೂ ಮೂಡಿಸುವಂತೆ ಸಿಹಿಸಿಹಿಯಾಗಿ ಮಾತನಾಡುವ ಈ ಕಲೆ ಬರಿಯ ಅಭ್ಯಾಸಬಲದಿಂದಲೇ ಬಂದಿರಬಹುದೆ? ಥಟ್ಟನೆ, ಯಾವ ಸ್ಪಷ್ಟ ಕಾರಣವೂ ಇಲ್ಲದೇ ಆ ದಿನ ಆಕಸ್ಮಿಕವಾಗಿ ಭೆಟ್ಟಿಯಾದ

ಸಂದರ್ಭದಲ್ಲೇ ಅಷ್ಟೊಂದು ಪ್ರೀತಿಯಿಂದ ಮಾತನಾಡಿಸಿದ ದೋಶಿ ತಿರುಗಿ ಭೆಟ್ಟಿಯಾಗಿರದ್ದಕ್ಕೆ ಏನು ಕಾರಣ? ನನ್ನ ಬಗ್ಗೆ ಪ್ರಕಟಿಸಿದ ಕಳಕಳಿ ಬರಿಯ ಆ ಕ್ಷಣದ ಮಟ್ಟಿಗಿನದಷ್ಟೇ ಆಗಿತ್ತೇ? -"ನಾನು ನಿಮ್ಮ ಬದಿಯಲ್ಲಿ ಕೂತಿದ್ದೇನೆ ಎಂಬುದನ್ನು ಕೂಡ ಮರೆತಿರಾ?—this is an insult to me"-ಎಂದು ಥ್ರೀಟೀ, ಅವನ ಕೈಬೆರಳನ್ನು ಚಿವುಟಿದಾಗ, "Sorry ಥ್ರೀಟೀ, ನೀವೆಲ್ಲ ನನ್ನ ಬಗ್ಗೆ ತೋರುತ್ತಿರುವ ಸಹಾನುಭೂತಿಯಿಂದ ಭಾವುಕನಾಗಿದ್ದೆನಷ್ಟೆ. ಇಂತಹ ಈಕ್ಷಣಿಕ ಸಹವಾಸದಲ್ಲಷ್ಟೆ ನಾವು ನಮ್ಮ ನಿಜವಾದ ಅನ್ನಿಸಿಕೆಗಳನ್ನು ಸಹಜವಾಗಿ ವ್ಯಕ್ತಪಡಿಸಬಲ್ಲೆವೇನೋ ಎಂದನ್ನಿಸುತ್ತದೆ ನೋಡು. ದೀರ್ಘಕಾಲದ ಸಂಬಂಧವೆಂದರೆ ಯಾವುದಾದರೂ ವ್ಯಾವಹಾರಿಕ ಸನ್ನಿವೇಶದಲ್ಲಿ ಬೇರುಬಿಟ್ಟದ್ದೇನೋ. ಸ್ವಾರ್ಥದ ಸಂರಕ್ಷಣೆಯ ಗರಜಿನಿಂದ ಸುಳ್ಳಾದದ್ದೇನೋ..." ಎಂದ, ತನ್ನಷ್ಟಕ್ಕೇ ಎಂಬಂತೆ. ಥ್ರೀಟೀ: "ಮೇಲಾಗಿ ಪ್ರತಿಯೊಂದನ್ನೂ ನೀವು ಮನಸ್ಸಿಗೆ ಹಚ್ಚಿಕೊಳ್ಳುತ್ತೀರಿ: ಮನಸ್ಸಿಗೆ ಹಚ್ಚಿಕೊಂಡ ಪ್ರತಿಯೊಂದರ ಬಗ್ಗೆಯೂ ಚಿಂತೆಮಾಡುತ್ತ ಕೂಡುತ್ತೀರೆಂದು ತೋರುತ್ತದೆ. ನಾನು ನಗುನಗುತ್ತ ಓಡಾಡುತ್ತಿದ್ದೇನೆ ಎನ್ನುವುದರ ಅರ್ಥ ನನಗೆ ದುಃಖವೇ ಇಲ್ಲವೆಂದೇ? ಎಲ್ಲರನ್ನು ಬಿಟ್ಟು ನಿಮ್ಮ ಹತ್ತಿರವೇ ಮಾತನಾಡಲು ಬಯಸಿದ್ದಕ್ಕೆ ಮಹತ್ವ ಇಲ್ಲವೆನ್ನುತ್ತೀರಾ? ಡಾಯನಾ ನಿಮ್ಮ ಬಗ್ಗೆ ಹೇಳಿರದೇ ಇದ್ದರೆ ನಿಮ್ಮ ಕಡೆ ಲಕ್ಷ್ಯ ಹೋಗುತ್ತಿತ್ತೋ ಇಲ್ಲವೋ ಆ ಮಾತು ಬೇರೆ. ಆದರೆ ಬಂದು ಮಾತನಾಡಿಸಿದ ಮೇಲೆ ವ್ಯಕ್ತವಾದ ಭಾವನೆಯನ್ನು - ಕ್ಷಣಿಕವಾಗಿರಲೊಲ್ಲದೇಕೆ-ನಾವೇಕೆ ಒಪ್ಪಿಕೊಳ್ಳಬಾರದು? ನೀವು ದೊಡ್ಡ ಲೇಖಕರಂತೆ: ವಿಚಾರಗಳನ್ನು ತಕ್ಕ ಭಾಷೆಯಲ್ಲಿ ಹಿಡಿಯುವ ಕಲೆ ನಿಮಗಿದೆ-ನನಗಿಲ್ಲ. ಆದರೆ ನಾನೂ ಇಂಗ್ಲಿಷ್ ಸಾಹಿತ್ಯದ ಗ್ರ್ಯಾಜುಯೇಟ್ ವಿದ್ಯಾರ್ಥಿನಿ. ಮುಂಬಯಿಯ ವಿಲ್ಸನ್ ಕಾಲೇಜಿನಲ್ಲಿ ಕಲಿತದ್ದು. ಹೆಮಿಂಗ್‌ವೇ ನನ್ನ ಪ್ರೀತಿಯ ಲೇಖಕ. ನಾನು ಅವನನ್ನು ಅರ್ಥ ಮಾಡಿಕೊಂಡ ರೀತಿ, ಹೇಳಲೇ—ಬುಲ್ ಫೈಟ್ಸ್‌ಗಳ ಬಗ್ಗೆ, ಯುದ್ಧದ ಬಗ್ಗೆ, ಸಾವಿನ ಬಗ್ಗೇ ಬರೆಯುವ ಅವನ ಮನಸ್ಸು ನನಗೆ ತಟ್ಟಿದ್ದರ ಕಾರಣ?: ಎಲ್ಲದರ ಕ್ಷಣಿಕತೆಯನ್ನು ಅನುಭವಿಸುವ ಅದರ ಅನನ್ಯ ರೀತಿ! ನನಗನ್ನಿಸುತ್ತದೆ: ಮನುಷ್ಯನ ಅನೇಕ ಮೂಲಭೂತವಾದ ಭಾವನೆಗಳ ಭ್ರಷ್ಟಾಚಾರಕ್ಕೆ ಕಾರಣ ಕೂಡ ಇದೇ: ಎಲ್ಲದರಲ್ಲೂ ಶಾಶ್ವತೆಯನ್ನು ಬಯಸುವ ಅವನ ದುಷ್ಟ ಚಟ. ಸಾವಿನ ಭಯ ಇಂದಿನ ಮಾನವನ ದೊಡ್ಡ ರೋಗವಾಗಿದೆ. ವಿಮಾನ-ಅಪಘಾತದಲ್ಲಿ ಸಾಯುವ

ಶಕ್ಯತೆ ನನ್ನ ಮುದಿ ಅಮ್ಮನ ದುಗುಡಕ್ಕೆ ಕಾರಣವಾದರೆ, ಅದೇ ನಾನು ಈ ವೃವಸಾಯವನ್ನು ಸ್ವೀಕರಿಸುವುದರಲ್ಲಿ ಪಟ್ಟ ಖುಶಿಗೆ ಕಾರಣವಾಯಿತು. ಸ್ಪಷ್ಟವಾಗಿ, ಒಪ್ಪಿಕೊಳ್ಳಬೇಕಾದ ಸತ್ಯಸಂಗತಿ: ಬಹುಶಃ ನಾವಿಬ್ಬರೂ ಇನ್ನೆಂದಿಗೂ ಭೆಟ್ಟಿಯಾಗುತ್ತೇವೋ ಇಲ್ಲವೋ ಎಂಬ ಭಾವನೆಯೇ ಇದೀಗಿನ ಈ ಕ್ಷಣಿಕ ಸಹವಾಸ ಕೊಡುತ್ತಿರುವ ಉತ್ಕಟವಾದ ಆನಂದಕ್ಕೆ ಕಾರಣ ಎನ್ನುವದು. ಈ ಉತ್ಕಟತೆಯನ್ನೂ ಸಂಶಯದಿಂದ ನೋಡುವ ಹವ್ಯಾಸಕ್ಕೆ ಹೋಗಬೇಡಿ – I call that vulgar. ಮಾತನಾಡಿದ್ದು ಬಹಳವಾಯಿತೇನೋ, ಎಂದವಳೇ ಒಮ್ಮೆಲೇ ಮೌನ ಧರಿಸಿ ಕುಳಿತುಬಿಟ್ಟಳು. ನಾಗಪ್ಪನಿಂದಲೂ ಕೂಡಲೇ ಮಾತು ಹೊರಡದಾಯಿತು. ವಿಮಾನದಲ್ಲಿಯ ಮುಖ್ಯ ದೀಪಗಳನ್ನೆಲ್ಲ ಆರಿಸಿದ್ದರಿಂದ ಮೂಲೆಯ ಸಣ್ಣ ದೀಪಗಳ ಧೂಸರವಾದ ಬೆಳಕಷ್ಟೇ ವಿಮಾನದ ತುಂಬ ಪಸರಿಸಿತ್ತು. ಅಲ್ಲಲ್ಲಿ ಒಂದೆರಡು ಜನ ಹೊತ್ತಿಸಿದ ಓದುವ ದೀಪಗಳ ಬೆಳಕು: ನಾಗಪ್ಪ ಅರಿವಿಲ್ಲದೇನೇ ಆದರೂ ಯಾವುದೇ ಬಗೆಯ ಸುಳ್ಳು ಭಾವನೆಗಳಿಗೆ ಒಳಗಾಗದೇನೇ ಥ್ರೀಟೀಯ ಕೈಮೇಲೆ ಕೈಯಿಟ್ಟು ಕೂತ: ಶಬ್ದಗಳಿಗೆ ಮಾಡಲಾಗದ್ದು ಆ ಮೂಕ ಸ್ಪರ್ಶ ಮಾಡುತ್ತಿತ್ತು. ಮನುಷ್ಯಸಂಬಂಧಗಳ ಕ್ಷಣಭಂಗುರತೆಯನ್ನು ಕುರಿತು ಉಂಟಾದ ಹೊಸ ಅರಿವಿನಲ್ಲಿ ಥ್ರೀಟೀಯ ಈ ಸಹವಾಸ ವರ್ಣಿಸಲಸಾಧ್ಯವಾದ ಸುಖಕ್ಕೆ ಸೆಲೆಯೊಡಿಸಿತ್ತು.

ವಿಮಾನ ಮುಂಬಯಿಯ ನಿಲ್ದಾಣವನ್ನು ಸಮೀಪಿಸುತ್ತಿದ್ದಂತೆ ಒಳಗಿನ ದೀಪಗಳೆಲ್ಲ ತಿರುಗಿ ಬೆಳಗಿ ನಿಂತವು. ತಾನೀಗ ತನ್ನ ಡ್ಯೂಟಿಯ ಮೇಲೆ ಹೋಗಬೇಕು ಎನ್ನುವುದನ್ನು ಸೂಚಿಸುತ್ತ, "Don't worry, everything will be allright-I will pray for you," ಎಂದು ಥ್ರೀಟಿ ಸೀಟನ್ನು ಬಿಟ್ಟು ಎದ್ದಳು. "Goodbye my transient friend," ಎಂದು ಇವನು ಮೆಲುದನಿಯಲ್ಲಿ ಅಂದಾಗ, ಅವನು ಹಾಗೆ ಯಾಕೆ ಅಂದನೆಂಬುದನ್ನು ಅರಿತವಳ ಹಾಗೆ ಅರ್ಥಪೂರ್ಣವಾಗಿ ನಕ್ಕಳು. ಥ್ರೀಟೀ ಹೊರಟುಹೋಗುತ್ತಲೇ, ಅವಳ ಕೈಯನ್ನು ಹಿಡಿದು ಕೂತಲ್ಲೇ ಒಳಗೊಳಗೇ ನಿಶ್ಚಿತವಾದದ್ದೇನೋ ತನ್ನಷ್ಟಕ್ಕೇ ಆಚರಣೆಗೆ ಇಳಿಯಿತು ಎನ್ನುವ ರೀತಿ - ಬ್ರೀಫ್‌ಕೇಸ್ ತೆರೆದು ರೆಡ್ಡಿ ಕೊಟ್ಟ ಪತ್ರವನ್ನು ಕೈಗೆ ತೆಗೆದುಕೊಂಡವನೇ ಭರಭರನೆ ಹರಿದು ಚೂರು ಚೂರು ಮಾಡಿ ಮುಂದಿನ

ಸೀಟಿನ ಹಿಂಬದಿಯ ದೊಡ್ಡಕಿಸೆಯಲ್ಲಿ ತುರುಕಿಬಿಟ್ಟ: ಸತ್ತುಹೋಗಿ ಒಂದೂ ಮಕ್ಕಳಿರಾ. ನನಗೂ ನಿಮಗೂ ಯಾವ ಸಂಬಂಧವೂ ಇಲ್ಲ, ಈಗ...

ಹೀಗೆ ಪತ್ರವನ್ನು ಹರಿದೊಗೆಯುವುದರಿಂದಲೇ ಸಂಬಂಧ ಕಡಿಯುತ್ತಿದ್ದರೆ ಪತ್ರವನ್ನು ಓದಿದ ಮೇಲೇ ಹರಿದೊಗೆಯಬಹುದಿತ್ತಲ್ಲ. ಹಾಗೆ ಓದುವ ಮೊದಲೇ ಹರಿದದ್ದರ ಹಿಂದಿನ ಪ್ರೇರಣೆ ಆ ಪತ್ರ ತೋರಿಸಬಹುದಾಗಿದ್ದ ಸತ್ಯಸ್ಥಿತಿಯನ್ನು ಇದಿರಿಸುವಲ್ಲಿ ತನಗನ್ನಿಸುತ್ತಿದ್ದ ಭಯವಾಗಿರಬಹುದಲ್ಲವೇ ಎಂಬ ಆದೇ ಹುಟ್ಟುತ್ತಿದ್ದ ಅನ್ನಿಸಿಕೆ ಹೊಸ ಅಸ್ವಸ್ಥತೆಗೆ ಕಾರಣವಾಗಹತ್ತಿದ ಹೊತ್ತಿಗೆ ಅವನು ಬಹಳ ಮೆಚ್ಚಿಕೊಂಡ ಥ್ರೀಟಿಯ ದನಿ ಮೈಕ್ ಮೇಲೆ ಬಂದಿತು: ವಿಮಾನ ಮುಂಬಯಿಯ ಏರ್‌ಪೋರ್ಟಿನಲ್ಲಿ ಇಳಿಯಹತ್ತಿತು. ಲಕ್ಷಗಟ್ಟಲೆ ದೀಪಗಳು ಹಸಿರು ನೀಲಿ ಬಣ್ಣಗಳ ಬೆಳಕನ್ನು ಬೀರುತ್ತ ಕಣ್ಣುಮಿಟುಕಿಸುವ ರೀತಿ ಮುಂಬಯಿಯ ಕತ್ತಲೆಗೆ ವಿಚಿತ್ರ ಮೆರುಗನ್ನು ತಂದಿದ್ದುವು. ನಡುವೆಯೆ ಚೆಂಗನೆ ಎದ್ದು ನಿಂತ ಟ್ರಾಂಬೇ ರಿಫೈನರಿಗಳ—ಆಕಾಶದಲ್ಲಿ ಬೆಂಕಿ ಉಗುಳುವ—ಬೃಹದಾಕಾರದ ಚಿಮಣಿಗಳು. ದೂರದಲ್ಲಿ, ಒಳಗಿನ ನಿಯಾನ್ ಲೈಟ್ಸ್‌ಗಳ ಬೆಳಕಿನ ವೈಭವವನ್ನು ಹೊರಗಿನ ಕತ್ತಲೆಗೆ ಮೆರೆಯಿಸುತ್ತ, ಬಾಯಿಮುಚ್ಚಿ, ಕೈಕಟ್ಟಿ ನಿಂತಂತೆ ತೋರುವ ಏರ್‌ಪೋರ್ಟಿನ ಮುಖ್ಯ ಕಟ್ಟಡ: ನೆತ್ತಿಯ ಮೇರೆ ತಿರುಗುವ ಶೋಧನ-ದೀಪದ ಕಣ್ಣುಕುಕ್ಕುವ ಬೆಳಕು ಕತ್ತಲೆಯನ್ನು ಕ್ಷಣಕ್ಕೊಮ್ಮೆ ಸೀಳುತ್ತಿತ್ತು. ವಿಮಾನ ನೆಲಕ್ಕೆ ತೀರ ಹತ್ತಿರವಾಗುತ್ತಿದ್ದ ಹಾಗೆ ರನ್‌ವೇದ ಗುಂಟ ಹಚ್ಚಿದ ಸಾಲುದೀಪಗಳು ಹಾವಿನಂತೆ ಹರಿದ ಅದರ ಬಳಸನ್ನು ತೋರಿಸಿಕೊಟ್ಟವು. ನಾಗಪ್ಪನ ಮನಸ್ಸೂ ಮೆಲ್ಲನೆ ಮುಂಬಯಿಯ ವಾಸ್ತವತೆಗೆ ಇಳಿಯಹತ್ತಿತು... ವಿಮಾನದಿಂದ ಇಳಿದು ನೆಲದ ಮೇಲೆ ಕಾಲಿರಿಸಿದ್ದೇ ತಡ, ಹೊರಗಿನ ಸುಖದಾಯಕ ತಂಪಿನಲ್ಲಿ ಕೂಡ ಬೆವರೊಡೆಯುವಂತೆ ಕ್ಷಣದ ಮಟ್ಟಿಗೆ ನಡುಗಿದ: ಕೈಗೆ ಕೊಟ್ಟ ಪತ್ರವನ್ನು ಓದುವ ಮೊದಲೇ ಹರಿದೊಗೆದದ್ದು ಹೇಡಿತನದ ತಪ್ಪಾಯಿತೇನೋ ಎಂಬ ಅನ್ನಿಸಿಕೆ ಈ ಮೊದಲಿನ ಸುತ್ತುಸುತ್ತಾದ ವಿಚಾರಗಳನ್ನು ಸೀಳಿ ಮೇಲಕ್ಕೆ ಬರಹತ್ತಿತ್ತು.

## ಅಧ್ಯಾಯ ಏಳು

ಖೇಮರಾಜಭವನದ ೫೧ನೇ ನಂಬರಿನ ಖೋಲಿಯನ್ನು ಹೋಗುತ್ತಲೇ ತೀರ ಬೇರೆಯೇ ಒಂದು ಜಗತ್ತನ್ನು ಸೇರಿದ ಅನುಭವ. ಪ್ಲೇನಿನ ಮೇಲೆ ಕೊಟ್ಟ 'ಸ್ನೆಕ್ಸ್' ಹೊಟ್ಟೆ ತುಂಬುವಂತಹವಲ್ಲವಾಗಿದ್ದರೂ ಹಸಿವೆಯನ್ನು ಕಳೆಯಲು ಸಾಕಾಗುವಷ್ಟಿದ್ದುವು. ಊಟ ಮಾಡುವ ವಿಚಾರವಿರಲಿಲ್ಲ. ಸೂಟ್‌ಕೇಸ್ ಕೋಣೆಯಲ್ಲಿ ಇಟ್ಟು ಕೆಳಗಿನ ಭೈಯಾನ ದುಕಾನಿನಲ್ಲಿ ಒಂದು ಗ್ಲಾಸು ಮಲಾಯಿ ತೇಲುವ ಬಿಸಿಬಿಸಿ ಹಾಲನ್ನು ಕುಡಿದು ಬಂದರಾಯಿತು ಎಂದಕೊಂಡು ಹೊರಟ. ನಿಚ್ಚಣಿಕೆಯ ಮೆಟ್ಟಿಲುಗಳನ್ನು ಇಳಿಯುವಾಗ, ತನ್ನ ಒಂಟಿತನದ ತೀವ್ರವಾದ ಅರಿವಿನೊಂದಿಗೇ ಕಳೆದ ಎಂಟು ದಿನಗಳಿಂದ ಅನುಭವಿಸುತ್ತ ಬಂದದ್ದರ-ಹಾಸ್ಯಾಸ್ಪದ ಎನ್ನುವಷ್ಟರ ಮಟ್ಟಿಗಿನ- ಅಸಂಬದ್ಧತೆಯ ಅರಿವೂ ಬಂದು ಒಂದು ವಿಚಿತ್ರ ಮೂಡಿಗೆ ಒಳಗಾದ: ಎಷ್ಟೇ ಕ್ಷಣಿಕವಾಗಿರಲೊಲ್ಲದೇಕೆ ಡಾಯನಾ, ಥ್ರೀಟೀಯರ ಸಹವಾಸದಲ್ಲಿದ್ದಾಗ ತನ್ನ ಸೃಜನಶೀಲತೆಯಲ್ಲಿ ಮೊಳೆತ ವಿಶ್ವಾಸ ಈಗ ಇದ್ದಕ್ಕಿದ್ದಂತೆ ಒಸರಿ ಹೋಗಿ ಒಂದು ಬಗೆಯ ಅಸಹಾಯಕತೆಯ ಭಾವನೆ ತಾನೇ ತಾನಾಗಿ ತಲೆಯೆತ್ತಿತು. ನೂರಾರು ಜನರಿಂದ ಗಜಬಜಿಸುವ ಚಾಳಿನಲ್ಲಿಯ ಯಾರೊಬ್ಬರೊಡನೆ ಜೀವಂತ ಸಂಬಂಧ ಹುಟ್ಟಿಕೊಂಡಿರಲಿಲ್ಲ. ಈ ವಿಶಾಲ ಜನ-ಸಮುದ್ರದಲ್ಲಿ ಪ್ರತಿಯೊಬ್ಬನೂ ತನ್ನಷ್ಟಕ್ಕೇ ಒಂದು ನಡುಗಡ್ಡೆಯಾಗಿದ್ದಾನೆ....ನಡುವೆಯೇ ಮೊಳೆತ ಒಂದು ವಿಚಾರದಿಂದ ಪುಲಕಿತನಾದ: ಕೈಗಡಿಯಾರ ನೋಡಿಕೊಂಡ. ಇನ್ನೂ ಹತ್ತೂವರೆ ಗಂಟೆಯಷ್ಟೇ. ಮೇರಿಗೆ ಫೋನ್ ಮಾಡಿದರೆ ಹೇಗೆ... ಇಷ್ಟು ರಾತ್ರಿಯ ಹೊತ್ತಿಗೆ ಹುಡುಗಿಯೊಬ್ಬಳಿಗೆ ಫೋನ್ ಮಾಡುವದೆಂದರೆ...ತಪ್ಪು ತಿಳಿದಾರೆ?....ಯಾರ ಮನೆಯಲ್ಲಿರುತ್ತಾಳೆ ಎಂಬುದೇ ಗೊತ್ತಿಲ್ಲ. ಬಾಂದ್ರಾ ಖಾರಗಳತ್ತ ಇರಬಹುದೆಂದು ಊಹಿಸಿದ್ದು ಕೂಡ ಅವಳು ಕೊಟ್ಟ ಟೆಲಿಫೋನ್ ನಂಬರಿನ ಮೂಲಕ....ಈಗ ಬೇಡ. ಬೆಳಿಗ್ಗೆ ಏಳರ ಸುಮಾರಿಗೆ ಮಾಡಿದರಾಯಿತು. ಆಫೀಸಿಗೆ ಹೊರಡುವ ಮೊದಲು ಸಿಗಬಹುದು. ಭೈಯಾನಲ್ಲಿ ಹಾಲು ಕುಡಿದು ಬಂದು, ಡ್ರೆಸ್ಸು ಬದಲಿಸಿ ಹಾಸಿಗೆಯಲ್ಲಿ ಅಡ್ಡವಾದಲ್ಲೇ ರೆಡ್ಡಿ ಕೊಟ್ಟ ಪತ್ರದ ನೆನಪುಕಾಡಹತ್ತಿತು: ಥತ್ತಿದರ! ಈ ಶನಿಯು ನಿದ್ದೆಮಾಡಲು ಬಿಡುತ್ತದೆಯೋ ಇಲ್ಲವೋ: ಹಾಸಿಗೆಯಿಂದ

ಎದ್ದವನೇ ಹಿಂದು ಮುಂದಿನ ವಿಚಾರ ಮಾಡುವ ಮೊದಲೇ ಬಾಟಲಿಯಿಂದ ಎರಡು ಬಾರ್ಬಿಟ್ಯುರೇಟ್ ಗುಳಿಗೆಗಳನ್ನು ಹೊರತೆಗೆದು ನುಂಗಿ ನೀರು ಕುಡಿದ...

ಬಾರ್ಬಿಟ್ಯುರೇಟ್ ಗುಳಿಗೆಗಳು ತರಿಸಿದ ನಿದ್ದೆ ಎತ ಎಚ್ಚರವಾಗುವ ಹೊತ್ತಿಗೆ ಬಿಸಿಲು ಚಲೋ ಮೇಲೇರಿತ್ತು. ಗಡಿಯ ನೋಡಿದಾಗ ೮-೩೦. Oh! Hell ಎಂದು ತನ್ನ ಎಚ್ಚರಗೇಡಿತನವನ್ನು ಶಪಿಸಿಕೊಳ್ಳುತ್ತ ಹಾಸಿಗೆಯಲ್ಲಿ ಎದ್ದು ಕೂತ: ಮೇರಿ ಇಷ್ಟು ಹೊತ್ತಿಗೆ ಹೊರಟು ಹೋಗಿರಬೇಕು. ಈಗ ಮತ್ತೆ ಫೋನ್ ಮಾಡುವದು ರಾತ್ರಿ ಎಂಟು ಗಂಟೆಯ ನಂತರವೇ. ಬೆಳಿಗ್ಗೇ ಫೋನ್ ಮಾಡಿ ರಾತ್ರಿಯ ಊಟಕ್ಕೆ ಅವಳನ್ನು ಕರೆಯುವ ವಿಚಾರವಿತ್ತು...ಆಫೀಸಿಗೇ ಫೋನ್ ಮಾಡಿದರೆ ಹೇಗೆ... ಮೇರಿಗೆ ಸೇರಲಿಕ್ಕಿಲ್ಲ....

ಕದ ತಟ್ಟಿದ ಸದ್ದು ಕೇಳಿಸಿ ಹಾಸಿಗೆಯಿಂದ ಇಳಿದ. ಗುಳಿಗೆಗಳ ಅಮಲು ಇನ್ನೂ ಪೂರ್ತಿಯಾಗಿ ಕಳೆದಿರಲಿಲ್ಲವಾದ್ದರಿಂದ ನಡೆಯುವಾಗ ಹೆಜ್ಜೆ ತಪ್ಪುತ್ತಿದ್ದ ಅನ್ನಿಸಿಕೆ: ಕದ ತೆರೆದಾಗ ಕಣ್ಣ ಮುಂದೆ ನಂಬಲಾಗದ ಆಕೃತಿ-ಖಂಬಾಟಾ! "ಹೆಲ್ಲೋ ಹೆಲ್ಲೋ ನೋಶೀರ್ ನೀನು! ಬಾ ಬಾ ಬಾ. What a surprise early in the morning! ಬಾ ಕೂತಣೋ. ಇದೀಗ ಮೋರೆ ತೊಳೆದುಕೊಂಡು ಬರುತ್ತೇನೆ." ಎಂದು ಖಂಬಾಟಾಗೆ ಕುರ್ಚಿಯೊಂದನ್ನು ಕೊಟ್ಟು ತಾನು ಮುಖಮಾರ್ಜನೆಗಾಗಿ ಮೋರಿಗೆ ನಡೆದ. ಒದ್ದೆ ಮೋರೆಯನ್ನು ಟವೆಲ್ಲಿನಿಂದ ಒರಸಿಕೊಳ್ಳುತ್ತ ಹೊರಗೆ ಬಂದಾಗ, ಖಂಬಾಟಾ ಕಪಾಟುಗಳಲ್ಲಿಯ ಪುಸ್ತಕಗಳನ್ನು ನೋಡುವುದರಲ್ಲಿ ಗರ್ಕನಾಗಿದ್ದ. ಮೋರೆಯಲ್ಲಿ, ಖಂಬಾಟಾನಲ್ಲಿ ಹಿಂದೆಂದೂ ನೋಡಿ ಗೊತ್ತಿರದ-ಅವನ ಅರೆಮುಳ್ಳು ಮೋರೆಗೆ ಶೋಭಿಸದ ಒಂದು ಬಗೆಯ ದರ್ಪ ಹಾಗೂ ಅದರೊಡನೆ ಸೇರಿಕೊಂಡ ಇದೆಂತಹ ದರಿದ್ರ ಜಾಗಕ್ಕೆ ಬಂದಿದ್ದೇನಪ್ಪ ಎಂಬಂತಹ-ತಾತ್ಸಾರ ಮೂಡಿದ್ದುವು: ನಾಗಪ್ಪನಲ್ಲಿ ಕೀಟಲೆ ಮಾಡುವ ಹುಕ್ಕಿ ಕೂಡಲೇ ಚುರುಕುಗೊಂಡಿತು: "Don't tell me you are seeing books for the first time in your life...ನೀನು ಅವುಗಳನ್ನು ನೋಡುತ್ತಿದ್ದ ರೀತಿಗೆ ಹಾಗೆನಿಸಿತು ನೋಡು... ನಿನಗೆ ದಕ್ಕುವ ವಿಷಯವಲ್ಲವದು ನೋಶೀರ್..." ಎಂದ. ಇಲ್ಲಿ ಬರುವ ಮೊದಲೇ ಈ ಭೇಟಿಯ ತಾಲೀಮು ಮಾಡಿ ಬಂದಂತಿದ್ದ ಖಂಜಾಟಾ ಒಮ್ಮೆಲೇ ಸಿಟ್ಟಿಗೆದ್ದು—"Call me Mr. Khambata. Don't forget you are yet under

suspension orders…" ಎಂದ. ಇದನ್ನು ಕೇಳಿದ್ದೇ ತಡ, ನಾಗಪ್ಪ ಹಿಮ್ಮೆಲೇ ಬಿದ್ದು ಬಿದ್ದು ನಗಹತ್ತಿದ ರೀತಿಗೆ ಖಂಬಾಟಾ ಮನೆಯಲ್ಲಿ ತಾಲೀಮು ಮಾಡಿ ಬಂದ ದರ್ಪ ಸಡಿಲುಗೊಳ್ಳಹತ್ತಿತು. ನಾಗಪ್ಪ ನಗುವುದನ್ನು ನಿಲ್ಲಿಸಿದ ಮೇಲೆ "Thank you ಮಿಸ್ಟರ್ ಖಂಬಾಟಾ. ನೀನು ನನ್ನನ್ನು ಸಸ್ಪೆಂಡ್ ಮಾಡಿದ್ದೀ ಎಂಬುದು ಮರೆತೇ ಹೋಗಿತ್ತು ನೋಡು. ನೆನಪುಮಾಡಿಕೊಟ್ಟದ್ದು ಒಳ್ಳೆಯದೇ ಆಯಿತು: ಈಗಲೇ ಹೇಳಿರುತ್ತೇನೆ: ನಿನ್ನನ್ನು ಕೋರ್ಟಿಗೆಳೆಯುವವನಿದ್ದೇನೆ… and sue you for damages…ನನ್ನ ವಕೀಲರೇ ನಿನಗೆ ನೋಟೀಸಿನ ಮುಖಾಂತರ ತಿಳಿಸುತ್ತಾರೆ, ಕಾಳಜಿಮಾಡಬೇಡ. ಇಷ್ಟೇ. ೬0,000 ರೂಪಾಯಿ ಸಿದ್ಧಮಾಡಿ ಇಡು. ನೀನು ತಪ್ಪ ಕಾರಣ ಕೊಟ್ಟು ಸಸ್ಪೆಂಡ್ ಮಾಡಿ ನನ್ನ ಮನಸ್ಸಿಗೆ ಉಂಟುಮಾಡಿದ ನೋವಿಗೆ, ಮಾನಹಾನಿಗೆ ನೀನು ತೆರಬೇಕಾಗುವ ದಂಡ; ನಿನ್ನ ವಕೀಲರೇ ಎಲ್ಲ ತಿಳಿಹೇಳುತ್ತಾರೆ ಆಮೇಲೆ. ಈ ಮೊತ್ತವೇನು ನಿನಗೆ ದೊಡ್ಡದಲ್ಲ ಬಿಡು. ಹೈದ್ರಾಬಾದಿನಲ್ಲಿ ಫಿರೋಜ್ ಹಾಗೂ ನಿನ್ನಂತಹ ಹಸ್ತಕರು ಕೂಡಿ ಮಾಡಿದ ಕರಾಮತಿಗಳ ಗಳಿಕೆ ಇದರ ಹತ್ತುಪಟ್ಟಾದರೂ ಆದೀತು, ಅಲ್ಲವೆ?" ಎಂದಾಗ ಖಂಬಾಟಾ ಕೂತಲ್ಲೇ ತೆಳುವಾಗಿ ಬೆವರಹತ್ತಿದ್ದ. ನಾಗಪ್ಪನನ್ನು ತಡೆಯುವಂತೆ ಏನಾದರೂ ಮಾತನಾಡೋಣವೆಂದರೆ ತತತ ಪಪಪ ಆಗುವ ಭಯದಿಂದ ಕೆಲಹೊತ್ತು ಬಾಯಿಮುಚ್ಚಿ ಕುರ್ಚಿಯ ಎರಡೂ ಕೈಗಳನ್ನು ಬಿಗಿಯಾಗಿ ಹಿಡಿದು ಕುಳಿತ, ಆಮೇಲೆ: "ಪ್ಲೀಜ್ ನಾಗ್." ಎಂದು ಆರಂಭಿಸಿದನಷ್ಟೇ, ನಾಗಪ್ಪ ಅವನನ್ನು ತಡೆದು: "Call me Mr. Nagnath." ಎಂದ. "Ok. Ok Mr. Nagnath. The matter is serious. ನಾಳೆಯೇ ತನಿಖೆ ಶುರುವಾಗಲಿದೆ. ಹೈದ್ರಾಬಾದಿನಿಂದ ಇನ್ನಿಬ್ಬರು ಡೈರೆಕ್ಟರರೂ ಬಂದಿದ್ದಾರೆ ಈ ತನಿಖೆಯ ಸಲುವಾಗಿಯೇ." ಎಂದು ಖಂಬಾಟಾ ತಿಳಿಸಿದಾಗ, "ಹೌದೆ? I shall be delighted to meet them and expose the whole of Phiroz's gang to them. Do you know their names?" ಎಂದು ಕೇಳಿದ, ನಾಗಪ್ಪ. ಖಂಬಾಟಾ ಕೂತಲ್ಲೇ ದಡಬಡಿಸಿದ : "ಇಲ್ಲ ಇಲ್ಲ, ನಾನು ಅವರನ್ನು ಕಂಡೇ ಇಲ್ಲ. ತಾಜಮಹಲ್ ಹೊಟೆಲ್ಲಿನಲ್ಲಿ ಉಳಿದುಕೊಂಡಿದ್ದಾರೆ ಎಂದು ಫಿರೋಜನಿಂದಲೇ ತಿಳಿಯಿತು, ಅಷ್ಟೇ."

"ಸುಳ್ಳು ಹೇಳುತ್ತೀಯಾ ಮಿಸ್ಟರ್ ಖಂಬಾಟಾ. ತನಿಖೆಯ ವಿಷಯ ಮೊತ್ತ ಮೊದಲು ತಿಳಿಸಿದ್ದೇ ನೀನು. ನಿನಗೇ ಈ ವಿವರಗಳು ಗೊತ್ತಿರದಿದ್ದರೆ ಇನ್ನಾರಿಗೆ ಗೊತ್ತಿರಬೇಕು? ಚಿಂತೆ ಮಾಡಬೇಡ. ಫಿರೋಜನಿಗೆ ನೀನೇ ಹೇಳು: ತನಿಖೆ ನಡೆಸುವವರ ಹೆಸರು ಗೊತ್ತಾಗದ ಹೊರತು ಅವರು ಕೇಳವ ಯಾವ ಪ್ರಶ್ನೆಗೂ ಉತ್ತರ ಕೊಡಲಾರೆನೆಂದು. ತನಿಖೆ ಯಾತರ ಬಗ್ಗೆ ಇದೆ ಎಂಬುದಾದರೂ ನಿನಗೆ ಗೊತ್ತಿರಬೇಕು ಅಲ್ಲವೆ? ಯಾಕೆಂದರೆ ನೀನು ಈ ಕಂಪನಿಯ ಎಡ್ಮಿನಿಸ್ಟ್ರೇಶನ್ ಮೇನೇಜರ್ ಅಂತೆ...ಹಾಗೆಂದರೇನೋ ನೋಶೀರ್...ಅಲ್ಲ ಮಿಸ್ಟರ್ ಖಂಬಾಟಾ?..."

ಖಂಬಾಟಾನಿಗೆ ನಾಗಪ್ಪ ಹಿಂದೆಂದೂ ಮಾತನಾಡಿದ್ದು ನೆನಪಿಲ್ಲ. ಚಕಿತನಾದ. ಈ ಏಳೇ ದಿನಗಳಲ್ಲಿ ಇಷ್ಟೊಂದು ಬದಲಿಸಿಹೋಗುವಂತಹ ಪವಾಡ ಏನು ನಡೆದಿರಬಹುದು? ಕೆಲಸದಿಂದ ದೂರ ಉಳಿದದ್ದೇ ಇದಕ್ಕೆಲ್ಲ ಮೂಲವಾಗಿರಬಹುದೇ? ಥಕ್ಕಾಗಿ ನಾಗಪ್ಪನ ಆಳ ಎತ್ತರಗಳನ್ನು ಅಳೆಯುವವನಂತೆ ನೋಡುತ್ತ ಕುಳಿತ: ಯಾವಾಗಲೂ ಗಾಢವಾಗಿ ತೊಡಗಿಸಿಕೊಂಡ ಕೆಲಸ ಹುಟ್ಟಿಸುವ ಆಸೆ ಆಮಿಷಗಳಿಂದ ದೂರವಾಗಿದ್ದಾಗ ಹುಟ್ಟುವ ಒಂದು ಬಗೆಯ ತಾತ್ವಿಕ ನಿರ್ಲಿಪ್ತತೆ ಇಂತಹ ಬದಲಿಗೆ ಕಾರಣವಾಗಬಹುದೆಂಬುದನ್ನು ತಿಳಿಯುವಷ್ಟು ಚುರುಕಾದ ಬುದ್ಧಿಯವನಲ್ಲ ಖಂಬಾಟಾ. ಅವನನ್ನು ಕೆಣಕುವಂತೆ ನಾಗಪ್ಪ ಕೇಳಿದ. "ಯಾಕೆ? ನಾನು ಇಷ್ಟೊಂದು ಹೇಗೆ ಬದಲಿಸಿ ಹೋದೆ ಎಂದು ಆಶ್ಚರ್ಯ ಅಲ್ಲವೇ? ಈ ಬದಲಿನ ಸ್ವರೂಪ ತನಿಖೆಯ ಹೊತ್ತಿಗೆ ಸರಿಯಾಗಿ ಗೊತ್ತಾಗುತ್ತದೆ ಮಿಸ್ಟರ್ ಖಂಬಾಟಾ. ನೀವು, ನಾಲವತ್ತು ದಾಟಿದ ಕೂಡಲೇ ಅರೆಮಳ್ಳಾಗುವ ಬಾವಾಜಿಗಳೆಲ್ಲ ಒಂದೆಡೆ ಸೇರಿ ಮಾಡಿದ ಲಫಡಾಗಳನ್ನೆಲ್ಲ ಬಯಲಿಗೆಳೆಯುವಾಗ ನೋಡುವಿಯಂತೆ ನೀನು ಮತ್ತು ಫಿರೋಜ್ ಅಹಮಿಕೆಯಿಂದ ಮೈಮೇಲೆ ಎಳೆದುಕೊಂಡ ಪೇಚಿನ ನಿಜವಾದ ಹರಹನ್ನು."

ಖಂಬಾಟಾನ ಮೋರೆ ಬಣ್ಣ ಕಳೆದುಕೊಳ್ಳಹತ್ತಿತು. ಇನ್ನೂ ಹೆಚ್ಚು ಹೊತ್ತು ಇಲ್ಲಿ ಕುಳಿತರೆ ತಾನು ಹೇಳಲು ಬಂದದ್ದಾದರೂ ಏನೆಂಬುದು ಕೂಡ ಮರೆತೇ ಹೋದೀತು ಎಂಬ ಭಯವಾಗಿ:

“ನೋಡು ನಾಗನಾಥ್…”

“ಮಿಸ್ಟರ್ ನಾಗನಾಥ್”

“ಓಕೇ…ಮಿಸ್ಟರ್ ನಾಗನಾಥ್, ನಾನು ಹೇಳಲು ಬಂದದ್ದಿಷ್ಟು: ನಾಳೆ ೧೦ ಗಂಟೆಗೆ ಸರಿಯಾಗಿ ತಾಜ್‌ಮಹಲ್ ಹೊಟೆಲ್ಲಿನ ರೂಮ್ ನಂಬರು ೭೧೭ರಲ್ಲಿ ತನಿಖೆಯ ಆಯೋಗದ ಇದಿರು ಹಾಜರಾಗಬೇಕು. ನಾನು ಖುದ್ದು ರಿಸೆಪ್ಷನ್ ಕೌಂಟರಿನ ಹತ್ತಿರ ಹತ್ತಕ್ಕೆ ಹತ್ತು ಮಿನಿಟು ಇರುವಾಗ ಬಂದು ನಿನ್ನ ದಾರಿ ಕಾಯುತ್ತೇನೆ…?”

“ಈ ತನಿಖೆಯ ಬಗ್ಗೆ ಪತ್ರವನ್ನೇನಾದರೂ ತಂದಿದ್ದೀಯಾ?”

“ಕಂಪನಿಯ ಎಡ್ಮಿನಿಸ್ಟ್ರೇಶನ್ ಮೆನೇಜರ್ ಖುದ್ದಾಗಿ ಬಂದದ್ದು ಸಾಲದೆ?”

“ಸಾಲದು ಮಿಸ್ಟರ್ ಖಂಬಾಟಾ, ಸಾಲದು. ನನ್ನ ವಕೀಲರು ನನಗೆ ಹಾಗೇ ತಿಳಿಸಿದ್ದಾರೆ. ವಕೀಲರ ಮಾತು ಬಿಡು. ಇದೊಂದು ತತ್ತ್ವದ ಪ್ರಶ್ನೆ. ಬರಿಯೆ ಒಬ್ಬ ಮಿಸ್ಟರ್ ಖಂಬಾಟಾನ ಬಾಯಿ ಮಾತನ್ನು ನಂಬಿ ನಾನು ಈ ತನಿಖೆಯ ಆಯೋಗದ ಮುಂದೆ ಹಾಜರ್ ಆಗಲಾರೆ. ಇದನ್ನು ನೀನು DMDಅವರಿಗೆ ಸ್ಪಷ್ಟವಾಗಿ ತಿಳಿಸಬೇಕು. ಹಾಗೂ ತಾಜ್‌ಮಹಲ್ ಹೊಟೆಲಿಗೆ ಹೋಗಲು ಕಾರೂ ಕಳಿಸಬೇಕು. ಕಾರು ಕಳಿಸದೇ ಇದ್ದಲ್ಲಿ ನಾನು ಟ್ಯಾಕ್ಸಿಯಿಂದ ಬರುತ್ತೇನೆಂದು ತಿಳಿಯಬೇಡ.”

ನಾಗಪ್ಪನ ದನಿಯಲ್ಲಿ ಪ್ರಕಟವಾದ ದೃಢನಿಶ್ಚಯವನ್ನು ಗಮನಿಸಿದ ಖಂಬಾಟಾ ತಬ್ಬಿಬ್ಬಾದ. ಹೈದ್ರಾಬಾದಿಗೆ ಫೋನ್ ಮಾಡಿದಾಗಿನ ಇವನ ವರ್ತನೆಯ ಮೇಲೆ ಸೇಡುತೀರಿಸುವುದನ್ನು ನಿಶ್ಚಯಿಸಿ ಬಂದ ಖಂಬಾಟಾಗೆ ಕೂಡಲೇ ಮಾತನಾಡುವದೇ ಸಾಧ್ಯವಾಗಲಿಲ್ಲ. ಆದರೆ ಸಹಜವಾಗಿ ಸೋಲನ್ನು ಒಪ್ಪಲು ಸಿದ್ಧವಾಗದವನ ಹಾಗೆ:

“ನೋಡು ನಾಗನಾಥ್…”

“ನೋಡು ಮಿಸ್ಟರ್ ಖಂಬಾಟಾ. ನಿನಗೆ ಹತ್ತು ಸರತಿ ಹೇಳಿದ್ದೇನೆ ಮಿಸ್ಟರ್ ಎಂದು ಕರೆಯಲು.”

“ಓಕೇ…ನಾನು”

“ಬರೇ ಓಕೇ ಸಾಲದು…”

ಖಂಬಾಟಾ ಹತಾಶನಾದ: “ಓಕೇ ಮಿಸ್ಟರ್ ನಾಗನಾಥ್, ತನಿಖೆಯ ಆಯೋಗದ ಮುಂದೆ ಬಂದಾಗ ಗೊತ್ತಾದೀತು ಸನ್ನಿವೇಶ ಎಷ್ಟೊಂದು ಗಂಭೀರವಾಗಿದೆಯೆನ್ನುವದು…”

“ಬೆದರಿಕೆ ಹಾಕುತ್ತೀಯೇನಪ್ಪಾ, ಮಿಸ್ಟರ್ ಖಂಬಾಟಾ. ನಿನ್ನಂತಹ ಬಾವಾಜಿಯ ಬಾಯಲ್ಲಿ ಶೋಭಿಸುವ ಶಬ್ದವಲ್ಲವದು ಬಿಡು- 'ಗಂಭೀರ!' ಯಾವುದಾದರೂ ಸರ್ಕಸ್ಸಿನಲ್ಲಿ ಕೋಡಂಗಿಯ ಪಾತ್ರವಾಗಿ ಶೋಭಿಸುತ್ತಿದ್ದಿರಿ ನೀವು—ನೀನು ಹಾಗೂ your God-father ಮಿಸ್ಟರ್ ಬಂದೂಕವಾಲಾ… ಆದ್ದರಿಂದ ನಿನಗೆ ಹೇಳಬೇಕಾದ್ದನ್ನು ಸಹಜ ಭಾಷೆಯಲ್ಲೇ ಹೇಳಿಬಿಡು, ನನಗೆ ಅರ್ಥವಾಗುತ್ತದೆ. ನಿನ್ನ ಬಾಯಲ್ಲಿ ಶೋಭಿಸದ ಧಮಕಿಯ ಮಾತು ಬೇಡ. ನಾನು ಕೇಳಿದ ಪತ್ರವನ್ನು ಕಳಿಸಿಕೊಡುತ್ತೀಯಲ್ಲ? ಕಾರನ್ನೂ?”

“ಇದು ಶಕ್ಯವೆಂದು ತೋರುವುದಿಲ್ಲ. ಸ್ವತಃ ನಾನೇ ಬಂದು…”

“ನಿನ್ನನ್ನು ನಂಬುವದಿಲ್ಲ. ನಿನ್ನ ಬಗ್ಗೆ ಆಯೋಗದ ಇದಿರು ನಾನು ಹೇಳಲಿದ್ದುದನ್ನು ಇಲ್ಲೇ ಹೇಳುವಂತೆ ಎಷ್ಟೊಂದು ಚಿತಾಯಿಸಿದರೂ ನಾನು ಹೇಳಲಾರೆ. ವ್ಯರ್ಥ ವೇಳೆಯನ್ನು ಹಾಳುಮಾಡುವದು ಬೇಡ. ಚೆನ್ನಾಗಿ ನೆನಪಿಡು. ಯಾಕೆಂದರೆ ನಿನ್ನ ಮರೆವಿನ ಪ್ರಕೃತಿ ಇಡೀ ಕಂಪನಿಯಲ್ಲೇ ಪ್ರಖ್ಯಾತವಾದದ್ದು….ತನಿಖೆಗೆ ನಾನು ತಾಜಮಹಲಿನಲ್ಲಿ ಇಂತಹ ಕೋಣೆಯಲ್ಲಿ, ಇಂಥ ದಿನ, ಇಷ್ಟು ಗಂಟೆಗೆ, ಇಂತಿಂತಹರ ಮುಂದೆ ಹಾಜರ್ ಆಗಬೇಕೆಂದು ತಿಳಿಸುವ ಪತ್ರ; ಅಲ್ಲಿಗೆ ಹೋಗಲು ಕಾರು ಇವೆರಡೂ ಬಂದ ಹೊರತು ನಾನು ತನಿಖೆಯ ಆಯೋಗದ ಇದಿರು ಹಾಜರಾಗುವದು ಶಕ್ಯವೇ ಇಲ್ಲ…”

“ನಮ್ಮ ಯೋಜನೆ ನಿನ್ನ ಹಿತದ ಸಲುವಾಗಿಯೇ…ತನಿಖೆಯ ವಿಷಯವನ್ನು ಗುಟ್ಟಾಗಿ ಇಡುವದು ಅದರ ಉದ್ದೇಶ, ಕಂಪನಿಯ ತುಂಬ…”

"ಓಹೋಹೋ... ಇಷ್ಟೆಲ್ಲ ಸುಳ್ಳು ಆಡಂಬರ ಬೇಡ... ತನಿಖೆಯ ಗುಟ್ಟಿನ ಜವಾಬ್ದಾರಿ ನನಗೆ ಬಿಡು. ಇನ್ನೊಂದು ಮಾತು: ಒಂದು ವೇಳೆ ನೀನು ನಾನು ಕೇಳಿದ ಪತ್ರ ಹಾಗೂ ಕಾರನ್ನು ಕಳಿಸದೇ ಇದ್ದರೆ ಆ ಕಾರಣಕ್ಕಾಗಿಯೇ ನಾನು ಆಯೋಗದ ಮುಂದೆ ಹಾಜರಾಗಿಲ್ಲ ಎಂದು ಹೇಳುತ್ತೇನೆಂದು ತಿಳಿಯಬೇಡ. ಖಂಬಾಟಾ... ಅಲ್ಲ ಮಿಸ್ಟರ್ ಖಂಬಾಟಾ ಇಲ್ಲಿ ಬಂದಿರಲೇ ಇಲ್ಲ, ನನಗೆ ತನಿಖೆಯ ಸುದ್ದಿ ಮುಟ್ಟಲೇ ಇಲ್ಲ..."

"Oh! No- you are not very serious about this..."

"I am very serious...ಪತ್ರವನ್ನು ಕಳಿಸಿಯೂ ಅದರ ಮಜಕೂರು ನಾನು ತಿಳಿಸಿದ ಹಾಗೆ ಇಲ್ಲದಿದ್ದಲ್ಲಿ ಅಥವಾ ಪತ್ರ ಸರಿಯಾಗಿದ್ದೂ ಕಾರು ಕಳಿಸದೇ ಇದ್ದಲ್ಲಿ ನಾನು ಆಯೋಗದ ಮುಂದೆ ಬರದೇ ಇರುವುದರ ಕಾರಣ ಮಾತ್ರ ನಿನ್ನನ್ನು ನೇರವಾಗಿ ಒಳಗೊಳ್ಳುತ್ತದೆ: ಮಿಸ್ಟರ್ ಖಂಬಾಟಾ ಬಂದಾಗ ಇದನ್ನೆಲ್ಲ ಒಪ್ಪಿಕೊಂಡಿದ್ದನೆಂದು..."

"ಇದು ಶುದ್ಧ blackmail," ಖಂಬಾಟಾ ತಾಳ್ಮೆಗೆಡುವ ಸ್ಥಿತಿಗೆ ಬರಹತ್ತಿದ್ದ.

"ಸಿಟ್ಟಾಗಬೇಡ... ಅದೂ ನಿನಗೆ ಶೋಭಿಸುವಂತಹದಲ್ಲ... 'ಬ್ಲೆಕ್‌ಮೇಲಿ'ನಲ್ಲಿ ಶುದ್ಧ ಅಶುದ್ಧ ಎಂದು ಎರಡು ಜಾತಿ ಇವೆ ಎಂದು ನನಗೆ ಗೊತ್ತಿರಲಿಲ್ಲ. ನೀವು ನಡೆಸುವ ಈ ತನಿಖೆಯ ತಮಾಷೆ ಯಾವ ಜಾತಿಯ ಬ್ಲೆಕ್‌ಮೇಲ್?...ಫಿರೋಜನಿಗೆ ಒಂದು ಮಾತನ್ನು ತಪ್ಪದೇ ತಿಳಿಸು—the whole thing will boomerang on him and his tribe. ರಾಮಕೃಷ್ಣನಿಗೂ ಒಂದು ಕಿವಿಮಾತು-ಭೆಟ್ಟಿಯಾದರೆ ಹೇಳು: ಈ ತನಿಖೆಯಲ್ಲಿ ಅವನ ಹೈದ್ರಾಬಾದೀ ನೀರನ್ನು ಇಳಿಸುವ ಪಣ ತೊಟ್ಟಿದ್ದೇನೆ ಎಂದು; ಹೈದ್ರಾಬಾದಿನಲ್ಲಿ ನಡೆಯಲಿದ್ದ ತನಿಖೆ ಏಕದಮ್ ಮುಂಬಯಿಗೆ ಹೇಗೆ ವರ್ಗವಾಯಿತು ಎನ್ನುವದನ್ನು ತಿಳಿಯದಷ್ಟು ಕುಕ್ಕೂಬಾಳನಲ್ಲ ನಾನು. ಬಹುಶಃ ನಿನಗೇ ಗೊತ್ತಿರಲಿಕ್ಕಿಲ್ಲ ಈ ಸ್ಥಳಾಂತರದ ಕಾರಣ...ಓಕೇ ಮಿಸ್ಟರ್ ಖಂಬಾಟಾ. ನನಗೀಗ ನಾಳೆಯ ತನಿಖೆಯ ಬಗ್ಗೆ ವಿಚಾರಮಾಡಬೇಕಾಗಿದೆ...ಅವಶ್ಯಬಿದ್ದರೆ ವಕೀಲರನ್ನೂ ಕಾಣಬೇಕಾಗಿದೆ.

ನಿನಗೂ ಆಫೀಸಿಗೆ ಹೋಗುವ ಅವಸರ ಇರಬೇಕು...ಯಾವುದರ ಬಗ್ಗೂ ಅವಸರಪಡುವ ಜಾತಿಯಲ್ಲ ಬಿಡು ನಿನ್ನದು. ಆದರೂ..."

ಖಂಬಾಟಾ ಇನ್ನೂ ಕುರ್ಚಿಯಲ್ಲಿದ್ದಾಗಲೇ, ನಾಗಪ್ಪ ಅವನನ್ನು ಅಲ್ಲಿಂದ ಹೊತ್ತುಹಾಕುವ ಉದ್ದೇಶವನ್ನು ನಿರ್ದಾಕ್ಷಿಣ್ಯವಾಗಿ ಪ್ರಕಟಿಸುತ್ತ ಕೈ ಮುಂದೆ ಚಾಚಿದ. ಈ ಅನಪೇಕ್ಷಿತ ಕ್ರಿಯೆಯಿಂದ ದಡಬಡಿಸಿ ಕುರ್ಚಿಯಿಂದ ಎದ್ದುನಿಂತ ಖಂಬಾಟಾ ನಿರುಪಾಯನಾಗಿಯೇ ನಾಗಪ್ಪ ಚಾಚಿದ ಕೈಯನ್ನು ಕುಲುಕಿದ:

"ಗುಡ್‌ಬಾಯ್ ಮಿಸ್ಟರ್ ಖಂಬಾಟಾ. ಬೆಳಿಗ್ಗೆ ಎದ್ದದ್ದೇ ನಿನ್ನ ಮುಖದರ್ಶನವಾದದ್ದು ಬಹಳ ಬಹಳ ಸಂತೋಷದ ಸಂಗತಿ. ತನಿಖೆಯ ಆಯೋಗದ ಮಂದಿಯ ಮುಸುಡಿಗಳನ್ನೂ ನೋಡಲು ತುಂಬ ಉತ್ಸುಕನಾಗಿದ್ದೇನೆ... ಪತ್ರ ಮತ್ತು ಕಾರಿನ ಬಗ್ಗೆ ಹೇಳಿದ್ದನ್ನು ಮಾತ್ರ ಮರೆಯಬೇಡ..." ಎನ್ನುತ್ತ ಅವನನ್ನು ಬಾಗಿಲವರೆಗೆ ಕಳಿಸಿ ಅವನು ಹೊರಗೆ ಕಾಲಿಟ್ಟ ಕೂಡಲೇ ಕದಗಳನ್ನು ಮುಚ್ಚಿದ ರಭಸ ಬಯಸಿದ್ದಕ್ಕಿಂತ ದೊಡ್ಡದಾದಾಗ ತನ್ನಷ್ಟಕ್ಕೇ ಸುಖವಾಗಿ ನಕ್ಕ. ಒಳಗೆಲ್ಲೋ ಇಷ್ಟು ವರ್ಷ ಉಸಿರುಗಟ್ಟಿ ಬಿದ್ದ ತನ್ನ ಪ್ರಬುದ್ಧತೆ ಈಗ ಒಮ್ಮೆ ಮುಚ್ಚಿಕೊಂಡ ಬಾಗಿಲುಗಳನ್ನು ತೆರೆದಂಥ ಅನುಭವದ ಹಿಂದೆಯೇ ಬಂದ—ತಾನು ಈವರೆಗೂ ಅನುಭವಿಸಿರದ—ಪ್ರಚಂಡ ಧೈರ್ಯ ಸ್ಥಾಯಿಯಾಗಲು ಹತ್ತಿದ ಅನ್ನಿಸಿಕೆಯಿಂದಲೂ ಸುಖವೆನಿಸಿತು: ನಿನ್ನೆ, ಆ ರೆಡ್ಡಿ ಕೊಟ್ಟ ಪತ್ರವನ್ನು ಹರಿದೊಗೆಯಬಾರದಿತ್ತು. ತನಿಖೆಯ ವೇಳೆಗೆ ಉಪಯೋಗಕ್ಕೆ ಬೀಳುತ್ತಿತ್ತು ಎಂದು ಮತ್ತೆ ಅನ್ನಿಸಿದರೂ ಆ ಅನ್ನಿಸಿಕೆಯಲ್ಲೀಗ ತನ್ನ ಕೃತ್ಯದ ಬಗೆಗಿನ, ಖೇದವಿರಲಿಲ್ಲ: ಅವರಿವರು ಕೊಟ್ಟ ವರದಿ ತನಗೆ ಬೇಡ. ಇಷ್ಟು ವರ್ಷ ನಿಷ್ಕಾರಣವಾಗಿ ತನ್ನೊಡನೆ ಹಗೆಕಾಯುತ್ತ ಬಂದ ಫಿರೋಜನ ಕ್ರೌರ್ಯದ ಅರ್ಥ ತಿಳಿಯಬೇಕಾಗಿದೆ. ಅದಕ್ಕೆ ಖುದ್ದು ತನ್ನ ಅನುಭವಕ್ಕೆ ಬಂದ ಸಂಗತಿಗಳೇ ಸಾಕು...

ತನಿಖೆಯ ಆಯೋಗದವರನ್ನು ಕಾಣಲು ತಾನು ನಿಜಕ್ಕೂ ತುಂಬ ಉತ್ಸುಕನಾಗಿದ್ದೇನೆ ಎಂಬಂತಹ ಭಾವನೆಯಿಂದ ಬಹಳ ಖುಶಿಪಟ್ಟ. ಆ ಖುಶಿಯಲ್ಲಿರುವಾಗಲೇ, ಹೌದು ಸಂಜೆ ಮೇರಿಗೆ ಫೋನ್ ಮಾಡಬೇಕು. ಹುಡುಗಿಯ ಸಿಹಿಯಾದ ದನಿ ಕೇಳುವುದರಿಂದಲೇ ಸುಖವೆನ್ನಿಸೀತು. ಡಾಯನಾ, ಥ್ರೀಟಿಯರ ಭೇಟಿಗಳ ಬಗ್ಗೆ, ಹೈದ್ರಾಬಾದಿನಲ್ಲಿ, ಇದೀಗ ಈ ಕೋಣೆಯಲ್ಲಿ

ನಡೆದದ್ದರ ವಿವರಗಳನ್ನು ಕೊಡಬೇಕು-ಮೆಚ್ಚಿಕೊಂಡಾಳು ಹುಡುಗಿ: ತನಗೆ ಅರಿವಿಲ್ಲದೇನೆ ತಾನು ಮೇರಿಯನ್ನು ಪ್ರೀತಿಸುತ್ತಿದ್ದೆ ಎನ್ನುವುದನ್ನು ಈಗ ತನ್ನಷ್ಟಕ್ಕೇ ಸ್ಪಷ್ಟವಾಗಿ ಒಪ್ಪಿಕೊಂಡಾಗ ಹುಟ್ಟಿದ ಭಾವನೆಯಿಂದ ಪ್ರಸನ್ನನಾಗಿ ಕಿಡಕಿಗೆ ಬಂದು ಹತ್ತು ಗಂಟೆಯ ಬಿಸಿಲಲ್ಲಿ ಬೆಚ್ಚಗೆ ಮೈ ಕಾಯಿಸುತ್ತ ನಿಂತ ತನ್ನ ಪ್ರೀತಿಯ ಅಶ್ವತ್ಥವನ್ನು ನೋಡುತ್ತ ಮೈಮರೆತ.

## ಅಧ್ಯಾಯ ಒಂದು

ಇಡೀ ದಿನ ಅತ್ಯಂತ ಉತ್ಸುಕತೆಯಿಂದ. ಆತಂಕದಿಂದ ಇದಿರು ನೋಡಿದ. ಎಂಟು ಗಂಟೆಯಾದದ್ದೇ ತಡ ಕೆಳಗೆ ಹೋಗಿ ಇರಾಣೀ ಅಂಗಡಿಯಿಂದ ಮೇರಿಗೆ ಫೋನ್ ಮಾಡಲೆಂದು ಅತ್ತ ಕಡೆಗೆ ಹೆಜ್ಜೆ ಇಡುತ್ತಿರುವಾಗ ಹೃದಯ ಬಡಿದುಕೊಳ್ಳಹತ್ತಿತು. ಕಿವಿಗಳೆರಡೂ ಬೆಚ್ಚಗಾಗಹತ್ತಿದುವು. ತನಗೆ ಅವಳ ಬಗ್ಗೆ ಅನ್ನಿಸುತ್ತಿದ್ದ ಮೃದುಭಾವನೆಯನ್ನು ವ್ಯಕ್ತಪಡಿಸುವಾಗ ಬರೇ ಮೇರೀ ಎಂದರೆ ಸಾಕೆ? ಅಥವಾ... darling ಇಲ್ಲವೇ sweet heart ಎಂದು ಸಂಬೋಧಿಸಬೇಕೆ? ... ಇರಾಣೀ ಅಂಗಡಿಯಲ್ಲಿಯ ಫೋನ್ ಕೆಟ್ಟಿತ್ತು. ಇನ್ನೊಂದು ಫೋನು ಆರನೇ ಗಲ್ಲಿಯಲ್ಲಿಯ ತುದಿಯಲ್ಲಿತ್ತು. ಮೇರಿಗೆ ಮೊದಲ ಬಾರಿ ಫೋನ್ ಮಾಡಿದಾಗ ಅಲ್ಲಿಂದಲೇ ಮಾಡಿದ್ದ...ಫೋನ್ ಕೆಟ್ಟದ್ದರಿಂದ ಯಾವುದೇ ರೀತಿಯ ನಿರಾಶಭಾವಕ್ಕೆ ಒಳಗಾಗದೇ ನಡೆಯುತ್ತ, ಕಮ್ಯುನಿಸ್ಟ್ ಪಕ್ಷದ ಆಫೀಸಿನ ಹತ್ತಿರದ ಫೋನ್ ಬೂಥಿಗೆ ಬಂದ. ಕಿಸೆಯೊಳಗಿಂದ ನಾಣ್ಯಗಳನ್ನು ಹೊರತೆಗೆಯುವಾಗ: ಫೋನ್ ಎತ್ತಿಕೊಂಡವಳು ಮೇರಿ ಅಲ್ಲದೇ ಇನ್ನು ಯಾರಾದರೂ ಆದರೆ ಎಂಬ ವಿಚಾರ ಹೊಳೆದಾಗ ಗೊಂದಲಿಸಲಿಲ್ಲ. ರಿಸೀವರ್ ಎತ್ತಿದಾಗ ಡಾಯಲ್‌ಟೋನ್ ಸರಿಯಾಗಿ ಕೇಳಿಸುತ್ತಿತ್ತು ಫೋನ್ ಕೆಟ್ಟಿಲ್ಲ ಎಂಬುದು ತಿಳಿದಾಗ ಧೈರ್ಯ ಬಂದಿತು. ಟೆಲಿಫೋನ್ ಯಂತ್ರದಲ್ಲಿ ನಾಣ್ಯಗಳನ್ನು ಹಾಕುವ ತೂತಿನ ಹತ್ತಿರ ನಾಣ್ಯಗಳನ್ನಿಟ್ಟು ನಂಬರ್ ಡಾಯಲ್ ಮಾಡಿದ. ಆ ತುದಿಯಿಂದ ಕೇಳಿಸಿದ 'ಹೆಲ್ಲೋ'—ಹೆಣ್ಣು ದನಿಯಾಗಿತ್ತು. ಲಗುಬಗೆಯಿಂದ ಹತ್ತು ಪೈಸೆಯ ಮೂರು ನಾಣ್ಯಗಳನ್ನು ತೂತಿನಲ್ಲಿ ಹಾಕಿ—"Hello, is that Mary?" ಎಂದು ಕೇಳಿದಾಗ ಬಂದ ಉತ್ತರದಿಂದ ನಿರಾಸೆಯಾಯಿತು: "ಮೇರೀ ಮನೆಯಲ್ಲಿಲ್ಲ. ಒಂದು ಪಾರ್ಟಿಗೆ ಹೋಗಿದ್ದಾಳೆ."

"Is that Diana?"

"No, I am her younger sister. ಮಾತನಾಡುತ್ತಿದ್ದವರು ಯಾರೆಂದು ತಿಳಿಯಬಹುದೇ, ಸರ್?"

ದನಿ, ಪ್ರಶ್ನೆ ಕೇಳಿದ ರೀತಿ ತುಂಬ ಮೆಚ್ಚಿಕೆಯಾದವು. ನಾಗಪ್ಪ ತನ್ನ ಹೆಸರನ್ನು ಹೇಳಿದಾಗ, ಅವನ ಪರಿಚಯ ಇದ್ದವ ಹಾಗೆ,

"Good evening, Mr. Naganath, ಮೇರಿ ಹಾಗೂ ಡಾಯನಾ- ಇಬ್ಬರೂ ಒಂದು ಡಿನ್ನರ್ ಪಾರ್ಟಿಗೆ ಹೋಗಿದ್ದಾರೆ. ತಿರುಗಿ ಬರಲು ತುಂಬ ರಾತ್ರಿಯಾಗಬಹುದು... ನೀವು ಹೈದ್ರಾಬಾದಿನಿಂದ ಯಾವಾಗ ಬಂದಿರಿ? ಡಾಯನಾ ಮೊನ್ನೆ ನಿಮ್ಮ ಬಗ್ಗೆ ತುಂಬ ಮಾತನಾಡಿದಳು."

"All good things, I hope. May I know your sweet name ?"

"My name is Zarin, but it is not sweet."

"You are sweet-you naughty one... ಮೇರಿಗೆ ಹೇಳು ನಾನು ಫೋನ್ ಮಾಡಿದ್ದೇನೆಂದು. ಪಾರ್ಟಿ ಎಲ್ಲಿದೆಯೆಂದು ಗೊತ್ತೆ?"

"ತಾಜಮಹಲ್ ಹೊಟೆಲ್ಲಿನಲ್ಲೆಂದು ತೋರುತ್ತದೆ." ಎಂದಾಗ ಎದೆ ಒಂದು ಬಡಿತವನ್ನು ಮರೆತ ಭಾಸ: ಫಿರೋಜ್ ಕೊಡುತ್ತಿರಬಹುದೇ ಎಂಬ ಸಂಶಯ ತಲೆಯಲ್ಲಿ ತೂಗುತ್ತಿರುವ ಹೊತ್ತಿಗೆ ಝುರೀನ್ ಎಂದಳು: "ಮೇರಿಯ ಆಫೀಸಿನ ಗೆಳೆಯರಾರೋ ಕೊಡುತ್ತಿರಬೇಕು - ಪಾರ್ಟಿಯನ್ನು. ಬರುವಾಗ ಜತೆಗೆ ಯಾರಾದರೂ ಇರಲಿ ಎಂದು ಡಾಯನಾಳನ್ನೂ ಕರೆದುಕೊಂಡು ಹೋಗಿದ್ದಾಳೆ..." ಎಂದಾಗ ಕೈಕಾಲು ಸೋತುಬರುತ್ತಿರುವ ಅನುಭವ. ಝುರೀನ್‌ಗೆ ಗುಡ್‌ಬಾಯ್ ಅಂದಾಗಿನ ದನಿಯ ಪರಿಚಯ ಅವಳಿಗೆ ಸಿಕ್ಕಿರಲಾರದು... ಮುಂದಿನದೆಲ್ಲ ಕನಸಿನ ಲೋಕದಲ್ಲಿ ನಡೆದದ್ದೆಂಬಂತೆ: ಷೇರ್-ಏ-ಪಂಜಾಬಿಗೆ ಹೋದದ್ದು ನೆನಪಿದೆ; ಆದರೆ ಏನು ಉಂಡೆನೆಂಬುದು ನೆನಪಿಲ್ಲ. ಖೇಮರಾಜ ಭವನವನ್ನು ಸೇರಿದ್ದು ನೆನಪಿದೆ; ಬಾಗಿಲಲ್ಲೇ ಭೆಟ್ಟಿಯಾದ ಅರ್ಜುನ್‌ರಾವರೊಡನೆ ಏನು ಮಾತನಾಡಿದೆನೆಂಬುದು ನೆನಪಿಲ್ಲ. ಹಾಸಿಗೆ ಸೇರುವ ಮೊದಲು ಬಾರ್ಬಿಚ್ಯುರೇಟ್ ಗುಳಿಗೆಗಳನ್ನು ಸೇವಿಸಿದ್ದು ನೆನಪಿದೆ; ಎಷ್ಟು ಎಂಬುದು ನೆನಪಿಲ್ಲ. ಬಾರ್ಬಿಚ್ಯುರೇಟ್ ಗುಳಿಗೆಗಳ ಡೋಜು ಬಯಸಿದ್ದಕ್ಕಿಂತ ದೊಡ್ಡದಾಗಿತ್ತು ಎನ್ನುವದು ಗೊತ್ತಾದದ್ದು ಬೆಳಿಗ್ಗೆ ಹಾಸಿಗೆಯಿಂದ ಏಳುವ ಪ್ರಯತ್ನ ಮಾಡಿದಾಗ. ಹೊರಗೆ ಬಿಸಿಲು ಚಲೋ ಏರಿರಬೇಕು; ಕಣ್ಣು ಬಿಚ್ಚಿ ನೋಡಲು

ಆಗುತ್ತಿರಲಿಲ್ಲವಾದರೂ ಮೈಗೆ ಬಿಸಿ ತಾಕುತ್ತಿತ್ತು. ಬಾರ್ಬಿಚ್ಯುರೇಟ್ ಗುಳಿಗೆಗಳನ್ನು ನುಂಗಬೇಕಾಗಿ ಬಂದ ಸನ್ನಿವೇಶ ಕೂಡ ನೆನಪಾಗುತ್ತಿರಲಿಲ್ಲ. ಕೆಲಹೊತ್ತು ಹಾಗೇ ಬಿದ್ದೇ ಉಳಿದ. ಆಮೇಲೆ, ಮೈ ಸ್ವಲ್ಪ ಸಡಿಲಗೊಂಡು ಕಣ್ಣು ತೆರೆಯುವದು ಸಾಧ್ಯವಾದಾಗ ಕೈಗಡಿಯಾರ ನೋಡಿಕೊಂಡರೆ—ಮಧ್ಯಾಹ್ನದ ಒಂದು ಗಂಟೆ ನಂಬದಾದ. ಕಣ್ಣು ಇನ್ನೊಮ್ಮೆ ತಿಕ್ಕಿ ನೋಡಿದ. ಗಡಿಯಾರ ನಿಂತುಹೋಗಿರಬಹುದೆ? ಕಿವಿ ಹಚ್ಚಿ ನೋಡಿದ, ಪರಿಸರದ ಪ್ರಜ್ಞೆಯನ್ನು ಸಂಪೂರ್ಣವಾಗಿ ಕಳೆದುಕೊಂಡು, ಹೀಗೆ ಮಲಗಿದ್ದರ ಪರಿಣಾಮದ ಅರಿವು ದೊಡ್ಡ ಆಘಾತದ ಬಲದಿಂದ ಮೂಡಿದಾಗ ಧಡಕ್ಕನೆ ಹಾಸಿಗೆಯಿಂದ ಎದ್ದ ರಭಸಕ್ಕೆ ಜೋಲಿ ತಪ್ಪಿ ಮುಗ್ಗರಿಸಿ ಬಿದ್ದು ತಲೆ ಮೋರಿಯ ಚಿಕ್ಕ ಗೋಡಗೆ ಅಪ್ಪಳಿಸಬೇಕು: ಪುಣ್ಯವಶಾತ್ ಕೈ ಮುಂದೆ ಚಾಚಿದ್ದರಿಂದ ಎಡ ಅಂಗೈ ಗೋಡೆಗೆ ಊರಿ ಮುಗ್ಗರಿಕೆಯ ಆಘಾತವನ್ನು ತಡೆಯುವಾಗ ಆದ ನೋವಿನಿಂದ ನರಳುವಂತಾಗಿ ನಿದ್ದೆ ತಿಳಿದು ಎಚ್ಚರವೂ ಬಂದಿತ್ತು.

ಅವಸರ ಅವಸರವಾಗಿ ಹಲ್ಲು ತಿಕ್ಕಿ, ಮೋರೆ ತೊಳೆದು, ಇಡೀ ಗ್ಲಾಸು ತುಂಬ ಮಣ್ಣಿನ ಹೂಜೆಯೊಳಗಿನ, ತಂಪುನೀರನ್ನು ಕುಡಿದು ಪ್ಯಾಂಟು, ಶರ್ಟು ಹಾಕಿಕೊಂಡು ಚಪ್ಪಲಿ ಮೆಟ್ಟಿದವನೇ ಸೀದ ಅರ್ಜುನ್‌ರಾವರ ಮನೆಗೆ ನಡೆದ. ಅರ್ಜುನ್‌ರಾವ್ ಮಧ್ಯಾಹ್ನದ ಊಟಕ್ಕೆ ಮನೆಗೆ ಬರುತ್ತಿದ್ದದ್ದು ಕ್ವಚಿತ್ತಾಗಿ. ಇಂದೂ ಬಂದಿರಲಿಲ್ಲ. ಕೆದರಿದ ಕೂದಲು. ಕ್ಷೌರ ಮಾಡಿಕೊಂಡಿರದ ಕಾರಣ ಸಣ್ಣಗೆ ಕೂದಲು ಚಿಗುರಿ ಕಪ್ಪುಗಟ್ಟಿದ ಮೋರೆ, ಭಯತ್ರಸ್ತ ಕಣ್ಣುಗಳು: ಕದ ತೆರೆದು ಹೊರಗೆ ಬಂದ ಅರ್ಜುನ್‌ರಾವರ ಮುದಿ ತಾಯಿ ಇವನನ್ನು ನೋಡಿ—"ಅರೆ! ಇದೇಕೆ ಹೀಗಾಗಿದ್ದೀ? ಮೈಯಲ್ಲಿ ಹುಷಾರಿಲ್ಲವೆ? ಬಾ ಬಾ, ಒಳಗೆ ಬಾ," ಎಂದಾಗ ಇವನು ಇನ್ನಷ್ಟು ಗಾಬರಿಯಾದ: "ಇಲ್ಲಜ್ಜಿ, ೯ರ ಸುಮಾರಿಗೆ ಆಫೀಸಿನ ಜನ ನನ್ನನ್ನು ಭೆಟ್ಟಿಯಾಗಲು ಬರುವವರಿದ್ದರು. ನಿನ್ನೆ ಇಡೀ ರಾತ್ರಿ ಬರೆಯುತ್ತ ಕೂತದ್ದರಿಂದ ಬೆಳಗಿನ ಜಾವಕ್ಕೆ ಗಾಢ ನಿದ್ದೆ ಹತ್ತಿ ಬಿಟ್ಟಿತು. ಅವರು ಬಂದು ಕದ ತಟ್ಟಿ ಹೋದರೋ ಏನೋ ಎಂದು...ಮಗ್ಗಲು ಮನೆಯವರನ್ನು ಸ್ವಲ್ಪ ಕೇಳಿ ನೋಡುತ್ತೀರಾ?" ಇವನು ಮಗ್ಗಲುಮನೆಯ ಹೆಂಗಸಿನೊಡನೆ ಮಾತನಾಡುವದಿಲ್ಲ ಎಂಬುದು ಲಕ್ಷ್ಯಕ್ಕೆ ಬಂದು ಒಳಗೊಳಗೇ ನಗು ಬಂದರೂ, ಇವನ ಗಾಬರಿ ತುಂಬಿದ ಮೋರೆ ನೋಡಿ ಅದನ್ನು ಹತ್ತಿಕ್ಕಿ, ಒಳಗಿನ ಕೋಣೆಯ ಬಾಗಿಲಲ್ಲಿ ನಿಂತು

ಇದನ್ನೆಲ್ಲ ಆಲಿಸುತ್ತಿದ್ದ ಸೊಸೆಯನ್ನು 'ಲಕ್ಷ್ಮೀ' ಎಂದು ಹೆಸರು ಹಿಡಿದು ಕರೆದದ್ದೇ ತಡ, ಅವಳು, ತನ್ನನ್ನು ಕರೆದದ್ದರ ಅರ್ಥವಾಯಿತೆನ್ನುವಂತೆ. ಹೊರಗೆ ನಡೆದು. ಲಗುಬಗೆಯಿಂದ ನಾಗಪ್ಪನ ಕೋಣೆಯ ಕಡೆಗೆ ಹೆಜ್ಜೆ ಇಟ್ಟಳು. ಮಗ್ಗಲುಮನೆಯ ಹೆಂಗಸು ಕೊಡುವ ಉತ್ತರವನ್ನು ಖುದ್ದಾಗಿ ಕೇಳುವ ಕಾತರದಿಂದ ಅವಳನ್ನು ಹಿಂಬಾಲಿಸಿದ. ಹೆಂಗಸು ಇವನೊಡನೆ ಹಿಂದೆ ನಡೆದ ಪ್ರಸಂಗವನ್ನು ಪೂರ್ತಿಯಾಗಿ ಮರೆತವಳ ಹಾಗೆ—"ಇಲ್ಲ, ಯಾರೂ ಬಂದಿರಲಿಲ್ಲ. ನಾನು ಬೆಳಗ್ಗಿನಿಂದಲೂ ಇಲ್ಲೇ ಇದ್ದೇನೆ," ಎಂದು ಆಶ್ವಾಸನವಿತ್ತಳು... ಇನ್ನೂ ಪೂರ್ಣ ಕಳೆದಿರದ ಬಾರ್ಬಿಚ್ಯುರೇಟ್ ಗುಳಿಗೆಗಳ ಅಮಲಿನಿಂದ ತುಂಬ ಭಾವುಕವಾದ ಮನಸ್ಸಿಗೆ ಈ ಮಾತುಗಳು ಎಷ್ಟೊಂದು ಸುಖಕೊಟ್ಟವೆಂದರೆ ಕೈ ಮುಗಿದು ಥೆಂಕ್ಸ್ ಎನ್ನುವಾಗ ಕೊರಳು ಬಿಗಿದುಕೊಂಡಿತು.

ಇನ್ನೂ ಹೆಚ್ಚು ಹೊತ್ತು ಅಲ್ಲಿ ನಿಂತರೆ ಕಣ್ಣುಗಳಲ್ಲಿ ನೀರು ಕಲೆಯ ಹತ್ತಿದ್ದನ್ನು ಅವರು ಕಂಡಾರು ಎಂಬ ಭಯವಾಗಿ ಕೂಡಲೇ ಅಲ್ಲಿಂದ ಕಾಲು ಕಿತ್ತು ಕೋಣೆ ಸೇರಿ ಕದ ಮುಚ್ಚಿಕೊಂಡ. ಕಿಡಕಿಯ ಬಳಿಯ ವಿರಾಮಕುರ್ಚಿಯೊಂದರಲ್ಲಿ ಕುಕ್ಕರಿಸಿ, ಅಮ್ಮ ಕಣ್ಣಮುಂದೆ ನಿಂತಂತಾಗಿ. ಸಣ್ಣ ಮಗುವಿನಂತೆ ಅತ್ತುಬಿಟ್ಟ: ಈ ಸರತಿ ನೆನಪಿನಲ್ಲಿ ಹುಟ್ಟಿ ಬಂದದ್ದು ಹಿಂದೆಂದೂ ಮೂಡಿರದ ದೃಶ್ಯ. ಆದರೆ ಎಲ್ಲವೂ ಮಸಕುಮಸಕಾದಂತೆ. ಆನೇಕ ಚಿತ್ರಗಳು ಏಕಾಕಾಲಕ್ಕೆ ಒಂದರ ಮೇಲೊಂದು ಏರಿ ಕೂತ ರೀತಿ ಗಜಿಬಿಜಿ: ಮೂರು ಸಂಜೆಯ ಹೊತ್ತಿಗೆ ಅಮ್ಮ ಹಿಂದಿನ ಹಿತ್ತಲಲ್ಲಿಯ ಕೋಳೀಗಿರಿಯಣ್ಣನ ಮನೆಗೆ ಹೋದದ್ದು; ಹಿಂತಿರುಗಿ ಬರುವಾಗ ಹಿತ್ತಲ ಪಾಗಾರ ಹತ್ತಿ ಇಳಿಯುವಾಗ ಮುಗ್ಗರಿಸಿ ಬೀಳುವಂತಾದದ್ದು. ಮೋರೆಯ ಮೇಲೆ ನೋವು; ಯಾರೂ ಕಂಡಿಲ್ಲ ತಾನೇ? ಎನ್ನುವಂತಹ ಭಯ. ತನಗಾಗ ಆರು ವರ್ಷದ ವಯಸ್ಸಿರಬೇಕು. ಅಮ್ಮ ಆ ಹೊತ್ತಿಗೆ ಶೂದ್ರರ ಕೇರಿಗೆ ಹೋದದ್ದು ಗಿರಿಯಣ್ಣ ಹೆಂಡತಿಯಿಂದ ಅಕ್ಕಿಯನ್ನು ಬೇಡಿ ತರುವ ಉದ್ದೇಶದಿಂದ ಇರಬೇಕು. ತಮ್ಮ ಜಾತಿಯವರಿಗಿಂತ ಹೆಚ್ಚಾಗಿ ಗಿರಿಯಣ್ಣನ ಹೆಂಡತಿಯಿಂದ ಅಡಚಣೆಯ ವೇಳೆಗೆ ಸಹಾಯ ಪಡೆಯುತ್ತಿದ್ದಳು, ಆದರೆ ಎಲ್ಲ ವ್ಯವಹಾರ ಕದ್ದು ಮುಚ್ಚಿ ಹೀಗೆ ಕತ್ತಲೆ ಕವಿಯುವ ಹೊತ್ತಿಗೆ! ಮರುಗಳಿಗೆ ಅಪ್ಪನ ನೋವು ತುಂಬಿದ ಮೋರೆ... ಬಾವಿಯಿಂದ ನೀರು ಸೇದುವಾಗ ಅಮ್ಮನ ಜೊತೆ ಗುಜುಗುಜು ಮಾತನಾಡುತ್ತಿದ್ದುದರ ಚಿತ್ರ ಕಣ್ಣ

ಮುಂದೆ: ಅಪ್ಪ ಅಂಗಡಿಯಿಂದ ಓಡೋಡಿ ಬಂದಂತೆ ಬಂದಿದ್ದ. ಅಮ್ಮ ಬಾವಿಯ ಬಳಿ ಇದ್ದುದನ್ನು ಕಂಡು ಅವಳನ್ನು ಅಲ್ಲೇ ಸಂಧಿಸಿದ್ದ. ಇಬ್ಬರ ಮೋರೆಯ ಮೇಲೂ ಆಮೇಲೆ ಕಂಡ ಕಳವಳ ತಾನು ಈವರೆಗೂ ಕಂಡಿರದ ಅಣ್ಣನನ್ನು ಕುರಿತದ್ದಾಗಿತ್ತು ಎಂಬ ಅನ್ನಿಸಿಕೆ: ಆಗ ಮಾತಿನಲ್ಲಿ ಒಡೆದಿರದ ನಿಗೂಢತೆಯನ್ನು ಇನ್ನೂ ಹೊಟ್ಟೆಯೊಳಗಿಟ್ಟುಕೊಂಡ ಚಿತ್ರಗಳು ಕಣ್ಣಮುಂದೆ ನಿಂತಂತಾಗಿ ಹುಟ್ಟುತ್ತಿದ್ದ ಭಾವನೆಗಳು ಈಗಲೂ ಮಾತಿನ ತೆಕ್ಕೆಗೆ ಒಳಗಾಗುತ್ತಿರಲಿಲ್ಲ.

ಹೊಟ್ಟೆ ಅತೀವ ಹಸಿದಿತ್ತು. ಹೊಟೆಲ್ಲಿಗೆ ಹೋಗೋಣವೆಂದರೆ ದಾಡಿ ಮಾಡಿಕೊಳ್ಳಬೇಕು; ಸ್ನಾನವಾಗಬೇಕು. ಸ್ನಾನ ಊಟಗಳ ನೆನಪಿನೊಂದಿಗೇ ಮೂಡಿತ್ತು ಅರಿವು: ಕೊನೆಗೂ ಖಂಬಾಟಾ ತಾನು ಕೇಳಿದ ಪತ್ರ ಹಾಗೂ ಕಾರು ಕಳಿಸಲಿಲ್ಲ. ತನ್ನ ಮಾತನ್ನು ಆತ ಸೀರಿಯಸ್ಸಾಗಿ ತೆಗೆದುಕೊಂಡಿರಲಿಕ್ಕೇ ಇಲ್ಲ. ಅಥವಾ ...ಕದ ಬಡೆದ ಸದ್ದು ಕೇಳಿಸಿ ಕದ ತೆರೆದ: ಮಗ್ಗಲುಮನೆಯ ಯಜಮಾನ! ಪಜಾಮಾ, ಉದ್ದ ತೋಳುಗಳಿದ್ದ ಕಾಲರ್ ಇಲ್ಲದ ಬಿಳಿಯ ಅಂಗಿ; ತಲೆಗೆ ಯಾವಾಗಲೂ ತಲೆಗಿಂತ ಸಣ್ಣದಾದ ಕರಿಯ ಟೊಪ್ಪಿಗೆ-ಈಗಷ್ಟೇ ತೆಗೆದಿಟ್ಟು ಬಂದಿರಬೇಕು: ಹಣೆಯ ಮೇಲೆ ಬಿಗಿಯಾದ ಟೊಪ್ಪಿಗೆ ಮೂಡಿಸಿದ ಗೆರೆ! ಪೆದ್ದನಂತೆ ಕೈಮುಗಿದು ಹಲ್ಲು ತೋರಿಸಿ ನಕ್ಕ. ನಾಗಪ್ಪ ಹೈದ್ರಾಬಾದಿಗೆ ಹೋದಮೇಲೇ ಇಲ್ಲಿ ನಿಲ್ಲಲು ಬಂದ ಜೋಡಿ ಇದು. ಕಳೆದ ಏಳೆಂಟು ತಿಂಗಳಲ್ಲಿ ಈತನನ್ನು ಆಗೀಗ ನೋಡಿದ್ದನೇ ಹೊರತು ಮಾತನಾಡಿಸಿರಲಿಲ್ಲ. ಹೆಂಡತಿ ಒಮ್ಮೆ ಮಾತನಾಡಿಸಿದಾಗ ಸಿಟ್ಟಿನಿಂದ ಉತ್ತರ ಕೊಟ್ಟಿದ್ದ.

"ನಾನು ಮಗ್ಗಲುಮನೆಯ ಧೋಂಡೋಬಾ ಶಿಂಪೀ. ನಿಮಗೆ ಮೈಯಲ್ಲಿ ಹುಷಾರಿಲ್ಲವಂತೆ. ನಿಮ್ಮ ಊಟವಾಗಿರಲಿಕ್ಕಿಲ್ಲ; ನವ ನಮ್ಮಲ್ಲೇ ಮಾಡಬಹುದಿತ್ತು..."

ನಾಗಪ್ಪ ತನ್ನ ಕಿವಿಗಳನ್ನು ತಾನೇ ನಂಬದಾದ. ಆಶ್ಚರ್ಯಚಕಿತನಾಗಿ ನೋಡುತ್ತ ನಿಂತ.

"ಎಲ್ಲ ತಯಾರಾಗಿದೆ. ಇವಳೇ ನಿಮ್ಮನ್ನು ಊಟಕ್ಕೆ ಕರೆಯುವಂತೆ ಸೂಚಿಸಿದಳು. ಬಂದರೆ ನನ್ನ ಜತೆಗೇ..."

ನಾಗಪ್ಪ ತುಂಬ ಮೆತ್ತಗಾದ: “ನಿಮಗೆ ತೊಂದರೆಯಿಲ್ಲ ತಾನೇ?”

ಇದನ್ನು ಬಾಗಿಲಲ್ಲೇ ನಿಂತ ಧೋಂಡೋಬಾನ ಹೆಂಡತಿ ಕೇಳಿರಬೇಕು. “ತೊಂದರೆಯೇನು ಬಂತು! ನಮಗಾಗಿ ಮಾಡಿದ್ದರಲ್ಲೇ ಸ್ವಲ್ಪ ತಿನ್ನುವಿರಂತೆ. ಬನ್ನೀ.” ಅವಳ ದನಿಯಷ್ಟೇ ನಾಗಪ್ಪನಿಗೆ ಕೇಳಿಸುತ್ತಿತ್ತು. ಅವರ ಕರೆಗೆ ಒಪ್ಪಿ, “ಇದೀಗ ಬರುತ್ತೇನೆ, ನೀವು ಕೂತುಕೊಳ್ಳಿ.” ಎಂದು ಒಳಗೆ ಹೋಗಿ ಪ್ಯಾಂಟು, ಅಂಗಿ ಕಳಚಿ ತನ್ನ ಪ್ರೀತಿಯ ಪಜಾಮಾ, ಕುರ್ತಾ ಧರಿಸಿ ಮಗ್ಗಲು ಮನೆಯವರಲ್ಲಿ ಊಟಕ್ಕೆ ಹೋದ.

ಊಟಕ್ಕೆ ಕೂತಾಗ, ಇವಳನ್ನು ಮೊದಲ ಬಾರಿಗೇ ನೋಡುವವನ ಹಾಗೆ ನೋಡುತ್ತಿದ್ದಾಗ ಒಂದೆರಡು ಬಾರಿ ತನ್ನ ಕಣ್ಣುಗಳನ್ನು ಸಂಧಿಸಿದ ಅವಳ ಕಣ್ಣುಗಳಲ್ಲಿಯ ಮಾದಕತೆಗೆ ಸಣ್ಣಗೆ ಕೆಂಪಿಸಿದ. “ನನಗೆ ಬೇಕಾದ ಔಷಧ ನಿನ್ನ ಹತ್ತಿರವಿಲ್ಲ” ಎಂದ ತನ್ನ ಉದ್ಧಟತನದ ನೆನಪಾಗಿ, ಇವಳು ಆ ಕಾರಣಕ್ಕಾಗಿಯೇ ಈಗ ತನ್ನನ್ನು ಕೆಣಕುತ್ತಿಲ್ಲ ತಾನೆ? ಅಥವಾ...ಆ ದಿನ ಕೂಡ ತನ್ನನ್ನು ಮಾತನಾಡಿಸಿದ್ದರಲ್ಲಿ ತನ್ನ ಲಕ್ಷ್ಯ ಸೆಳೆಯುವ ಉದ್ದೇಶವೇ ಇರಲಿಲ್ಲ ತಾನೆ? ಅವಳ ಪ್ರತಿಯೊಂದು ಭಂಗಿಯಲ್ಲಿ ಕಾಮುಕತೆ ಸ್ಪಷ್ಟವಾಗಿ ವ್ಯಕ್ತವಾಗಿತ್ತು: ಈ ದರ್ಜಿಯಿಂದ ತೃಪ್ತಳಾಗುವ ಹೆಣ್ಣಲ್ಲ ಇವಳು ಎಂಬ ಅನ್ನಿಸಿಕೆಯ ಹಿನ್ನೆಲೆಯಲ್ಲಿ ಅವಳು ಹಿಂದೆ ಕೇಳಿದ ಪ್ರಶ್ನೆಗೆ ಈಗ ಬೇರೆಯೇ ಅರ್ಥ ಹೊಳೆದು ತಾನು ಜಾಗರೂಕನಾಗಿರುವದು ಒಳ್ಳೆಯದು ಎಂದುಕೊಂಡ. ಊಟ ಮುಗಿಸುತ್ತಲೇ ಅವಳ ಅಡಿಗೆಯನ್ನು ಬಾಯಿತುಂಬ ಹೊಗಳಿ, ಆಭಾರಮನ್ನಿಸಿ ತನ್ನ ಕೋಣೆಗೆ ಹೊರಟಾಗ, “ಬನ್ನಿ ಇನ್ನೊಮ್ಮೆ. ಈವತ್ತಿನ ಊಟ ತೀರ ಸಾದಾ ಆಯಿತು. ನಿಮಗಾಗಿಯೇ ಏನೂ ವಿಶೇಷ ಮಾಡಿರಲಿಲ್ಲ,” ಎನ್ನುತ್ತ ಅವಳು ತನ್ನತ್ತ ನೋಡಿ ಕಣ್ಣುಹೊಡೆದ ರೀತಿಗೆ ನಾಗಪ್ಪನಿಗೆ ಸಂಶಯ ಉಳಿಯಲಿಲ್ಲ. ಕಳೆದ ಆರೆಂಟು ತಿಂಗಳಿಂದ ಆಗೀಗ ದೃಷ್ಟಿಗೆ ಬೀಳುತ್ತಿದ್ದಳಾದರೂ ಈಗ ನೋಡಿದ ಹಾಗೆ ನೋಡಿಯೇ ಇರಲಿಲ್ಲ ಎಂಬುದೂ ಲಕ್ಷ್ಯಕ್ಕೆ ಬರದಿರಲಿಲ್ಲ: ಎಂದೆಂದಿಗೂ ಒಳಗೆ ಜಗ್ಗುವ ಹಾಳು ನೆನಪುಗಳಿಂದ ಸುತ್ತಲಿನದಲ್ಲ ನೋಡುವ ನನ್ನ ದೃಷ್ಟಿಯೇ ಬದಲಿಸಿ ಬಿಟ್ಟಿದೆಯೇ...

ರೂಮಿಗೆ ಬಂದು ಹಾಸಿಗೆಯಲ್ಲಿ ಅಡ್ಡವಾದವನ ಮನಸ್ಸಿನ ಮೇಲೆ ಮಗ್ಗಲುಮನೆಯ ಹೆಣ್ಣು ಇತ್ತ ಕಾಮಕೇಳಿಯ ಇಷಾರೆಗಿಂತ ಊಟಕ್ಕೆ ಹೋಗುವ ಮೊದಲಷ್ಟೇ ತನ್ನನ್ನು ಬಾಲ್ಯಾವಸ್ಥೆಗೆ ಎಳೆದು ಬಿಟ್ಟ ಅಪ್ಪ—ಅಮ್ಮರ ಮೋರೆಗಳ ಮೇಲಿನ ನಿಗೂಢ ಯಾತನೆಯ ಹಿಡಿತವೇ ಪ್ರಬಲವಾಗಿತ್ತು: ಹಿಂದೆ ಎಷ್ಟೊಂದು ಸಾರೆ ಬಾಲ್ಯದ ನೆನಪುಗಳು ಬೆನ್ನಟ್ಟಿ ಬಂದಿದ್ದರೂ ಹೀಗೆ, ಚಿಕ್ಕ ಚಿಕ್ಕಮಗುವಿನಂತೆ ಅತ್ತು ಬಿಡುವಷ್ಟರ ಮಟ್ಟಿಗೆ, ತನ್ನನ್ನು ಅಲ್ಲಾಡಿಸಿರಲಿಲ್ಲ. ಇದೆಲ್ಲ ಆ ಬಾರ್ಬಿಚ್ಯುರೇಟ್ ಗುಳಿಗೆಗಳ ಪ್ರತಾಪ—ಮನಸ್ಸಿನ ಪ್ರಬುದ್ಧತೆಯನ್ನೇ ನಾಶಮಾಡಿಬಿಡುತ್ತವೆ ಹಾಳಾದವುಗಳು. ಹಾಸಿಗೆಯಿಂದ ಎದ್ದವನೇ ಕಪಾಟಿನೊಳಗಿಂದ ಬಾಟಲಿಯನ್ನು ಹೊರತೆಗೆದು ಅದರ ಮುಚ್ಚಳವನ್ನು ತೆರೆದು ಇಡೀ ಬಾಟಲಿಗೆ ಬಾಟಲಿಯನ್ನೇ ರಸ್ತೆಯ ಮೇಲೆ ಖಾಲಿ ಮಾಡಿದ. ಗುಳಿಗೆಗಳೆಲ್ಲ ರಸ್ತೆಯಂಚಿನ ಕೆಸರಿನಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿಹೋದವು. ಖಾಲಿಯಾದ ಸೀಸೆ ಕಚರಾಬುಟ್ಟಿಯನ್ನು ಸೇರಿತು: ಇನ್ನುಮುಂದೆ ಇಂತಹ ಮರೆಯುವ ಯುಕ್ತಿಗಳಾವವೂ ಬೇಡ. ಬಂದ ನೆನಪುಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುವದನ್ನು ಕಲಿಯಬೇಕು. ಯಾತನೆಯನ್ನು ನೋವು ಕಳೆಯುವ ಅಮಲಿನಲ್ಲಿ ಮುಳುಗಿಸುವದು ಬೇಡ. ಅನುಭವಿಸುವ ಧೈರ್ಯವನ್ನು ತಂದಕೊಳ್ಳಬೇಕು... ನನಗೆ ಸ್ಪಷ್ಟ ಅರಿವು ಇದೆ: ಮೇರಿಗೆ ನನ್ನ ಬಗ್ಗೆ ಇದ್ದ ಭಾವನೆ ಕೂಡ ಸುಳ್ಳಾದದ್ದು. ಅವಳು ಹೋದದ್ದು ಫಿರೋಜನ ಪಾರ್ಟಿಗೇ ಇರಬೇಕು ಎಂಬ ಸಂಶಯದಿಂದಲೇ ಹುಟ್ಟಿದ ಅಸೂಯೆ ಎಷ್ಟೊಂದು ಪ್ರಬಲವಾಗಿತ್ತೆಂದರೆ ಅದರಿಂದಾಗಿ ಹುಟ್ಟಿದ ನೋವಿನಲ್ಲಿ ಇಂದು ನಡೆಯಲಿದ್ದ ತನಿಖೆಯನ್ನು ಕೂಡ, ಪೂರ್ತಿಯಾಗಿ ಮರೆತೇ ಕೂತಂತೆ ಕೂತುಬಿಟ್ಟಿದ್ದೇನೆ; ಫಿರೋಜ್ ಇಲ್ಲಿ ಬಂದ ಎರಡೇ ದಿನಗಳಲ್ಲಿ ಅವಳನ್ನು ಪಾರ್ಟಿಗೆ ಕರೆಯುವಷ್ಟರ ಮಟ್ಟಿಗೆ ಸಲುಗೆ ಬೆಳಿಸಿರಬೇಕಾದರೆ...! ಬೋಳೀಮಗನಿಗೆ ಯಾರ ಮೇಲೂ ಭೇಟಿಯಾದ ಒಂದೇ ಗಳಿಗೆಯಲ್ಲಿ ಛಾಪು ಹೊಡೆಯುವ ಮಾತಿನ ಕಲೆಯಿದೆ. ಜೊತೆಗೆ, ಮಾತುಗಳು ಉಂಟುಮಾಡುವ ಪರಿಣಾಮವನ್ನು ಎತ್ತಿಹಿಡಿಯುವಂಥ—ಯಾರನ್ನೂ ಮರುಳುಗೊಳಿಸಿಬಿಡುವಂಥ ಮೋರೆ, ಕಣ್ಣು ಕೂದಲು, ಆರೋಗ್ಯ!...

ಫಿರೋಜನ ಮೋರೆ ಹಿಂದೆಂದೂ ಕಂಡಿರದಷ್ಟು ಸ್ಫುಟವಾಗಿ ಕಣ್ಣ ಮುಂದೆ ನಿಂತಾಗ ಮೂಗಿನ ಹೊರಳೆಗಳು ಉಬ್ಬಿಕೊಂಡವು; ಕೊರಳಸೆರೆಗಳು

ಬಿಗಿಯಾದವು. ಶ್ವಾಸೋಚ್ಛ್ವಾಸ ಕೂಡ ಕಷ್ಟಕರವಾಯಿತು: ಸಮಾಜ ಕೂಡಲೇ ಮನ್ನಿಸುವದು ಇದನ್ನೇ—ಹೊರಗಿನಿಂದ ಕಾಣುವ ಮನುಷ್ಯನನ್ನೇ! ಒಳಗೆ ಇದ್ದವನನ್ನಲ್ಲ.

ಒಳಗೆ ಇದ್ದವನ ವಿಚಾರ ಬಂದದ್ದೇ, ನಾಗಪ್ಪ ಮತ್ತೆ ವ್ಯಾಕುಲನಾದ: ಒಳಗಿನಿಂದ ಎದ್ದು ಬರುವುದನ್ನು ಪ್ರತಿರೋಧಿಸುವದು ಅಸಾಧ್ಯವಾದಾಗ ಕುರ್ಚಿಯಿಂದ ಎದ್ದು ಕೋಣೆಯಲ್ಲಿ ರಭಸದಿಂದ ಶತಪತಹಾಕಹತ್ತಿದ: MDಯವರೋ ಇನ್ನಾರೋ ಹಿಂದೊಮ್ಮೆ ಅಂದಂತೆ ತನ್ನದು one track mind ಎಂದುಕೊಂಡ: ಮೇರಿ. ಡಾಯನಾ, ಥ್ರೀಟಿ ಇವರೆಲ್ಲ ಒಂದು ಅನನ್ಯ ಸನ್ನಿವೇಶದಲ್ಲಿ ತನ್ನಲ್ಲಿ ಹುಟ್ಟಿಸಿದ ಆತ್ಮವಿಶ್ವಾಸದ ಹಿಡಿತದಲ್ಲಿದ್ದಾಗ ನೌಕರಿಯನ್ನೇ ಬಿಟ್ಟುಕೊಡುವ ಧೈರ್ಯಮಾಡಿ ಖಂಬಾಟಾನಿಗೆ ಖಂಡತುಂಡವಾಗಿ, ಒಂದು ಬಗೆಯ ಮೊಂಡುತನದಿಂದ, ಮಾತನಾಡಿದ ತಾನು ಈಗ—ಆ ಧೈರ್ಯಕ್ಕೆ ಮೂಲವಾದ ಒಂದು ಭಾವನೆಗೇ ಪೆಟ್ಟುಬಿದ್ದಾಗ—ಈವರೆಗೆ ಅನುಭವಕ್ಕೆ ಬಂದಿರದ ಒಂದು ಜಾತಿಯ ಭಯ ತನ್ನನ್ನು ಆವರಿಸಹತ್ತಿದ ಅನ್ನಿಸಿಕೆಯಿಂದ ತತ್ತರಿಸಿದ್ದೇನೆ ಎನಿಸಿತು: ಕೊನೆಗೂ, ತನಗೆ ಈ ನೌಕರಿಯ ಅವಶ್ಯಕತೆ ಇದೆಯೇನೋ. ಬದುಕಿನಲ್ಲಿ, ಯಾವುದಾದರೂ ಒಂದು ನಿಶ್ಚಿತವಾದ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಂತಾಗ ಮಾತ್ರ... ಕದದ ಮೇಲೆ ಯಾರೋ ಮೆಲ್ಲಗೆ ತಟ್ಟಿದ ಸದ್ದಲ್ಲವೇ?... ತೆರೆದು ನೋಡಿದ: ಮಗ್ಗಲುಮನೆಯ ಹೆಂಗಸು! ಚಹದ ಕಪ್ಪನ್ನು ಕೈಯಲ್ಲಿ ಹಿಡಿದು ನಿಂತವಳು, ಕಪ್ಪನ್ನು ಕೈಗೆ ಕೊಡುವಂತೆ ಮುಂದೆ ಚಾಚಿದಳು. ವಿಚಾರಮಾಡುವ ಮೊದಲೇ ಅವನು ಕಪ್ಪನ್ನು ಕೈಗೆತಗೆದುಕೊಳ್ಳುತ್ತಿದ್ದಾಗ ಪುಟಿದೆದ್ದು ಕಾಣುತ್ತಿದ್ದ ಬಲಬದಿಯ ಮೊಲೆಯಿಂದ ಜಾರಿದ ಸೆರಗನ್ನು ಸರಿಪಡಿಸಿಕೊಳ್ಳುವ ನೆಪದಲ್ಲಿ ಅದರತ್ತ ಲಕ್ಷ್ಯ ಸೆಳೆಯುತ್ತ, ಅರ್ಧ ಕ್ಷಣದ ಮಟ್ಟಿಗೆ ಇವನತ್ತ ನೋಡಿ ಕಣ್ಣುಗಳನ್ನು ಅರಳಿಸಿ ಅಲ್ಲಿಂದ ಮಾಯವಾದಳು. ಕುರ್ಚಿಯಲ್ಲಿ ಕೂತು ಚಹ ಕುಡಿಯುವಾಗ ಬಾರ್ಬಿಚ್ಯುರೇಟ್ ಗುಳಿಗೆಗಳ ಅಮಲು ಸಂಪೂರ್ಣವಾಗಿ ಕಳೆದಿತ್ತು. ದರ್ಜಿಯ ಹೆಂಡತಿಯ ಹುಚ್ಚುತನಕ್ಕೆ ಮುಗುಳು ನಕ್ಕ: ಯಾವುದೇ ಬಗೆಯ ಅಸಡ್ಡೆಯ ಭಾವನೆಗೆ ಎಡೆಕೊಡದೇ ಈ ಪ್ರಕರಣ ಮುಂದುವರಿಯದ ಹಾಗೆ ತಾನೇ ತುಸು ಕಾಳಜಿವಹಿಸಬೇಕು, ಅಷ್ಟೇ. ಹುಡುಗಿ ಇನ್ನೂ ಸಣ್ಣವಳು...

ಕುರ್ಚಿಯಿಂದ ಎದ್ದು ಮಾಡಲು ಬಯಸಿದ ಮೊದಲನೇ ಕೆಲಸವೆಂದರೆ ಕ್ಷೌರ ಹಾಗೂ ಸ್ನಾನ. ಕ್ಷೌರ ಮುಗಿಸಿ ಸ್ನಾನಕ್ಕೆ ನಿಂತಾಗ ಅನ್ನಿಸಿತು: ಮೇರಿಯನ್ನು ಸಂಶಯ ದೃಷ್ಟಿಯಿಂದ ನೋಡುವುದಕ್ಕೆ ಕಾರಣ ಬಹುಶಃ ಫಿರೋಜನ ಬಗೆಗಿರುವ ಆಸೂಯೆಯೇ ಇರಬಹುದು. ಆದರೂ ಇದರ ಸೋಕ್ಷಮೋಕ್ಷವಾಗಲೇಬೇಕು: ಕಳೆದ ಎಂಟು ದಿನಗಳ ಅನುಭವದಿಂದ ತಾನು ಪಡೆದ ಪ್ರಬುದ್ಧತೆಯನ್ನು ಈಗ ಒಮ್ಮೆಲೇ ಬಿಟ್ಟುಕೊಡಬಾರದು. ಸಂಜೆ ಮೇರಿಗೆ ಫೋನ್ ಮಾಡಿ ಕೇಳಿದರಾಯಿತು. ಅವಳು ನಿನ್ನೆ ಹೋದದ್ದು ಫಿರೋಜನ ಪಾರ್ಟಿಗೇ ಎನ್ನುವದು ಹೌದಾದರೆ ಯಾವುದೇ ಬಗೆಯ ಭ್ರಮೆಯ ಮೋಹಕ್ಕೆ ಒಳಗಾಗದೇ ಈ ಸಂಬಂಧವನ್ನು ಕೂಡ ಕಡಿಯಬೇಕು: ತಲೆಯ ಮೇಲೆ ಸುರಿಯುತ್ತಿದ್ದ ನೀರಡಿಗೆ ಕಣ್ಣುಗಳು ತುಂಬಿಕೊಳ್ಳುತ್ತಿದ್ದವು: ಜನ್ಮಾಂತರದಲ್ಲಿ ಭರವಸೆಯನ್ನು ಹುಟ್ಟಿಸಿದ ಮೇರಿ, ಫಿರೋಜನೊಡನೆ ವ್ಯವಹರಿಸುವಾಗ ಹುಷಾರಾಗಿರುವಂತೆ, ಹೇಳಿದ ಮೇರಿ—ಈಗ ಇದ್ದಕಿದ್ದಂತೆ ಫಿರೋಜನ ಪಾರ್ಟಿಗೆ ಹೋಗುವಷ್ಟು ಬದಲಿಸಿಹೋದಳೆ?... ಛಾತಿಯ ಮೇಲೆ ಸಾಬೂನೂ ತಿಕ್ಕಿಕೊಳ್ಳುವಾಗ ಮೇರಿಯ ಮಗ್ಗಲಲ್ಲಿ, ಡಾಯನಾಳ ಮಗ್ಗಲಲ್ಲಿ. ಮನುಷ್ಯ ಸಂಬಂಧಗಳ ಕ್ಷಣಭಂಗುರತೆಯ ಮೇಲೆ ಉಪನ್ಯಾಸಮಾಡಿದ ಗಂಭೀರ ಮುಖ ಮುದ್ರೆಯ ಧ್ರೀಟಿಯ ಮಗ್ಗಲಲ್ಲಿ ಫಿರೋಜನನ್ನು ನಿಲ್ಲಿಸಿ ನೋಡುತ್ತ ತನ್ನ ಬಗ್ಗೆ ತಾನೇ ಜಿಗುಪ್ಸೆಪಟ್ಟು ಕುಗ್ಗಿದ. ಮೊನ್ನೆ ಹೈದ್ರಾಬಾದ್ ಏರ್‌ಪೋರ್ಟಿನಲ್ಲಿ ರೆಡ್ಡಿಯೊಡನೆ ಮಾತನಾಡುವಾಗ ಕೂಡ ಇಂತಹದೇ ಒಂದು ಚಿತ್ರ ಕಣ್ಣಮುಂದೆ ನಿಂತಾಗ ತುಂಬ ತುಂಬ ಕುಗ್ಗಿದ್ದ: ತುಟಿ ಪಿಟ್ಟೆನ್ನದೇ ಕೂತಿರುವಾಗ ಬರಿಯ ತನ್ನ ಸಾನ್ನಿಧ್ಯದಿಂದಲೇ ಇದಿರಿನ ಹೆಣ್ಣಿನ ಮೈಯ ಕಣಕಣವನ್ನೂ ಅಲ್ಲಾಡಿಸಬಲ್ಲ ಮಾಟವುಳ್ಳ ವ್ಯಕ್ತಿತ್ವವಿದು: ಎದೆ ಸೆಟೆದು ಭುಜ ಹರಹಿ ಮಾತನಾಡುವ ಮೋಡಿಯಂತೂ ಆಡಿದ ಪ್ರತಿ ಮಾತಿಗೆ, ಮಾತಿನ ಅರ್ಥವಾಗುವ ಮೊದಲೇ, ಸೈ ಎನ್ನಿಸುವಂಥದ್ದು. ವಿಮಾನದಿಂದ ಇಳಿಯುವ ಮೊದಲು ರೆಡ್ಡಿಯಿತ್ತ ಪತ್ರವನ್ನು ಓದುವ ಮೊದಲೇ ಹರಿದೊಗೆದದ್ದಕ್ಕೆ ಕಾರಣವಾದ ಪ್ರೇರಣೆಯಲ್ಲಿ ಈ ಅಸೂಯೆಯೂ ಸೇರಿಕೊಂಡಿತ್ತು ಎಂಬ ಅನುಮಾನ ಈಗ ಮತ್ತೆ ಬಂದಿತು: ಧ್ರೀಟಿಯ ಕೈಯನ್ನು ಬಿಡುವಾಗ—ಅದನ್ನು ಹಿಡಿದ ಕೈ ರೆಡ್ಡಿಯದಾಗಿದ್ದರೆ ಎಂಬ ವಿಚಾರದ ಹಿಂದೆಯೇ ಬಂದಿತ್ತು ರೆಡ್ಡಿಯ ಪತ್ರವನ್ನು ಹರಿದೊಗೆಯುವ ವಿಚಾರ! ಪಾರ್ಟಿಯಲ್ಲಿ ಮೇರಿ, ಡಾಯನಾ ಫಿರೋಜನೊಡನೆ ನಡೆಸಿರಬಹುದಾದ ಚೆಲ್ಲಾಟವನ್ನು ಊಹಿಸಿಯೇ ಇನ್ನಷ್ಟು

ಮುದುರಿದ: ಐವತ್ತು ದಾಟಿದರೂ ಹುಡುಗಿಯರನ್ನು ಲಲ್ಲಯಿಸುವ ಚಟ ಬಿಟ್ಟಿಲ್ಲ—ಭೆಂಛೋದ್!... ಇದನ್ನು ನೆನೆಯುವಾಗ ತನಗೆ ಸಿಟ್ಟು ಬಂದದ್ದು ಅಪ್ಪನ ಮೇಲೆ; ಸ್ನಾನದ ನೀರನ್ನು ಟವೆಲ್ಲಿನಿಂದ ಒರಸಿಕೊಳ್ಳುವಾಗ ಹೊಟ್ಟೆ ಛಾತಿಗಳನ್ನು ನೋಡಿಕೊಳ್ಳುತ್ತ ಸಿಡಿಮಿಡಿಗೊಂಡ: ಅಪ್ಪನಿಂದಲೇ ಪಡೆದ ಬಳುವಳಿಯಿದು. ಜತೆಗೆ—'ಸಾಯ್' ಎಂಬ ಆಶೀರ್ವಾದ. ಸಿಟ್ಟಿನ ಹಿಂದೆಯೇ ಬಂದ ಹುಚ್ಚು-ವಿಚಾರಕ್ಕೆ ಕ್ಷಣಕಾಲ ಅಪ್ರತಿಭನಾದ: ಧೋಂಡೋಬಾ ಶಿಂಪಿಯ ಹೆಂಡತಿಗೊಮ್ಮೆ (ಇನ್ನೊಮ್ಮೆ ಸಿಕ್ಕಾಗ ಅವಳ ಹೆಸರನ್ನು ಕೇಳಬೇಕು) ಬನಿಯನ್, ಅಂಗಿ ತೊಟ್ಟಿರದ ಬರಿ ಮೈಯನ್ನು ತೋರಿಸಿ ನೋಡಬೇಕು—ಪರಿಣಾಮ ಏನಾಗುತ್ತದೆಯೋ ಎಂದು! ಬಂದ ವಿಚಾರಕ್ಕೆ ನಕ್ಕುಬಿಡಬೇಕು ಎಂದನ್ನಿಸಿದರೂ, ಬನಿಯನ್ ಅಂಗಿ ಕಳಚಿ ನಿಂತಾಗ ಇದಿರು ನಿಂತವಳು ಮೇರಿ ಇಲ್ಲವೇ ಡಾಯನಾ ಇಲ್ಲವೆ ಥ್ರೀಟಿ ಆಗಿದ್ದರೆ ಎಂಬ ವಿಚಾರ ಬಂದಾಗ ನಗುವದು ಸಾಧ್ಯವಾಗಲಿಲ್ಲ... ತಾನು ಇಷ್ಟು ದಿನ ಎಷ್ಟೊಂದು ಧೈರ್ಯದಿಂದ ಇದಿರಿಸಲು ಪ್ರಯತ್ನಿಸಿದ ತನ್ನ ಇತಿಹಾಸ ಕೂಡ ಇಂದು ಏಕಾಏಕೀ ತನ್ನನ್ನು ಶಿಕಾರಿಯಾಡುವ ಫಿರೋಜನ ತಂಡವನ್ನು ಸೇರಿ ಬಿಟ್ಟಿದೆ ಎಂಬಂತಹ ಅನ್ನಿಸಿಕೆಯಿಂದ ಮೈ ಬಿಸಿಯಾಗಿ ಇನ್ನೊಮ್ಮೆ ಸ್ನಾನ ಮಾಡುವ ಮನಸ್ಸಾಯಿತು. ಆದರೆ ಸ್ನಾನಕ್ಕೆಂದು ಶೇಖರಿಸಿಟ್ಟ ನೀರು ತೀರಿಹೋಗಿತ್ತು. ಮೇರಿಯೊಡನೆಯಾಗಲೀ, ಡಾಯನಾ ಥ್ರೀಟಿಯರೊಡನೆಯಾಗಲೀ ದೀರ್ಘಕಾಲದ ಗೆಳೆತನ ಬೆಳೆಸುವ ಯೋಗ್ಯತೆ ತನಗಿಲ್ಲ. ಹೀಗೇ—ಆಕಸ್ಮಿಕವಾಗಿ ವಿಮಾನದಲ್ಲಿ ಭೆಟ್ಟಿಯಾದಾಗ ಇಲ್ಲ, MDಯವರ ಕೋಣೆಗೆ ಹೋಗುವಾಗ ಕಣ್ಣಿಗೆ ಬಿದ್ದಾಗ Hello ಎಂದು ತನ್ನ sweet sad face ಬಗ್ಗೆ ಅನುಕಂಪ ತೋರಿಸಿ ಮುದ್ದಾಡುವ ಈ transient friendship ಅಷ್ಟೇ ತನ್ನ ಪಾಲಿನ ಭಾಗ್ಯ...ರಾಣಿ ಒಬ್ಬಳು ಮಾತ್ರ ತನ್ನ ಇಡೀ ದೇಹವನ್ನು ನೋಡಿಯೂ ಒಮ್ಮೆಯೂ ಜಿಗುಪ್ಸೆಪಟ್ಟವಳಲ್ಲ. ಅವಳನ್ನು ನೋಡಬೇಕು ಎಂದು ಎಷ್ಟು ಸರತಿ ಅನ್ನಿಸಿದರೂ ಕೊನೆಯ ಗಳಿಗೆಯಲ್ಲಿ ತನಗೆ ಅರ್ಥವಾಗದ್ದೇನೋ ಅಡ್ಡಬರುತ್ತದೆ... ನಾಳೆ ಅವಳಿಗೆ ಇನ್ನೂರು ರೂಪಾಯಿ M. O. ದಿಂದ ಕಳಿಸಬೇಕು...

ಹೀಗೇ ಚೌಪಾಟಿಯ ವರೆಗೆ ಹೋಗಿಬರಬೇಕು ಎಂದುಕೊಂಡು ಹೊರಗೆ ಹೋಗುವ ತಯಾರಿಗೆ ತೊಡಗಿದ. ನಾಳೆ ರಾಣಿಗೆ M. O. ಮಾಡಲು ಹೋದಾಗ ಬ್ಯಾಂಕಿಗೆ ಹೋಗಿ ತನ್ನ ಪಾಸ್‌ಬುಕ್ ಹೊಂದಿಸಿಕೊಂಡು ತರಬೇಕು: ಖಾತೆಯಲ್ಲಿ

ಎಷ್ಟು ಹಣವಿದೆಯೆನ್ನುವದು ಗೊತ್ತಾದೀತು. ನಾಳೆ ಫೈನೆನ್ಸ್ ಡಿಪಾರ್ಟ್‌ಮೆಂಟಿಗೆ ಫೋನ್ ಮಾಡಿ ತನ್ನ ಖಾತೆಗೆ ಜಮಾ ಆದ ಪ್ರಾವಿಡೆಂಟ್ ಫಂಡಿನ ಅಂಕೆ ಎಷ್ಟೆಂಬುದು ಕೇಳಿ ತಿಳಿಯಬೇಕು. ಹದಿನೆಂಟು ವರ್ಷಗಳ ನೌಕರಿಯೆಂದ ಮೇಲೆ ಗ್ರೆಚ್ಯುಯಿಟಿ ಕೂಡ ಸಿಗಬೇಕು... ಮಧ್ಯದಲ್ಲೇ, ತನ್ನ ವಿಚಾರಸರಣಿ ಹರಿದ ದಿಕ್ಕಿನ ಅರಿವು ಬಂದದ್ದೇ ತನ್ನ ಬಗ್ಗೆ ತನಗೇ ಅನುಕಂಪ ಹುಟ್ಟಿ ತಡೆದ: ಖಂಬಾಟಾ ಕಾರು, ಪತ್ರ ಕಳಿಸದೇ ಇದ್ದುದರ ಅರ್ಥವೊಂದೇ: ಫಿರೋಜನ ಅಹಂಕಾರದ ನಿರ್ಣಯ: "೧೮ ವರ್ಷಗಳ ದೀರ್ಘ ಕಾಲಾವಧಿಯಲ್ಲಿ ಅನನ್ಯವಾದ ನಿಷ್ಠೆಯಿಂದ, ಧೀಶಕ್ತಿಯಿಂದ ಕಾರಖಾನೆಯನ್ನು ಇಂದಿನ ಭರಭರಾಟಿಯ ಸ್ಥಿತಿಗೆ ತಂದ ಅಸಾಧಾರಣ ಸೃಷ್ಟಿಶೀಲ ಪ್ರತಿಭೆಯ ನಾಗಪ್ಪ ಅಲಿಯಾಸ್ ನಾಗನಾಥ ಸಾಂತಯ್ಯ ಮಾಪ್ಸೇಕರ್—ವಯಸ್ಸು ೩೯. ಕಂಪನಿ ಸೇರಿದ್ದು ೧೯೫೦ರಲ್ಲಿ. ಆಗಿನ ಡೆಸಿಗ್ನೇಶನ್: Research Chemist. ಅನಂತರ R&D Manager. ಸದ್ಯ: Manager Special Assignment. ಇವನನ್ನು ಇಂದಿನಿಂದ ಕೆಲಸದ ಮೇಲಿಂದ ತೆಗೆದುಹಾಕಲಾಗಿದೆ. ಕಾರಣ ತನ್ನ ಪ್ರತಿಭೆಯ ಲಾಭವನ್ನು ಪಡೆಯುವ—ಎಲ್ಲ ಪ್ರೊಫೆಶನಲ್ಲ್‌ಗಳಲ್ಲಿ ಇರಲೇಬೇಕಾದ—ಚಾಲಾಕು ಇವನಲ್ಲಿ ಎಳ್ಳಷ್ಟೂ ಇಲ್ಲದ್ದು"—ಸಹಿ ಮಾಡಿದವರು; ಫಿರೋಜ್ ಸೋರಾಬ್ಜೀ ಬಂದೂಕವಾಲಾ. ಎಕ್ಟಿಂಗ್-ಮ್ಯಾನೇಜಿಂಗ್ ಡೈರೆಕ್ಟರ್—ತಾರೀಖು..."

ಒಂದು ವಿಚಿತ್ರ ಗಳಿಗೆಯಲ್ಲಿ ಕಲ್ಪನೆಯಲ್ಲಿ ಹುಟ್ಟಿಬಂದ ಈ ನೋಟೀಸು ಹೊತ್ತು ಹೋದ ಹಾಗೆ ಎಷ್ಟೊಂದು ವಾಸ್ತವತೆಯ ಸತ್ವ ಪಡೆಯಿತೆಂದರೆ, ತಾನು ಕಳೆದ ಎಂಟು ದಿನಗಳಿಂದ ಆಫೀಸಿಗೆ ಹೋಗದೇ ಹೀಗೆ ಮನೆಯಲ್ಲಿ ಮೂಲೆಗುಂಪಾಗಿ ಕೂತದ್ದು ನೌಕರಿಯನ್ನು ಕಳಕೊಂಡದ್ದಕ್ಕಾಗಿಯೇ ಎಂಬ ವಿಚಾರವನ್ನು ತಲೆಯಿಂದ ತೆಗೆದುಹಾಕುವದು ಅಸಾಧ್ಯವಾಯಿತು. ನೌಕರಿ ಹೋಗಿ ಎಂಟು ದಿನಗಳಾದರೂ ತಾನಿನ್ನೂ ಮುಂದೆ ಏನು ಮಾಡಬೇಕೆಂಬುದರ ಬಗ್ಗೆ ವಿಚಾರವನ್ನೇ ಮಾಡಿಲ್ಲವಲ್ಲ ಎಂಬಂತಹ ಕಾತರದ ಭಾವನೆಯೊಂದು ಮನಸ್ಸಿನಲ್ಲಿ ನೆಲಸಹತ್ತಿತು. ಇನ್ನೊಂದು ಕಂಪನಿಯಲ್ಲಿ ನೌಕರಿಗಾಗಿ ಪ್ರಯತ್ನಿಸಲೆ? ಕಷ್ಟವಾಗಲಿಕ್ಕಿಲ್ಲ. ಈಗಾಗಲೇ ತಾನು ಈ ಕಂಪನಿಯಲ್ಲಿ ಸಾಧಿಸಿದ್ದು ಕಂಪನಿಯ Competitors ಹಾಗೂ ಗ್ರಾಹಕರಿಗೆಲ್ಲ ಗೊತ್ತಾಗಿದೆ. ಅನೇಕ ಸೆಮಿನಾರುಗಳಲ್ಲಿ ತಾನು ಓದಿದ ಪೇಪರುಗಳ ಮೂಲಕ ಕೆಮಿಕಲ್ ಇಂಡಸ್ಟ್ರಿಯಲ್ಲಿ ತನ್ನ ಹೆಸರು

ಪ್ರಸಿದ್ಧವಿದೆ, ಎನಿಸಿತು. ಎಲ್ಲಕ್ಕಿಂತ ಹೆಚ್ಚಾಗಿ ನಾಗಪ್ಪ ತುಂಬ ಸಮಾಧಾನ ಹಾಗೂ ಅಭಿಮಾನಪಟ್ಟ ಸಂಗತಿಯೆಂದರೆ ಅವನ ಹೆಸರಿನಲ್ಲಿ ದಾಖಲೆಯಾಗಿರುವ ಆರು ಪೇಟೆಂಟುಗಳು: ನಾಗಪ್ಪನ ದೃಷ್ಟಿಯಲ್ಲಿ ಈ ಪೇಟೆಂಟ್ಸುಗಳು ಸಾಮಾನ್ಯವಾದವುಗಳಾಗಿರಲಿಲ್ಲ. ಅವು ಒಳಗೊಂಡ ಶೋಧಗಳು ಉಚ್ಚದರ್ಜೆಯವಾಗಿದ್ದವು. ಒಂದು ಶೋಧವಂತೂ 'ನ್ಯಾಶನಲ್ ಇನ್‌ವೆನ್ಶನ್ ಎವಾರ್ಡ' ಸಲುವಾಗಿ ಸ್ವತಃ MD ಅವರೇ ಸಹಿಮಾಡಿದ ಅರ್ಜಿಯ ಮುಖಾಂತರ ದಾಖಲೆಯಾಗಿತ್ತು. ಇನ್ನೊಂದು ಸಂತೋಷದ ಸಂಗತಿಯೆಂದರೆ—ಕಂಪನಿಯ diversification ಕಾರ್ಯಕ್ರಮದಲ್ಲಿ ತಾನು ವಹಿಸಿದ ದೊಡ್ಡ ಪಾತ್ರ... ಆದರೆ ಎಲ್ಲ ಕಂಪನಿಗಳೂ ಇಷ್ಟಿದ್ದೂ, ಒಂದೇ. ಯಾಕೆಂದರೆ ಮನುಷ್ಯರೆಲ್ಲ ಒಂದೇ ಇಲ್ಲ. ಕೆಲಸದ ದೃಷ್ಟಿಯಿಂದ ಈಗಿನ ಕಂಪನಿಗಿಂತ ಒಳ್ಳೆಯದಾದ ಕಂಪನಿಯಿರಲಾರದು. ಫಿರೋಜ್ ಯಾವ ಕಾರಣವೂ ಇಲ್ಲದೇನೇ ಹೀಗೆ ಹಗೆಕಾದದ್ದು ತನ್ನ ದುರದೃಷ್ಟ! ಪುಸ್ತಕದ ಅಂಗಡಿ? ಮೊದಲು ಸಿಗಬೇಕಲ್ಲ! ಮುಂಬಯಿಯಂಥ ನಗರದಲ್ಲಿ ಪಾಗಡಿ ಕೊಟ್ಟ ಹೊರತು ಯಾವುದೂ ಸಾಧ್ಯವಿಲ್ಲ. ಸಾಹಿತ್ಯದ ಮೇಲೇ ಬದುಕಬಹುದೆ? ಸ್ಟ್ರ್ಯಾಂಡ್ ಬುಕ್ ಸ್ಟಾಲ್‌ನಲ್ಲಿ ಸೇಲ್ಸ್‌ಮನ್ ಆಗಿ ಕೆಲಸ ಮಾಡಿ ಬಿಡುವಿನ ವೇಳೆಯನ್ನು ಯಾವುದಾದರೂ ರಾಜಕೀಯ ಪಕ್ಷದ ಇಲ್ಲವೇ ಸಾಮಾಜಿಕ ಸಂಸ್ಥೆ ಸಂಘಗಳ ಕಾರಯದಲ್ಲಿ ಹಾಕಿದರೆ ಹೇಗೆ?—ನಾಗಪ್ಪನ ಮೋರೆಯ ಮೇಲೆ ವಿಷಾದ ತುಂಬಿದ ನಗು ಮೂಡಿತು: ರಾಜಕಾರಣ ತನ್ನ ಮನೋಧರ್ಮಕ್ಕೆ ಒಗ್ಗಿದ್ದೇ ಅಲ್ಲ. ಗಿಲ್ಬರ್ಟ್ ಅಷ್ಟಾಗಿ ಹೇಳಿದ ಚೆಶಾಯರ್‌ಹೋವರ್‌ಗೆ ಹೋಗಿ ಅಲ್ಲಿಯ ರೋಗಿಗಳ ಅಪಂಗತ್ವವನ್ನು ನೋಡುವ ಧೈರ್ಯ ಕೊನೆಗೂ ಆಗದೇ ಇದ್ದಾಗ ೫೦೦ ರೂಪಾಯಿ ವಂತಿಗೆಯ ಚೆಕ್ ಕಳಿಸಿದ್ದೆ. ಅಷ್ಟೇ. ತನ್ನ ಚೈತನ್ಯದ ಬೀಸೇ ದೊಡ್ಡದಲ್ಲ. ತನ್ನ ಸೀಮಿತ ಪ್ರತಿಭೆಗೆ ಸಾಧ್ಯವಾದ, ಸೀಮಿತ ಚೈತನ್ಯಕ್ಕೆ ದಕ್ಕಿದ ಒಂದೇ ಒಂದು ಕೆಲಸವೆಂದರೆ ಲೆಬೋರೇಟರಿಯಲ್ಲಿ ರಾಸಾಯನಿಕ ಶೋಧ. ಬಿಟ್ಟರೆ ಆಗೀಗ ಸಾಹಿತ್ಯ...

ಏನೋ ನೆನಪಾದವನ ಹಾಗೆ ತಲೆ ಕೊಡವಿ ಎದ್ದ: ಇಂತಹ ನೀರಿಲ್ಲದ ಹಳವಂಡಕ್ಕೆ ಎಡೆ ಕೊಡಬಾರದು. ನಾಳೆಯನ್ನು ಕುರಿತು ವಿಚಾರಮಾಡಲೇ ಕೂಡದು. ನಿನ್ನೆ ಖಂಬಾಟಾನ ಜೊತೆ ಮಾತನಾಡಿದ್ದು ಒಣ ಜಂಭವಾಗಲು ಬಿಡಬಾರದು. ಇಷ್ಟು ದೀರ್ಘ ಕಾಲ ಕೆಲಸ ಮಾಡಿದ ಒಬ್ಬ ನಿಷ್ಠಾವಂತ

ಮ್ಯಾನೇಜರನನ್ನು ಕೆಲಸದಿಂದ ತೆಗೆದುಹಾಕುವದು ಸಣ್ಣ ಕೆಲಸವಲ್ಲ. ಅದರಲ್ಲೂ MD ಅವರು ತನ್ನ ಬೆನ್ನಿಗಿದ್ದಾಗ. ಈವತ್ತು ಖಂಬಾಟಾ ಬರದಿರಲಿಕ್ಕೆ ಬೇರೆಯೇ ಏನಾದರೂ ಕಾರಣವಿರಬಹುದು. ಅದರ ಬಗ್ಗೆ ಈಗ ವಿಚಾರಮಾಡುವದೇ ಬೇಡ. ಸದ್ಯ, ಎಲ್ಲಾದರೂ ಸುತ್ತಾಡಿ ಬರುವುದು ಆರೋಗ್ಯಕರ. ಇಡೀ ದಿನ ತನ್ನ ಬಗೆಬಗೇ ವಿಚಾರಮಾಡಿ ತಲೆ ಸುನ್ನವಾಗಿದೆ. ಈಗ ಜೌಪಾಟಿಗೆ ಹೋಗುವದು ಕಾಲ್ನಡಿಗೆಯಲ್ಲೇ. ಎಂಟು ಗಂಟೆಗೆ ಸರಿಯಾಗಿ ಮೇರಿಗೆ ಫೋನ್ ಮಾಡುವದು. ಊಟಕ್ಕೆ ಚರ್ಚಗೇಟಿನ ಗೇಲಾರ್ಡಿಗೇ ಹೋಗಬೇಕು. ಬಿಯರ್ ಕುಡಿಯಬೇಕು.

ಕನ್ನಡಿಯ ಮುಂದೆ ನಿಂತು ಕೂದಲು ಬಾಚಿಕೊಳ್ಳುತ್ತಿರುವಾಗ ಮೋರಿಯ ದಡಿಯ ಮೇಲಿಟ್ಟ ಚಹದ ಕಪ್ಪು-ಬಶಿ ಕಣ್ಣಿಗೆ ಬಿದ್ದುವು. ಅವು ಶಿಂಪಿಯವರವಾಗಿದ್ದುವು. ಹೊರಗೆ ಹೋಗುವಾಗ ಹಿಂತಿರುಗಿಸಿದರಾಯಿತು ಎಂದುಕೊಂಡು ಮೈಮೇಲೆ ನೀರು ಸಿಡಿಯದಂತೆ ಕಾಳಜಿ ವಹಿಸಿ ನಲ್ಲಿಯ ನೀರಿನಿಂದ ತೊಳೆದ. ಕೊನೆಯ ಗಳಿಗೆಯಲ್ಲಿ, ಈಗ ಬೇಡ, ಅವಳ ಗಂಡ ಅಂಗಡಿಯಿಂದ ಬಂದ ಮೇಲೇ ಕೊಟ್ಟರಾಯಿತು ಎಂದುಕೊಂಡು ತಿರುಗಿ ದಡಿಯ ಮೇಲೆ ಇಡಲು ಹೋದಾಗ ಕಪ್ಪು-ಬಶಿ ಸದ್ದುಮಾಡಿದುವು: ಕದ ತೆರೆದು ಹೊರಗೆ ಕಾಲಿಡುವಾಗ ಬದಿಯ ಹೆಂಗಸು, ಬಾಗಿಲಲ್ಲಿ, ಇವನು ಹೊರಗೆ ಬರುವುದರ ಹಾದಿಕಾಯುತ್ತ ನಿಂತವಳ ಹಾಗೆ ನಿಂತವಳು ಅತಿ ತಗ್ಗಿದ ದನಿಯಲ್ಲಿ -“ಕಪ್ಪು-ಬಶಿ.” ಎಂದಳು. “ಇದೀಗ ತಂದೆ,” ಎಂದವನೇ ಒಳಗೆ ಹೋದ. ಕಪ್ಪು-ಬಶಿ ಸದ್ದು ಮಾಡಿದ್ದು ಅವಳಿಗೆ ಕೇಳಿಸರಬೇಕು ಎಂದುಕೊಳ್ಳುತ್ತ ಅವನ್ನು ಹಿಂತಿರುಗಿಸುವಾಗ ಮೋರೆಯ ಮೇಲೆ ತೆಳುವಾದ ಮುಗುಳುನಗೆ ಮೂಡಿತ್ತು. ಕಪ್ಪು-ಬಶಿ ಕೈಗೆ ತೆಗೆದುಕೊಳ್ಳುವಾಗ ಅವಳ ಬೆರಳುಗಳು ತನ್ನ ಬೆರಳುಗಳಿಗೆ ತಾಕಿದ್ದು ಆಕಸ್ಮಿಕವಲ್ಲವೇನೋ ಎಂದು ಗೊಂದಲಿಸಿ ಕೋಣೆಯ ಕದಗಳನ್ನು ಇಕ್ಕುವಾಗ ಇನ್ನೂ, ಬಾಗಿಲಲ್ಲಿ — ತುಸು ಅಡ್ಡ ಮಾಡಿಕೊಂಡ ಕದದ ಮರೆಗೆ—ನಿಂತವಳು, ಇವನು ಬೀಗ ಹಾಕಿ ಕಾರಿಡಾರಿನಲ್ಲಿ ತಿರುಗಿದ್ದೇ, ಕಣ್ಣುಗಳನ್ನು ಇಷ್ಟಗಲ ಅರಳಿಸುತ್ತ “ತಿರುಗಾಡಲು ಹೊರಟಿರಾ?” ಎಂದು ಕೇಳಿದಳು. ಕೇಳಿದ್ದು ತನಗೇ ತಾನೇ ಎಂದು ಅನುಮಾನಿಸುತ್ತ. “ಹೌದು” ಎಂದ... ನಿರುಪಾಯನಾದವನಂತೆ ಕೆಲಹೊತ್ತು. ನಿಂತ, ಚಾಳಿನ ಉಳಿದೆಲ್ಲ ಮನೆಗಳ ಈ ಬದಿಯ ಕದಗಳು ಮುಚ್ಚಿಕೊಂಡಿದ್ದುವು. ಮನೆಯಲ್ಲಿ ಇನ್ನಾರೂ ಇಲ್ಲದ್ದಕ್ಕೆ ಬೇಸರ ಬಂದಿರಬೇಕು. ಊಟ, ಚಹ ಕೊಟ್ಟ

ಹೆಣ್ಣನ್ನು ಮಾತನಾಡಿಸದೇ ಹೋಗುವದು ಸೌಜನ್ಯವಲ್ಲ: 'ಒಬ್ಬರಿಗೇ ಬೇಸರವೇನೋ ಅಲ್ಲವೆ?' ಎಂದು ಕೇಳಿದಾಗ, "ಇವರಿಗೆ ರಾತ್ರೆ ಬರಲು ದಿನವೂ ಹತ್ತು ಗಂಟೆ. ಕುಲಾಬಾದಿಂದ ಬರಬೇಕಂತೆ." ಎನ್ನುತ್ತ ಇನ್ನೊಮ್ಮೆ ಕಣ್ಣರಳಿಸಿದಳು. ಅವುಗಳಲ್ಲಿಯ ಬೆಳಕಿಗೆ ಮಂತ್ರಮುಗ್ಧನಾದವನ ಹಾಗೆ -"ನಿಮ್ಮ ಹೆಸರನ್ನು ತಿಳಿಯಬಹುದೆ?" ಎಂದು ಕೇಳಿದೆ. ಅವನ ದನಿ ಗೊಗ್ಗರಿಸಿದ್ದನ್ನು ಗಮನಿಸುತ್ತ, "ಜಾನಕೀ" ಎಂದವಳು ಖುಕ್ ಎಂದು ತಮಾಶಾದ ಹಣ್ಣಿನ ಹಾಗೆ ನಕ್ಕು ಬೆರಳು ಕಚ್ಚಿಕೊಂಡಳು. ಅರ್ಜುನ್‌ರಾವರ ಮನೆಯ ಕದ ತೆರೆಯುತ್ತಿದ್ದ ಸದ್ದು ಕೇಳಿಸಿ, "ಹೀಗೇ ಹೊರಗೆ ಹೋಗಿ ಬರುತ್ತೇನೆ" ಎಂದವನೇ ಅಲ್ಲಿಂದ ಹೊರಟ. 'ಬೇಗ ಬನ್ನಿ' ಎಂದಂತೆ ಕೇಳಿಸಿತೆ? ಎಂದು ಅನುಮಾನಿಸುತ್ತ ನಿಚ್ಚಣಿಕೆಯ ದಿಸೆಯಲ್ಲಿ ಹೆಜ್ಜೆಹಾಕಹತ್ತಿದ. ಹೊಸತೇ ಒಂದು ಸಂಬಂಧ, ಅನಪೇಕ್ಷಿತ ಗಳಿಗೆಯಲ್ಲಿ, ಅನೂಹ್ಯ ರೀತಿಯಲ್ಲಿ ಅಂಕುರಿಸಹತ್ತಿತ್ತು. ಮಾಳಿಗೆಯ ಮೆಟ್ಟಲ ಮೇಲೆ ಹೆಜ್ಜೆ ಎಡವಿದಾಗ ಸಾವರಿಸಿಕೊಳ್ಳಲು ನಿಚ್ಚಣಿಕೆಯ ರೇಲಿಂಗಿಗೆ ಕೈಯೊಡ್ಡಿದ: ನೇರವಾಗಿ ಹತ್ತಿರ ಕರೆಯುವ ಸಂಬಂಧವಿದು - ಮಾತೆ ಇಲ್ಲದ್ದು. ಮೆದುಳೇ ಇಲ್ಲದ್ದು.

## ಅಧ್ಯಾಯ ಎರಡು

ಚೌಪಾಟಿಯ ಸಮುದ್ರವನ್ನು ಕಂಡು ಎಷ್ಟು ವರ್ಷಗಳಾದುವು?—ನಾಗಪ್ಪನಿಗೆ ನೆನಪಿಲ್ಲ. ದಂಡೆಯ ಉಸುಕಿನಲ್ಲಿ ಕೂತು ಸಮುದ್ರದ ನೀರನ್ನೂ, ಸುತ್ತಲೂ ನೆರೆಯಹತ್ತಿದ ಜನಸಮುದಾಯವನ್ನೂ ನೋಡುವಾಗಲೂ ಎಂಟು ದಿನ ಸತತವಾಗಿ ಅಂತಮುರ್ಖಿಯಾದ ಮನಸ್ಸು ಹೊರಗೆ ಬರಲಿಕ್ಕೇ ನಿರಾಕರಿಸುತ್ತಿತ್ತು: ಏಕೋ ಈ ಕೊನೆಯಿಲ್ಲದ ಪ್ರತೀಕ್ಷೆಯೇ ತನ್ನನ್ನು ಮಾನಸಿಕವಾಗಿ ಮುರಿಯುತ್ತಿದೆ, ಎನಿಸಿತು. ಇದೆಲ್ಲ ಯಾಕೆ? ಎಲ್ಲರನ್ನು ಬಿಟ್ಟು ನಿರುಪದ್ರವಿಯಾದ ತನಗೇ ಯಾಕೆ? ಎಲ್ಲ ಬಿಟ್ಟು ಈಗ ಯಾಕೆ? ಇದೆಲ್ಲದರ ಸೋಕ್ಷಮೋಕ್ಷ ಯಾವಾಗ? ಈ ಎಂಟು ದಿನಗಳಲ್ಲಿ ಒಬ್ಬರೂ ತನ್ನ ಭೆಟ್ಟಿಯಾಗಲು ಬಂದಿಲ್ಲ-ಒಂದೂ ಮಗ ಖಂಬಾಟಾನನ್ನು ಬಿಟ್ಟು ಮೇರಿಯ ಕೂಡ ಮಾತನಾಡಿದ್ದೆ-ಬರೇ ಫೋನಿನ ಮೇಲೆ. ಹೀಗೆ ಜನಸಂಪರ್ಕವನ್ನು ಕಳಕೊಂಡ ಮನಸ್ಸು ಒಂದೇ ನೋವು ತುಂಬಿದ ಭೂತಕಾಲಕ್ಕೆ ಇಲ್ಲ, ಹೆದರಿಸುವ ಭವಿಷ್ಯತ್ತಿಗೆ ಕೈಚಾಚಿ ದಣಿಯುತ್ತದೆ.

ಧೋಂಡೋಬಾನ ಹೆಂಡತಿ ಜಾನಕಿ ನೆನಪಿಗೆ ಬರಹತ್ತಿದಳು. ಹಿಂದು ಮುಂದಿನ ವಿಚಾರವಿಲ್ಲದೇ ಇದೀಗಿನ ಗರಜಿನಲ್ಲಷ್ಟೇ ಹುಟ್ಟುವ ಸಂಬಂಧವಿದು: ಅಳೆಯುವ ಮಾನದಂಡಗಳು ಎರಡೇ-ತೃಪ್ತಿ, ಅತೃಪ್ತಿ. ಇದಾಗಲೇ ಪಡೆದ ಕೀರ್ತಿಯಂ ಸುತ್ತ; Sweet sad but brilliant ಕಣ್ಣುಗಳ ಸುತ್ತ; ಮಾತನಾಡುವ ಕಲೆಯ ಸುತ್ತ ಸುಳ್ಳಿನ ಕಂತೆಪುರಾಣಗಳು ಇಲ್ಲಿ ಹುಟ್ಟಲಾರವು. ಜೀವವಿಕಾಸದ ಆದಿಯಿಂದಲೇ ಹುಟ್ಟಿಕೊಂಡ ಈ ಎಳೆತದ ಪರಿಧಿಯಲ್ಲಿ "ಯಾಕೆ?" ಎಂಬ ಪ್ರಶ್ನೆ ಕೂಡ ಏಳಲಾರದು: ಪ್ರಶ್ನಾತೀತವಾದದ್ದಿದು. ತನ್ನ ಸಮಸ್ಯೆಯೋ ಮೂಲಭೂತವಾದ ಪ್ರಶ್ನೆಯಲ್ಲೇ ಹುಟ್ಟಿದ್ದು: ಯಾಕೆ ಬದುಕಿರಬೇಕು? ಯಾಕಾದರೂ ಬದುಕಿರಬೇಕು? ಅಪ್ಪ ಹುಡುಕಿಕೊಂಡ ದಾರಿ ಯಾಕೆ ಕೆಟ್ಟದ್ದು? ಎಂದು ಕೇಳುವ ವಿವೇಕ ಕೂಡ ಆ ಕೊನೆಯ ಗಳಿಗೆಯ ಈಚೆಯದು; ಈಚೆ ನಿಂತವರು ತಮ್ಮ ಸ್ಥಾನಿಕ ಮಾನದಂಡಗಳಿಂದ ಅಳೆದದ್ದು. ಆಲ್ಬರ್ಟ ಕಮೂ ಹೇಳಿದಂತೆ ನಿಜವಾದ ತಾಶ್ವಿಕ ಪ್ರಶ್ನೆಯೊಂದೇ: ಆತ್ಮಹತ್ಯೆ ತನ್ನ ಮಟ್ಟಿಗಂತೂ! ಸಾಯುವ ಆದೇಶವನ್ನು ಹೊತ್ತೇ ಬೆಳೆದ ಮಗು ತಾನು. ತಾನು ಮಾಡಲಿದ್ದುದರ

ಪ್ರಸ್ತುತತೆ ಒಂದರಿಂದಲೇ ನಿಶ್ಚಿತವಾಗಬೇಕು -ತನ್ನ ವೈಯಕ್ತಿಕ ಇರವಿನ ಪ್ರಸ್ತುತತೆಯಿಂದ. ಇದಿರು ಕುಳಿತ ಈ ವಿಶಾಲ ನೀರಿನ ಹೊಟ್ಟೆಯನ್ನು ಸೇರಿ ಎಲ್ಲ ಯಾತನೆಯನ್ನು ಮುಗಿಸಿ ಬಿಡಬಹುದು. ಯಾರಿಗೂ ಯಾವ ಹಾನಿಯೂ ಆಗಲಾರದು. ಈ ವಿಚಾರ ಕೂಡ ಸಾವಿನ ಈಚೆಯ ಸರಹದ್ದಿನದು. ತನ್ನ ಯಾತನೆಯ ಮೂಲವೇ ಇಲ್ಲಿದೆ ಅನ್ನಿಸಿತು: ಮೂಲಭೂತವಾದ ಪ್ರಶ್ನೆಗಳನ್ನು ಕೇಳುವ ಈ ಪ್ರಜ್ಞೆಯಲ್ಲಿ. ಜಾನಕಿಗೆ ಇಲ್ಲವೇ ಇಲ್ಲ ಈ ಪ್ರಶ್ನೆಗಳ ಜಂಜಾಟ. ಬದುಕಿನಿಂದ ಬೇಡುತ್ತಿದ್ದದ್ದು ಉತ್ತರಗಳನ್ನಷ್ಟೇ. ಖೇಮರಾಜಭವನದ ಆಯ ಆಕಾರಗಳಿಲ್ಲದ ಜನ ಜಂಗುಳಿಗೆ ದಾದುಮಾಡುವ ಹೆಣ್ಣೇ ಅಲ್ಲವಿದು: ತನಗೇ ಅರಿವಿಲ್ಲದೇ ಆತ್ಮಘಾತದ ವಿಚಾರದಲ್ಲಿ ತೊಡಗಿದ ನಾಗಪ್ಪನನ್ನು ಬದುಕಿನ ಸರಹದ್ದನ್ನು ದಾಟದಂತೆ ತಡೆಹಿಡಿಯುವ ಶಕ್ತಿಯ ಪ್ರತೀಕಗಳ ಹಾಗೆ - ಅಡ್ಡವಾದ ಕದದ ಮರೆಯಿಂದ ತನ್ನನ್ನೇ ನೋಡುತ್ತಿದ್ದ ಜಾನಕಿಯ ಇಷ್ಟಗಲವಾದ ಕಣ್ಣುಗಳು ನಾಗಪ್ಪನ ಇದಿರು ನಿಂತವು. ಅವು ವ್ಯಕ್ತಪಡಿಸುತ್ತಿದ್ದುದನ್ನು ಹಿಡಿಯುವ ಶಬ್ದ ಮಾನವಭಾಷೆಯಲ್ಲಿ ಹುಟ್ಟಿಲ್ಲವೇನೋ! ಶಬ್ದಗಳಲ್ಲಿ ಹಿಡಿಯಲು ಹೋಗಿ ಅದನ್ನು ಕೆಡಿಸಬಾರದು ಎಂದುಕೊಂಡು ಸುಮ್ಮನಾದ. ಇದಿರಿನ ಪುರಾತನ ನೀರಿನ ರಾಶಿಯನ್ನು ನೋಡುತ್ತ ಕುಳಿತ -ಯಾವ ಆಸೆ ಆಕಾಂಕ್ಷೆಗಳಿಲ್ಲದೇನೆ ಈ ಸಮಾಧಿಯಿಂದ ಎಚ್ಚರವಾದದ್ದು ದೂರದ ಕ್ಲಾಕ್‌ಟಾವರಿನ ದೊಡ್ಡ ಗಡಿಯಾರ ಎಂಟು ಗಂಟೆಯ ದನಿ ಮೊಳಗಿಸಿದಾಗ.

ಕಡಲತೀರದ ಇಷ್ಟೆಲ್ಲ ಗೌಜು ಗುಲ್ಲಿನಲ್ಲಿ ಕೂಡ ಗಡಿಯಾರದ ಗಂಟೆಯೇ ಏಕೆ ಕೇಳಿಸಿತು? ಎಂದು ಆಶ್ಚರ್ಯಪಡುತ್ತಿರುವಾಗಲೇ ಭಡಕ್ಕನೆ ಎದ್ದು ಇದಿರಿನ ಇರಾಣೀ ಅಂಗಡಿಯಲ್ಲಿ ಟೆಲಿಫೋನ್ ಇರಬಹುದಲ್ಲವೇ ಎಂದುಕೊಂಡು ಅತ್ತ ನಡೆಯಹತ್ತಿದ. ಎಂದಿನಂತೆ ಎದೆ ಡವಗುಟ್ಟಲಿಲ್ಲ. ಮೇರಿ ಏನು ಹೇಳಬಹುದು? ತಾನು ಏನು ಕೇಳಬಹುದು? ಮೇರಿ ಮನೆಯಲ್ಲಿರಬಹುದೇ?—ಯಾವುದರ ಬಗೆಗೂ ಊಹಾಪೋಹ ನಡೆಯಲಿಲ್ಲ. ಇರಾಣೀ ಅಂಗಡಿಯಲ್ಲಿ ಟೆಲಿಫೋನ್ ಇತ್ತು. ಆದರೆ ತನಗಿಂತ ಮೊದಲೇ ಬಂದ ಮೂವರು ಕ್ಯೂದಲ್ಲಿ ನಿಂತಿದ್ದರು. ಎಲ್ಲರೂ ಕಾಲೇಜ್ ಹುಡುಗರಂತೆ ಕಂಡರು. ಗಲ್ಲೆಯಲ್ಲಿ ಕೂತ ಇರಾಣಿಯ ದೊಡ್ಡ ಮೂಗನ್ನು ನೋಡುತ್ತಿದ್ದಂತೆ ಫಿರೋಜನ ಮೂಗಿನ ರಮ್ಯ ಪ್ರವಾಸಕಥನದ ನೆನಪಾಗಿ ಮೋರೆಯ ಮೇಲೆ ನಗು ಮೂಡಿತು. ತನ್ನನ್ನು ಕಂಡು ನಕ್ಕ ಎಂದು

ತಪ್ಪುತಿಳಿದ ಇರಾಣಿ ತಾನೂ ನಕ್ಕ. ಅವನೊಡನೆ ಗೆಳೆತನ ಬೆಳೆಸುವ ಇರಾದೆಯಿಂದೆಂಬಂತೆ ಇಲ್ಲಿ ಟೆಲಿಫೋನ್ ಚಾರ್ಜು ಎಷ್ಟು ಎಂದು ಕೇಳಿದಾಗ - ಎಂಟಾಣೆ ಎಂದ. ಈ ಇರಾಣಿಗಳು ಎಲ್ಲ ಬಿಟ್ಟು ಈ ದೇಶದಲ್ಲಿ ಚಹದಂಗಡಿಗಳನ್ನು ಹೇಗೆ ತೆರೆದರೋ: ಮಾರ್ಬಲ್ಲಿನ ಗೋಲಾಕಾರದ ಟೇಬಲ್ ಟಾಪ್ಸ್. ಉರುಟುರುಟಾದ ಕೈಗಳುಳ್ಳ ಕಪ್ಪುಬಣ್ಣದ ಕುರ್ಚಿಗಳು. ಆಳೆತ್ತರ ಕನ್ನಡಿಗಳನ್ನು ಹಚ್ಚಿದ ಕಂಬಗಳು. ಗೋಡೆಗಳಿಗೆ ಹಚ್ಚಿದ ಕಾಚಿನ ಕದಗಳುಳ್ಳ ಕಪಾಟುಗಳಲ್ಲಿ - ಇವು ಯಾವಾಗಲಾದರೂ ಮಾರಿಹೋದಾವ್ರೋ ಅನ್ನಿಸಹಚ್ಚುವ ಬಿಸ್ಕೀಟು, ಟಾಫೀ, ಸಿಗರೇಟು-ಡಬ್ಬಿಗಳು; ಬ್ರಿಲ್‌ಕ್ರೀಮ್, ಹೇರ್‌ಆಯ್ಲ್ ಬಾಟಲಿಗಳು. ರೆಸ್ಟೋರೆಂಟಿನಲ್ಲಿ ಬಹಳ ಜನರಿದ್ದಿರಲಿಲ್ಲ. ಕೂತವರಲ್ಲಿ ಹಲವರು ಬರೇ ಚಹ ಕುಡಿಯುತ್ತಿದ್ದರೆ ಕೆಲವರ ಮುಂದಿನ ಬಶಿಗಳಲ್ಲಿ ಖಾರೀಬಿಸ್ಕೀಟುಗಳಿದ್ದುವು. ಪ್ರತಿಯೊಂದು ಟೇಬಲ್ ಮೇಲೆ ಕಾಚಿನ ಭರಣಿಗಳಲ್ಲಿ ಬಿಸ್ಕೀಟುಗಳನ್ನು ತುಂಬಿಟ್ಟಿದ್ದರು-ಗಿರಾಕಿ ಬೇಡಿದವುಗಳನ್ನು ಇದಿರಿನ ಭರಣಿಯಿಂದಲೇ ತೆಗೆದು ಗಿರಾಕಿಯ ಬಶಿಯಲ್ಲಿಡುತ್ತಿದ್ದ ವೇಟರ್! ಪಠಾಣೀ ಶೈಲಿಯ ಸುರುವಾಲ್, ಉದ್ದ ಬಿಳಿಯ ಅಂಗಿ, ದೊಡ್ಡ ಮೀಸೆ ಇವುಗಳಿಂದ ಕಣ್ಣುತುಂಬುವ ಒಬ್ಬನೇ ಒಬ್ಬ ವೇಟರ್ ಎಲ್ಲ ಗಿರಾಕಿಗಳ ದೇಖರೇಖಿ ನೋಡುತ್ತಿದ್ದ. ಜರೂರಿ ಬಿದ್ದಾಗ ಗಲ್ಲೆಯಲ್ಲಿ ಕೂತ ಯಜಮಾನ ಇರಾಣಿ ತಾನೇ ಹೋಗಿ ವಿಚಾರಿಸುತ್ತಿದ್ದ. ಗಿರಾಕಿಗಳಲ್ಲಿ ಒಬ್ಬರೂ ತನ್ನ ಪರಿಚಯದವರಿರಲಿಲ್ಲ...

ಟೆಲಿಫೋನ್ ಮಾಡುವ ಸರದಿ ಬಂದಾಗ ಗಲ್ಲೆಯಲ್ಲಿಯ ಇರಾಣಿ ಎಚ್ಚರಿಸದ. ಟೆಲಿಫೋನ್ ರಿಸೀವರನ್ನು ಕೈಗೆತ್ತಿಕೊಂಡಾಗ ತನ್ನ ಹಿಂದೆ ಕ್ಯೂ ಇಲ್ಲದ್ದನ್ನು ನೋಡಿ ಸಮಾಧಾನವೆನಿಸಿತು. ನಂಬರ್ ಡಾಯಲ್ ಮಾಡಿದಾಗ ಫೋನ್ ಮೇಲೆ ಬಂದವಳಿಗೆ – "Is that Zarin?" ಎಂದು ಕೇಳಿದ. "Oh! Good evening Mr. Nagnath. Please wait, I will call Mary," ಎಂದವಳೇ ಅವಳು ಮೇರಿಯ ಹೆಸರನ್ನು ಹಿಡಿದು ಕೂಗಿದ್ದು, ನಾಗನಾಥ್ ಫೋನ್ ಮೇಲೆ ಬಂದಿದ್ದಾರೆ ಎಂದು ಹೇಳಿದ್ದು ನಾಗಪ್ಪನಿಗೆ ಸ್ಪಷ್ಟವಾಗಿ ಕೇಳಿಸಿತು. ಮೇರಿ ಫೋನ್ ಮೇಲೆ ಬರುವುದರ ಹಾದಿ ಕಾಯುವಾಗ ತನ್ನ ಮನಸ್ಸಿನಲ್ಲಿ ಯಾವುದೇ ಬಗೆಯ ಕ್ಷೋಭೆ ಇಲ್ಲದ್ದಕ್ಕೆ ಆಶ್ಚರ್ಯವಾಗಲಿಲ್ಲ: ಅವಳು ನಿನ್ನೆ ಹೋದದ್ದು ತನ್ನ ವೈರಿಯಾದ

ಫಿರೋಜನ ಪಾರ್ಟಿಗೇ. ಈಗ ಫೋನ್ ಮಾಡುತ್ತಿದ್ದದ್ದು ಸಂಶಯನಿವಾರಣೆಗಾಗಿ - ಅಷ್ಟೇ. ಮೇರಿ ಫೋನ್ ಎತ್ತಿಕೊಂಡಳು:

"ಹೆಲೋ ನಾಗ್, ಹ್ಯಾಗೆ ಇದ್ದೀಯಾ? ನಿನ್ನೆ ನೀನು ಫೋನ್ ಮಾಡಿದ್ದು ಝುರೀನಳಿಂದ ತಿಳಿಯಿತು. ಈವತ್ತು ಆಫೀಸಿಗೆ ಹೋಗಲಿಲ್ಲ. ಒಂದು ದಿನ ರಜೆ ಪಡೆದು ಮನೆಯಲ್ಲೇ ಇದ್ದೇನೆ. ಇಡೀ ದಿನ ನಿನ್ನ ಫೋನಿನ ಹಾದಿ ಕಾದೆ. ಝುರೀನ್ ಹೇಳಿರಬೇಕು ನಾವು ಪಾರ್ಟಿಗೆ ಹೋದದ್ದು. Do you know what time we returned? Make a guess—ಬೆಳಗಿನ ಒಂದು ಗಂಟೆಗೆ? ಫಿರೋಜ್ ತುಂಬ ತುಂಬ ಖುಶಿಯ ಮೂಡಿನಲ್ಲಿದ್ದ. ಸ್ವತಃ ಅವನ ಕಾರಿನಲ್ಲೇ ನಮ್ಮ ಜೊತೆಗೆ ಮನೆತನಕ ಬಂದು ಬಿಟ್ಟುಹೋದ. He was so sweet to us girls throughout the evening... ಪಾರ್ಟಿ ತಾಜಮಹಲಿನ ಕ್ರಿಸ್ಟಲ್‌ರೂಮಿನಲ್ಲಿತ್ತು. ನಾಲ್ವತ್ತಕ್ಕೂ ಮಿಕ್ಕಿ ಜನ ಇತ್ತು-ಗಂಡು ಹೆಣ್ಣುಗಳು ಕೂಡಿ. ಎಲ್ಲ ಫಿರೋಜನ ಗೆಳೆಯರೇ ಅಂತೆ. ಕೆಲವು ಕಸ್ಟಮರರೂ ಇದ್ದರು. ಒಂದಿಬ್ಬರು ನಿನ್ನ ಬಗ್ಗೆ ಕೇಳಿದರು. All very sophisticated crowd you see... ಈ. ಫಿರೋಜನಿಗೆ ಮುಂಬಯಿಯಲ್ಲಿ ಇಷ್ಟೊಂದು ಜನ ಗೆಳೆಯರಿದ್ದದ್ದು ಗೊತ್ತೇ ಇರಲಿಲ್ಲ ನೋಡು. And what a charming host. ನಾನು ಸ್ವತಃ MDಯವರ ಸಕ್ರೆಟರಿಯಾಗಿದ್ದರೂ ಇಂತಹ ಒಂದು ಪಾರ್ಟಿಗೂ ಕರೆದಿರಲಿಲ್ಲ. I felt very angry with him. ಆಫೀಸಿನಿಂದ - ಅಂದರೆ ಮುಂಬಯಿಯ ಆಫೀಸಿನಿಂದ ನಾನೊಬ್ಬಳೇ - ನಂಬುವಿಯಾ? Don't feel jealous — I almost fell in love with him for the most enchanting way in which he invited me. ಹೇಳಲು ಮರೆತೆ: ನಾನೊಬ್ಬಳೇ ಅಂದರೆ ಜ್ಯೂನಿಯರ್ ಸ್ಟಾಫಿನಲ್ಲಿ ಮಾತ್ರ. ಯಾಕೆಂದರೆ ಖಂಬಾಟಾ ಹಾಗೂ ಅವನ ಹೆಂಡತಿ ಕೂಡ ಬಂದಿದ್ದರು. ಶಿರೀನ್ ಎಂದಿನಂತೆಯೇ was a sweet soul... She enquired about you by the way... ರಾಮಕೃಷ್ಣ-that dirty rogue! ಅವನ ನಡತೆಯನ್ನು ಎಂದೂ ಕ್ಷಮಿಸೆಲಾರೆ. ಕುಡಿದಿರಬೇಕು... that nasty guy... ಹೌದು, ಪಾರ್ಟಿಗೆ ಕೊಕ್‌ಟೇಲ್ಸ್ ಎಂಡ್ ಡಿನ್ನರ್. ನಮ್ಮ MDಯವರ ಮಾತುಗಳನ್ನು ಕೇಳಿಯೇ ನಾನು ಫಿರೋಜನ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಂಡಿದ್ದೆ. ಆದರೆ ನಿನ್ನೆಯ ಪಾರ್ಟಿ ಅವನ ಬಗೆಗಿನ

ವಿಚಾರಗಳನ್ನು ಸಂಪೂರ್ಣವಾಗಿ ಬದಲಿಸಿಬಿಟ್ಟಿತು ನೋಡು. I can't believe he is fifty years... ನಿನ್ನೆ ಅವನು ತೊಟ್ಟ ಕ್ರೀಮ್-ಕಲರ್ ಟ್ರೌಜರ್ ಹಾಗೂ ಅಚ್ಚ ನೀಲೀ ಬಣ್ಣದ ಬುಶ್‌ಶರ್ಟಿನಲ್ಲಂತೂ ಎಷ್ಟೊಂದು ಆಕರ್ಷಕನಾಗಿ ಕಂಡನಂತೀ—ಡಾಯನಾ ಅಂತೂ ಅವನನ್ನು ಇಡೀ ದಿನ ಹೊಗಳಿದ್ದೇ ಹೊಗಳಿದ್ದು. She fell for him head over heals—you see what I mean! ನಂಬುತ್ತೀಯಾ? ನಾನು ಡಾಯನಾ ಇದ್ದಲ್ಲಿ ಒಮ್ಮೆ ಬಂದು—what are you such charming girls doing here-please go and meet the others-there are so many young men ಎನ್ನುತ್ತ ನನ್ನ ಎರಡೂ ಕೈಗಳನ್ನು ತನ್ನ ಕೈಗಳಲ್ಲಿ ತೆಗೆದುಕೊಳ್ಳುತ್ತ—and he has such big hands, have you marked?- "Call me Phiroz, both of you girls, will you? ಮಿಸ್ಟರ್ ಬಂದೂಕವಾಲಾ ಎಂದು ಕರೆದರೆ ನನಗೆ ಅಪಮಾನ ಮಾಡಿದಂತೆ..." ಎಂದ. ನಿನ್ನೆ ನೀನೂ ಇರಬೇಕಾಗಿತ್ತು. ನಿನ್ನೆಯ ಪಾರ್ಟಿಯಲ್ಲಿ ಕಂಡ ಫಿರೋಜನನ್ನು ನೋಡಿ ನೀನೂ ನಿನ್ನ ವಿಚಾರಗಳನ್ನು ಬದಲಿಸುತ್ತಿದ್ದೆ. Our MD lacks these personal charms...ಇಂಥ ದೊಡ್ಡ ಹುದ್ದೆಗೆ ಇಂಥ ಗುಣಗಳೂ ಬೇಕು ಅನ್ನಿಸುವದಿಲ್ಲವೆ? ಬರೇ ಬುದ್ಧಿಯಲ್ಲಿ.. ಹೆಲ್ಲೋ ಹೆಲ್ಲೋ ನಾಗ್... are you listening..."

ನಾಗಪ್ಪ ಕೇಳುವುದನ್ನು ಎಂದೋ ನಿಲ್ಲಿಸಿದ್ದ. ಟೆಲಿಫೋನ್ ರಿಸೀವರ್ ಕೈಯಿಂದ ಜಾರಿ ಬಿತ್ತೋ ತಾನೇ ಇರಿಸಿದನೋ—ನೆನಪಿಲ್ಲ! "ಸಾಹೇಬ್. ಯಾವುದಾದರೂ ಕೆಟ್ಟ ಸುದ್ದಿ ಕೇಳಿದಿರಾ?" ಎಂದು ಇರಾಣೀ ಮಾಲೀಕ ಕೇಳಿದಾಗ ತನ್ನ ಕಣ್ಣುಗಳಲ್ಲಿ ನೀರು ತುಂಬಿದ್ದರ ಅರಿವು ಬಂದು ದಡಬಡಿಸಿ ಕಿಸೆಯಲ್ಲಿಯ ರುಮಾಲಿಗೆ ಕೈ ಹಾಕಿದ. ಟೆಲಿಫೋನ್ ಕ್ಯೂದಲ್ಲಿ ನಿಂತ ಇನ್ನಿಬ್ಬರ ಮೋರೆಯ ಮೇಲೂ ಸಹನುಭೂತಿ ಮೂಡಿ ನಿಂತಿತ್ತು. ಸುಮಾರು ಹತ್ತು ಮಿನಿಟುಗಳವರೆಗೆ ಒಂದು ಚಕಾರ ಶಬ್ದವನ್ನೆತ್ತದೆ ಆ ತುದಿಯಿಂದ ಬರುತ್ತಿದ್ದ ಮಾತುಗಳನ್ನು ಕೇಳುತ್ತಿದ್ದಾಗ ಅವನ ಮೋರೆಯ ಮೇಲೆ ಕ್ಷಣದಿಂದ ಕ್ಷಣಕ್ಕೆ ಹೆಚ್ಚುತ್ತಲೇ ಹೋದ ನೋವನ್ನು ಗಮನಿಸಿಯೇ ಹೊಟೆಲ್ ಮಾಲೀಕನಾಗಲಿ, ಕ್ಯೂದಲ್ಲಿ ನಿಂತವರಾಗಲಿ ತಾಳ್ಮೆಗೆಡದೇ ಇದ್ದದ್ದು. ಕೌಂಟರಿನ ಮೇಲೆ ಒಂದು ರೂಪಾಯಿಯ ನೋಟು ಇಡುತ್ತ ಥೆಂಕ್ಸ್ ಎನ್ನುವಾಗ ಕೊರಳು ಬಿಗಿದುಕೊಂಡಿತು. ಮೂಲೆಯಲ್ಲಿಯ

ಟೇಬಲ್ಲಿಗೆ ನಡೆದು ಕುರ್ಚಿಯೊಂದರಲ್ಲಿ ಕುಕ್ಕರಿಸಿ ಯಾವುದೇ ಬಗೆಯ ಭಾವೋದ್ವೇಗದ ಪ್ರದರ್ಶನಕ್ಕೆ ಯೋಗ್ಯವಾದ ಜಾಗವಲ್ಲ ಇದು ಎಂಬುದನ್ನು ಅರಿವಿಗೆ ತಂದುಕೊಳ್ಳುತ್ತ ತನ್ನನ್ನು ಸಾವರಿಸಿಕೊಂಡ. ವೇಟರ್ ಬಂದಾಗ, ಕೆಳದನಿಯಲ್ಲಿ—ಇಲ್ಲಿ ಬಿಯರ್ ಸಿಗಬಹುದೇ? ಎಂದು ಕೇಳಿದ. ವೇಟರ್ ಮಾಲೀಕನತ್ತ ನೋಡಿದಾಗ ಅವನೇ ಬಂದು ಇವನಿಗೆ ಬೇಕಾದದ್ದೇನು ಎನ್ನುವದನ್ನು ತಿಳಿದು—ನಮಗೆ ಪರ್ಮಿಟ್ ಇಲ್ಲ. ನೀವು ಈ ಪರದೆಯ ಆಚೆಯ ರೂಮಿಗೆ ಬನ್ನಿ ಎಂದು ಅವನನ್ನು ಆ ಕಡೆಗೆ ಕರೆದೊಯ್ದ. ಹಸಿರುಬಣ್ಣದ ಪರದೆಯ ಆಚೆ ಕೋಣೆಯಿದೆ ಎಂಬ ಕಲ್ಪನೆಯೇ ನಾಗಪ್ಪನಿಗಿರಲಿಲ್ಲ. ಕೋಣೆಯಲ್ಲಿ ನಾಲ್ಕೈದು ಟೇಬಲ್ಲುಗಳಿದ್ದರೂ ಸದ್ಯ ಎಲ್ಲವೂ ಖಾಲಿಯಿದ್ದುವು. ಬಿಯರ್ ಜೊತೆ ಒಮ್‌ಲೆಟ್ ಹಾಗೂ ಪಾವು—ಬೆಣ್ಣೆ ತರಲು ಹೇಳಿದ. ಇಂದಿನ ಊಟ ಇಲ್ಲೇ ಮಾಡಿದರಾಯಿತು ಎಂದುಕೊಂಡು ಬಿಯರಿನ ಹಾದಿ ಕಾಯಹತ್ತಿದ.

## ಅಧ್ಯಾಯ ಮೂರು

ಮರುದಿನ ಬೆಳಿಗ್ಗ, ನಸುಕಿನಲ್ಲೇ ಎದ್ದು ಬರೆಯಲು ಕೂತಿದ್ದ—ನಾಗಪ್ಪ. ನಿನ್ನೆ ಚೌಪಾಟಿಯ ಇರಾಣೀ ಅಂಗಡಿಯನ್ನು ಬಿಟ್ಟಾಗಿನಿಂದ ತನ್ನ ಕೋಣೆಯನ್ನು ಸೇರುವ ತನಕದ ಅನೇಕ ವಿದ್ಯಮಾನಗಳು ನೆನಪಿನಲ್ಲಿ ಇಣಿಕುವ ಹವಣಿಕೆಯಲ್ಲಿದ್ದುದರ ಅಸ್ಪಷ್ಟ ಅರಿವು ಇದ್ದರೂ ಯಾವುದೇ ಬಗೆಯ ಭಾವುಕತೆಗೆ ಈಗ ಎಡೆಕೊಡಬಾರದೆಂದು ದೃಢನಿಶ್ಚಯ ಮಾಡಿಯೇ ಕೂತಂತೆ ಕೂತಿದ್ದ: ಎಲ್ಲರನ್ನು ಬಿಟ್ಟು ಕೋಳೀಗಿರಿಯಣ್ಣನ ಬಗ್ಗೆ ಏಕೆ ಬರೆಯುತ್ತಿದ್ದೇನೆ ಎಂಬುದರ ಬಗ್ಗೆ ಕ್ಷಣಕಾಲ ಆಶ್ಚರ್ಯಪಟ್ಟರೂ ಮರುಕ್ಷಣ ಆ ವಿಚಾರವನ್ನು ಕೂಡ ತೊಡೆದುಹಾಕಿದ: ಯಾಕೆ ಬದುಕಿರಬೇಕು ಎಂಬ ಪ್ರಶ್ನೆಯ ಬಗೆಗೇ ನಿಶ್ಚಿತ ನಿಲುಗಡೆಗೆ ಬರಲು ಸಾಧ್ಯವಾಗದೇ ಇದ್ದಾಗ ಈ ಪ್ರಶ್ನೆಯೇನು ಮಹಾ!

ಕೋಳೀಗಿರಿಯಣ್ಣನ ಮನೆ ಅವರ ಮಗ್ಗಲು-ಹಿತ್ತಿಲಲ್ಲೇ ಇತ್ತು. ಅದರಾಚೆಯ ಹಿತ್ತಿಲಲ್ಲಿ ಮಾಸ್ಕೀ ಹೊನ್ನಪ್ಪನ ಮನೆ. ಹೊನ್ನಪ್ಪನ ಹೆಂಡತಿ ಪರಮೇಶ್ವರಿಗೂ ಗಿರಿಯಣ್ಣನ ಹೆಂಡತಿ ದೇವಿಗೂ ಆಗುತ್ತಿರಲಿಲ್ಲ. ಇಬ್ಬರೂ ನಾಡ್ಕರ್ಣಿ ಅಪ್ಪೂರಾಯರ ಒಕ್ಕಲು. ಪರಮೇಶ್ವರಿಯ ಮೂವರೂ ಹುಡುಗಿಯರು ಕಪ್ಪುಬಣ್ಣದವು-ಹೊನ್ನಪ್ಪನ ಹಾಗೆ. ಗಿರಿಯಣ್ಣನಿಗೆ ಎರಡು ಮಕ್ಕಳು-ಒಂದು ಹೆಣ್ಣು, ಒಂದು ಗಂಡು, ಇಬ್ಬರೂ ಬೆಳ್ಳಗೆ. ದಿನವೂ ಸಂಜೆ, ಯಾವುದಾದರೂ ಸಣ್ಣ ಪುಟ್ಟ ಕಾರಣಗಳಿಗಾಗಿ ದೇವಿಗೂ ಪರಮೇಶ್ವರಿಗೂ ಝುಟಾಪಟೀ: ಬೇಲಿಯ ಆಚೆ ಈಚೆ ನಿಂತು ಜಗಳಾಡುವ ಭರದಲ್ಲಿ ಒಮ್ಮೊಮ್ಮೆ ಮೈಮೇಲಿನ ಭಾನ ತಪ್ಪಿದವರ ಹಾಗೆ ಅತ್ಯಂತ ಅವಾಚ್ಯವಾದ ಬೈಗುಳಗಳ ಜೊತೆಗೆ ಭೀಭಿತ್ಸವಾದ ಹಾವಭಾವಗಳು. ಎಲ್ಲ ಬೈಗಳು, ಹಾವಭಾವಗಳು ತಮ್ಮ ಲೈಂಗಿಕ ಜೀವನಕ್ಕೆ ಸಂಬಂಧಪಟ್ಟವುಗಳು. ಒಮ್ಮೊಮ್ಮೆ ಪರಿಸ್ಥಿತಿ ಎಷ್ಟೊಂದು ವಿಕೋಪಕ್ಕೆ ಹೋಗುತ್ತಿತ್ತೆಂದರೆ ಇಬ್ಬರೂ ತಮ್ಮ ಸೀರೆಗಳನ್ನು ಎತ್ತಿ ತೊಡೆ ತೋರಿಸುತ್ತ—ರಂಡೇ ರಂಡೇ ರಂಡೇ! ನಿನ್ನ ಗಂಡನ ತೀಟೆ ತೀರಿಸುವದು ನಿನ್ನ ಕೈಯಲ್ಲಿ ಸಾಧ್ಯವಿಲ್ಲದಿದ್ದರೆ ಕಳಿಸೇ ಅವನನ್ನು ನನ್ನ ಕಡೆ ಎನ್ನುವಂತಹ ಮಾತಿನ ತನಕ ಮುಟ್ಟುತ್ತಿತ್ತು. ಇದೆಲ್ಲ ನಡೆಯುವಾಗ, ಇದನ್ನೆಲ್ಲ. ಕೇಳಿಯೂ ಕೇಳದವನೆ ಹಾಗೆ ನಿರ್ಲಿಪ್ತನಾದ ಗಿರಿಯಣ್ಣ—ಕೆಂಪು ಮಣ್ಣಿನ ಗಾರೆ ಮೆತ್ತಿ. ನುಣಪು ನುಣಾಪಾಗಿ ತಿಕ್ಕಿ

ಹೊಳೆಯುವಂತೆ ಮಾಡಿದ ಜಗಲಿಯ ತಂಪು ನೆಲದ ಮೇಲೆ ಆಂಗತ್ತ ಮಲಗಿ, ಕಾಲುಗಳನ್ನೆತ್ತಿ, ಮೊಮ್ಮಗಳನ್ನು ಪಾದಗಳ ಮೇಲೆ ಕವುಚಿ ಮಲಗಿಸಿ—"ಭೋರ್ ಭೋರ್ ಭಂಗೀ ಬಂಗಾರಕ್ಕನ ತಂಗೀ" ಎಂದು ಹಾಡುವುದರಲ್ಲಿ ಗರ್ಕನಾಗಿರುತ್ತಿದ್ದ. ಇವರ ಜಗಳದ ಗದ್ದಲ ಕೇಳುವುದು ತೀರ ಅಸಾಧ್ಯವಾದಾಗೊಮ್ಮೆ ಬಾಯಿಮಾಡುತ್ತಿದ್ದ—"ಸಾಕು ಮಾಡಿರೆ ನಿಮ್ಮ ಬಾಯಿ ಪರ್ತಾಪ...ಬರೇ ಬಾಯಿಮಾತಿನಿಂದಲೇ ತೆವಲು ತೆಗೆದುಕೊಳ್ಳುತ್ತೀರೇನರೆ..."

ನಾಗಪ್ಪನ ಮೋರೆಯ ಮೇಲೆ ನಗು ಮೂಡಿತು. ಮರುಗಳಿಗೆ ಬರೆಯುವ ಕೈ ತಂತಾನೇ ನಿಂತಿತು. ಇನ್ನೂ ಹೆಚ್ಚು ಕಾಲ ಗಿರಿಯಣ್ಣನ ಬಗ್ಗ ಬರೆಯುತ್ತ ಕೂತರೆ, ಅಪ್ಪ-ಅಮ್ಮ-ಅಣ್ಣ-ತಂಗಿಯರೂ ಮೂಡಿ ಬಂದಾರು ಎಂದು ಭಯವಾಯಿತು. ಎಷ್ಟೊಂದು ಸರತಿ ಪ್ರಯತ್ನ ಮಾಡಿದರೂ ಅಂಗಿಗೆ ಬೆಂಕಿ ಹತ್ತಿದ ಸನ್ನಿವೇಶ ನೆನಪಾಗುವ ಭಯವಾದೊಡನೆ ಮನಸ್ಸು ಭೂತಕಾಲದಿಂದ ಪಲಾಯನಹೇಳುತ್ತಿತ್ತು. ಮೇಲಾಗಿ, ಬಾಲ್ಯದ ಅನೇಕ ಸಂಗತಿಗಳನ್ನು ಕಣ್ಣಿಗೆ ಕಟ್ಟುವಷ್ಟು ಸ್ಪಷ್ಟವಾಗಿ ನೆನೆಯಬಲ್ಲನಾದರೂ ತನ್ನ ಅನುಭವದಲ್ಲಿಯ ಒಂದು ವಿಶೇಷ ಜಾಗ ಮಾತ್ರ ಬೆಳಕಿಗೆ ಬರಲು ನಿರಾಕರಿಸುತ್ತ ಕತ್ತಲೆಯಲ್ಲೇ ಮುಳುಗಿದ್ದುದರ ಅರಿವು ನಾಗಪ್ಪನಿಗೆ ಇದೆ. ಬೆಂಕಿಯ ಪ್ರಕರಣದ ಬಗ್ಗ ಸ್ಪಷ್ಟವಾಗಿ ಬರೆಯುವ ಇಲ್ಲವೇ ಇನ್ನೊಬ್ಬರ ಮುಂದೆ ಹೇಳಿಕೊಳ್ಳುವ ಧೈರ್ಯ ತನಗೆ ಬಂದಿದ್ದರೆ... ಯಾರ ಮುಂದೆ? ಜಾನಕಿಯ ಮುಂದೆ? ಸರಕ್ಕನೆ ನೆನಪಾಯಿತು: ಜಾನಕಿಗೆ ಹೆದರಿಯೇ ತಾನು ನಿನ್ನೆ ರಾತ್ರಿ ಹತ್ತುಗಂಟೆಯ ನಂತರವೇ ಮನೆ ಸೇರಿದ್ದು, ಅಷ್ಟುಹೊತ್ತಿಗೆ ಗಂಡ ಮನೆ ಸೇರಿರಬೇಕು—ಕದ ಮುಚ್ಚಿತ್ತು.

ಬರೆಯುವದು ಅಸಾಧ್ಯವೆನ್ನಿಸಿತು. ವಹಿಯನ್ನು ಮುಚ್ಚಿಟ್ಟು ಕಿಡಕಿಗೆ ಬಂದ, ನಸುಕಿನ ತಂಪುಗಾಳಿ ಮೋರೆಗೆ ಬಡೆದಾಗ ಸುಖವೆನಿಸಿತು. ಪ್ರೀತಿಯ ಅಶ್ವತ್ಥ ಇನ್ನೂ ಕಣ್ಣು ತೆರೆದಿರಲಿಲ್ಲ. ಮುಂದಿನ ಮನೆಯ ದತ್ತಭಕ್ತನಿಗೂ ಎಚ್ಚರವಾಗಿರಲಿಲ್ಲ. ದೇವರ ಮುಂದೆ ರಾತ್ರಿಯಿಂದಲೂ ಉರಿಯುತ್ತಿದ್ದ ನಂದಾದೀಪದ ಬೆಳಕು ಮಬ್ಬುಗತ್ತಲೆ ತುಂಬಿದ ಪರಿಸರದಲ್ಲಿ ತನ್ನ ಒಂಟಿತನದ ಅರಿವನ್ನು ಇನ್ನಷ್ಟು ತೀವ್ರಗೊಳಿಸಲು ಕಾರಣವಾಯಿತು. ಕೆಳಗೆ ನೋಡಿದ: ರಸ್ತೆಯಂಚಿನಲ್ಲಿ ಚಾರಪಾಯಿಗಳ ಮೇಲೆ ತಲೆಯವರೆಗೆ ಬಿಳಿಯ ಧೋತರದ ಮುಸಕೆಳೆದು ಗಾಢನಿದ್ದೆ ಸೇರಿದ ಹಾಲಿನಂಗಡಿಯ ಭೈಯಾ; ಇದ್ದಲು ಅಂಗಡಿಯ

ಕೋಳಶೆವಾಲಾ; ಕಬ್ಬಿನ ಗಾಣದ ಮರಾಠಾ, ಚಾರಪಾಯಿಗಳ ಕೆಳಗಡೆ ಒಂದೆಡೆಯಲ್ಲಿ ನಾಯಿ—ಬಹುಶಃ ಭೈಯಾನದಿರಬೇಕು. ಅದೂ ಮೈಮುದುಡಿ ನಿದ್ದೆಹೋಗಿತ್ತು. ಆ ದೃಶ್ಯ ನೋಡಿ ನಾಗಪ್ಪನಿಗೆ ಅಸೂಯೆಯಾಯಿತು: ಹಾಗೆ ನಿದ್ದೆಮಾಡಲು ಬೇಕಾದ ಮನಸ್ಸು ತನಗೂ ಇದ್ದಿದ್ದರೆ! ಸಾಲೆ ಕಾಲೇಜುಗಳಿಗೆ ಹೋಗಿರದೇ ಹನೇಹಳ್ಳಿಯಲ್ಲಿ ಗೆದ್ದೆ ಊಳುತ್ತ ಇದ್ದುಬಿಟ್ಟಿದ್ದರೆ...ಗಿರಿಯಣ್ಣನ ಮಗಳಂತಹಳನ್ನು ಇಲ್ಲ, ಮೈಯಲ್ಲಿ ಸೊಕ್ಕೇರಿದಾಗ, ಭಿಡೆ ಬಿಟ್ಟು ಗಂಡುಮೈಯನ್ನು ನೇರವಾಗಿ ಹತ್ತಿರ ಕರೆಯುವ ಎದೆಗಾರಿಕೆಯ ಜಾನಕಿಯಂತಹಳನ್ನು ಮದುವೆಯಾಗಿ ಅಪ್ಪನ ಚಾಕೊಂಪೆಯನ್ನೆ ಮುಂದುವರಿಸಿಕೊಂಡು ಹೋಗಿದ್ದರೆ...

ವರುಷಕ್ಕೆರಡು ಸೀರೆಗಳನ್ನು ಕೊಳ್ಳುತ್ತಿದ್ದ ಅಮ್ಮ. ಗಿಡ್ಡ ಪಂಜಿಯೊಂದನ್ನು ಬಿಟ್ಟರೆ ಬರಿ ಮೈಯಲ್ಲೇ ಅಂಗಡಿಯಲ್ಲಿ ಕೂಡ್ರುತ್ತಿದ್ದ ಅಪ್ಪ. ಇಲ್ಲ ಅನ್ನುವುದಕ್ಕೆ ಎದೆಯಲ್ಲಿ ದಪ್ಪ ಜನಿವಾರ. ಹೆಗಲ ಮೇಲೆ ಒಂದು ಪಂಜಿಯ ತುಂಡು. ತನಗೋ ಸಾಲೆಗೆ ಹೋಗುವಾಗಷ್ಟೇ ಗಿಡ್ಡ ಚಡ್ಡಿ, ಅಂಗಿ, ತಲೆಗೆ ಒಂದು ಬಿಳಿಯ ಟೋಪಿ. ಕಾಲಿಗೆ ಚಪ್ಪಲಿ ಬಂದದ್ದು ಹಾಯ್‌ಸ್ಕೂಲು ಬಿಟ್ಟ ನಂತರವೇ. ತನ್ನ ಕೇರಿಯ ಕ್ರಿಶ್ಚನ್ ಹಾಗೂ ಶೂದ್ರ ಮಕ್ಕಳೊಡನೆ ಆಡುವಾಗ ಅವರಂತೆಯೇ ತಾನೂ ಕಚ್ಚೆ ಉಟ್ಟು ಓಡಾಡುತ್ತಿದ್ದ: ಫಿರೋಜ್ ಅಪ್ಪನ ವೃತ್ತಿಯನ್ನು ಕುರಿತು ಕೇಳಿದ ಪ್ರಶ್ನೆಗೆ ಉತ್ತರ ಕೊಡಲು ತಾನು ಹಿಂದೆ ಮುಂದೆ ನೋಡಿದ್ದು, ಉತ್ತರ ಕೊಟ್ಟ ಮೇಲೆ ಫಿರೋಜ್ ಓ! ಎಂದು ತಾತ್ಸಾರ ತೋರಿಸಿದ್ದು ಮತ್ತೊಮ್ಮೆ ನೆನಪಿಗೆ ಬಂತು. ಅವನ ತಾತ್ಸಾರಕ್ಕೆ ಸವಾಲಾಗಿಯೇ ಎಂಬಂತ ಇನ್ನೊಮ್ಮೆ ಹನೇಹಳಿಯಲ್ಲಿ ಬೇರುಬಿಟ್ಟ ತನ್ನ ವ್ಯಕ್ತಿತ್ವದ ರೂಪವನ್ನು ನಿರ್ಧರಿಸಿದ ಬಾಲ್ಯವನ್ನು ನೆನೆದುಕೊಂಡ: ಗಿರಿಯಣ್ಣ, ಹೊನ್ನಪ್ಪ, ಆಗೇರ ಎಂಕೂ, ಮುರ್ಕುಂಡೀ; ಮುಂದಿನ ಕೇರಿಯ ಕಲಾಯಿಕಾರ ಶೇಖ್ ಫರೀದ್: ಎಣ್ಣೆಯ ಗಾಣದ ಸಾವೇರ; ಮಿಠಾಯಿ ಅಂಗಡಿಯ ಗಣಪಯ್ಯ ಶೆಟ್ಟಿ; ಚಮ್ಮಾರ ದೇವೂ; ಮಡಿವಾಳ ಮಾದೇವ; ಸೂಲಗಿತ್ತಿ ಸಂತಾನ; ನಾಯಿಂದ ಈರ; ಸೊನ್ನಾರ ರಾಯ್‌ಶೆಟ್ಟಿ; ಸೂಳೆಯರಾದ ಉತ್ತುಮಿ, ಬೀರಮ್ಮ, ನಾಗಮ್ಮ...ಬೇಲಿಗಳು; ಗದ್ದೆ. ಬೆಲ್ಲಗಡ್ಡೆ ಕಲ್ಲಂಗಡಿಯ ಓಳಿಗಳು; ಬೇಣ, ಕರಡು ಹುಲ್ಲು, ಮೊಗೆಕಾಯಿಬಳ್ಳಿಗಳು; ಗೇರುಹಕ್ಕಲಗಳು; ಗುಮ್ಟೆಪಾಂಗುಗಳು; ಬಣ್ಣ ಬಣ್ಣದ ಪತಾಕೆಗಳನ್ನು ಲಕಲಕಿಸುವ ತೇರು; ಬಂಡೀ ಹಬ್ಬಗಳು; ಬದುಕಿಗೆ ತೀರ ಹತ್ತಿರ ತಂದು ಸುಖ ಕೊಟ್ಟ ಅಲ್ಲಿಯ ಓಣಿಗಳು; ಧೂಳಿ ತುಂಬಿದ ರಸ್ತೆಗಳು.

ನಡುವೆಯೇ! ಈ ವರೆಗೂ ನೆನಪಿಗೆ ಬಂದಿರದ ಒಂದು ಚಿತ್ರ: ಶ್ರಾವಣಮಾಸದಲ್ಲಿ ರವಿವಾರದಿನ ಅಮ್ಮ ಸೂರ್ಯನನ್ನು ಪೂಜಿಸುತ್ತಿದ್ದುದರ ನೆನಪು: ಪೂಜೆಗಾಗಿ ಅನೇಕ ತರದ ಹೂವು, ದೂರ್ವೆಯ ಗರಿಕೆ ಇವುಗಳ ಜೊತೆ ಓಣಿಯ ಪಾಗಾರದ ಮೇಲೆ ಮಳೆಗಾಲದಲ್ಲಷ್ಟೇ ಬೆಳೆಯುವ ಹಲವು ಜಾತಿಯ ಗಿಡಗಳ ಎಲೆಗಳನ್ನು (ಆಕಾರಕ್ಕೆ ತಕ್ಕಂತೆ ಹೆಸರುಗಳು: ಹುಲಿಯ ಪಂಜ; ಆಕಳ ಕಿವಿ; ಬೆಕ್ಕಿನ ತರಡು, ಕುದುರೆಯ ಖುರ ಇತ್ಯಾದಿ) ಕಿತ್ತು ತರುವಾಗ ಕಚ್ಚೆ ಉಟ್ಟು ಮಳೆಯಲ್ಲಿ ನೆನೆಯುತ್ತ ಓಣಿಯಲ್ಲಿ ಮೊಣಕಾಲಿನವರೆಗೆ ತುಂಬಿದ ನೀರಿನಲ್ಲಿ ಆಡುತ್ತ ಕೇರಿಯ ಹುಡುಗ ಹುಡುಗಿಯರೊಂದಿಗೆ ಕೇಕೆ ಹಾಕಿದ ದಿನಗಳು: ಬಂದ ನೆನಪಿಗೆ ಸಿಟ್ಟುಬಂದು ಮೂಗಿನ ಹೊರಳೆಗಳು ಅರಳಿದವು—"All very sophisticated crowd – you see"—ಮೇರಿಯ ಮಾತುಗಳು ನೆನಪಿಗೆ ಬಂದವು: Bull shit...to hell with you and your sophistication, ಫಿರೋಜ್ ಹಾಗೂ ಮೇರೀ ಹಾಗೂ ಡಾಯನಾ ಹಾಗೂ ಥ್ರೀಟೀ ಹಾಗೂ...ಈ ವ್ಯವಸಾಯದ ಜಗತ್ತೇ ತನ್ನ ಪ್ರೀತಿಯ ಹನೇಹಳ್ಳಿಯನ್ನು ಹೀಯಾಳಿಸಿ ನಗುತ್ತದೆ ಎಂಬ ಕಲ್ಪನೆಯಿಂದ ಕ್ಷೋಭೆಗೊಂಡು ಕಿಡಕಿಯನ್ನು ಬಿಟ್ಟು ನಿಂತ. ತನ್ನ ವ್ಯಕ್ತಿತ್ವಕ್ಕೆ ಒಗ್ಗಿದ ಜಗತ್ತೇ ಅಲ್ಲವಿದು. ಆದರೂ ತನಗೆ ಪ್ರಿಯವಾದ ಜಗತ್ತಿಗೆ ಹಿಂದಿರುಗುವದೂ ಅಸಾಧ್ಯವಾಗಿತ್ತು: ಪಂಜರದಲ್ಲಿ ಸಿಕ್ಕಿಬಿದ್ದ ಇಲಿಯ ಹಾಗೇ ವಿಲಿವಿಲೀ ಒದ್ದಾಡುವ ಭಾವನೆಯಿಂದ ತಪ್ಪಿಸಿಕೊಳ್ಳುವದು ಕಷ್ಟವಾಯಿತು.

ಪ್ರಾತರ್ವಿಧಿಗಳನ್ನು ಮುಗಿಸುತ್ತಲೇ ಎಲ್ಲಾದರೂ ದೂರ ತಿರುಗಾಡಿ ಬರೋಣ-ಅನ್ನಿಸಿತು: ಬರುವಾಗ ಉಪಾಹಾರಕ್ಕೆ ಯಾವುದಾದರೂ ಉಡುಪಿ ರೆಸ್ಟೋರೆಂಟಿಗೆ ಹೋದರಾಯಿತು. ಹಾಗೇ, ಪೋಸ್ಟಾಫೀಸಿಗೆ ಹೋಗಿ ರಾಣಿಗೆ ಮನಿ-ಒರ್ಡರ್ ಮಾಡಬೇಕು ಮತ್ತು ಬ್ಯಾಂಕಿಗೆ ಹೋಗಿ ಖಾತೆ ಪುಸ್ತಕವನ್ನು ಹೊಂದಿಸಿಕೊಂಡೂ ಬರಬೇಕು. ಅಂದರೆ ಕ್ಷೌರ, ಸ್ನಾನ ಮುಗಿಸಿಕೊಂಡೇ ಹೋದರೆ ಒಳ್ಳೆಯದು. ಈವತ್ತು ಶುಕ್ರವಾರ. ಇಂದೂ ಖಂಬಾಟಾನಿಂದ ಚೀಟಿ ಬರದಿದ್ದರೆ ಮತ್ತೆ ಅವನಿಂದ ಕೇಳುವದು ಸೋಮವಾರವೇ. ಸಾಧ್ಯವಾದರೆ ಶನಿವಾರ, ಹಾಗೂ ರವಿವಾರ ತಾನಾಗಿಯೇ ತನ್ನ ಹಿಂದಿನ ಕೆಲವು ಗೆಳೆಯರನ್ನು ಕಂಡುಬರಬೇಕು: ಮುಖ್ಯವಾಗಿ ಸೀತಾರಾಮ ಹಾಗೂ ವೋಮೂ ಇವರನ್ನು. ಸೀತಾರಾಮನ ಜೊತೆಗೆ ಗಿಲ್ಬರ್ಟ್ ಅಷ್ಟಾಗಿ ಹೇಳಿದ ಚೆಶಾಯರ್ ಹೋಮಿಗೂ ಹೋಗಬೇಕು. ಸ್ಟಾಂಡ್-

ಬುಕ್-ಸ್ಟಾಲಿನ ಶಾನಭಾಗರನ್ನೂ ಕಂಡುಬರಬೇಕು. ಒಂದು ಐನೂರು ರೂಪಾಯಿಯ ಸೇಲ್ಸಮನ್ನನ ಕೆಲಸ ಕೊಡದೇ ಇರಲಿಕ್ಕಿಲ್ಲ. ೧೮ ವರ್ಷಗಳ ಹಿಂದೆ ನೌಕರಿ ಸಿಕ್ಕಾಗಿನ ಆರಂಭದ ಸಂಬಳವಿದು. ತನಗೀಗ ಅದರ ಐದು ಪಟ್ಟಿಗಿಂತ ಹೆಚ್ಚಿನ ಸಂಬಳ. ಆದರೂ ಬೇಡ—ಈ ಸ್ಪರ್ಧೆ! ಈ ಹಗೆ! ಸುಳ್ಳು-ಆಮಿಷಗಳ ಹಿಂದೆ ಓಡಿ ಸುಳ್ಳಾಗುವ ಈ ಜಂಜಾಟದ ಬದುಕು...

ನಾಗಪ್ಪ ಬೆಳಿಗ್ಗೆ ನಿಶ್ಚಯಿಸಿಕೊಂಡ ಕಾರ್ಯಕ್ರಮವನ್ನು ಮುಗಿಸಿ ಮತ್ತೆ ಮನೆಸೇರುವ ಹೊತ್ತಿಗೆ ೧೦-೩೦. ಆಗಲೇ ಚಾಳಿನ ಗಂಡಸರೆಲ್ಲ ತಮ್ಮ ತಮ್ಮ ಆಫೀಸುಗಳಿಗೆ ಹೋಗಿಯಾಗಿತ್ತು. ಮಗ್ಗಲುಮನೆಯ ಕದಕ್ಕೆ ಬೀಗವಿತ್ತು. ಮನೆಯ ಕದ ತೆರೆಯುವಾಗ ಅನ್ನಿಸಿದ ಒಂದು ಬಗೆಯ ನಿರಂಬಳತೆಗೆ ನಾಗಪ್ಪನಿಗೆ ನಗು ಬಂತು: ಪಾಪ, ಜಾನಕಿಯ ಪ್ರಾಯ ತುಂಬಿ ತುಳು ಕಾಡುವ ದೇಹಸೌಷ್ಠವಕ್ಕೆ ಹೆದರಿಕೊಂಡ ತಾನೇ ಅವಳ ಹಾವಭಾವಕ್ಕೆ ಇಲ್ಲದ ಅರ್ಥ ಹಚ್ಚುತ್ತಿರಬಹುದು...

ಕದ ತೆರೆದರೆ ಎರಡು ಪತ್ರಗಳು; ಎರಡು ಯಾರೋ ಖುದ್ದು ಬಂದು ಕದದ ಕೆಳಗಿನ ಕಿಂಡಿಯೊಳಗಿನಿಂದ ತೂರಿ ಹೋದವುಗಳು. ಒಂದು ಆಫೀಸಿನದು- ಬಹುಶಃ ಪ್ರಭಾಕರ ಬಂದಿರಬೇಕು; ಇಲ್ಲ. ಖಂಬಾಟಾನ ಡ್ರೈವರ್. ಇನ್ನೊಂದು. ಯಾರದೆಂಬುದು ತಿಳಿಯಲಿಲ್ಲ. ಒಡೆದು ಅದನ್ನೇ ಮೊದಲು ಓದಿದ - ಶ್ರೀನಿವಾಸ ಅವನ ಪ್ರೆಸ್ಸಿನ ಆಳಿನೊಂದಿಗೆ ಕಳಿಸಿದ ಸಣ್ಣ ಚೀಟಿ: "ನಾಳೆ ಪ್ರಸ್ಸಿಗೆ ಸೂಟಿ, ಮನೆಯಲ್ಲೇ ಇರುತ್ತೇನೆ. ಮಧ್ಯಾಹ್ನದ ಊಟಕ್ಕೆ ಒಂದು ಮಹತ್ವದ ವಿಷಯ ನಿನ್ನ ಹತ್ತಿರ ಮಾತನಾಡುವದಿದೆ.” ತನ್ನ ಹತ್ತಿರ ಮಾತನಾಡುವ ವಿಷಯ ಯಾವುದಿರಬಹುದು ಎಂದು ಆಶ್ಚರ್ಯಪಡುತ್ತಿರುವಾಗಲೇ ಸಂತೋಷಭವನದ ನಾಯಕ ಹೇಳಿದ ಮಾತು ನೆನಪಾಯಿತು: ಅಂತೂ ಫಿರೋಜನ ತನಿಖೆಗೆ ಮೊದಲು ಈ ಒಂದೂ ಮಗನ ತನಿಖೆ ಆರಂಭವಾಗುತ್ತದೆಯೇನೋ. ಆಗಲಿ. ತನ್ನ ಪೂರ್ವಜರ ಮೂಲಕ್ಕೆ ಕೈಹಾಕುವ ಇವರ ನೀರನ್ನಾದರೂ ನೋಡೋಣ ಎಂದುಕೊಂಡ. ಆದರೆ ನಾಗಪ್ಪನಿಗೆ ಅರ್ಥವಾಗದ ಸಂಗತಿಯೆಂದರೆ -ಇದೆಲ್ಲ ಹೀಗೆ ಒಂದೇ ಕಾಲಕ್ಕೆ ಕೂಡಿಬರುತ್ತಿದ್ದುದಾದರೂ ಹ್ಯಾಗೆ ಎನ್ನುವದು. ನಾಗಪ್ಪನಿಗೆ ಮೊದಲ ಬಾರಿ ಜನ್ಮಕುಂಡಲಿಯಲ್ಲಿ ವಿಶ್ವಾಸ ಮೂಡುತ್ತಿದ್ದುವರ ಭಯವಾಯಿತು. ಇದೇ ವಿಷಯದ ಮೇಲೆ ಅರ್ಜುನ್‌ರಾವರೊಡನೆ ವಾದಿಸಿ ಜಗಳಾಡಿದ್ದ...

ತಾನು ಇನ್ನೊಂದು ಪತ್ರವನ್ನು ತೆರೆಯಲು ಹಿಂಜರಿಯುತ್ತಿದ್ದೇನೆಯೆ? ಎಂದು ಅನುಮಾನಿಸುತ್ತ ಅದನ್ನು ತೆರೆದ: ಪತ್ರ ಖಂಬಾಟಾನದಾಗಿತ್ತು: "ತನಿಖೆ ಕಾರಣಾಂತರದಿಂದ ಸೋಮವಾರದ ತನಕ ಮುಂದೂಡಲಾಗಿದೆ. ನೀನು ಬಯಸಿದ ಹಾಗೆ ಆ ದಿನ ಬೆಳಿಗ್ಗೆ ಸರಿಯಾಗಿ ೯-೩೦ ಕೆ ಕಾರನ್ನು ಕಳಿಸುತ್ತೇನೆ. ಡ್ರೈವರ್ ಅಬ್ದುಲ್ ಬಂದು ನಿನ್ನನ್ನು ಕಾಣುತ್ತಾನೆ. ನೀನು ಅಷ್ಟು ಹೊತ್ತಿಗೆ ತಯಾರಾಗಿರಬೇಕೆಂದು ಕೇಳಿಕೊಳ್ಳುತ್ತೇನೆ. ತನಿಖೆ ತಾಜಮಹಲ್ ಹೊಟೆಲ್ಲಿನಲ್ಲಿ ನಡೆಯುತ್ತದೆ. ರೂಮ್ ನಂಬರ್ ೭೧೭ ರಲ್ಲಿ. ಸರಿಯಾಗಿ ೧೦-೩೦ ಗಂಟೆಗೆ. ತನಿಖೆಯ ಆಯೋಗದಲ್ಲಿ DMDಯವರ ಹೊರತಾಗಿ ಇನ್ನಿಬ್ಬರು ಡೈರೆಕ್ಟರರು ಇರುತ್ತಾರೆ. ಅವರ ಹೆಸರುಗಳು ತನಿಖೆಯ ವೇಳೆಗೆ ಅವರಿಂದಲೇ ನಿನಗೆ ತಿಳಿಯುತ್ತವೆ. ನಿನಗೆ ನಿಷ್ಕಾರಣವಾಗಿ ಹಾನಿ ತಟ್ಟಬಾರದು ಎಂಬ ಉದ್ದೇಶದಿಂದ ಶಕ್ಯವಿದ್ದ ಎಲ್ಲ ಜಾಗ್ರತೆ ತೆಗೆದುಕೊಳ್ಳಲಾಗಿದೆ: ತನಿಖೆಯ ಮುಖ್ಯ ಉದ್ದೇಶ ನಿನ್ನಿಂದ ಕೆಲ ಮಾಹಿತಿಯನ್ನು ದೊರಕಿಸುವದೇ ಆಗಿದೆಯೇ ಹೊರತು ಯಾವುದೇ ಬಗೆಯ ಮಾನಸಿಕ ಒತ್ತಡಕ್ಕೆ ನಿನ್ನನ್ನು ಗುರಿಪಡಿಸುವುದಾಗಿಲ್ಲ ಎಂದು ನಿನಗೆ ತಿಳಿಸುವಂತೆ DMDಯವರು ಮುದ್ದಾಮ್ ಕೇಳಿಕೊಂಡಿದ್ದಾರೆ..." ಪತ್ರದಲ್ಲಿ My dear Nagnath ಎಂಬ ಆರಂಭ ಹಾಗೂ with kindest regards ಎಂಬ ಕೊನೆ ಹಾಗೂ ಖಂಬಾಟಾನ ಲಂಬಾಚೌಡಾ ಸಹಿ ಇವಷ್ಟೇ ಪೆನ್ನಿನಲ್ಲಿ ಬರೆದ ಅಕ್ಷರಗಳಾಗಿದ್ದುವು. ಉಳಿದದ್ದೆಲ್ಲ ಟೈಪ್ ಮಾಡಿದ್ದಾಗಿತ್ತು. ಪತ್ರದ ಒಟ್ಟೂ ಧಾಟಿ ನೋಡಿದರೆ, ತಾನು ಖಂಬಾಟಾಗೆ ಆಡಿದ ಖಟ್ಟುನಿಟ್ಟಿನ ಮಾತುಗಳು ವ್ಯರ್ಥ ಹೋಗಿಲ್ಲ ಎಂಬುದು ಸ್ಪಷ್ಟವಿತ್ತು. MDಯವರ ಮನಸ್ಸಿನ ವಿರುದ್ಧ ಕೈಕೊಂಡ ತನಿಖೆ ತನ್ನ ವಿರುದ್ಧ ಹೋಗುವ ಭಯ ಫಿರೋಜನಿಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ! ಪತ್ರದ ಪ್ರತಿಯೊಂದನ್ನು ಇಟ್ಟುಕೊಂಡಿರಬೇಕು. ಖಂಬಾಟಾ, ಇಟ್ಟುಕೊಳ್ಳಲಿ, ತನಿಖೆ ಮುಗಿದ ಮೇಲೆ ಬೇಕಾದರೆ ಜೇನುತುಪ್ಪ ಹಚ್ಚಿ ಚೆನ್ನಾಗಿ ನೆಕ್ಕಲಿ-ತನಗೇನಂತೆ! ರೆಡ್ಡಿ ಕೊಟ್ಟ ಪತ್ರವನ್ನು ಓದುವ ಮೊದಲೇ ಹರಿದೊಗೆಯಬಾರದಿತ್ತು. ಅದರಲ್ಲಿ ಉಲ್ಲೇಖಿಸಿದ ಫಿರೋಜನ ಲಫಡಾಗಳಾದರೂ ಏನೇನು ಎನ್ನುವದು ಗೊತ್ತಾಗುತ್ತಿತ್ತು...

ಆದರೂ ನಾಗಪ್ಪ ತನ್ನಷ್ಟಕ್ಕೇ ಖುಶಿಯಾಗಿದ್ದ. ಅಂತೂ ಇನ್ನೆರಡು ದಿನಗಳಲ್ಲೇ ಇದೆಲ್ಲದರ ಇತ್ಯರ್ಥವಾಗುತ್ತದೆಯಲ್ಲ—ಕೊನೆಗೊಮ್ಮೆ, ಎಂಬ

ವಿಚಾರದಿಂದಲೋ, ತನಿಖೆಯ ಮುಖ್ಯ ಉದ್ದೇಶ ತನ್ನಿಂದ ಮಾಹಿತಿಯನ್ನು ದೊರಕಿಸಿಕೊಳ್ಳುವದೇ ಆಗಿದೆ ಎಂದು DMDಯವರು ಕೊಟ್ಟ ಭರವಸೆಯಿಂದಲೋ-ಕಳಕೊಂಡ ಗೆಲುವನ್ನು ಪುನಃ ತಿರುಗಿ ಪಡೆದಿದ್ದ: ಮಧ್ಯಾಹ್ನದ ಊಟಕ್ಕೆ ಶೇರ್-ಏ-ಪಂಜಾಬಿಗೇ ಹೋಗಬೇಕು. ಚಿಕನ್‌ಬಿರ್ಯಾಣಿಯ ಜೊತೆಗೆ ಬಿಯರ್ ಕುಡಿಯಬೇಕು. ತಿರುಗಿ ಬಂದ ಮೇಲೆ ಗಡದ್ದಾಗಿ ನಿದ್ದೆಮಾಡಬೇಕು. ಈವತ್ತೂ ಜಾನಕಿ ರಾತ್ರಿಯ ಊಟಕ್ಕೆ ತಮ್ಮಲ್ಲೇ ಬಾ ಎಂದರೆ ಹೋಗಬೇಕು...

## ಅಧ್ಯಾಯ ನಾಲ್ಕು

ಬಿಯರಿನ ಸುಖದಾಯಕ ಅಮಲಿನಲ್ಲಿ ಗಡದ್ದಾಗಿ ನಿದ್ದೆಮಾಡಿ ಏಳುವ ಹೊತ್ತಿಗೆ ಮಧ್ಯಾಹ್ನದ ನಾಲ್ಕು ಗಂಟೆ. ತುಂಬ ಪ್ರಸನ್ನಸ್ಥಿತಿಯಲ್ಲಿರುವಾಗಲೇ ಎಚ್ಚರಗೊಂಡು ಹಾಸಿಗೆಯಲ್ಲಿ ಕೂತವನು, ಚಾಲಿನ ತುಂಬ ಹರಡಿಕೊಂಡ ನಿಶ್ಶಬ್ದ ಕಿವಿಗೆ ಬಡಿದಂತಾಗಿ, ಅರೆ! ಎಂದುಕೊಂಡ. ಗಂಡಸರೆಲ್ಲ ಕೆಲಸಕ್ಕೆ ಹೋಗಿದ್ದರಿಂದ ಚಾಳುಗಳಲ್ಲಿ ಹೆಂಗಸರಷ್ಟೇ. ಮಕ್ಕಳು ಕೂಡ ಸಾಲೆ ಕಾಲೇಜುಗಳಿಗೆ ಹೋಗಿರಬೇಕು. ತಾನೊಬ್ಬನು ಮಾತ್ರ ಕಾಯಿಲೆಯಾದವನ ಹಾಗೆ ಇಡೀ ದಿನ ಮನೆಯಲ್ಲಿರಬೇಕಾದ ಪರಿಸ್ಥಿತಿಯ ನೆನಪು ಮತ್ತೆಲ್ಲಿ ತನ್ನ ಇದೀಗಿನ ಖುಶಿಯ ಮೂಡನ್ನು ಕೆಡಿಸಿತೋ ಎನ್ನುವ ಭಯವಾಗಿ ಹಾಸಿಗೆ ಬಿಟ್ಟು ಎದ್ದವನೇ ಮೋರಿಗೆ ಹೋಗಿ ಐದು ಮಿನಿಟುಗಳವರೆಗೆ ನಲ್ಲಿಯ ನೀರನ್ನು ಒಂದೇ ಸಮನೆ ಮೋರೆಗೆ ತೋಕುತ್ತ ನಿಂತ. ಬಿಯರಿನಾಮಲು ಸಂಪೂರ್ಣವಾಗಿ ಇಳಿದು ಕಣ್ಣು ಮನಸ್ಸುಗಳೆರಡೂ ಈಗ ತಿಳಿಯಾಗಿವೆ ಎಂದನ್ನಿಸುವ ಹೊತ್ತಿಗೆ ಚಹ ಕುಡಿಯುವ ತಲಬು ಬಂದಿತು. ಅದರ ಜೊತೆಗೇ ಜಾನಕಿಯ ನೆನಪು. ಅಂದ ಹಾಗೆ ಜಾನಕಿ, ತನ್ನ ಮನಸ್ಸಿನ ಮೇಲೆ ತಾನು ತಿಳಿದದ್ದಕ್ಕಿಂತ ಹೆಚ್ಚು ಪ್ರಬಲವಾದ ಪ್ರಭಾವ ಬೀರಿರಬಹುದೇ? ನಿನ್ನೆ ರಾತ್ರಿಯಿಂದಲೂ ಅವಳ ನೆನಪು ಆಗೀಗ ಕಾಡುತ್ತಲೇ ಇದೆ. ತುಂಬ ಕಾಮುಕಳಾದ ಹೆಣ್ಣು. ನಿನ್ನೆ ಸಂಜೆಯಿಂದ ತಿರುಗಿ ಕಣ್ಣಿಗೆ ಬೀಳಲೇ ಇಲ್ಲವಲ್ಲ. ಮನೆಯಲ್ಲೇ ಇದ್ದಂತಿಲ್ಲ. ಮಧ್ಯಾಹ್ನ ಊಟ ಮಾಡಿ ಬರುವಾಗಲೂ ಕದಕ್ಕೆ ಬೀಗವಿದ್ದಂತಿತ್ತು. ಚಹಕ್ಕೆ ಕೆಳಗಿನ ರೆಸ್ಟೋರೆಂಟಿಗೇ ಹೋದರಾಯಿತು. ಸ್ಟೋವ್ ಹೊತ್ತಿಸುವುದೆಂದರೆ ಬೇಸರವೆನಿಸುತ್ತದೆ. ಆಫೀಸಿಗೆ ಹೋಗುವುದನ್ನು ನಿಲ್ಲಿಸಿದಂದಿನಿಂದ ತಾನು ಸೋಮಾರಿಯಾಗುತ್ತಿದ್ದೇನೆಯೆ? ಮದುವೆಯಾದರೆ ಹೇಗೆ? ಈಗಿನ ನೌಕರಿಯನ್ನು ಬಿಡಬೇಕಾಗಿ ಬಂದರೆ ಹಳ್ಳಿಯ ಹೆಣ್ಣನ್ನೇ ಮದುವೆಯಾಗುತ್ತೇನೆ—ಜಾನಕಿಯಂತಹವಳನ್ನು! ರಾಣಿಯನ್ನೇ ಮದುವೆಯಾದರೆ ಹೇಗೆ?... ತನ್ನಷ್ಟಕ್ಕೇ ಖುಶಿಯಿಂದ ನಕ್ಕ. ತಾನು ಪಡಿತ್ತಿದ್ದ ಚಿತ್ರಹಿಂಸೆಯಿಂದ ತಪ್ಪಿಸಿಕೊಳ್ಳಲು ಇಂತಹದನ್ನೆಲ್ಲ ಯೋಚಿಸುತ್ತಿದ್ದೇನೆ ಎಂಬ ಅರಿವು ಬಂದು- ಏ ಬೋಳೀಮಗನೇ ಎಂದು ಬಹಳ ಖುಶಿಯಿಂದ ತನ್ನನ್ನು ತಾನೇ ಬೈದುಕೊಂಡ.

ಈಗ ಕೆಳಗೆ ಹೋಗುತ್ತಿದ್ದದ್ದು ಬರಿಯೆ ಚಹ ಕುಡಿಯುವುದಕ್ಕಾದರೂ ಟ್ರಂಕಿನೊಳಗಿಂದ ತನ್ನ ಪ್ರೀಯ ನೀಲೀಬಣ್ಣದ ಬುಶ್-ಶರ್ಟ್ ಹಾಗೂ ಕ್ರೀಮ್-ಕಲರ್ ಟೆರ್ರೀಕಾಟ್ ಪ್ಯಾಂಟು ತೆಗೆದ. ಅವನ್ನು ಹಾಕಿಕೊಳ್ಳುವಾಗ— 'ಇದು ನಿನ್ನೆ ಮೇರಿ ಫೋನ್ ಮೇಲೆ ಫಿರೋಜನ ಉಡುಪನ್ನು ಬಣ್ಣಿಸಿದ ರೀತಿಗೆ ಪ್ರತಿಕ್ರಿಯೆಯಲ್ಲವೇನೋ?' ಎಂದು ಒಳಗಿನಿಂದ ಎದ್ದ ಆಕ್ಷೇಪಣೆಯನ್ನು ಲಕ್ಷ್ಯಕ್ಕೆ ತಂದುಕೊಳ್ಳದೇ, ಯಾರಿಗೆ ಗೊತ್ತು—ಇದರಲ್ಲಿ ಜಾನಕಿಯ ಮೇಲೆ ಛಾಪುಹೊಡೆಯುವ ಉದ್ದೇಶವಿದ್ದರೂ ಇದ್ದೀತು ಎಂದುಕೊಂಡ. ಕನ್ನಡಿಯ ಎದುರು ನಿಂತು ತನ್ನನ್ನು ತಾನೇ ಮೆಚ್ಚಿಕೊಳ್ಳುತ್ತಿರುವಾಗ ಹಿಂದೊಮ್ಮೆ ಮೇರಿ ಇದೇ ಡ್ರೆಸ್ಸನ್ನು ಮೆಚ್ಚುತ್ತ—it goes so well on you ಎಂದದ್ದು ನೆನಪಾಗಿ ನಾಲಗೆಯ ತುದಿಯವರೆಗೆ ಬಂದ ಬಯ್ಗುಳನ್ನು ಪ್ರಯತ್ನಪೂರ್ವಕವಾಗಿ ತಡೆದುಕೊಂಡ: ಮೇರಿ ತಾನು ಕೊಟ್ಟ ಬುಶ್ ಶರ್ಟನ್ನು ಹೊಗಳುತ್ತ ಅಂದಿದ್ದಳು—'ಬುಶ್‌ಶರ್ಟನ್ನು ಹಾಕಿಕೊಂಡಾಗ ಎಲ್ಲಕ್ಕೂ ಮೇಲಿನ ಎರಡು ಗುಂಡಿಗಳನ್ನು ಹಾಕಬಾರದು. ಮೇಲಾಗಿ—'you have such a broad chest and thick neck...Don't you know girls like the hairy chest that peeps through the open collar...?' ಆಗ ಯಾವ ರೀತಿಯಿಂದ ಪ್ರತಿಕ್ರಿಯಿಸಿದ್ದೆನೋ ಎನ್ನುವದು ಅವನಿಗೆ ನೆನಪಿಲ್ಲ. ಆದರೆ ಈಗ ಬಂದ ನೆನಪಿನಿಂದ ಮಾತ್ರ—ಬುಶ್‌ಶರ್ಟಿನ ಎಲ್ಲ ಗುಂಡಿಗಳನ್ನೂ ಭದ್ರವಾಗಿ ಸಿಕ್ಕಿಸಿಕೊಳ್ಳುವಾಗ, ತುಸು ಮ್ಲಾನಗೊಂಡ: the hairy chest-my foot ಎಂದುಕೊಳ್ಳುತ್ತ ಕದದ ಸಮೀಪದ ಸ್ಟೂಲಿನ ಮೇಲೆ ಕೂತಾಗ ಬೂಟು ಹಾಕಿಕೊಳ್ಳುವ ಹುಕಿ ಬಂದಿತು. ಬೂಟುಗಳನ್ನು ಅರಿವೆಯ ಚಿಂದಿಯಿಂದ ಚೆನ್ನಾಗಿ ಉಜ್ಜಿ ಲಕ ಲಕಿಸುವಂತೆ ಮಾಡಿ ಒಂದು ಕಾಲಿನ ಚೀಲ ಹಾಗೂ ಬೂಟು ಹಾಕಿಕೊಂಡು ಇನ್ನೊಂದು ಕಾಲಿನ ಚೀಲವನ್ನು ಹಾಕಿಕೊಳ್ಳಬೇಕು ಎಂದು ಕೈಗೆ ಎತ್ತಿಕೊಂಡಿದ್ದನಷ್ಟೇ—ನಡುವೆಯೇ ಬಂದ ಒಂದು ಹುಚ್ಚು-ವಿಚಾರಕ್ಕೆ ಸ್ಟೂಲಿನಿಂದ ಎದ್ದು ಕದ ತೆರೆದು ಮಗ್ಗಲುಮನೆಯ ಕದಕ್ಕೆ ಇನ್ನೂ ಬೀಗವಿದೆಯೇ ಎಂದು ನೋಡುವದಕ್ಕೂ ಅರ್ಜುನ್‌ರಾವರ ಮುದಿ ತಾಯಿ ಸಂಡಾಸಿಗೆ ಹೋಗಿ ಹಿಂತಿರುಗಿ ಬರುವದಕ್ಕೂ ಸರಿಯಾಯಿತು:

"ಯಾರು—ಜಾನಕಿ ಬೇಕಿತ್ತೇ? ಅವರು ಯಾರೂ ಇಲ್ಲ. ಬೆಳಿಗ್ಗೇ ತವರು ಮನೆಗೆ ಹೋಗಿದ್ದಾಳೆ—ಕಲ್ಯಾಣಕ್ಕೆ. ಗಂಡನೇ ಕಳಿಸಿಕೊಟ್ಟ." ಎಂದ ಮುದುಕಿಯ

ಮೋರೆಯ ಮೇಲೆ ವ್ಯಕ್ತವಾದ—ಜಿಗುಪ್ಸೆಗೆ ಹತ್ತಿರವಾದ—ಭಾವನೆಯ ಅರ್ಥ ಹೊಳೆಯದೇ ನಾಗಪ್ಪ ಗೊಂದಲಿಸಿದ. ತತತ ಪತತ ಮಾಡುತ್ತ ಹಲ್ಲು ಕಿಸಿದು ನಕ್ಕ. ಮುದುಕಿ ಇನ್ನೂ ಬಾಗಿಲಲ್ಲೇ ನಿಂತು: "ಎಲ್ಲಿ ಸಿನೇಮಾಕ್ಕೆ ಹೊರಟೆಯಾ? ಇನ್ನೂ ಎಷ್ಟು ದಿನ ರಜೆ ನಿನ್ನದು?" ಎಂದು ಕೇಳಿದ ಧಾಟಿ ಸೇರಲಿಲ್ಲ. ಬೇರೆ ಯಾವಾಗಲಾದರೆ ಈ ಇಲದ ಉಪದ್ವ್ಯಾಪದ ಮುದುಕಿಗೆ ಸರಿಯಾದ ಜವಾಬು ಕೊಡದೇ ಇರುತ್ತಿರಲಿಲ್ಲ. ಆದರೆ ಈಗ ಅವಳು ತನ್ನನ್ನು ತೀರ ತಪ್ಪು ಸನ್ನಿವೇಶದಲ್ಲಿ ಸಂಧಿಸಿದ್ದರಿಂದ ಹುಟ್ಟಿದ ಅಪರಾಧಭಾವನೆ ಬಾಯಿ ಬಿಗಿಹಿಡಿಯುವಂತೆ ಮಾಡಿತ್ತು. ಆದರೂ ತನ್ನ ತೋಲವನ್ನು ಕಾಯುತ್ತ—"ನಿನ್ನೆ ಮಧ್ಯಾಹ್ನ ಊಟ, ಚಹ ಅವರಲ್ಲೇ ಆಗಿತ್ತು. ಬೆಳಗಿನಿಂದ ಕದಕ್ಕೆ ಬೀಗವಿದ್ದದು ನೋಡಿ ಕಾಳಜಿಯಾಯಿತು... ಮಂಗಳವಾರದಿಂದ ತಿರುಗಿ ಆಫೀಸಿಗೆ ಹೋಗಲು ಶುರುಮಾಡುತ್ತೇನೆ. ನನಗೂ ಬೇಸರ ಬಂದುಹೋಯಿತು... ಕಾದಂಬರಿಯೂ ಮುಗಿಯುತ್ತ ಬಂದಿದೆ," ಎಂದ. ಮುದುಕಿಗೆ ಸಮಾಧಾನವಾದಂತೆ ತೋರಲಿಲ್ಲ. ಸಮಾಧಾನ ಪಡುವ ಹೆಣ್ಣೇ ಅಲ್ಲ ಇವಳು. ತುಂಬ ರಿಪಪಿರಿಪಿಯ ಮುದುಕಿ: ಅವಳಿನ್ನೂ ಅಲ್ಲಿ ನಿಂತಿರುವಾಗಲೇ ಇನ್ನೊಂದು ಕಾಲಿಗೆ ಬೂಟು ಹಾಕಿಕೊಳ್ಳ ಹತ್ತಿದ. ಮುದುಕಿ ತನ್ನ ಎಂದಿನ ಅಧಿಕಪ್ರಸಂಗದ ಕುತೂಹಲದಿಂದ ಕೋಣೆಯ ಸುತ್ತ ಕಣ್ಣಾಡಿಸಿ ಮುಖ ಸಿಂಡರಿಸಿಕೊಂಡು ಹೊರಟುಹೋದಳು. ನಾಗಪ್ಪನ ಚಹ ಕುಡಿಯುವ ಉತ್ಸಾಹವೇ ಕುಗ್ಗಿಹೋಯಿತು. ತನ್ನ ಉಡುಪಿನ ಬಗೆಗಿನ ಉತ್ಸಾಹ ಕೂಡಾ. ಆದರೂ ಪ್ರತಿಸಲ ಪರಿಸರವನ್ನೇ ಮೇಲುಗೈಯಾಗಲು ಬಿಡಬಾರದು ಎಂದುಕೊಂಡ: ಹರೆಯದಲ್ಲೇ ಗಂಡ ಸತ್ತು ಬೋಳಿಯಾದ ಈ ಮುದುಕಿಗೆ ಪ್ರತಿಯೊಂದು ಗಂಡು-ಹೆಣ್ಣಿನ ಸಂಬಂಧದಲ್ಲಿ ದರಿದ್ರಕುತೂಹಲ. ಇಷ್ಟೇ: ತನ್ನಿಂದಾಗಿ ಪಾಪದ ಜಾನಕಿಗೆ ತೊಂದರೆ ಬಂದಿರದಿದ್ದರೆ ಸಾಕು. ಅವಳು ತನ್ನ ಬಗ್ಗೆ ತೋರಿದ ಆಸಕ್ತಿಯ ಬಗ್ಗೆ ಗಂಡನಿಗೇನಾದರೂ ಗುಮಾನಿ ಬಂದಿರಬಹುದೆ?...ಹಾಗಾದರೆ ತಾನೇ ಜಾಗ್ರತೆ ವಹಿಸುವದೊಳ್ಳೆಯದು...

ಮುದುಕಿಯ ಫಾಜೀಲ ಉಪದ್ವ್ಯಾಪದ ಪರಿಣಾಮವೆಂದರೆ ಕೆಳಗಿನ ಕೃಷ್ಣವಿಲಾಸಕ್ಕೆ ಹೋಗುವದನ್ನು ಬಿಟ್ಟು ನೇರವಾಗಿ—ಇನ್ನೆಂದೂ ಇಲ್ಲಿಕಾಲಿಡಲಾರೆನೆಂದು ಆಣೆಮಾಡಿಕೊಂಡ—ಸಂತೋಷಭವನಕ್ಕೇ ಬಂದದ್ದು. ಬೆನ್-ಹೆಮ್-ಹಾಲ್-ಲೇನ್ ಒಳಗಿನಿಂದ ಹಾದುಹೋಗುವಾಗ ಬೇಕೆಂದೇ

ಹೆಜ್ಜೆಗಳ ವೇಗವನ್ನು ತಗ್ಗಿಸಿದ: ತಾಜಾತನದಿಂದ ಲಕಲಕಿಸುವ ಕಾಯಿಪಲ್ಲೆ, ಹೂವು, ಹಣ್ಣುಹಂಪಲಗಳಿಂದಾಗಿ ಪ್ರತಿಸಲದಂತೆ ಹನೇಹಳ್ಳಿ ಮನಸ್ಸನ್ನು ಮುತ್ತಿಕೊಂಡಿತು. ಜಾಜೀಹೂಗಳ ವಾಸನೆಯಂತೂ ತಮ್ಮ ಮನೆಯ ಕತ್ತಲೆ ತುಂಬಿದ ದೇವರ ಕೋಣೆಯ ನೆನಪು ತಂದಿತು. ಜೊತೆಗೇ, ಭಾಷೆಯ ಮೇಲಿನ್ನೂ ಪ್ರಭುತ್ವ ಬಂದಿರದ ಬಾಲ್ಯದಲ್ಲಿಯ ಅನುಭವ-ಚಿತ್ರವೊಂದು ಈಗ ಮಾತಿನಲ್ಲಿ ಪುನರವತರಿಸಲು ಹವಣಿಸುತ್ತಿದೆ ಎನ್ನುವಂತಹ ಅನ್ನಿಸಿಕೆಯಿಂದಲೇ ಮನಸ್ಸು ಪುಲಕಿತವಾಯಿತು. ಎರಡು ದಿನಗಳ ಹಿಂದೆ ತನ್ನನ್ನು ದಾದಾ ಎಂದು ಕರೆದು ಹೂ ಜಡೆಯನ್ನು ಮಾರಿದ ಚಿಕ್ಕ ಹುಡುಗಿ ಕಣ್ಣಿಗೆ ಬೀಳುತ್ತಾಳೋ ಎಂದು ಅತ್ತಿತ್ತ ನೋಡಿದ. ಅವಳು ಬಂದಿರಲಿಲ್ಲವೆಂದು ತೋರಿತು, ಹೂವನ್ನು ಕೊಳ್ಳುವ ತವಕವನ್ನೂ (ಹೇಳದೇ ಕೇಳದೇ ಬಂದ ಜಾನಕೀಯ ನೆನಪನ್ನೂ) ಹತ್ತಿಕ್ಕಿ ಸೀದ ಹೊಟೆಲ್ಲಿನತ್ತ ಹೆಜ್ಜೆ ಹಾಕಹತ್ತಿದ.

ಹೊಟೆಲ್ಲಿನಲ್ಲಂದು ನಾಯಕನಿರಲಿಲ್ಲ. ಕೌಂಟರಿನಲ್ಲಿ ಅವನ ಭಾವ ಶ್ರೀಧರ ಕಾಮತ ಕೂತಿದ್ದ. ನಾಯಕನದೇ ಯುನಿಫಾರ್ಮು: ಲಾಂಡ್ರಿಯಲ್ಲಿ ತೊಳೆದು ಇಸ್ತ್ರಿ ಮಾಡಿದಂತಿದ್ದ ಸ್ವಚ್ಛ ಬಿಳಿಯ ಧೋತರ. ಅದೇ ಬಣ್ಣದ ಕುರ್ತಾ. ತಲೆಗೆ ಗಾಂಧೀ ಟೊಪ್ಪಿಗೆ. ಎರಡೂ ಕೈಗಳ ಬೆರಳುಗಳಿಗೆ ಮೂರು ಮೂರು ಉಂಗುರಗಳು. ಕವಳ ತಿಂದು ಕೆಂಪಾದ ತುಟಿಗಳು: ಎಲ್ಲ ಹೊಟೆಲ್ಲು ಮಾಲಿಕರೇ ರಂಗೇಲ ಸೂಳೇಮಕ್ಕಳು, ಅನ್ನಿಸಿತು: ಕೌಂಟರಿನ ಮೇಲೆ, ಬೆಳ್ಳಿಯ ವಾಟಿಯಲ್ಲಿ ತುಂಬಿದ ಅಕ್ಕಿಕಾಳಿನಲ್ಲಿ ಕೆಂಪು ಕಾಲುಗಳನ್ನು ಹುಗಿದು ಬಾಯಿಂದ ಮಾದಕವಾದ ಹೊಗೆ ಬಿಡುತ್ತ, ಬೂದಿ ಉಗುಳುತ್ತ ನಿಂತ ಆರು ಊದಿನಕಡ್ಡಿಗಳು. ಕೇಳಿದರೆ ಮೈಸೂರಿನಿಂದಲೇ ತರಿಸಿದವುಗಳೆಂದು ಹೇಳದೇ ಇರಲಾರ. ಊದಿನ ಕಡ್ಡಿಗಳ ಮಗ್ಗಲು ಹರಿವಾಣದಲ್ಲಿ ಚಿಗುರೆಲೆಗಳ ಬೀಡಾಗಳು—ಓರಣವಾಗಿ ಒಟ್ಟೊಟ್ಟ ರಾಶಿಯಲ್ಲಿ ಶಿಸ್ತಿನಿಂದ ಕುಳಿತಿದ್ದವು. ಬೆನ್ನ ಹಿಂದಿನ ಕಂಬದ ಮೇಲೆ ಲಕ್ಷ್ಮೀ, ಸರಸ್ವತೀ ಹಾಗೂ ಗಣಪತಿಗಳ ಗಾಜು ಹಾಕಿ ಫ್ರೇಮ್ ಮಾಡಿಸಿದ ಚಿತ್ರಗಳು. ಮೂರಕ್ಕೂ ಜಾಜಿಹೂವುಗಳ ಸರಗಳು. ಗಲ್ಲೆಯ ಮೇಲೇ ಇರಿಸಿದ ದೊಡ್ಡ ಚಿತ್ರ ಸ್ವಾಮಿಗಳದಿರಬೇಕು. ಅವರನ್ನು ತಾನೆಂದಿಗೂ ನೋಡಿಯೇ ಇರಲಿಲ್ಲ. ಅವರ ಚಿತ್ರಕ್ಕೂ ತುಳಸಿ, ಹೂಗಳ ದೊಡ್ಡ ಹಾರ. ಇದಿರುಗಡೆ, ಹಣೆಗೆ ಕುಂಕುಮ ಹಚ್ಚಿಕೊಂಡು ಸಣ್ಣಗೆ ಉರಿಯುವ ನೀಲಾಂಜನದ ದೀಪ. ಶ್ರೀಧರ ಇವನನ್ನು

ಕಂಡದ್ದೇ ತಡ ತನ್ನ ಪೇಟೆಂಟ್ ನಗುವನ್ನು ಈ ಕಿವಿಯಿಂದ ಆ ಕಿವಿಯ ತನಕ ಹರಡುವಂತೆ ಬೆಳಗಿಸಿದ: "ಓಹೋಹೋ... ಪ್ರಾಫೆಸರರ ಸವಾರಿ ನಮ್ಮ ಕಡೆ ಬಹಳ ದಿನಗಳ ಮೇಲೆ ದಯಮಾಡಿಸಿತು. ಬನ್ನಿ ಬನ್ನಿ ಬನ್ನಿ..." ಎಂದು ಇವನ ಬರವಿನಿಂದ ಬಹಳ ಸಂತೋಷವಾಯಿತೆನ್ನುವಂತೆ ಹರ್ಷೋದ್ಗಾರ ಮಾಡಿದ. "ಮೊನ್ನೆ ಬಂದಾಗ ನೀನಿರಲಿಲ್ಲ." ಎನ್ನುತ್ತ ಅವನತ್ತ ಹೆಚ್ಚು ಲಕ್ಷಕೊಡದೇ ಸೀದ ಒಳಗೆ ಹೋಗಿ ತಾನು ಹಿಂದಿನ ಸರತಿ ಬಂದಾಗ ಕೂತ ಮೇಲಿನ ರೂಮಿಗೇ ಹೋದ. ಮಾಣಿ ಬಂದ ಮೇಲೆ ಉತ್ತಪ್ಪ ಕಾಫಿಗಳಿಗೆ ಆರ್ಡರ್ ಕೊಟ್ಟ. ವಡೆ ಬಿಸಿಬಿಸಿಯಾಗಿವೆ ಎಂದು ಹೇಳಿ ಮಾಣಿ ಬಾಯಲ್ಲಿ ನೀರೂರುವಂತೆ ಮಾಡಿದಾಗ, ಒಂದು ಪ್ಲೇಟು ವಡೆಯನ್ನೂ ತರುವಂತೆ ಹೇಳಿ ಕನ್ನಡ ಪತ್ರಿಕೆ ಯಾವುದಾದರೂ ಇದ್ದರೆ ತಾ ಎಂದ. ಅವನು ಸಂಯುಕ್ತಕರ್ನಾಟಕ ಹಾಗೂ ಪ್ರಜಾಮತಗಳನ್ನು ತಂದು ಕೊಟ್ಟ.

ಪತ್ರಿಕೆಗಳನ್ನು ಓದದೇ ಎಷ್ಟು ದಿನಗಳಾದುವು! ಹಾಗೆ ನೋಡಿದರೆ—ಏನನ್ನೂ ಓದದೇ! ಕೈಗೆ ತೆಗೆದುಕೊಂಡ ಪತ್ರಿಕೆಯ ಪುಟಗಳನ್ನು ತಿರುವಿ ಹಾಕುತ್ತಿರುವಾಗ ಯಾವ ಸುದ್ದಿಯೂ ಮನಸ್ಸಿನ ಮೇಲೆ ನಾಟುತ್ತಿರಲೇ ಇಲ್ಲ. ಗುಪ್ತ-ರೋಗಗಳನ್ನು ಗುಣಪಡಿಸುವ ಗ್ಯಾರಂಟೀ ಕೊಡುವ ಡಾಕ್ಟರನೊಬ್ಬನ ಜಾಹೀರಾತು; ಜೊತೆಗೇ ನಿಮ್ಮ ಭವಿಷ್ಯವನ್ನು ಈಗಲೇ ತಿಳಿಯಿರಿ ಎಂದು ಕೂಗುವ ಜ್ಯೋತಿಷಿಯ ಜಾಹೀರಾತು—ಎರಡರ ಮೇಲೂ ಆಸ್ಥೆ ಇಲ್ಲದೇ ಕಣ್ಣುಹಾಯಿಸಿದ. ಥಟ್ಟನೆ ಪ್ರಜಾಮತ ಕೂಡ ವಾರಭವಿಷ್ಯ ಪ್ರಕಟಿಸುತ್ತದೆ ಎಂಬುದು ನೆನಪಾಗಿ ಬರಿಯ ಕುತೂಹಲಕ್ಕಾಗಿ ಓದಿದರೇನಂತೆ ಎಂದುಕೊಂಡು ಅದರ ಪುಟ ಮಗುಚಿ ನೋಡಿದ: "ಸಿಂಹರಾಶಿ: ಆಗದವರ ಪಿತೂರಿಗೆ ಬಲಿ ಬೀಳಬಹುದು. ಸಹೋದ್ಯೋಗಿಗಳೊಂದಿಗೆ, ಬಂಧುಗಳೆಂದು ತೋರಿಸಿಕೊಳ್ಳುವವರೊಂದಿಗೆ ವ್ಯವಹರಿಸುವಾಗ ಜಾಗ್ರತೆ ವಹಿಸಿರಿ. ತಾ. ೫, ೬ ಅಶುಭ: ೮, ೯, ೧೦ ಶುಭ." ಅಷ್ಟು ಹೊತ್ತಿಗೆ, ಮಾಣಿ ಉತ್ತಪ್ಪ, ವಡೆಗಳನ್ನು ತಂದಿದ್ದ. ಇದು ಬರೇ ಆಕಸ್ಮಿಕ! ಯಾವುದಕ್ಕೆ ಹೆದರಿಕೊಂಡಿರುವೆನೋ ಅದೇ ಕಣ್ಣಿಗೆ ಬಿದ್ದಾಗ ಮನಸ್ಸಿಗೆ ನಾಟಿತು—ಅಷ್ಟೇ, ಎಂದುಕೊಳ್ಳುತ್ತ ತಿನಿಸುಗಳ ಕಡೆಗೆ ಲಕ್ಷ್ಯ ಹರಿಯಿಸಲು ಯತ್ನಿಸಿದ. ವಿಜ್ಞಾನದಲ್ಲಿ ವಿಶ್ವಾಸವಿದ್ದ ತಾನು ಇಂಥದ್ದಕ್ಕೆಲ್ಲ ಗಮನ ಕೊಡಬಾರದು....

ಕಾಫಿ ಕುಡಿದು ಬಿಲ್ಲಿನ ಹಣವನ್ನು ಮಾಣಿಯ ಕೈಗೆ ಕೊಟ್ಟು ಬಾಕಿ ಹಣದ ಹಾದಿ ಕಾಯಹತ್ತಿದ. ಅದು ಬಂದ ಮೇಲೆ ಒಂದು ರೂಪಾಯಿ ನೋಟನ್ನು ಮಾಣಿಯ ಕೈಯಲ್ಲಿಟ್ಟು, ನಿಚ್ಚಣಿಕೆಯ ಮೆಟ್ಟಿಲುಗಳನ್ನಿಳಿದು ಕೌಂಟರಿನತ್ತ ಹೊರಳಿ ಕೂಡ ನೋಡದೇ ಸೀದ ರಸ್ತೆ ಸೇರಿದ. ಪೋರ್ಚುಗೀಜ್ ಚರ್ಚಿನ ಕಡೆಗೆ ಹೊರಳಿ ಆಪೆರಾ-ಹೌಸ್ ಕಡೆ ಹೋಗುವ ರಸ್ತೆ ಹಿಡಿದ. ಟ್ರಾಮುಗಳನ್ನು ರದ್ದುಗೊಳಿಸಿ ಬಸ್ಸುಗಳೇ ಓಡಾಡುವಂತೆ ಮಾಡಿದ್ದರೂ ರಸ್ತೆಯ ನಡುವಿನ ಟ್ರಾಮ್ ಹಳಿಗಳನ್ನಿನ್ನೂ ತೆಗೆದಿರಲಿಲ್ಲ. ತೆಗೆಯುವದೂ ಇರಲಿಲ್ಲ. ಹೇಗೂ ರಸ್ತೆಗೆ ಹೊಸತಾಗಿ ಖಡಿ ಡಾಂಬರುಗಳನ್ನು ಹಾಕುವಾಗ ಇವೂ ಅವುಗಳ ಅಡಿಗೆ ಮುಚ್ಚಿ ಹೋಗುವವಲ್ಲ! ತಾನು ಪೇಟೆಂಟ್ ಮಾಡಿದ ಒಂದು ಶೋಧ ರಸ್ತೆಗಳ ರಿಪೇರಿಗೇ ಸಂಬಂಧಪಟ್ಟದ್ದಾಗಿದೆ ಎಂಬುದನ್ನು ನೆನೆದ: ಆ ಶೋಧ ಕಾರ್ಯರೂಪಕ್ಕೆ ಬಂದರೆ ಮುನಿಸಿಪಾಲಿಟಿಯವರಿಗೆ ಲಕ್ಷಗಟ್ಟಲೆ ಉಳಿತಾಯವಾಗಬಹುದು. ಕಂಪಿಯವರಿಗೂ ದೊಡ್ಡ ಲಾಭ. ಲ್ಯಾಬೋರೇಟರಿಯ ಸಂಪರ್ಕ ತಪ್ಪಿ ಈಗ ವರ್ಷವಾಗುತ್ತ ಬಂದಿತಲ್ಲವೆ...?

ಕಣ್ಣ ಇದಿರಿಗೇ ಬೃಹದಾಕಾರದ ಸಿನೇಮಾ ಪೋಸ್ಟರುಗಳು. ಚೌಪಾಟಿಗೆ ಹೋಗುವ ಸಂಡರ್ಸ್ಟ್‌ರೋಡಿಗೆ ಅಡ್ಡವಾಗಿ ಹರಿದ ದೊಡ್ಡ ರಸ್ತೆಯೇ ಕೆನಡೀ ಬ್ರಿಜ್. ಅದರ ನಟ್ಟ ನಡುವಿನ ಸೇತುವೆಯ ಕೆಳಗಿಂದ ಹೋಗುವ ರಸ್ತೆಗೆ ಇಳಿದದ್ದೇ ಹತ್ತುವ ಚಾಳೊಂದರಲ್ಲಿ ತನ್ನ ರಾಣೀ: ಎಷ್ಟೊಂದು ಬೇಸರಪಟ್ಟಿರುವಳೋ ಹುಡುಗಿ! ಪರಿಚಯವಾದ ಕಳೆದ ನಾಲ್ಕು ತಿಂಗಳಲ್ಲಿ ತನ್ನನ್ನು ತುಂಬ ಹಚ್ಚಿಕೊಂಡಿದ್ದಾಳೆ. ಆಫೀಸು ಇದ್ದ ಕಟ್ಟಡದ ವೊಚ್‌ಮನ್‌ನಿಂದಲೇ ಸಂಪರ್ಕ— ಅವನ ದೂರದ ತಂಗಿಯಂತೆ! ಮೇರಿಯ ಪರಿಚಯವಾದಂದಿನಿಂದ, ತಮ್ಮ ಆಫೀಸಿನ ಮಗ್ಗಲು ಆಫೀಸುಗಳಲ್ಲಿಯ ಹುಡುಗಿಯರ ಕೂಡ ಆಗೀಗ ಮಾತನಾಡುವ ಅವಕಾಶ ಸಿಕ್ಕಂದಿನಿಂದ ರಾಣಿ ತನ್ನ ಭಾವನೆಗಳ ಪರಿಧಿಯಲ್ಲಿ ತೆಳುವಾಗುತ್ತಿದ್ದಾಳೆಯೇ? ಎನ್ನುವಂತಹ ಗುಮಾನಿ: ಭಾಷೆಯೇ ಇಲ್ಲದ ಸಂಬಂಧ ಇದೂ ಕೂಡ. ಹರಕು-ಮುರುಕು ಹಿಂದಿಯಲ್ಲಿ ರಾಣಿ ಮಾತನಾಡುವದಕ್ಕಿಂತ ಕಿಲಕಿಲ ನಗುವದೇ ಹೆಚ್ಚು. ನಾನು ನಿನ್ನೊಬ್ಬನ ಹುಡುಗಿ ಮಾತ್ರ ಎನ್ನುವದನ್ನು, ಒಂದು ದಿನ ಅತ್ಯಂತ ಖುಶಿಯ ಮೂಡಿನಲ್ಲಿದ್ದಾಗ, ಹಾವಭಾವಗಳಿಂದಲೇ ತಿಳಿಸುತ್ತ ಸುಖದ ಶಿಖರಕ್ಕೆ ಒಯ್ದಿದ್ದಳು.

ನಾಗಪ್ಪ, ಸೆಂಡರ್ಸ್ಟ್‌ರೋಡ್, ಕ್ವೀನ್ಸ್‌ರೋಡ್, ಗಿರ್ಗಾಂವ್‌ರೋಡ್‌ಗಳ ಕೂಟಸ್ಥಾನದಲ್ಲಿ ನಿಂತಿದ್ದ. ರಸ್ತೆಗಳ ಪ್ರತಿಮೂಲೆಯಿಂದ ದೊಡ್ಡ ದೊಡ್ಡ ಸಿನೇಮಾ ಪೋಸ್ಟರುಗಳು ತನ್ನತ್ತವೇ ಕಣ್ಣುಬಿಟ್ಟು ನಿಂತಂತೆ ನಿಂತಿದ್ದರೂ ಯಾವುದೂ ಅರ್ಥವಾಗುತ್ತಿರಲಿಲ್ಲ. ಮನಸ್ಸು ಕೂಡ ಕೂಟ ಸ್ಥಾನದಲ್ಲಿ ನಿಂತ ರೀತಿ ಹೊಯ್ದಾಡುತ್ತಿತ್ತು. ಫೂಟ್‌ಪಾಥಿನ ಮೇಲೆ ಚಪ್ಪಲಿ ರಿಪೇರಿಯ ಸರಂಜಾಮನ್ನು ಪಸರಿಸಿ ಕೂತ ಮೋಚಿ. ಇವನು ತನ್ನ ಧಂದೆಗೆ ಅಡ್ಡಬರುವಂತೆ ನಿಂತಿದ್ದರಿಂದ— “ಸಾಬ್...ಜರಾ ಬಾಜೂ,” ಎಂದು ಪ್ರಾರ್ಥಿಸಿದಾಗ ಥಟ್ಟನೆ ಒಂದು ನಿಶ್ಚಯಕ್ಕೆ ಬಂದವನ ಹಾಗೆ, ಆಪೆರಾ ಹೌಸ್ ಬಸ್‌ಸ್ಟಾಪಿನಲ್ಲಿ ಅದೇ ಬಂದು ನಿಂತ ಒಂದು ಬಸ್ಸಿಗಾಗಿ ಓಡೋಡಿ ರಸ್ತೆ ದಾಟಹತ್ತಿದ. ಬಸ್ಸು ಸಿಕ್ಕಿತು. ಮೇಲಿನ ಡೆಕ್ಕಿಗೆ ಹೋಗಿ ಕೂತುಕೊಳ್ಳುವಾಗ ತನಗೆ ಬೇಡವಾದುದರಿಂದ ಬಿಡಿಸಿಕೊಂಡಂತಹ ಸುಖವಾಗಿತ್ತು. ಕಂಡಕ್ಟರ್ ಬಂದಾಗ, ವರ್ಲಿಯ ಬೆಂಗಾಲ್-ಕೆಮಿಕಲ್ಸ್-ಸ್ಟಾಪಿಗೆ ಟಿಕೆಟ್ ಬೇಡಿ ಹಣ ಕೊಟ್ಟಮೇಲೆಯೇ ತಾನು ಹೊರಟದ್ದು ಸೀತಾರಾಮನ ಮನೆಗೆ ಎಂಬುದು ಗೊತ್ತಾಯಿತು. ರಾಣಿಯ ಮನೆಗೆ ಹೋಗೋಣವೇ ಎಂದು ನಡೆದ ಹೊಯ್ದಾಟದಿಂದ ಗೆದ್ದೆ ಎಂಬ ಸಂತೋಷದ ಜೊತೆಗೇ ಹುಟ್ಟಿದ—ಅವಳನ್ನು ತಾನು ದೂರ ಮಾಡತೊಡಗಿದ್ದೇನೆಯೇ? ಎಂಬ ವಿಚಾರದಿಂದ ಅಸ್ವಸ್ಥನಾದ. ಕೆಲ ಹೊತ್ತಿನ ಮೇಲೆ—ತಾನು ಅವಳಲ್ಲಿ ದಿನವೂ ಏನು ಹೋಗುತ್ತರಲಿಲ್ಲ. ಈಗಂತೂ ತಾನು ಆಫೀಸಿಗೆ ಕೂಡ ಬರದೇ ಇದ್ದದ್ದು ಅಣ್ಣನಿಂದಲೇ ಗೊತ್ತಾಗಿರಬೇಕು. ಊರಲ್ಲಿಲ್ಲವೇನೋ ಎಂದು ತಿಳಿದಾಳು ಎಂದುಕೊಂಡ.

ಕಳಕೊಂಡ ನೆಮ್ಮದಿಯನ್ನು ಮಾತ್ರ ಮನಸ್ಸು ಬಹಳ ಹೊತ್ತಿನ ತನಕ ತಿರುಗಿ ಪಡೆಯಲೇ ಇಲ್ಲ.

## ಅಧ್ಯಾಯ ಐದು

ಈಹೊತ್ತು ಶನಿವಾರ. ಶ್ರೀನಿವಾಸನಲ್ಲಿ ಊಟಕ್ಕೆ ಕರೆದಿದ್ದಾರೆ ಎಂಬುದನ್ನು ನೆನಪಿನಲ್ಲಿಟ್ಟುಕೊಂಡೇ ನಾಗಪ್ಪ ಹಾಸಿಗೆಯಿಂದ ಎದ್ದಿದ್ದ. ಅನೇಕ ರೀತಿಯ ಮುನ್‌ಸೂಚನೆಗಳಿಂದ ಮನಸ್ಸು ಒಂದಕ್ಕೊಂದು ವಿರುದ್ಧವಾದ ಭಾವನೆಗಳ ಎಳೆತಕ್ಕೆ ಸಿಕ್ಕಿಕೊಂಡಿತ್ತು. ನಿನ್ನೆ ಅಷ್ಟೆಲ್ಲ ಕಷ್ಟಪಟ್ಟು ಬಸ್ ಹಿಡಿದು ಸೀತಾರಾಮನಲ್ಲಿ ಹೋದರೆ ಮನೆಗೆ ದೊಡ್ಡ ಬೀಗ. ಥತ್ ಎರಡೂ ಮಗನೇ ಎಂದು ಬೈದು ಬೀಗಕ್ಕೊಂದು ಚೀಟಿ ಸಿಕ್ಕಿಸಿ ಬಂದಿದ್ದ—ಮಂಗಳವಾರ ಮುಂಜಾನೆ ಅವನ ಆಫೀಸಿನಲ್ಲೇ ಬಂದು ಭೆಟ್ಟಿಯಾಗುತ್ತೇನೆ ಎಂಬುದಾಗಿ. ಬಸ್ಸಿನಿಂದಲೇ ತಿರುಗಿ ಆಪೆರಾ-ಹೌಸ್ ಕಡೆ ಪ್ರಯಾಣ ಬೆಳೆಸಿದಾಗ ಬಸ್ಸಿನಿಂದ ಕಾಣುತ್ತಿದ್ದ ಪರಿಸರ ಅನೇಕ ಆಸೆ-ಆಕಾಂಕ್ಷೆಗಳ ಜೊತೆಗೆ ಆತಂಕಕ್ಕೂ ಕಾರಣವಾಯಿತು. ದಿನವೂ ಆಫೀಸಿಗೆ ಹೋಗುವಾಗ ಕಾಣುತ್ತಿದ್ದ ದೃಶ್ಯಗಳು ಮೈಮೇಲೆ ಮುಳ್ಳು ನಿಲ್ಲಿಸುತ್ತಿದ್ದಾಗಲೇ, ಇಷ್ಟು ದಿನ ತನಗೆ ಅತ್ಯಂತ ಪ್ರಿಯವಾದ ಪರಿಸರ ಪರಿಚಯ ಹಿಡಿಯಲು ನಿರಾಕರಿಸುವ ಗೆಳೆಯನಂತೆ ಕಂಡು ಮನಸ್ಸು ಭಾರವಾಗಿತ್ತು. ಕೆಲವು ತಿಂಗಳ ಹಿಂದೆ ಮುಂಬಯಿಯ ಪ್ರಖ್ಯಾತ ಇಂಗ್ಲಿಷ್ ವಾರಪತ್ರಿಕೆಯಲ್ಲಿ ಪ್ರಕಟವಾದ—ಕನ್ನಡ ಸಣ್ಣಕತೆಗಳ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ತನ್ನ ಗೆಳೆಯನೇ ಬರೆದ—ಲೇಖನದಲ್ಲಿ ತನ್ನ ಹೆಸರಿನ ಉಲ್ಲೇಖ ಕೂಡ ಇರಲಿಲ್ಲ. ಓದಿದಾಗ ತುಂಬ ವೇದನೆಯಾಗಿತ್ತು. ಮುಂದೆ ಕೆಲವು ವಾರಗಳ ವರೆಗೆ ಪ್ರತಿ ವಾರಪತ್ರಿಕೆಯನ್ನುಕೊಂಡು ಓದಿದ—ತನ್ನ ಸಣ್ಣ ಕತೆಗಳ ಬಗ್ಗೆ ಅಭಿಮಾನ ಇಟ್ಟುಕೊಂಡವರು ಯಾರಾದರೂ ಪ್ರತಿಕ್ರಿಯಿಸುತ್ತಾರೋ ಎಂದು ನೋಡಲು. ಇಲ್ಲ. ಯಾರಿಂದಲೂ ಪ್ರತಿಕ್ರಿಯೆಯಿಲ್ಲ! ತನ್ನ ಆಫೀಸಿನಲ್ಲಿಯ ಕೆಲ ಸಹೋದ್ಯೋಗಿಗಳು ಮಾತ್ರ ಆ ಲೇಖನದ ಬಗ್ಗೆ ಚುಚ್ಚಿ ಕೇಳಿದ್ದರು. ಕನ್ನಡ ಸಾಹಿತ್ಯದ ಮಟ್ಟಿಗೆ ತಾನು ಸತ್ತು ಈಗಾಗಲೇ ಮೂರು ವರುಷಗಳೇ ಸಂದಿವೆ.

ಗ್ಲ್ಯಾಕ್ಸೋ ಲ್ಯಾಬೋರೇಟರಿಯ ದೊಡ್ಡ ಕಟ್ಟಡಗಳ ಸಾಲು, ಪೋದಾರ ಹಾಸ್ಪಿಟಲ್, ಜಪಾನೀ ಬುದ್ಧ-ಮಂದಿರ, ದೂರ ಹಾಜೀಅಲ್ಲೀಯ ಆಚೆಯ ಫೋರ್ಜೆಟ್‌ಹಿಲ್ ಗುಡ್ಡಗಳಲ್ಲಿ ತಲೆಯೆತ್ತಿ ನಿಂತ ಹೊಚ್ಚಹೊಸ ಸ್ಕಾಯ್‌ಸ್ಕ್ರೇಪರಗಳು...ಎಲ್ಲ ಎಲ್ಲ ತನ್ನ ಅಸ್ತಿತ್ವಕ್ಕೇ ನಿರಾಸಕ್ತವಾಗಿ ಬೆನ್ನು ತಿರುವಿ

ನಿಂತುಬಿಟ್ಟಿವೆ ಎಂಬಂತಹ—ಸಾವನ್ನು ಹೋಲುವ—ಭಾವನೆಯನ್ನು ಹೊತ್ತೇ ಫ್ಲೋರಾ ಫೌಂಟನ್ ಸ್ಟಾಪಿನಲ್ಲಿ ಇಳಿದಿದ್ದ. ಚೌಕದಲ್ಲಿಯ—ಆಳೆತ್ತರ ನೀರು ಪುಟಿಸುತ್ತಿದ್ದ—ಕಾರಂಜಿಯು ಕೂಡ ಕಳೆದು ಹೋದ ಉತ್ಸಾಹವನ್ನು ತಿರುಗಿ ಕೊಡಲು ಅಸಮರ್ಥವಾಯಿತು. ಯಾಂತ್ರಿಕವಾಗಿಯೇ ಚರ್ಚಗೇಟ್ ಸ್ಟೇಶನ್ ಕಡೆ ನಡೆಯುತ್ತಿದ್ದ ಜನಸ್ತೋಮದಲ್ಲಿ ಒಂದಾಗಿ ಕಳೆದ ಎರಡು ದಿನಗಳಿಂದಲೂ ಬರಬೇಕೆಂದು ನಿಶ್ಚಯಿಸಿದ ಏಶಿಯಾಟಿಕ್ ರೆಸ್ಟೋರೆಂಟಿಗೆ ನಡೆದಿದ್ದ. ರಾತ್ರಿಯ ಊಟವನ್ನು ಅಲ್ಲಿ ಮುಗಿಸಿ ಮನೆಗೆ ಹಿಂತಿರುಗಿದಾಗ ಅರ್ಜುನ್‌ರಾವ್ ತನ್ನ ಹಾದಿಯನ್ನೇ ಕಾಯುತ್ತ ನಿಂತಹಾಗಿತ್ತು: “ನಿಮಗೆ ನಿದ್ದೆ ಬಂದಿರದಿದ್ದರೆ”... ಎಂದು ಬಾಗಿಲಲ್ಲಿ ನಿಂತು ಆರಂಭಿಸಿದಾಗ—“ತುಂಬ ನಿದ್ದೆ ಬಂದಿದೆ. ಬೆಳಗ್ಗೆ ಮಾತನಾಡೋಣ ಆಗದೇ? ಏಕೋ ಇತ್ತಿತ್ತ ನಿಮ್ಮ ವಾರಭವಿಷ್ಯದಲ್ಲಿ ವಿಶ್ವಾಸ ಮೂಡಲು ಹತ್ತಿದೆ ನೋಡಿ...” ಎಂದು ಹೇಳಿ ರೂಮಿನ ಕಡೆ ಹೋಗಲನುವಾದಾಗ ಅಷ್ಟರಲ್ಲೇ ಸಮಾಧಾನಪಟ್ಟುಕೊಂಡವರ ಹಾಗೆ—“ಬೆಳಿಗ್ಗಿನ ಚಹಕ್ಕೆ ನಮ್ಮಲ್ಲೇ ಬನ್ನಿ” ಎಂದಿದ್ದರು. ನಾಗಪ್ಪನಿಗೆ ಈಗ ನೆನಹಿಗೆ ಬಂತು. ಎದ್ದು ಸಿದ್ಧತೆ ಮಾಡತೊಡಗಿದ...

ನಿರೀಕ್ಷಿಸಿದಂತೆ ೮-೩೦ಕ್ಕೆ ಸರಿಯಾಗಿ ಅರ್ಜುನ್‌ರಾವ್ ಕದ ತಟ್ಟಿದರು. ಚಹದ ಜೊತೆಗೆ ಮರಾಠಿಃ ಬ್ರಾಹ್ಮಣರಲ್ಲಿ ಜನಪ್ರಿಯವಾದ ಬಟಾಟೇ ಪೋವೇ. ಮನೆಯಲಿ ಹೆಂಡತಿ ಮಕ್ಕಳು ಮಾತ್ರ. ಮುದುಕಿ ಎಲ್ಲೂ ಕಾಣಲಿಲ್ಲ. “ಅಮ್ಮ ನಿನ್ನೆ ಸಂಜೆಗಷ್ಟೇ ದಾದರ್—ಹಿಂದೂ ಕೊಲೋನಿಯ ತಮ್ಮನ ಮನೆಗೆ ಹೋಗಿದ್ದಾಳೆ,” ಎಂಬ ವಿವರಣೆಯಿಂದ ನಾಗಪ್ಪನಿಗೆ ಬಹಳ ನಿರಂಬಳವೆನಿಸಿತು. ಅವಲಕ್ಕಿಯನ್ನು ಪ್ರಶಂಸಿಸಿ ಇನ್ನೊಂದು ಪ್ಲೇಟು ಹೊಡೆದ. ಅರ್ಜುನ್‌ರಾವರ ಹೆಂಡತಿ ಖುಶಿಯಾದಳು: ಇನ್ನೆಷ್ಟು ದಿನ ರಜೆ ನಿಮ್ಮದು? ಎಂದು ಕೇಳುತ್ತಿರುವಾಗ ಅರ್ಜುನ್‌ರಾವ್ ನಡುವೆಯೇ ಬಾಯಿಹಾಕಿ—ಕಾದಂಬರಿ ಎಲ್ಲಿಯವರೆಗೆ ಬಂದಿದೆ? ಎಂದು ಕೇಳಿದರು. ಗಂಡ-ಹೆಂಡತಿ ಇಬ್ಬರ ಪ್ರಶ್ನೆಗಳಿಗೂ ಒಂದೇ ಉತ್ತರ ಆಗುವ ಹಾಗೆ: ಕಾದಂಬರಿ ಇನ್ನೂ ಬರೆಯಲು ಶುರುಮಾಡಿಲ್ಲ. ನನ್ನ ಆಫೀಸಿನದೇ ಒಂದು ಕಾದಂಬರಿಯಾಗಿ ಕುಳಿತಿದೆ. ಅದನ್ನು ಮೊದಲು ನಿಭಾಯಿಸಬೇಕು. ಬಹುಶಃ ಇನ್ನೆರಡು ದಿನಗಳಲ್ಲೇ ನಾನು ಆಫೀಸಿಗೆ ಹೋಗಲು ಶುರುಮಾಡಬಹುದು—ಎನ್ನಬೇಕೆಂದುಕೊಂಡದ್ದನ್ನು ಪ್ರಯತ್ನಪೂರ್ವಕವಾಗಿ

ತಡೆಹಿಡಿದ. ನಾಸ್ತಾದ ಈ ಔತಣವಾಗಲಿ ಗಂಡ-ಹೆಂಡಿರಿಬ್ಬರೂ ಒಂದೇ ಕಾಲಕ್ಕೆ ಕೇಳಿದ ಪ್ರಶ್ನೆಗಳಾಗಲೀ ತೋರುವಷ್ಟು ನಿರ್ಹೇತುಕವಾದವುಗಳಲ್ಲ ಎಂಬುದನ್ನು ಲಕ್ಷ್ಯಕ್ಕೆ ತಂದುಕೊಂಡವನಂತೆ—"ನೋಡಬೇಕು. ಕಾದಂಬರಿಯಂತೂ ನಾನು ಮೊದಲು ಯೋಜಿಸಿದ್ದರ ದುಪ್ಪಟ್ಟು ದೊಡ್ಡದಾಗಿ ಬೆಳೆಯಬಹುದೇನೋ ಎಂಬ ಭಯ. ಹಾಗಾದರೆ ಮಾತ್ರ ರಜೆಯ ಅವಧಿಯನ್ನು ಬೆಳೆಸಬೇಕಾಗುತ್ತದೆಯೇನೊ..." ಎಂದ. ತನ್ನ ಮಾತಿನಲ್ಲಿ ನಿರಾತಂಕವಾಗಿ ಮೂಡಿದ ಸುಳ್ಳಿಗೆ ತಾನೇ ಬೆರಗಾದ.

ಅರ್ಜುನ್‌ರಾವರ ಮನೆಯಿಂದ ಹಿಂತಿರುಗಿ ಬಂದವನೇ ಶ್ರೀನಿವಾಸನ ಮನೆಗೆ ಹೋಗುವ ತಯಾರಿಗೆ ತೊಡಗಿದ. ಕ್ಷೌರ ಮಾಡಿಕೊಳ್ಳುವಾಗ ಶಿಂಪಿಯವರ ಮನೆಗೆ ಇನ್ನೂ ಬೀಗವಿದ್ದದ್ದು ಲಕ್ಷ್ಮಕ್ಕೆ ಬರದಿರಲಿಲ್ಲ. ಆದರೂ ಅದಕ್ಕೆ ವಿಶೇಷ ಮಹತ್ವ ಕೊಡಲಿಲ್ಲ. ಸ್ನಾನಕ್ಕೆ ನಿಂತಾಗ ಮೊನ್ನೆ ಹಾಕಿಕೊಂಡ ಕ್ರೀಮ್ ಕಲರ್ ಪ್ಯಾಂಟು ಹಾಗೂ ನೀಲೀ ಬಣ್ಣದ ಬುಶ್‌ಶರ್ಟ ಧರಿಸುವದನ್ನು ನಿಶ್ಚಯಿಸಿದ. ಹಾಗೆ. ನಿಶ್ಚಯಿಸುವಾಗ ಕಣ್ಣಮುಂದೆ ನಿಂತವರು: ಗಲ್ಲದಲ್ಲಿ ಕುಳಿ ಮೂಡಿಸಿ ಸ್ವಚ್ಛ ಹಲ್ಲು ತೋರಿಸಿ ನಕ್ಕು ಭೇಟಿಯಾದ ಮೊದಲ ದಿನವೇ ತನ್ನನ್ನು ಸಂಪೂರ್ಣವಾಗಿ ಗೆದ್ದ ಚೇತನಾ ಹಾಗೂ ಝೋಪಡಪಟ್ಟಿಯೊಳಗಿನ ಸರಸ್ವತಿ! ಹೋಗುವಾಗ ಎರಡು ಚಾಕಲೇಟ್ ಪ್ಯಾಕೆಟ್ಟುಗಳನ್ನು ಒಯ್ಯಬೇಕು: ಚೇತನಾಳಿಗೊಂದನ್ನು, ಇನ್ನೊಂದನ್ನು ಸಿಕ್ಕರೆ ಸರಸ್ವತಿಗೆ ಕೊಡಬೇಕು... ಸ್ನಾನ ಮುಗಿಸಿ ಕನ್ನಡಿಯ ಮುಂದೆ ನಿಂತು ಕೂದಲು ಬಾಚಿಕೊಳ್ಳುತ್ತಿರುವಾಗ ಶ್ರೀನಿವಾಸನ ಹೆಂಡತಿ ಶಾರದೆ ನೆನಪಿಗೆ ಬಂದಳು: ಥಟ್ಟನೆ ಹೊಳೆಯಿತು—ಡಾಯನಾ ತನ್ನನ್ನು ವರ್ಣಿಸಿದ ರೀತಿ ತನಗಿಂತ ಹೆಚ್ಚಾಗಿ ಶಾರದೆಗೆ ಶೋಭಿಸುತ್ತದೆ ಎನ್ನುವದು: sweet sad face! ತನ್ನ ಕಣ್ಣುಗಳನ್ನು ಆಗೀಗ ಸಂಧಿಸಿದ ಕಣ್ಣುಗಳಲ್ಲಿ ಒಂದು ಬಗೆಯ ವಿಷಾದ ನೆಲಸಿದ್ದು ಈಗ ಅರಿವಿಗೆ ಬಂದಿತು. ಕನ್ನಡಿಯ ಇದಿರು ನಿಲ್ಲುವಮೊದಲೇ ರಟ್ಟೆಯಿದ್ದ ಬನಿಯನ್ ಹಾಕಿಕೊಂಡು ಆದರ ಮೇಲೆ ಬುಶ್‌ಶರ್ಟು ತೊಟ್ಟೇ ನಿಂತಿದ್ದ. ಸೊಂಟದ ಸುತ್ತ ಮಾತ್ರ ಬಾಥ್‌ಟಾವೆಲ್ಲು. ಕನ್ನಡಿಯಲ್ಲಿ ತನ್ನ ಛಾತಿ ನೋಡಿಕೊಳ್ಳುವ ಛಾತಿಯಿನ್ನೂ ಬಂದಿರಲಿಲ್ಲ...

ಪ್ಯಾಂಟು ಏರಿಸಿ ಬೂಟು ಹಾಕಿಕೊಳ್ಳುವ ಹೊತ್ತಿಗೆ—ಇನ್ನೂ ಹತ್ತು ಗಂಟೆಯೂ ಆಗಿಲ್ಲ. ಹೊರಡಲು ಇನ್ನೂ ಒಂದು ತಾಸಾದರೂ ಇದೆ. ಅಲ್ಲಿಯವರೆಗೆ

ಏನು ಮಾಡುವದೆಂದು ಗೊತ್ತಾಗದೇ ಕಪಾಟಿನೊಳಗಿಂದ ಒಂದು ಪುಸ್ತಕವನ್ನೆತ್ತಿಕೊಂಡ. ಕೈಗೆ ಬಂದದ್ದು ಬರ್ನಾರ್ಡ್ ಮಾಲ್ಮೂಡ್ ಅವನ ಕಾದಂಬರಿ—'ಫಿಕ್ಸರ್'. ಬಹಳ ಹಿಂದೆಯೇ ಓದಿ ಮುಗಿಸಿದ ಕಾದಯರಿ. ಯಾಕೋವ್ ಬೊಕ್: ತನ್ನಂತೆಯೇ ನಿಷ್ಕಾರಣವಾಗಿ ಯಾತನೆಗೆ ಗುರಿಯಾದ ಬಡಪಾಯಿ! ಎಲ್ಲ ಬಿಟ್ಟು ಇದೇ ಪುಸ್ತಕ ಕೈಗೆ ಬಂದದ್ದು ಹೇಗೆ ಎಂದು ದಿಗಿಲುಗೊಂಡ: ಶುರುಮಾಡಿದೆಯೆನೋ ನಾಗಪ್ಪಾss, ಒಂದೂ ಮಗನೇ, ವಿಜ್ಞಾನದ ವಿದ್ಯಾರ್ಥಿss, ವಿಕಾಸವಾದದಲ್ಲಿ ದೃಢವಾದ ನಂಬಿಕೆಯುಳ್ಳವನೇ, ಹೆದರಿಕೊಂಡಿದ್ದೀಯಾ ಅಂಜುಬರುಕಾss. ಕಂಡದ್ದಕ್ಕೆಲ್ಲ ಇಲ್ಲದ ಇಲ್ಲದ ಅರ್ಥ ಹಚ್ಚಿ ಇನ್ನಷ್ಟು ಹೆದರುತ್ತೀಯಾ...

ನಾಗಪ್ಪನಿಗೆ ಈ ಭಾವಸರಣಿ ಸೇರಲಿಲ್ಲ. ಇಷ್ಟು ದಿವಸ ತಾನು ಹಾದಿ ಕಾಯುತ್ತಿದ್ದ ಕೊನೆಯ ಗಳಿಗೆಯನ್ನು ಇದಿರಿಸಲು ಆತುರಪಟ್ಟವನ ಹಾಗೆ— ತುಸು ಮೊದಲೇ ಹೋದರೇನಂತೆ, ಇಂತಿಷ್ಟೇ ಹೊತ್ತಿಗೆ ಬಾ ಎಂದೇನು ತಿಳಿಸಿಲ್ಲವಲ್ಲ! ಎಂದುಕೊಂಡವನೇ ಕೈಗೆತ್ತಿಕೊಂಡ ಪುಸ್ತಕವನ್ನು ತಿರುಗಿ ಕಪಾಟಿನಲ್ಲಿಟ್ಟು ಹೊರಟೇಬಿಟ್ಟ. ಕೆಳಗಿಳಿದು ಹೋಗುವ ರೀತಿಯಲ್ಲಿ ಒಂದು ಬಗೆಯ ನಿರ್ಧಾರ ಒಡೆದು ಕಾಣುತ್ತಿತ್ತು.

ರೂಮಿನಿಂದ ಹೊರಗೆ ಬಿದ್ದಾಗ ಆಪೆರಾ-ಹೌಸಿಗೆ ಹೋಗಿ ಬಸ್ಸಿನಿಂದಲೇ ಹೋಗುವ ವಿಚಾರವಿತ್ತು. ಆದರೆ ಖೇತವಾಡಿಯ ಮೇನ್ ರೋಡಿಗೆ ಬಂದ ಕೂಡಲೇ ಮೊದಲಿನ ವಿಚಾರ ಬದಲುಗೊಂಡು ರಸ್ತೆಯ ಮುರುಕಿಯಲ್ಲಿ ನಿಂತ ಟ್ಯಾಕ್ಸಿಗೆ ಸನ್ನೆ ಮಾಡಿದ. ಟ್ಯಾಕ್ಸಿಯಲ್ಲಿ ಕೂತು, ಕೆಡೆಲ್ ರೋಡ್, ಶಿವಾಜೀ ಪಾರ್ಕ್, ಎಂದ. ಟ್ಯಾಕ್ಸಿ ಹೊರಟಾಗ ಮನಸ್ಸನ್ನು ಅಂತರ್ಮುಖಿಯಾಗಲು ಬಿಡದ ನಿರ್ಧಾರಮಾಡಿ ಕೂತವನ ಹಾಗೆ ಕಣ್ಣುಗಳನ್ನು ಸುತ್ತಲಿನ ಪರಿಸರದ ಮೇಲೇ ಊರಿ ಕೂತ. “ನಾನಾ-ಚೌಕಿನಿಂದ ಹೊಗೋಣವೇ? ಕೆಂಪ್ಸ್‌ಕಾರ್ನರ್ ಮೇಲಿಂದ?” ಟ್ಯಾಕ್ಸಿವಾಲಾ ಕೇಳಿದ. ಸವಾರಿ ಮುಂಬಯಿಗೆ ಹೊಸತೋ ಎಂದು ಗೊತ್ತು ಮಾಡುವ ಹಿಕಮತ್ತಿದು. ನಾನಾಚೌಕಿನ ದಾರಿ ಸಮೀಪದ್ದು. ಆದರೆ ಆ ದಾರಿಯಲ್ಲೇ ರಾಣಿಯ ಮನೆ ಕಾಣಿಸುವ ಕೆನಡೀ ಬ್ರಿಜ್ ಇದೆ. ಆದ್ದರಿಂದಲೇ ಕೆಂಪ್ಸ್-ಕಾರ್ನರ್ ರಸ್ತೆಯಿಂದಲೇ ಟ್ಯಾಕ್ಸಿ ಓಡಿಸಲು ಹೇಳಿದ: ಪ್ರಾರ್ಥನಾ-ಸಮಾಜ,

ಆಪೆರಾ-ಹೌಸ್, ಸಂಡರ್ಸ್ಟ್ರ್-ಬ್ರಿಜ್‌ಗಳನ್ನು ದಾಟಿ ಟ್ಯಾಕ್ಸಿ ಪೆಡ್ಡರ್-ರೋಡ್ ಕಡೆಗೆ ಹೊರಳಿತು. ಇಕ್ಕೆಲಗಳಲ್ಲಿ ಶ್ರೀಮಂತರ ಮನೆಗಳಿದ್ದ ವಸತಿ; ಎಡಕ್ಕೆ ಎತ್ತರದಲ್ಲಿ ಮಲ್ಬಾರ್‌ಹಿಲ್—ಗುಲ್ಮೋಹರದ ಗಿಡಗಳು. ಕೆಂಪ್ಸ್-ಕಾರ್ನರ್—(ಕಾಲ್‌ಗರ್ಲ್ಸ್); ಕ್ಯಾಡ್‌ಬರೀ ಫ್ರಾಯ್; ಹಾಜೀ—ಆಲ್ಲೀ ದರ್ಗಾ. ಎಡಕ್ಕೆ ಸಮುದ್ರ. ನೀರಿನೊಳಗೆ ಅರ್ಧ ಮುಳುಗಿದ, ಹಾಜೀ ಅಲ್ಲೀ ದರ್ಗಾಕ್ಕೆ ಹೋಗುವ, ಇಕ್ಕಟ್ಟಿನ ದಾರಿ: ಶ್ರೀನಿವಾಸನ ಮನೆ ಹತ್ತಿರವಾಗುವ ತನಕವೂ ಆ ನೀರು, ಆ ಸೀರಾದ ದಾರಿ, ದೂರದಲ್ಲಿ ಕಾಣುವ ದರ್ಗಾ ಇವೇ ಮನಸ್ಸನ್ನು ಆವರಿಸಿ ನಿಂತವು: ಒಂದು ದಿನ ಹೋಗಬೇಕು, ದರ್ಗಾ ನೋಡಲು. ಭರತಿಯ ಹೊತ್ತಿಗೆ ದರ್ಗಾಕ್ಕೆ ಹೋಗುವ ದಾರಿ ನೀರಿನಲ್ಲಿ ಪೂರ್ತಿಯಾಗಿ ಮುಳುಗಿಹೋಗುತ್ತದೆ...ಅಂಥ ಹೊತ್ತಿನಲ್ಲೇ ಅಲ್ಲಿ ಹೋಗುವ ಸಾಹಸ ಮಾಡಿದ ಒಂದಿಬ್ಬರು ನೀರಿನಲ್ಲಿ ಕಾಲು ಜಾರಿ ಮುಳುಗಿ ಸತ್ತ ಸುದ್ದಿ ಕೇಳಿದ್ದ...ಟ್ಯಾಕ್ಸಿ ಕೆಡಲ್-ರೋಡ್ ಕೊನೆಯನ್ನು ಸಮೀಪಿಸುತ್ತಿರುವಾಗ ಟ್ಯಾಕ್ಸಿಯವನು ಕೇಳಿದ ಪ್ರಶ್ನೆಗೆ ಹಾಜಿ-ಆಲ್ಲೀ ದರ್ಗಾ ಮನಸ್ಸಿನಿಂದ ಆ ಕ್ಷಣದ ಮಟ್ಟಿಗಾದರೂ ಕಳಚಿಬಿದ್ದಿತು: ತುಸು ಮುಂದೆ ಹೋದ ಮೇಲೆ ಎಡಕ್ಕೆ ಹರಿಯುವ ರಸ್ತೆಗೆ ಹೊರಳಿಸುವಂತೆ ಆದೇಶ ಕೊಟ್ಟು ಟ್ಯಾಕ್ಸಿ ಝೋಪಡಪಟ್ಟಿಗಳಿದ್ದ ಜಾಗಕ್ಕೆ ಬಂದದ್ದೇ, ನಿಲ್ಲಿಸಲು ಹೇಳಿದ.

ಟ್ಯಾಕ್ಸಿಯಿಂದ ಇಳಿಯುವಾಗ ದೊಡ್ಡ ಆಘಾತದ ಬಲದಿಂದ ಅರಿವಿನಲ್ಲಿ ಮೂಡಿ ನಿಂತದ್ದು—ಝೋಪಡಪಟ್ಟಿಗಳೆಲ್ಲ ಮಟಾಮಾಯವಾಗಿರುವ ದುರಂತ ಸಂಗತಿ! ಗರಾಜಿನವರಿಗೆ ಕೇಳಿದ. ಅವರು. ಇವನ ಕಡೆಗೆ ವಿಚಿತ್ರ ಸಂಶಯದಿಂದ ನೋಡಿದರು. "ನಿಮಗೆ ಬೇಕಾದರೆ ನಾನು ವ್ಯವಸ್ಥೆ ಮಾಡುತ್ತೇನೆ ಸಾಬ್. ವಿಳಾಸ ಕೊಡಿ," ಎಂದ, ಅಲ್ಲಿಯ ಒಬ್ಬ ಮಿಕೆನಿಕ್: ಮೈಯೆಲ್ಲ ಕಪ್ಪು ಗ್ರೀಸ್ ಮೆತ್ತಿಕೊಂಡು ಜಿಗಿಜಿಗಿಯಾಗಿತ್ತು: ಬೆಳಿಗ್ಗೆ ಎದ್ದ ಕೂಡಲೇ ಕಳ್ಳ ಸರಾಯಿಗಾಗಿ ಬಂದಿದ್ದೇನೆಂದು ತಪ್ಪು ತಿಳಿದ ಆತನ ಮುಸುಡಿಗೆ ಹೊಡೆಯುವಷ್ಟು ಸಿಟ್ಟು ಬಂದಿತ್ತು. ಆದರೂ ತುಟಿಪಿಟ್ಟೆನ್ನದೇ ಅಲ್ಲಿಂದ ಹೆಜ್ಜೆ ಕಿತ್ತ. ಸರಸ್ವತಿಯನ್ನು ಕಾಣಲಾಗದ್ದಕ್ಕೆ ಮನಸ್ಸು ಖಿನ್ನವಾಗಿತ್ತು. ಝೋಪಡಪಟ್ಟಿಗಳು ನಿಂತ ಜಾಗದಲ್ಲಿ ಒಲೆ ಉರಿದ ಗುರುತುಗಳು ವಿಚಿತ್ರಭಾವನೆಗಳಿಗೆ ಕಾರಣವಾಗಹತ್ತಿದುವು.

ಶ್ರೀನಿವಾಸನ ಮನೆ ತಲುಪಿದಾಗ ಕದ ತೆರೆದ ಹುಡುಗಿಯ ಪರಿಚಯ ಸಿಗದೇ ಗೊಂದಲಿಸಿದ. "ಶ್ರೀನಿವಾಸರಾವ್ ಅವರ ಮನೆ...?" ಎಂದು

ಕೇಳುತ್ತಿದ್ದಾಗ ಚೇತನಾ ನಗು ಮಿಂಚುತ್ತ ಬಂದಳು: "ಬನ್ನಿ ಬನ್ನಿ ಕಾಕಾ. ಇವಳು ನನ್ನ ಅಕ್ಕ—ಆಶಾ. ಹಾಗೂ ಈ ತುಂಟ ನಮ್ಮ ತಮ್ಮ—ಕಿರಣ. ಊರಿನಿಂದ ನಿನ್ನೆಯಷ್ಟೇ ಬಂದಿದ್ದಾರೆ. ನಾಗಪ್ಪ ತನ್ನ ಕಣ್ಣುಗಳನ್ನು ನಂಬದಾದ. ಆಶಾ ೧೬/೧೭ರ ಹರೆಯದ ಹುಡುಗಿ, ಸೀರೆಯುಟ್ಟು ನಿಂತಿದ್ದಳು. ತಾಯಿಯದೇ ರೂಪ. ಗೌರವರ್ಣ. ಅಚ್ಚ ಹಸಿರುಬಣ್ಣದ ನೈಲಾನ್ ಸೀರೆ. ಸ್ಲೀವ್‌ಲೆಸ್ ಮ್ಯಾಚಿಂಗ್‌ಬ್ಲೌಸ್: ಎಲ್ಲ ಭಾವನೆಗಳನ್ನು ಸೆರೆಹಿಡಿದು ನಿಂತದ್ದ ಅವಳ ಉದ್ದ ಕೇಶರಾಶಿ: ಶ್ಯಾಂಪೂ ಹಚ್ಚಿ ತಲೆಯ ಮೇಲೆ ಮಿಂದಿರಬೇಕು. ಇನ್ನೂ ಬಾಚಿಕೊಂಡಿರಲಿಲ್ಲ. ನೀರು ಒಣಗಲೆಂಬಂತೆ ಹಾಗೇ ಬೆನ್ನ ಮೇಲೆ ನೀಳವಾಗಿ ಹರಹಿಬಿಟ್ಟಿದಳು. ತಾನು ನೋಡುತ್ತಿದ್ದ ರೀತಿಗೆ ಆಶಾಳ ಗಲ್ಲಗಳು ಕೆಂಪಗಾದ ರೀತಿಯಿಂದ ಎಚ್ಚರಗೊಂಡವನ ಹಾಗೆ—"ಹೆಲ್ಲೋ ಆಶಾ, ಹೆಲ್ಲೋ ಕಿರಣ್." ಎಂದು ತುಂಬ ಸುಖದಿಂದ ಇಬ್ಬರ ಗಲ್ಲಗಳನ್ನೂ ಪ್ರೀತಿಯಿಂದ ಚಿವುಟುತ್ತ ಚೇತನಾಳತ್ತ ತಿರುಗಿ— "ನೀನು ಹ್ಯಾಗಿದ್ದೀಯಾ ನನ್ನ ತುಂಟ ಹುಡುಗೀ." ಎಂದು ಕಿಸೆಯೊಳಗಿಂದ ಚಾಕ್‌ಲೇಟ್ ಪ್ಯಾಕೆಟ್ಸ್‌ಗಳನ್ನು ಹೊರತೆಗೆದು ಅವಳ ಕೈಗೆ ಕೊಟ್ಟು. "ಎಲ್ಲರಿಗೂ," ಎನ್ನುತ್ತ ದಿವಾಣಖಾನೆಗೆ ಬಂದ.

ಸೋಫಾ ಒಂದರಲ್ಲಿ ಕೂಡುತ್ತಿರುವಾಗ—"ಅಪ್ಪ ಸ್ನಾನಕ್ಕೆ ಹೋಗಿದ್ದಾರೆ. ಊರಿಂದ ನಮ್ಮ ಅಜ್ಜಿ ಬಂದಿದ್ದಾಳೆ," ಎಂದು ಚೇತನಾ ಸುದ್ದಿ ಕೊಟ್ಟಳು. ಅಜ್ಜಿ!— ತನ್ನ ಕತೆಯೊಳಗಿನ ಪದ್ದಕ್ಕ! ಶ್ರೀನಿವಾಸ ಈ ಕಾರಣಕ್ಕಾಗಿಯೇ ಊಟಕ್ಕೆ ಕರೆದಿಲ್ಲ ತಾನೇ. ಶ್ರೀನಿವಾಸನ ಹೆಂಡತಿ ಒಮ್ಮೆ ಬಾಗಿಲಲ್ಲಿ ಪ್ರಕಟವಾಗಿ ಮುಗುಳುನಗೆ ಬೀರಿ ಒಳಗೆ ಹೋದಳು. ಮೂವರೂ ಮಕ್ಕಳು ತನಗೆ ಪ್ರೀತಿಯಿಂದ ಅಂಟಿಕೊಂಡ ರೀತಿಗೆ ನಾಗಪ್ಪ ತುಂಬ ಖುಶಿಯಾದ. ಶ್ರೀನಿವಾಸ ಇವರಾರ ಮುಂದೆಯೂ ತನ್ನ ಬಗ್ಗೆ ಡೊಂಕಾದ್ದನ್ನೇನೂ ಮಾತನಾಡಿರಲಿಕ್ಕಿಲ್ಲ ಅನ್ನಿಸಿತು.

ಇವನು ಬಂದದ್ದರ ಸುಳುವು ಹತ್ತಿದ ಶ್ರೀನಿವಾಸ ಚೇತನಾಳನ್ನು ಕರೆದು ಬಚ್ಚಲುಮನೆಯಿಂದಲೇ ಆದೇಶವಿತ್ತ: "ಕಾಕಾಗೆ ಆಗ ಹೇಳಿದ ರೂಮು ತೋರಿಸು. ಡ್ರೆಸ್ಸು ಬದಲಿಸಲು ಹೇಳು. ಲುಂಗೀ ಕೊಡು." ಚೇತನಾ ಹಾಗೇ ಮಾಡಿದಳು, ಹಾಗೂ ಇವನು ತನಗಾಗಿ ಮೊದಲೇ ಸಿದ್ಧಮಾಡಿ ಇಟ್ಟಂತಿದ್ದ ಕೋಣೆಗೆ ಹೋಗುವಾಗ-ಕಾಕಾ, ನೀವು ಈ ಡ್ರೆಸ್ಸಿನಲ್ಲಿ ತುಂಬ ಚೆಂದ ಕಾಣುತ್ತೀರಿ—ಎಂದು ತುಂಬ ಮೋಹಕವಾಗಿ ನಕ್ಕಳು. ಇನ್ನೊಮ್ಮೆ ಅವಳ ಗಲ್ಲವನ್ನು ಚಿವುಟುತ್ತ—

“ಹೌದೇ? ಹಾಗಾದರೆ ಇಡೀ ದಿನ ಇದರಲ್ಲೇ ಇದ್ದು ಬಿಡುತ್ತೇನೆ.” ಎಂದ. ಲುಂಗಿ ಉಡುತ್ತಿದ್ದಾಗ-ಬುಶ್‌ಶರ್ಟು ತೆಗೆಯುವದು ಬೇಡವೇನೋ, ಅಷ್ಟಾಗಿ ಶ್ರೀನಿವಾಸ ಒತ್ತಾಯಪಡಿಸಿದರೆ ಹೇಗಾದರೂ ಒಳಗೆ ಉದ್ದ ತೋಳಿನ ಬನಿಯನ್ ಇದ್ದೇ ಇದೆ- ಎಂದು ಸಮಾಧಾನ ಮಾಡಿಕೊಂಡ. ತೋಳಿಲ್ಲದ ಬನಿಯನ್ ತಾನು ಈ ವರೆಗೂ ತೊಟ್ಟಿರಲೇ ಇಲ್ಲ... ಶ್ರೀನಿವಾಸನ ಹರಟೆಯೋ ಇಂತಹ ಚಿಲ್ಲರೆ ವಿಷಯಗಳಿಂದಲೇ ಆರಂಭವಾಗಬೇಕು: ಡ್ರೆಸ್ಸು, ಅಡಿಗೆ, ಫರ್ನಿಚರ್—ಇಂತಹ ವಿಷಯಗಳನ್ನು ಬಿಟ್ಟರೆ ಮಾತನಾಡಲು ಬೇರೆ ವಿಷಯಗಳೇ ಇಲ್ಲ ಒಂದೂ ಮಗನ ಹತ್ತಿರ. ಹೆಂಗಸರ ಸೀರೆ ದಾಗೀನೆಗಳ ಮೇಲಂತೂ ನಿಷ್ಣಾತನಂತೆ ಗಂಟೆಗಟ್ಟಲೆ ಮಾತನಾಡಬಲ್ಲ ನೀತ—ಒಂದು ಬಗೆಯ ಶ್ವಾಪದ ಚೈತನ್ಯದಿಂದ... ಸಂಬಾರಅವಲಕ್ಕಿ, ಬಿಸ್ಕೂಟಂಬೋಡೆಗಳ ಮೇಲೆ ಮಾತನಾಡುವಾಗ ನೋಡಬೇಕು: ನೀರೂರಿಸುತ್ತಿದ್ದ-ಬರೇ ಕೇಳುವವರ ಬಾಯಲ್ಲಷ್ಟೇ ಅಲ್ಲ: ಸ್ವತಃ ತನ್ನ ಬಾಯಲ್ಲೂ ಜೊಲ್ಲು ಒಟ್ಟಾಗುತ್ತಿತ್ತು. ಶುದ್ಧ ದನ! ಅಸಹ್ಯ ರೀತಿಯಲ್ಲಿ ಬಾಯಿ ಚಪ್ಪರಿಸುತ್ತ ಅಡಿಗೆಯ ವರ್ಣನೆ ಮಾಡುತ್ತಾನೆ. ಅವನ ಗಿಡ್ಡ ದೇಹಕ್ಕೆ ಶೋಭಿಸದ ಡೊಳ್ಳುಹೊಟ್ಟೆ. ಗುಂಡುಗುಂಡಾದ ದೇಹದ ಶಿಖರದಲ್ಲಿ ದೊಡ್ಡ ತಲೆ. ಹರವಾದ ಮೂಗು. ದಪ್ಪ ದಪ್ಪ ತುಟಿಗಳು. ಆಗೀಗ ಹುಕ್ಕಿ ಬಂದಾಗೊಮ್ಮೆ ಸಣ್ಣ ಚಂಡಿಕೆ ಬಿಟ್ಟು ತಲೆಯನ್ನು ತಕ ತಕ ಹೊಳೆಯುವಂತೆ ಬೋಳಿಸಿಕೊಂಡು ಬರುತ್ತಿದ್ದ. ಸದ್ಯ ತಿರುಗಿ ಕೂದಲು ಬೆಳೆಸಿದ್ದಾನೆ. ಖಾಕೀಬಣ್ಣದ ಚಡ್ಡಿ, ತೀರ ಹಳೇ ನಮೂನೆಯ ಅಂಗಿ. ಮನಸ್ಸು ಬಂದರೆ ಅತ್ಯಾಧುನಿಕ ಫ್ಯಾಶನ್ನಿನ ಬಟ್ಟೆಗಳನ್ನು ಧರಿಸಿದರೂ ಧರಿಸಿದನೇ. ಆದರದು ಕ್ವಚಿತ್ತ...

ಚೇತನಾ ಈಗ ತೋರಿಸಿ ಹೋದ ಕೋಣೆ ಈ ಮೊದಲು ತಾನು ನಿಲ್ಲಲು ಬಂದ ಕೋಣೆಯಿಂದ ಬೇರೆಯಾಗಿತ್ತಾ. ಇಲ್ಲಿಂದ ಸಮುದ್ರ ಕಾಣುತ್ತಿಲ್ಲ. ಬದಲು, ಝೋಪಡಪಟ್ಟಿಗಳ ಮಗ್ಗಲಲ್ಲಿಯ ಗರಾಜು ಕಾಣುತ್ತಿತ್ತು. ಮೊದಲು ಝೋಪಡಪಟ್ಟಿಗಳಿದ್ದ ಜಾಗದಲ್ಲೀಗ ಇನ್ನೊಂದು ಹೊಸ ಕಟ್ಟಡ ಬರುತ್ತಿದ್ದಂತೆ ತೋರಿತು: ಅಲ್ಲಲ್ಲಿ ನೆಲದಲ್ಲಿ ಹೊಂಡ ತೋಡಿದ ಗುರುತುಗಳು. ಎಂಟೇ ದಿನಗಳಲ್ಲಿ ಎಷ್ಟೊಂದು ಮಾರ್ಪಾಡು! ಸರಸ್ವತಿಯನ್ನು ಇನ್ನೆಂದಿಗೂ ಕಾಣಲಾರೆನೇನೋ: ನೆಟ್ಟ ದೃಷ್ಟಿಯಿಂದ ತನ್ನನ್ನು ನೋಡುತ್ತಿದ್ದಾಗ ಅವಳ ಕಣ್ಣುಗಳಲ್ಲಿ ಕಂಡ ಭಯದ ನೆನಪಾಗಿ ತಲ್ಲಣಗೊಂಡ. ಈ ನೆನಪಿನ ಹಿಂದೆಯೇ ಬಂದ ಒಂದು ವಿಚಾರಕ್ಕೆ

ನಾಗಪ್ಪ ಸ್ತಂಭಿತನಾದ: ಆಶಾ ಶ್ರೀನಿವಾಸನ ಚೊಚ್ಚಲ ಮಗಳಲ್ಲ. ಇರಲಾರಳು. ಶ್ರೀನಿವಾಸನ ಮದುವೆಯಾಗಿ ಈಗ ಇಪ್ಪತ್ತು ವರುಷಗಳಾಗುತ್ತ ಬಂದವು. ಶಾರದೆಯ ವಿವಾಹ-ಪೂರ್ವ-ಚರಿತ್ರೆಯ ಬಗ್ಗೆ ಕೇಳಿದ ಕಂತೆ-ಪುರಾಣದ ಪಿಂಡ ಇವಳಿರಲಾರಳು. ಹಾಗಾದರೆ ಅವಳೇನಾದಳು? ಅವಳು ಹುಟ್ಟಿದ್ದಾದರೂ ಹೌದೆ? ಹುಟ್ಟಿದ ಕೆಲವೇ ತಿಂಗಳಲ್ಲಿ ಸತ್ತುಹೋದಳೆಂದು ಕೇಳಿರಲಿಲ್ಲವೆ? ಕೇಳಿದ್ದೆನೆ? ಯಾಕೆ ಇಷ್ಟೊಂದು ಅರೆವು ಮರೆವು? ಶಾರದೆಯ ಕಣ್ಣುಗಳಲಲ್ಲಿಯ ವ್ಯಾಕುಲತೆ ಅವಳ ಮುಗ್ಧ ಸೌಂದರ್ಯಕ್ಕೆ ಮಾರುಹೋದ ತನ್ನ ಮರೆವಿಗೆ ಕಾರಣವಾಗುತ್ತಿರಬಹುದೆ? ದೇವರೇ, ಎಷ್ಟೊಂದಕ್ಕೆ ಹೆದರಿಕೊಂಡು, ಎಷ್ಟೊಂದಕ್ಕೆ ಕಟ್ಟಿಬಿದ್ದು ನೆನಪಿನ ಕದಗಳನ್ನು ಒಂದೊಂದಾಗಿ ಮುಚ್ಚಿಕೊಳ್ಳುತ್ತಿದ್ದೇನೆ!

ತಾನು ಅದೆಷ್ಟು ಹೊತ್ತು ಹೀಗೆ ವಿಚಾರಮಾಡುತ್ತ ಕಿಡಕಿಯ ಬಳಿ ನಿಂತಿದ್ದನೋ, ನಾಗಪ್ಪನಿಗೆ ತಿಳಿಯಲಿಲ್ಲ. ಅಡ್ಡ ಮಾಡಿದ ಕೋಣೆಯ ಕದ ದೂಡಿ ಶ್ರೀನಿವಾಸ ಒಳಗೆ ಬಂದ. ಬಂದವನೇ ಇವನ ಹೆಗಲ ಮೇಲೆ ಧೊಪ್ ಎಂದು ಕೈಯಿಟ್ಟು: “ಅದೇನು ನೋಡುವುದರಲ್ಲಿ ತಲ್ಲೀನನಾಗಿಬಿಟ್ಟೆ,” ಎನ್ನುತ್ತ ನಿಷ್ಕಾರಣವಾಗಿ ಹಹಹ ಎಂದು ನಕ್ಕ. ನಗುವಿನಲ್ಲಿಯ ಪೊಳ್ಳು ನಟನೆ ಸ್ಪಷ್ಟವಾಗಿತ್ತು:

“ನೀನು ಹೋದ ಸಾರೆ ಬಂದಾಗ ಇಲ್ಲಿ ಝೋಪಡಪಟ್ಟಿಗಳಿದ್ದುವು. ಒಬ್ಬೊಬ್ಬರಿಗೆ ಐದೈದು ಸಾವಿರ ಕೊಟ್ಟು ಓಡಿಸಿಬಿಟ್ಟೆವು. ಒಟ್ಟೂ ಐವತ್ತು ಸಾವಿರ ಖರ್ಚು. ಇದೇ ಕೋಓಪರೇಟಿವ್-ಸೊಸೈಟಿಯ ಐದು ಮಜಲೆಯ ಇನ್ನೊಂದು ಕಟ್ಟಡ ಅಲ್ಲಿ ಬರುತ್ತದೆ. ಇನ್ನು ಆರು ತಿಂಗಳಲ್ಲಿ ನೀನಿಲ್ಲಿ ಬಂದರೆ ಈ ಜಾಗದ ಗುರುತೇ ನಿನಗೆ ಸಿಗಲಾರದು. ಮ್ಯಾನೇಜಿಂಗ್ ಕಮಿಟಿಯ ಪ್ರೆಸಿಡೆಂಟ್ ನಾನೇ. ಕಮಿಟಿಯ ಸದಸ್ಯ ಬೋಳೀಮಕ್ಕಳನ್ನು ಪುಸಲಾಯಿಸುವುದರಲ್ಲೇ ಆರು ತಿಂಗಳು ಕಳೆದುಹೋದುವು. ಇಲ್ಲವಾದರೆ ಇಷ್ಟರಲ್ಲೇ ಕಟ್ಟಡ ಇಲ್ಲಿ ಎದ್ದು ನಿಲುತ್ತಿತ್ತು. ಅಂದಹಾಗೆ, ನಿಮ್ಮ ಕಂಪನಿಯವರೇ ಈ ಹೊಸ ಕಟ್ಟಡದಲ್ಲಿ ಮೂರು ದೊಡ್ಡದೊಡ್ಡ ಪ್ಲ್ಯಾಟ್ಸ್ ಬುಕ್ ಮಾಡಿದ್ದಾರೆ. ಅದೆಲ್ಲ ಈಗ ಯಾಕೆ? ಆಮೇಲೆ ಮಾತನಾಡೋಣವಂತೆ. ನಿಮ್ಮ ಕಂಪನಿಗೂ ನನಗೂ ಈಗ ಬ್ಯುಸಿನೆಸ್ ರಿಲೇಶನ್ಸ್ ಕೂಡ. ನಿಮ್ಮ ಬಂದೂಕವಾಲಾ—ಅವನಂತಹ ದೊಡ್ಡ ಜಂಟಲ್ಮನ್ನನನ್ನು ಇನ್ನೊಬ್ಬನನ್ನು ನೋಡಿಲ್ಲ ನೋಡು! ಬಹಳ ದೊಡ್ಡ ಮನಸ್ಸಿನ ಮನುಷ್ಯ.

ಚೊಕ್ಕತನದ ವ್ಯವಹಾರ...ಆಮೇಲೆ ಎಲ್ಲ ಹೇಳುತ್ತೇನೆ. ಮೊದಲು ಕೆಳಗೆ ಹೋಗೋಣ. ಊಟಕ್ಕಿನ್ನೂ ತಡವಿದೆ. ಅಮ್ಮ ಬಂದಿದ್ದಾಳೆ. ಇಲ್ಲವಾದರೆ ಫರ್ಸ್ಟ್‌ಕ್ಲಾಸ್ ಆಗಿ ಬಿಯರ್ ಕುಡಿಯಬಹುದಾಗಿತ್ತು. ನೀನು ಹೋದ ಸರತಿ ಬಂದಾಗ ನಮ್ಮ ಅಡಿಗೆಯ ಅಚ್ಯುತ ಇದ್ದ. ವಿಚಿತ್ರ ಪ್ರಾಣಿ. ಅವನಿದ್ದಷ್ಟು ದಿನ ಮನೆಯಲ್ಲಿ ಕುಡಿಯುವದು ಶಕ್ಯವೇ ಇರಲಿಲ್ಲ. ನಮ್ಮೆಲ್ಲರ ಮೇಲೆ ವಿಚಿತ್ರ ಪ್ರಭಾವ ಬೀರಿದ್ದ ನೋಡು ಅವನು ಇಲ್ಲಿ ಇದ್ದಷ್ಟೂ ತಿಂಗಳು. ಈಗ ಬಿಟ್ಟುಹೋಗಿದ್ದಾನೆ. ಏನಾಯಿತೋ. ನೀನು ಇಲ್ಲಿಂದ ಹೋದಿಯಲ್ಲ, ಅದರ ಮರುದಿನವೇ! ಮುಂಜಾನೆ ನಸುಕಿನಲ್ಲಿ ಎದ್ದವನೇ ಹೊರಟುಹೋಗಿರಬೇಕು. ಎಲ್ಲೂ ಮೂರು ತಿಂಗಳಿಗಿಂತ ಹೆಚ್ಚುಕಾಲ ನಿಂತವನಲ್ಲವಂತೆ. ಹಿಂದುಸ್ತಾನದ ಮೂಲೆ ಮೂಲೆಯಲ್ಲೆಲ್ಲ ಸುತ್ತಾಡಿ ಬಂದಿದ್ದಾನಂತೆ. ನಿನ್ನನ್ನು ತುಂಬ ಹಚ್ಚಿಕೊಂಡಿದ್ದನೆಂದು ತೋರುತ್ತದೆ. ನೀನು ಹೊರಟುಹೋದ ದಿನ ಪದೇ ಪದೇ ನಿನ್ನ ಬಗ್ಗೆ ಕೇಳಿದ್ದೇಕೇಳಿದ್ದು. ಓದುಬರಹ ಬಲ್ಲವನಂತೆ ಕಾಣಲಿಲ್ಲ...ಬಾ ಕೆಳಗೆ ಹೋಗೋಣ, ಅಮ್ಮನಿಗೆ ನಿನ್ನನ್ನು ನೋಡುವ ಕುತೂಹಲ. ಬಿಸಿಬಿಸಿ ಚಹ ಕುಡಿಯೋಣ. ಇವಳು ಉದ್ದಿನ ಆಂಬೊಡೆ ಮಾಡಿದ್ದಾಳೆ. ನನ್ನ ಎಲ್ಲ ಮಕ್ಕಳೂ ಈವತ್ತು ಮನೆಯಲ್ಲೇ ಇದ್ದಾರೆ..."

ಇಷ್ಟೊಂದು ಚೆಂದವಾಗಿ, ಉತ್ಸಾಹದಿಂದ, ತನ್ನ ಬಗೆಗಿನ ಕಳಕಳಿಯಿಂದ ಮಾತನಾಡುವ ವ್ಯಕ್ತಿ ಒಳಗೊಳಗೇ ಬೇರೆಯೇ ಒಂದು, ಈಗ ವ್ಯಕ್ತವಾದ ಭಾವನೆಗಳಿಗೆ ವ್ಯತಿರಿಕ್ತವಾದ, ಕ್ರಿಯೆಗಾಗಿ ಹೊಂಚು ಹಾಕುತ್ತಿರುವದು ಶಕ್ಯವಿದೆಯೇ? ನಾಗಪ್ಪ ಯಾವುದೇ ಒಂದರಿ ನಿಲುಗಡೆಗೆ ಬರುವ ಸ್ಥಿತಿಯಲ್ಲಿ ಇದ್ದಂತಿರಲಿಲ್ಲ: ಮನಸ್ಸು ಅದಾಗಲೇ ಅಚ್ಯುತನನ್ನು ಕುರಿತು ಧೇನಿಸುತ್ತಿತ್ತು. ಮೊದಲೊಮ್ಮೆ ಬಂದ ಸಂಶಯ ತಿರುಗಿ ಗಟ್ಟಿಯಾಗಹತ್ತಿತ್ತು. ಶ್ರೀನಿವಾಸನಿಗೆ ಏನೋ ಕೇಳಲು ಹೊರಟು ಬೇಡವೆಂದು ತೋರಿ ಸುಮ್ಮನಾದ. ಮರುಗಳಿಗೆ ತಾನು ಪದ್ದಕ್ಕನನ್ನು ಕಾಣಲು ಉತ್ಸುಕನಾದವನ ಹಾಗೆ—"ಬಾ, ಅಮ್ಮನನ್ನು ನೋಡುವಾ" ಎಂದ. "ಸೆಖಿಯಾಗುವದಿಲ್ಲವೆ? ಬುಶ್‌ಕೋಟು ತೆಗೆ. ಬೇಕಾದರೆ ಕುರ್ತಾ ಇದೆ," ಎಂದು ಶ್ರೀನಿವಾಸ ಸೂಚಿಸಿದಾಗ, "ಬೇಡ, ಚೇತನಾಗೆ ಈ ಬುಶ್‌ಶರ್ಟಿನಲ್ಲಿ ಬಹಳ ಚಂದ ಕಂಡೆನಂತೆ." ಎಂದು ನಕ್ಕ. ಇಬ್ಬರೂ ಕೋಣೆ ಬಿಟ್ಟು ಹಾಲಿಗೆ ಬಂದರು.

ನಾಗಪ್ಪನ ಹಾದಿಯನ್ನೇ ಕಾಯುತ್ತಿದ್ದ ಚೇತನಾ ಕಿರಣರಿಬ್ಬರೂ- "ಕಾಕಾ ಕಾಕಾ, ಹಿತ್ತಿಲಿಗೆ ಹೋಗೋಣವೇ? ನೋಡಿನಮ್ಮ ಗುಲಾಬಿ ಗಿಡದಲ್ಲಿ-" ಎನ್ನುತ್ತಿರುವಾಗ ಶ್ರೀನಿವಾಸ ಅವರ ಉತ್ಸಾಹಕ್ಕೆ ತಡೆ ಹಾಕಿದ: "ಕಾಕಾ ಮೊದಲು ಚಹ ಕುಡಿಯಲಿ, ಆಮೇಲೆ ನೋಡೋಣ." ಎಂದ. ಹಿರಿಯ ಹುಡುಗಿ ಅಡುಗೆಮನೆಯಲ್ಲಿ ತಾಯಿಗೆ ನೆರವು ಕೊಡುತ್ತಿರಬೇಕು. ಆದರೆ ಪದ್ದಕ್ಕನೆಲ್ಲಿ? ಅವಳನ್ನು ಕಾಣುವ ಉತ್ಸಾಹದ ಜಾಗದಲ್ಲೀಗ ಒಂದು ಬಗೆಯ ಕಾತರ ಮೆಲ್ಲನೆ ನೆಲಸಹತ್ತಿತ್ತು. ಚಹದ ಮಾತು ತೆಗೆಯುತ್ತಲೇ ಮಕ್ಕಳಿಬ್ಬರೂ ಅಡುಗೆಯ ಮನೆಯತ್ತ ಓಡಿದ್ದರು. ಮೊದಲೇ ತಾಲೀಮು ಮಾಡಿದ ನಾಟಕದ ದೃಶ್ಯದ ಹಾಗೆ. ಶ್ರೀನಿವಾಸ "ಕೂಡ್ರು." ಎನ್ನುತ್ತ ಸೋಫಾ ತೋರಿಸಿದ. ನಾಗಪ್ಪ ಕೂತುಕೊಂಡ ಕೂಡಲೇ ಅವನ ಕೈಗೆ ಕೆಲವು ಮೆಗೆಝಿನ್‌ಗಳನ್ನು ಕೊಡುತ್ತ, "ಓದು. ಚಹ ಬರುವಷ್ಟರಲ್ಲಿ ದೇವರ ತಲೆಗೆ ನಾಲ್ಕು ಹೂವುಗಳನ್ನೇರಿಸಿ ಬರುತ್ತೇನೆಂದು ಹೇಳಿ ಅವನೂ ಒಳಗೆ ಹೋದ. ಹಾಲಿನಲ್ಲಿ ನಾಗಪ್ಪನೊಬ್ಬನೇ. ತಲೆಯ ಮೇಲಿನ ಪಂಖ ತುಂಬು ವೇಗದಲ್ಲಿತ್ತು. ಎದ್ದು ಇನ್ನೊಂದು ಸೋಫಾಕ್ಕೆ ನಡೆದ.

ಆಧಿಕ ರೀತಿಯಲ್ಲಿ ಸಜ್ಜುಗೊಳಿಸಿದ ಆ ದಿವಾಣಖಾನೆಯ ಸುತ್ತಲೂ ಕಣ್ಣುಹಾಯಿಸುವಾಗ ಇದೇಕೆ ಮನಸ್ಸು ತಲ್ಲಣಗೊಳ್ಳುತ್ತಿದೆ ಎನ್ನುವದು ತಿಳಿಯದೇ ಕಳವಳಪಟ್ಟ. ವಿಶೇಷ ಎಚ್ಚರವಲ್ಲದೇನೆ ಶ್ರೀನಿವಾಸ ಕೊಟ್ಟು ಹೋದ ಪತ್ರಿಕೆಗಳೊಳಗಿಂದ ಒಂದನ್ನು ಕೈಗೆತ್ತಿಕೊಂಡು ಪುಟ ತಿರುವಹತ್ತಿದ. ಅದು ಯಾವ ಭಾಷೆಯದು ಎಂಬುದು ಲಕ್ಷ್ಯಕ್ಕೆ ಬರುವ ಮೊದಲೇ ತನ್ನ ಬೆನ್ನ ಹಿಂದಿನ ಕೋಣೆಯೊಂದರ ಕದ ತೆರೆದ ಸದ್ದು ಕೇಳಿಸಿ, ಆಗಿನಿಂದಲೂ ಅತ್ತ ನೋಡದೆಯೂ ಕೂಡ ಆ ಕದ ತೆರೆಯುವದನ್ನೇ ತಾನು ಕಾಯುತ್ತಿದ್ದೆ ಎಂಬಂತಹ ಭಾವನೆಯಿಂದ ಹಿಂತಿರುಗಿ ನೋಡಿದ: "ಯಾರು, ನಾಗಪ್ಪನೇನೋ?" ಎಂದು ದನಿ ಹುಟ್ಟಿಸಿದ ಆಕೃತಿ ಕಣ್ಣ ಮುಂದೆ ಮೂಡಿ ಅರಿವನ್ನು ತಟ್ಟಿದ್ದೇ ತಡ, ಧಡಕ್ಕನೆ ಎದ್ದುನಿಂತ. ಮೈಮೇಲೆ ಮುಳ್ಳುನಿಂತು, ನಿಂತಲ್ಲೇ ಸಣ್ಣಗೆ ನಡುಗಿದ. "ಪದ್ದಕ್ಕನಲ್ಲವೆ?" ಎಂದು ಕೇಳಬೇಕೆಂದರೆ ಬಾಯಿಂದ ದನಿಯೇ ಹೊರಡದಾಯಿತು. ಬಾಗಿಲ ಪರದೆ ಸರಿಸಿ ಹೊರಗೆ ಬಂದದ್ದು ಮನುಷ್ಯಾಕೃತಿಯೇ? ಎಂಬುದನ್ನು ಕೂಡ ನಂಬಲಾಗದವನ ಹಾಗೆ ಕಣ್ಣರಳಿಸಿ ನಿಂತ: ಈ ವರೆಗೂ ಅನುಭವಕ್ಕೆ ಬಂದಿರದ; ವಿಕಾಸವಾದದ ವಿದ್ಯಾರ್ಥಿಯಾಗಿಯೂ ಈ ವರಗೊ ಓದಿ ಕೂಡ ಗೊತ್ತಿರದ ಒಂದು ವಿಚಿತ್ರ ಪ್ರಾಣಿ

ಧುತ್ ಎಂದು ಕಣ್ಣಮುಂದೆ ನಿಂತುಬಿಟ್ಟಿದೆ. ಎಂಬಂತಹ ಅನ್ನಿಸಿಕೆಗೆ ನಾಗಪ್ಪ ಹೆದರಲಿಲ್ಲ. ಹೆದರಿದ್ದು-ಈ ಬಗೆಯಾಗಿ ತೋರುವ ಈ ಆಕೃತಿ ಪದ್ದಕ್ಕನೇ ಎಂದು ಖಾತರಿಯಾದದ್ದಕ್ಕೆ: ಕೆಂಪುಸೀರೆ ಸುತ್ತಿಕೊಂಡ ದೇಹ ಮುದುಡಿ ಮುದ್ದೆಯಾಗಿ ಎರಡು ಕೈಗಳಂತಹ, ಎರಡು ಕಾಲುಗಳಂತಹ ಅವಯವಗಳು ಸೀರೆಯಿಂದ ಹೊರಗೆ ಚಾಚಿದ ಕಾರಣದಿಂದಲೇ ಇದು ಮನುಷ್ಯದೇಹವಿರಬಹುದೆಂಬ ಸಂದೇಹ ಹುಟ್ಟಿಸುವಂತಿತ್ತು. ತಲೆಯಿರುವ ಜಾಗದಲ್ಲಿಯ ಬೋಳುಬೋಳಾದ ಗೋಲಾಕೃತಿಯನ್ನು ಸೀರೆಯ ಸೆರಗು ಸಂಪೂರ್ಣವಾಗಿ ಮುಚ್ಚಿತ್ತು. ಮುಂದಿನ ತೆರವಿದ್ದ ಜಾಗದಲ್ಲಿ ಒಂದು ಹೆಣ್ಣಿನ ಮೂಗು ಆಗಿರಬಹುದಾದ, ಕಣ್ಣುಗಳಾಗಿರಬಹುದಾದ ಅವಯವಗಳ ಅವಶೇಷಗಳಂತಹ ಕುರುಹುಗಳು. ಬಾಯಿಯಂತಹ ದೊಡ್ಡ ತೂತಿನಲ್ಲಿ ಹಲ್ಲುಗಳಂತೆ ತೋರುವ ನಾಲ್ಕೈದು ಕಪ್ಪುಗಟ್ಟಿದ ತುಂಡುಗಳು. ಆ ವಿಚಿತ್ರ ತೂತಿನೊಳಗಿಂದಲೇ ಮತ್ತೆ ಸದ್ದು ಹೊರಟಿತು; "ನನ್ನ ಗುರುತು ಹತ್ತಿತೇನೋ. ಕೂತುಕೋ. ಶ್ರೀನಿವಾಸನಿಗೆ ನಾನೇ ಹೇಳಿದೆ—ನಿನ್ನನ್ನು ಕರೆಸು, ನೋಡದೇ ಎಷ್ಟು ವರ್ಷಗಳಾದವೂss ಎಂದು."

ನಾಗಪ್ಪ ಕೂತುಕೊಂಡ-ನಿಂತುಕೊಂಡಿರುವದು ಶಕ್ಯವೇ ಇರಲಿಲ್ಲವಾದ್ದರಿಂದ! ಮನುಷ್ಯನ ಸಹಜ ಸಂವೇದನೆಯ ಆಚೆ ಉಳಿದೂ ತೀರ ಸ್ಪಷ್ಟವಾಗಿ ದೃಷ್ಟಿಗೋಚರವಾದ ಈ ಭೀಭತ್ಸ ವಾಸ್ತವತೆಯಿಂದ ಅರ್ಜುನ್‌ರಾವರ ಮನೆಯಲ್ಲಿ ನಾಸ್ತಾ ಮಾಡಿದ್ದೆಲ್ಲ ಹೊರಗೆ ಬರುವ ಭಯ: ಕಣ್ಣೆದಿರಿನ-ಕೈಕಾಲುಗಳಿದ್ದ ಕೆಂಪುಮುದ್ದೆ ಮೆಲ್ಲಗೆ. ಅವನ ಇದಿರಿಗೇ, ನೆಲಕ್ಕೆ ಹಾಸಿದ ರತ್ನಗಂಬಳಿಯ ಮೂಲೆಯೊಂದರಲ್ಲಿ ಕುಸಿಯಿತು. ಎವೆ ಪಟಪಟಿಸುವ ಕಣ್ಣುಗಳಿಂದ-ಅಥವಾ ಹಾಗೇ ತೋರುವ ಇಂದ್ರಿಯಗಳಿಂದ ಅವನನ್ನು ಪಿಳಿಪಿಳಿ ನೋಡುತ್ತ ಕುಳಿತಿತ್ತು. ಬೊಚ್ಚಬಾಯಲ್ಲಿ ಉಳಿದುಕೊಂಡ ಹಲ್ಲುಗಳು ತುಟಿಗಳಲ್ಲಿ ಊರಿ ಅಸಹ್ಯವಾಗಿ ಕಂಡವು. "ನಮ್ಮ ಶ್ರೀನಿವಾಸಾss ಆರಮನೆಯಂಥಾss ಮನೆ ಕಟ್ಟಿಸಿದ್ದಾನೇ ಎಂದು ಗೋಕರ್ಣದಲ್ಲೆಲ್ಲಾ ಸುದ್ದಿ. ಸಾಯುವ ಮೊದಲೂss ನೋಡಿ ಹೋಗೋಣಾ ಅಂತ ಬಂದೆ." ಹಲ್ಲಿಲ್ಲದ ಬಾಯಿಂದ ಬೊಚ ಬೊಚ ಎನ್ನುತ್ತ ಹೊರಟ ಈ ಶಬ್ದ ನಾಗಪ್ಪನ ಮೇಲೆ ವಿಚಿತ್ರ ಪರಿಣಾಮ ಮಾಡುತ್ತಿದ್ದವು...

ತಮ್ಮಿಬ್ಬರನ್ನೇ ಹೀಗೆ ಒಂದೆಡೆಯಲ್ಲಿ ಬಿಟ್ಟು ಹೋದದ್ದು ಆಕಸ್ಮಿಕವೊ ಅಥವಾ ಮೊದಲೇ ಯೋಜಿಸಿಕೊಂಡ ಹಿಕಮತ್ತೋ ಎಂದಕೊಳ್ಳುವಷ್ಟರಲ್ಲಿ ಶ್ರೀನಿವಾಸನ ಹುಡುಗಿಯರಿಬ್ಬರೂ ಚಹದ ಸರಂಜಾಮನ್ನು ಅಲ್ಲಿ ತಂದು ಡೈನಿಂಗ್ ಟೇಬಲ್ ಮೇಲೆ ವ್ಯವಸ್ಥಿತವಾಗಿ ಇಡಹತ್ತಿದರು. “ಕಾಕಾ. ಅಂಬೋಡೆ ಬಿಸಿಬಿಸಿ ಇದ್ದಾಗಲೇ ತಿನ್ನುವಿರಂತೆ. ಬನ್ನಿ. ಅಪ್ಪ ಈಗ ಬರುತ್ತಾರೆ”-ಹಿರಿಯ ಹುಡುಗಿ ಆಶಾ ತನ್ನೊಡನೆ ಮಾತನಾಡಿದ್ದು ಇದೇ ಮೊದಲಾಗಿತ್ತು. ಬಹಳ ಸಿಹಿಯಾದ ಕಂಠ. ಮಾತನಾಡುವಾಗ ನಗುವ ಮೋಡಿ, ಕಣ್ಣುಗಳಲ್ಲಿ ಮೂಡುವ ಹೊಳಪು, ಈ ಎಲ್ಲದಕ್ಕೂ ಕಳೆ ತರುವ ಮುತ್ತಿನಂತಹ ಹಲ್ಲುಗಳ ಸಾಲು-ಇವುಗಳಲ್ಲಿ ಆಶಾ ಚೇತನಾಳನ್ನೇ ಹೋಲುತ್ತಿದ್ದಳು. ಆದರೆ ಅದೇ ವಯಸ್ಸಿಗೆ ಬರುತ್ತಿದ್ದ ಹುಡುಗಿ ತನ್ನ ಮೋಹಕತೆಯ ಬಗ್ಗೆ ತನಗೇ ಇದ್ದ ಅರಿವಿನಿಂದಾಗಿ ಚೇತನಾಳಿಗಿಂತ ಹೆಚ್ಚು ಆಕರ್ಷಕಳಾಗಿದ್ದಳು. ಚೇತನಾ ಕೂಡ ತನ್ನ ಅಕ್ಕನ ಕೋರಿಕೆಗೆ ದನಿಗೂಡಿಸಿದಳು. ಮುದುಕಿಯೂ ಹಿಂದೆ ಬೀಳಲಿಲ್ಲ: “ಹೋಗು ಹೋಗು. ಶ್ರೀನಿವಾಸಾ ದೇವರ ಕೋಣೆಯಲ್ಲಿರಬೇಕು. ಇದೀಗ ಬರುವುದಾಯಿತು...”

ನಾಗಪ್ಪ ಎದ್ದು ಟೇಬಲ್ಲಿಗೆ ನಡೆದ. ಚೇತನಾ ತೋರಿಸಿದ ಕುರ್ಚಿಯಲ್ಲಿ ಕೂತರೆ ಮುದುಕಿ ಕಣ್ಣಿಗೆ ಬೀಳದಿರುವದು ಅಸಾಧ್ಯವಾಗಿತ್ತು. ಆದರೆ ಬೇರೆಡೆಯಲ್ಲಿ ಕೂಡ್ರೋಣವೆಂದರೆ ಒಂದು ಕುರ್ಚಿಯ ಹತ್ತಿರ ಚೇತನಾ, ಇನ್ನೊಂದರ ಹತ್ತಿರ ಆಶಾ ನಿಂತಿದ್ದರು. ನಿರುಪಾಯನಾಗಿಯೇ ನಾಗಪ್ಪ ತನಗೆ ತೋರಿಸಿದ ಕುರ್ಚಿಯಲ್ಲೇ ಆಸನಾರೂಢನಾದ. ಮುದುಕಿಯ ಕಣ್ಣುಗಳು ಇನ್ನೂ ತನ್ನ ಮೇಲೇ ಊರಿದ್ದು ಲಕ್ಷ್ಯಕ್ಕೆ ಬಂದಾಗ ಅಂಬೋಡೆಗೆ ಕೈಹಚ್ಚುವದೇ ದುಸ್ತರವಾಯಿತು. ಪುಣ್ಯಕ್ಕೆ, ಅಷ್ಟು ಹೊತ್ತಿಗೆ ಶ್ರೀನಿವಾಸ ಬಂದ. ಇದಿರಿನ ಕುರ್ಚಿಯಲ್ಲಿ ಕೂತದ್ದರಿಂದ ತುಸು ನಿರಂಬಳವೆನಿಸಿತು: ಕೆಲವು ಕ್ಷಣಗಳ ಮಟ್ಟಿಗಾದರೂ ಶ್ರೀನಿವಾಸ ಮುದುಕಿಯ ದೃಷ್ಟಿಗೆ ಅಡ್ಡ ಬಂದಿದ್ದ! ಅಂಬೋಡೆ ತಿನ್ನುವಾಗ, ಅವುಗಳ-ರುಚಿಯನ್ನು ತನ್ನ ಕಡೆಗೆ ತುಂಬ ಸಲುಗೆಯಿಂದ ನೋಡುತ್ತ ನಿಂತ ಹುಡುಗಿಯರಿಬ್ಬರ ಮುಂದೆ ಪ್ರಶಂಸಿಸುವಾಗ, ಚಹ ಕುಡಿಯುವಾಗ ಮನಸ್ಸು ಮಾತ್ರ ಕೆಲವೇ ಕಾಲದ ಮೊದಲು ಅನುಭವಿಸಿದ್ದನ್ನೇ ಮೆಲುಕು ಹಾಕುವುದರಲ್ಲಿ ಮಗ್ನವಾಗಿತ್ತು.

“ಅಮ್ಮನನ್ನು ನೀನು ನೋಡದೇ, ಈಗ, ಎಷ್ಟು ಕಾಲವಾಯಿತೋ!” ಶ್ರೀನಿವಾಸ ಮಾತಿಗೆ ಆರಂಭಿಸಿದ್ದ. ಹಾಲಿನಲ್ಲಿಯ ಫ್ಯಾನು ತೀವ್ರಗತಿಯಲ್ಲಿ

ತಿರುಗುವಾಗ ಬೇಡವಾದದ್ದನ್ನೇ ತಿರುತಿರುಗಿ ನೆನಪಿಗೆ ತರುವ ಹಾಗೆ ಸದ್ದಾಮಾಡುತ್ತಿತ್ತು. ಗರಾಜಿನಲ್ಲಿ ಕಬ್ಬಿಣದ ತುಂಡಿನ ಮೇಲೆ ಬೀಳುತ್ತಿದ್ದ ಸುತ್ತಿಗೆಯ ಪೆಟ್ಟೂ ಬೇಸರಕ್ಕೇ ಪುಟ ಕೊಡುತ್ತಿತ್ತು. ಸುತ್ತಲಕೇರಿಯ ಚಟುವಟಿಕೆಯ ಸದ್ದು ಸಮುದ್ರದ ನೀರಿನ ಸದ್ದನ್ನು ಸಂಪೂರ್ಣವಾಗಿ ಅಡಗಿಸಿತ್ತು. ಚಹದ ಬಿಸಿಗೋ ಅಂಬೋಡೆಯ ಜತೆಗಿರಿಸಿದ ಚಟ್ನಿಯ ಖಾರಕ್ಕೋ ಬನಿಯನ್ನಿನ ಕೆಳಗೆ ಬೆವರೊಡೆಯುತ್ತಿದ್ದ ಭಾಸ. ಕುತ್ತಿಗೆಯ ಮೇಲೆ ಕೂಡ. ತನಗೆ ಆಗ ಡ್ರೆಸ್ಸು ಬದಲಿಸುವಾಗ ಕೊಟ್ಟ ನ್ಯಾಪ್ಕಿನ್ನಿನಿಂದ ಕುತ್ತಿಗೆಯ ಮೇಲಿನ ಬೆವರೊರಸಿಕೊಳ್ಳುತ್ತಿದ್ದಾಗ-"ಕಾಕಾ, ಸೆಖೆಯಾಗುತ್ತಿದ್ದರೆ ಬುಶ್ ಕೋಟ್ ಯಾಕೆ ತೆಗೆಯುವದಿಲ್ಲ? ನಮ್ಮ ಅಕ್ಕ ಆಗ ನಿಮ್ಮ ಹರವಾದ ಛಾತಿಯ ತಾರೀಫು ಮಾಡುತ್ತಿದ್ದಳು," ಎಂದಳು ಚೇತನಾ. ಆಶಾ ಸಿಟ್ಟು ನಟಿಸುತ್ತ ಚೇತನಾಳ ಕಿವಿ ಹಿಂಡಿದಳು. ನಾಗಪ್ಪ, ಮನಸ್ಸಿನ ತೋಲವನ್ನು ಕಳೆದುಕೊಳ್ಳದೇ-"ಹೌದೆ? ಆದರೆ ನಿನಗೆ ನಾನು ಈ ಬುಶ್‌ಕೋಟು ಹಾಕಿಕೊಂಡದ್ದು ಸೇರುತ್ತದೆಯೆಂದು ತೊಟ್ಟೇ ಕುಳಿತಿದ್ದೇನೆ." ಎಂದ. ಶ್ರೀನಿವಾಸ ನಡುವೆಯೇ ಬಾಯಿ ಹಾಕಿದ: ಮೇಲಾಗಿ ಕಾಕಾನಿಗೆ ಛಾತಿ ತೆರೆದು ಫ್ಯಾನಿನ ಕೆಳಗೆ ಕೂತರೆ ಆರೋಗ್ಯಕ್ಕೆ ಸರಿಯಲ್ಲವೆಂದು ಡಾಕ್ಟರರೇ ಹೇಳಿದ್ದಾರಂತೆ." ಹಿಂದೆ ಒಂದು ಸಂದರ್ಭದಲ್ಲಿ ತಾನು ಕೊಟ್ಟ ವಿವರಣೆಯನ್ನು ಶ್ರೀನಿವಾಸ ಈಗ ಪುನರುಚ್ಚರಿ ಸಿದ್ದರ ಉದ್ದೇಶ ನಾಗಪ್ಪನಿಗೆ ತಿಳಿಯಲಿಲ್ಲ. ಟೇಬಲ್ಲಿನಿಂದ ಏಳುವಾಗ ಮನಸ್ಸು ಒಂದನೇ ಕುರಿತು ಪ್ರಾರ್ಥಿಸುತ್ತಿತ್ತು: ಪದ್ದಕ್ಕನ ಮುದ್ದೆಯ ಮುಂದೆ ಕೂಡ್ರುವ ಪ್ರಸಂಗ ಮಾತ್ರ ಮತ್ತೆ ಬರದಿರಲಿ! ಅದಾಗ ಶ್ರೀನಿವಾಸ ಅಂದ: "ಮಕ್ಕಳಿಬ್ಬರೂ ನಿನ್ನ ಕೂಡ ರಮ್ಮಿ ಆಡುವ ಪ್ಲ್ಯಾನ್‌ಮಾಡಿ ಕುಳಿತ್ತಿದ್ದಾರೆ. ಊಟವಾದ ಮೇಲೆ ಆಡೋಣ. ಈಗ ಅಮ್ಮನೊಡನೆ ಮಾತನಾಡು. ಅಮ್ಮನಿಗೆ ನಿನ್ನೆಯಿಂದಲೂ ನಿನ್ನದೇ ಧ್ಯಾನ. ಬಾ. ನಿನ್ನ ಸಾಹಿತ್ಯಕ್ಕೂ ಸಾಮಗ್ರಿ ದೊರಕೀತು. ಅಮ್ಮನ ನೆನಪಿನಲ್ಲಿ ಏನೆಲ್ಲ ಎಷ್ಟೆಲ್ಲ ಭದ್ರವಾಗಿ ಕುಳಿತುಬಿಟ್ಟಿದೆ."

ಹುಡುಗಿಯರಿಬ್ಬರಿಗೂ ನಿರಾಸೆಯಾಯಿತು. ಆದರೂ ಅದನ್ನು ತೋರಗೊಡದೆ ಖಾಲಿಯಾದ ಕಪ್ಪು-ಬಶಿಗಳನ್ನು, ಪ್ಲೇಟುಗಳನ್ನು ಒಳಗೆ ಒಯ್ಯಹತ್ತಿದರು. ಶ್ರೀನಿವಾಸನ ಹೆಂಡತಿ ಒಮ್ಮೆ ಬಾಗಿಲಲ್ಲಿ ಕಾಣಿಸಿಕೊಂಡು— "ಕಿರಣನೆಲ್ಲಿ? ಇನ್ನೂ ಸ್ನಾನ ಮುಗಿಯಲಿಲ್ಲವೆ?" ಎಂದು ಕೇಳಿದವಳು ಹೆಚ್ಚು

ಹೊತ್ತು ಅಲ್ಲಿ ನಿಲ್ಲದೇ ತಿರುಗಿ ಅಡುಗೆಯ ಮನೆಯ ಕಡೆಗೆ ನಡೆದಳು. ಕಿರಣನೊಂದು ನೆಪವಾಗಿದ್ದ: ಅವಳು ಬಂದದ್ದು ತನ್ನನ್ನು ನೋಡಿ ಹೋಗಲೆಂದೇ ಎಂದನ್ನಿಸಿತು ನಾಗಪ್ಪನಿಗೆ. ಕುರ್ಚಿಯಿಂದ ಏಳುವಾಗ, ಅವಳ ಕಣ್ಣುಗಳಲ್ಲಿ ಕಂಡಂತೆ ಭಾಸವಾದ ಆತಂಕದಿಂದ ಅಸ್ವಸ್ಥನಾದ. ಶ್ರೀನಿವಾಸ ನೇರವಾಗಿ ಸೋಫಾದ ಕಡೆಗೇ ಹೋಗಹತ್ತಿದ. ಪದ್ದಕ್ಕನಿಗೆ ತೀರ ಹತ್ತಿರವಾದ ಸೋಫಾದ ಕಡೆಗೆ ಬೆರಳು ಮಾಡಿ- "ಕೂಡ್ರು. ಅಮ್ಮನ ದೃಷ್ಟಿ ಇನ್ನೂ ಸ್ವಚ್ಛವಾಗಿದೆ ನೋಡು. ಆದರೆ ಕಿವಿ ಸ್ವಲ್ಪ ದೂರ...ಅಮ್ಮಾ, ನಾಗಪ್ಪನ ಹತ್ತಿರ ಮಾತನಾಡುವದು ಬಹಳವಿದೆ ಎಂದಿದ್ದೆಯಲ್ಲ. ನೋಡು, ಬಂದಿದ್ದಾನೆ. ನೀವಿಬ್ಬರೂ ಮಾತನಾಡಿಕೊಳ್ಳಿ. ನಾನು ಈ ಲೆಕ್ಕಪತ್ರಗಳನ್ನಷ್ಟು ನೋಡಿ ಮುಗಿಸುತ್ತೇನೆ." ಎಂದು ಮೊದಲೇ ತಂದಿರಿಸಿದಂತಿದ್ದ ಫೈಲುಗಳನ್ನು ತೊಡೆಗಳ ಮೇಲಿರಿಸಿ ಪರಿಶೀಲಿಸಹತ್ತಿದ.

ನಾಗಪ್ಪನಿಗೆ ಸಂಶಯ ಉಳಿಯಲಿಲ್ಲ; ಈ ಮುಖಾಮುಖಿ ತೋರುವಷ್ಟು ಸರಳವಾದದ್ದಲ್ಲ. ಪದ್ದಕ್ಕ ತಾನಾಗಿಯೇ ಮುಂಬಯಿಗೆ ಬಂದದ್ದು ಸುಳ್ಳು. ಪೂರ್ವನಿಶ್ಚಿತ ಉದ್ದೇಶದಿಂದಲೇ ಅವಳನ್ನು ಕರೆಯಿಸಿರಬೇಕು. ತಾನು ಇಷ್ಟು ದಿನ ಪರಾರಿಯಾದ ತನ್ನ ಭೂತಕಾಲ ಈಗ ಇವಳ ಮುಖಾಂತರ-ಇಂದೋ ನಾಳೆಯೋ ಸಾಯಲು ಹೊರಟ ಈ ಮುದಿ ಮುದ್ದೆಯ ಮುಖಾಂತರ-ತನಗೆ ಇದಿರಾಗಲಿದೆ! ಸಾಯಲು ಹೊರಟವಳಲ್ಲಿಯೂ ಕೊಲ್ಲುವ ಛಲದ ಪ್ರವೃತ್ತಿ ಇನ್ನೂ ಜೀವಂತವಾಗಿರಬಹುದೆಂಬ ಗುಮಾನಿಯಿಂದ ದಿಗ್ಭ್ರಮೆಗೊಂಡ.

## ಅಧ್ಯಾಯ ಆರು

ನಾಗಪ್ಪ ಎಲ್ಲದಕ್ಕೂ ಸಿದ್ಧನಾಗಿ ಕೂತಂತೆ ಕೂತಿದ್ದ. ಹಾಲಿನಲ್ಲಿ ತುಸು ಹೊತ್ತು ಯಾರೂ ಮಾತನಾಡಲೆಲ್ಲ. ಶ್ರೀನಿವಾಸ ತಾನು ಕೈಯಲ್ಲಿ ಹಿಡಿದದ್ದು ಅತ್ಯಂತ ತರಾತುರಿಯ ಕೆಲಸವೆಂಬಂತೆ ಅದರಲ್ಲಿ ಕೂಡಲೆ ಸಂಪೂರ್ಣವಾಗಿ ಮಗ್ನನಾದಂತೆ ತೋರಿಸಿಕೊಂಡ. ಮುದುಕಿ ಕೂಡ ಮಾತನಾಡದೇ ತದೇಕಚಿತ್ತದಿಂದ ನಾಗಪ್ಪನನ್ನೇ ನೋಡುತ್ತಿತ್ತು: ಅದು ನೋಡುವ ರೀತಿಗೆ, ತನ್ನನ್ನು ನೋಡುತ್ತಿದ್ದದ್ದು ಇನ್ನೊಂದು ಮನುಷ್ಯ-ವ್ಯಕ್ತಿ ಎಂಬ ಭಾವನೆಯನ್ನು ಹುಟ್ಟಿಸಿಕೊಳ್ಳುವದು ಎಷ್ಟೊಂದು ಪ್ರಯತ್ನಪಟ್ಟರೂ ನಾಗಪ್ಪನಿಗೆ ಸಾಧ್ಯವಾಗಲಿಲ್ಲ. ಆ ಭಾವನೆ ಸಾಧ್ಯವಾಗದೇ ಇದ್ದುದಕ್ಕೋ ಏನೋ ತನ್ನ ಪ್ರಜ್ಞೆಗೆ ಸುಲಭವಾಗಿ ಗ್ರಹಿಸಲಾಗದ ಒಂದು ನೋಟ ತನ್ನ ಆಂತರ್ಯವನ್ನು ಹೊಕ್ಕು ಬೇರುಗಳವರೆಗೂ ತನ್ನನ್ನು ವೀಕ್ಷಿಸುತ್ತಿದೆ ಎಂಬಂತಹ ವಿಲಕ್ಷಣ ಅನುಭವವಾಗಿ ಕೈಗಳೆರಡನ್ನೂ ಎದೆಯ ಸುತ್ತ—ಗಟ್ಟಿಯಾಗಿ ಬಳಸಿ ಹಿಡಿಯುವಂತೆ—ಸುತ್ತಿಕೊಂಡಾಗ: “ಚಳಿಯಾಗುತ್ತಿದ್ದರೆ ಆ ಪಂಖಾss ಏಕೆ ಬಂದುಮಾಡುವದಿಲ್ಲ?” ಎಂದು ಮುದುಕಿಯ ಕಡೆಯಿಂದ ಬಂದ ಮಾತಿಗೆ ನಾಗಪ್ಪ ಅಕ್ಷರಶಃ ಸೋಫಾದಲ್ಲಿ ಜಿಗಿದು ಬಿದ್ದ. ಶ್ರೀನಿವಾಸ ಕೂಡಲೇ ತನ್ನ ಫೈಲುಗಳೊಳಗಿಂದ ಲಕ್ಷ್ಯ ಹೊರಗೆ ತೆಗೆದವನ ಹಾಗೆ—“ಅರೆ! ನನ್ನ ಲಕ್ಷ್ಯಕ್ಕೇ ಬರಲಿಲ್ಲವಲ್ಲ. ಸಮುದ್ರದಂಡೆಯ ಮೇಲಿನ ಮನೆಯಾದರೂ ಬೆಳಗಿನ ಹೊತ್ತಿಗೆ ಇಲ್ಲಿ ಗಾಳಿಯೇ ಇಲ್ಲ ನೋಡು. ಆದರೆ ನಿನಗೆ ಪಂಖದಗಾಳಿ ಆಗುವದಿಲ್ಲ ಎನ್ನುವದು ಮರೆತೇ ಹೋಯಿತು.” ಎಂದು ಎದ್ದು ಪಂಖದ ವೇಗವನ್ನು ಕಡಿಮೆಮಾಡಿ ಬಂದವನೇ ತಿರುಗಿ ತನ್ನ ಕೆಲಸದಲ್ಲಿ ತಲ್ಲೀನನಾದ.

ನಾಗಪ್ಪನೇ ಸಹಿಸಲಸಾಧ್ಯವಾದ ಮೌನ ಮುರಿಯಲು ನಿಶ್ಚಯಿಸಿದ:

“ಪದ್ದಕ್ಕನಿಗೀಗ ಎಷ್ಟು ವಯಸ್ಸು? ೭೦ ದಾಟಿರಬೇಕು, ಅಲ್ಲವೇ?” ಎಂದು ಕೇಳಿದ ತನ್ನ ದನಿಯಲ್ಲಿ ನಡುಕವಿದ್ದದ್ದು ಲಕ್ಷ್ಯಕ್ಕೆ ಬಂದು ಮುಜಗರವಾಯಿತು. ಆ ಒಂದು ಪ್ರಶ್ನೆಯ ಹಾದಿಯನ್ನೇ ಕಾಯುತ್ತಿದ್ದವಳ ಹಾಗೆ ಮುದುಕಿ ಬಾಯಿ ತೆರೆದದ್ದೇ ತಡ, ಮಾತು ಬೊಚಬೊಚ ಸದ್ದುಮಾಡುತ್ತ

ಹೊರಡಹತ್ತಿತ್ತು: ನಾಗಪ್ಪ ಬಿಸಿಲೇರಿದ ಹಾಗೆ ಹೆಚ್ಚಾಗಹತ್ತಿದ ಸೆಖೆಯಲ್ಲಿ ಕೂಡ ಚಳಿ ಹತ್ತಿದವರ ಹಾಗೆ ನಡುಗುತ್ತ ಕೇಳಹತ್ತಿದ:

"ಎಪ್ಪತ್ತರ ವಯಸ್ಸಿನವಳ ಹಾಗೆ ಕಾಣುತ್ತೇನೆಯೆ? ಚೇಷ್ಟೆ ಮಾಡುತ್ತೀಯಾ?" ಎನ್ನುತ್ತಿರುವಾಗ ಶ್ರೀನಿವಾಸ—"ಅಮ್ಮನಿಗೀಗ ತೊಂಭತ್ತರ ಸಮೀಪ," ಎಂದ: ಬೋಳೀಮುಗನ ಕಿವಿ ಇತ್ತವೇ ಇದ್ದೂ ಓದುವ ನಟನೆ ಮಾಡುತ್ತಿರಬೇಕು!

"ಇನ್ನು ೬ ತಿಂಗಳಿಗೆ ನನಗೆ ತೊಂಬತ್ತು ಮುಗಿದು ತೊಂಬತ್ತೊಂದಕ್ಕೆ... ನನ್ನ ವಯಸ್ಸೇನು ಕೇಳುತ್ತೀ ಬಿಡು. ನಾನು ನಿನ್ನ ಬಗ್ಗೆ ಯೋಚಿಸುತ್ತಾ ಇದ್ದೆ. ಯಾಕೆ, ಮದುವೆ ಮಾಡಿಕೊಳ್ಳುವ ವಿಚಾರ ಇಲ್ಲವೆ?" ನಿಮ್ಮ ಜಾತಿಯವರಲ್ಲೇನು ಚಂದ ಹುಡುಗಿಯರಿಗೆ ಕಡಿಮೆಯೆ?"

ಹಿಂಸ್ರಪಶುವಿನ ಈ ಹಲ್ಲು ಮಸೆತ ಕೇಳಿ ತನಗೆ ಆಶ್ಚರ್ಯವಾಗುತ್ತಿಲ್ಲವಲ್ಲ ಎಂಬ ಅರಿವಿನಿಂದ ನಾಗಪ್ಪನಿಗೆ ಸಂತೋಷವೇ ಆಯಿತು. ಅಂತೂ ತನ್ನ ಮೊದಲಿನ ಸಂಶಯವೇ ಗಟ್ಟಿಯಾಗುತ್ತಿದೆ. ಮುದುಕಿಗೆ ಉತ್ತರ ಕೊಡಬೇಕು ಎನ್ನುವಷ್ಟರಲ್ಲಿ ಶ್ರೀನಿವಾಸ ಗಾಬರಿ ಹಾಗೂ ಅಸಮಾಧಾನ ತುಂಬಿದ ದನಿಯಲ್ಲಿ—"ಅಮ್ಮಾ! ಅದೆಲ್ಲ ಈ ಹೊತ್ತೇ ಬೇಕೆ? ಊಟಕ್ಕೆ ಬಾ ಎಂದು ಕರೆಸಿದವನ ಇದಿರು ಈ ಜಾತಿ-ಪಾತಿಯ ಮಾತೇಕೆ? ಇಂದಿನ ದಿನಗಳಲ್ಲಿ ಯಾರಿಗೆ ಅದರಲ್ಲೆಲ್ಲ ನಂಬಿಕೆ ಇದೆಯೆಂದಾಗಬೇಡವೆ?" ಎಂದ.

ನಾಗಪ್ಪನಿಗೆ ಕೂಡಲೇ ಸಿಟ್ಟು ತರಿಸಿದ್ದು ಅವನ ಮಾತುಗಳಿಗಿಂತ ಹೆಚ್ಚಾಗಿ ಅವುಗಳಲ್ಲಿಯ ಢೊಂಗಿತನವನ್ನು ಮುಚ್ಚಲು ಅಸಮರ್ಥವಾದ ಅವನ ಗೊಗ್ಗರು ದನಿ. ತನಗೆ ಬಂದ ಸಿಟ್ಟನ್ನು ಅಡಗಿಸಿಕೊಳ್ಳುವ ಪ್ರಯತ್ನವನ್ನು ಎಳ್ಳಷ್ಟೂ ಮಾಡದೇ ಕೇಳಿದ:

"ನಿನ್ನ ಗಂಟಲು ಇದ್ದಕ್ಕಿದ್ದಂತೆ ಹಾಗೇಕಾಯಿತೋ (ಥತ್ ಸೂಳೇಮಗನೆ). ಚೇತನಾಗೆ ಹೇಳಿ ನೀರು ತರಿಸಲೆ? ಅಂಬೋಡೆಯ ಜತೆಗಿನ ಚಟ್ಣಿಯ ಖಾರ ಎಲ್ಲಾದರೂ ಅಡಕಿರಬೇಕು ನೋಡು."

ನಾಗಪ್ಪನ ಈ ಉದ್ಧಟತನದ ಆಹ್ವಾನ ನೇರವಾಗಿ ಮರ್ಮಸ್ಥಾನವನ್ನು ಕೆಣಕಿರಬೇಕು: ಕೈಯಲ್ಲಿ ಹಿಡಿದ ಫೈಲುಗಳನ್ನೆಲ್ಲ ಧೊಪ್ ಎಂದು ನೆಲಕ್ಕೆ ಒಗೆದ ರಭಸಕ್ಕೆ ತೆರೆದೇ ಇದ್ದ ಪೆನ್ನು ಕೂಡ ನೆಲಕ್ಕೆ ಅಪ್ಪಳಿಸಿ ಮಾರುದ್ದ ದೂರ ಸಿಡಿದುಬಿದ್ದಿತು. ಈ ಮುಖಾ-ಮುಖಿಯ ಪೂರ್ವಸೂಚನೆ ಮೊದಲೇ ಇದ್ದಂತಿದ್ದ ಮಕ್ಕಳೆಲ್ಲ ಎಲ್ಲೋ ಮಾಯವಾಗಿದ್ದರು: "ಚೇತನಾsss." ಎಂದು ಬಾಯಿಂದ ಹೊರಟ ಚೀತ್ಕಾರ ಗಂಟಲಲ್ಲಿಯ ಗೊಗ್ಗರು-ದನಿಯಲ್ಲಿ ಉಸಿರುಗಟ್ಟಿದರೂ ಅದಕ್ಕೆ ಕಾರಣವಾದ ಸಿಟ್ಟು ಮಾತ್ರ ಅಡಿಗೆಯ ಮನೆಯಲ್ಲಿ ಕೆಲಸದಲ್ಲಿ ತೊಡಗಿದ್ದೂ ಕಿವಿಗಳನ್ನು ಇತ್ತವೇ ಇರಿಸಿಕೊಂಡಂತಿದ್ದ ಶಾರದೆಗೆ ಮುಟ್ಟುವುದರಲ್ಲಿ ಎಷ್ಟೂ ತಪ್ಪಲಿಲ್ಲ. ಅವಳು ಓಡೋಡಿ ಬಂದು ಬಾಗಿಲಲ್ಲಿ ನಿಲ್ಲುವ ಹೊತ್ತಿಗೆ ಶ್ರೀನಿವಾಸ ಸೋಫಾದಿಂದ ಎದ್ದು ಹಾಲಿನಲ್ಲಿ ಶತಪದ ಹಾಕಹತ್ತಿದ್ದ. ಅವಳು ದೃಷ್ಟಿಗೆ ಬಿದ್ದದ್ದೇ—ನೀರು ತರಿಸುವದಕ್ಕಾಗಿ ತಾನು ಚೇತನಾಳನ್ನು ಕರೆದಿದ್ದೆ ಎಂಬುದನ್ನು ಕೂಡ ಮರೆತು. "ನೀನ್ಯಾಕೆ ಬಂದೆ ಇಲ್ಲಿ—ನಿನ್ನ ದರಿದ್ರ ಮುಸುಡಿ ತಗೊಂಡು?" ಎಂದು ಒದರಿದ. ಇದ್ದಕ್ಕಿದ್ದಂತೆ ಶ್ರೀನಿವಾಸನ ಗಂಟಲು ಬಿದ್ದು ಹೋಗಿತ್ತು: ನಾಲ್ಕು ಕೇರಿ ಒಂದುಮಾಡುವಷ್ಟು ಎತ್ತರದ ದನಿಯಲ್ಲಿ ಆಡಿದ ಸಿಟ್ಟಿನ ಮಾತುಗಳಾದರೂ ಕಿವಿಯಲ್ಲಿ ಆಡಿದ ಮಾತುಗಳ ಹಾಗೆ ಪಿಸುಗುಟ್ಟಿದವು. ಗಂಡನ ಅವತಾರ ನೋಡಿ ಕಂಗಾಲಾದ ಶಾರದೆ ಕೂಡಲೇ ಅಲ್ಲಿಂದ ಕಾಲು ಕಿತ್ತಳು. ಆಗ ಅವಳ ಮೋರೆಯ ಮೇಲೆ ಕಂಡ ನೋವು ನಾಗಪ್ಪನನ್ನು ತಟ್ಟದೇ ಇರಲಿಲ್ಲ: ಆ ನೋವೇ ಮುಂದಿನ ಕೆಲವು ಕ್ಷಣಗಳ ಮಟ್ಟಿಗಾದರೂ, ಇದೆಲ್ಲದರ ಸೋಕ್ಷ-ಮೋಕ್ಷ ಆಗಲೇಬೇಕೆಂಬ ನಿರ್ಧಾರಕ್ಕೆ ಬಂದ, ನಾಗಪ್ಪನ ಸಿಟ್ಟಿಗೆ ತಡೆ ಹಾಕಿತು. ಶ್ರೀನಿವಾಸ ಶತಪದ ಹಾಕುತ್ತಲೇ ಉಳಿದ: ಯಾವುದೋ ಪಾಶವೀ ತಳದಿಂದ ಚಿಮ್ಮಿದ ಕ್ರೂರ ಸಿಟ್ಟು ಮಾನವಭಾಷೆಯ ತೆಕ್ಕೆಗೆ ಒಳಗಾಗಲು ಕೂಡಲೇ ಒಪ್ಪತ್ತಿರಲಿಲ್ಲವೇನೋ!

ಇತ್ತ, ಆಗಿನಿಂದಲೂ ತನ್ನ ಕ್ರೋಧವನ್ನೆಲ್ಲ ಕಣ್ಣಿನಲ್ಲಿ ಒಟ್ಟುಗೂಡಿಸಿ ಕೂತವಳ ಹಾಗೆ ಕೂತ ಪದ್ದಕ್ಕನೂ ಸಹ ಗುಡುಗುಡು ನಡುಗಹತ್ತಿದ್ದಳು. ಆ ಅಸಹ್ಯದ ದೃಶ್ಯವನ್ನು ನೋಡಿ ನಾಗಪ್ಪನಿಗೆ ದೊಡ್ಡಕ್ಕೆ ನಕ್ಕು ಬಿಡಬೇಕೆನಿಸಿತು. ಹಾಲಿನಲ್ಲಿ ನಡೆಯುತ್ತಿದ್ದುದನ್ನು ನೋಡುತ್ತ ಕುಂತುಬಿಟ್ಟರೆ ನಗದೇ ಇರುವದು ಅಸಾಧ್ಯವಾಗಿ ತೋರಿದಾಗ, ತಾನು ಏನು ಮಾಡುತ್ತಿದ್ದೇನೆ ಎನ್ನುವುದರ ಅರಿವು ಬರುವ ಮೊದಲೇ ಕೂತಲ್ಲಿಂದ ಎದ್ದು ಸೀದಾ ಅಡುಗೆಯ ಮನೆಯತ್ತ

ನಡೆದೇಬಿಟ್ಟ. ಅಡುಗೆಯ ಮನೆಯಲ್ಲಿ ಶಾರದೆ ಒಬ್ಬಳೇ ಇದ್ದಳು. ಅವಳನ್ನು ತಾನು ಹೀಗೆ ಸಂಧಿಸುತ್ತಿದ್ದದ್ದು ಇದೇ ಮೊದಲು ಎಂಬುದು ಲಕ್ಷ್ಯಕ್ಕೆ ಬಂದದ್ದು ಅವಳ ಭಯಗ್ರಸ್ತ ಕಣ್ಣುಗಳು ತನ್ನ ಕಣ್ಣುಗಳನ್ನು ಸಂಧಿಸಿದಾಗಲೇ. ಅವಳೇ ಮೊದಲು ಮಾತನಾಡಿದಳು—"ಮಕ್ಕಳೆಲ್ಲ ಕೆಳಗಿನ ಮನೆಗೆ ಹೋಗಿದ್ದಾರೆ." "ಶ್ರೀನಿವಾಸನಿಗೆ ಕುಡಿಯಲಿಕ್ಕೆ ನೀರು ಬೇಕೆಂದು ಕಾಣುತ್ತದೆ," ಎಂದಾಗ ಸ್ಟೇನ್‌ಲೆಸ್ ತಂಬಿಗೆಯೊಂದರಲ್ಲಿ ರೆಫ್ರಿಜರೇಟರಿನಲ್ಲಿಟ್ಟ ಬಾಟಲಿಯೊಳಗಿನ ನೀರನ್ನು ಸುರಿಯುತ್ತ—"ಊಟಕ್ಕೆ ಇನ್ನರ್ಧ ಗಂಟೆಯಲ್ಲಿ ಕೂಡ್ರಬಹುದು," ಎಂದಳು. ತಂಬಿಗೆ ಹಾಗೂ ಜೊತೆಗೆ ಕೊಟ್ಟ ಲೋಟಾಗಳೊಂದಿಗೆ ಹೊರಗೆ ಬಂದಾಗ ಶ್ರೀನಿವಾಸ ಶತಪದ ಹಾಕುವದನ್ನು ನಿಲ್ಲಿಸಿ ಸೋಫಾದಲ್ಲಿ ಕುಸಿದಿದ್ದ. ನೀರಿನ ತಂಬಿಗೆಯನ್ನು ಹತ್ತಿರದ ಟೀಪಾಯಿಯೊಂದರ ಮೇಲಿಡುತ್ತ, "ನೀರು ಕುಡಿ, ಸಮಾಧಾನವಾದೀತು." ಎಂದ ನಾಗಪ್ಪ. ನೆಲದ ಮೇಲೆ ಬಿದ್ದ ಪೆನ್ನು ಇನ್ನೂ ಬಿದ್ದಲ್ಲೇ ಇದ್ದುದನ್ನು ಕಂಡು ಅದನ್ನೆತ್ತಿ ಶ್ರೀನಿವಾಸನ ಕೈಗೆ ಕೊಡುತ್ತ: "ನನ್ನನ್ನು ಈಹೊತ್ತು ಕರೆದದ್ದು ಬರೇ ಊಟಕ್ಕಾಗಲೀ ಪದ್ದಕ್ಕನೊಡನೆ ಮಾತನಾಡುವದಕ್ಕಾಗಲೀ ಅಲ್ಲ ಎಂಬುದನ್ನು ಬಲ್ಲೆ. ನಿನಗೆ ನನ್ನ ಬಗ್ಗೆ ಇಷ್ಟೊಂದು ದ್ವೇಷವೇಕೋ ಅರಿಯೆ. ನಿನ್ನ ಹಿತಾಸಕ್ತಿಗಳಿಗೆ ಅಡ್ಡಬರುವಂಥದ್ದೇನೂ ಮಾಡಿಲ್ಲ. ಆದರೂ ಎಲ್ಲದಕ್ಕೂ ಸಿದ್ಧನಾಗಿಯೇ ಬಂದಿದ್ದೇನೆ," ಎಂದ. ಹಾಗೂ ಪದ್ದಕ್ಕನತ್ತ ತಿರುಗಿ: "ಆಗ ನನ್ನ ಜಾತಿಯ ಮಾತು ಎತ್ತಿದೆಯಲ್ಲ..."

ಅವನ ವಾಕ್ಯ ಪೂರ್ತಿಯಾಗುವ ಮೊದಲೇ ಶ್ರೀನಿವಾಸನ ಮೂಗಿನ ಹೊರಳೆಗಳು ಅರಳಹತ್ತಿದವು. ಆದರೆ ಬಾಯಿ ತೆರೆಯೋಣವೆಂದರೆ ಗಂಟಲಲ್ಲಿ ದನಿ ಮೂಡಬಹುದೆಂಬ ಭರವಸೆ ತೋರದೆ ಕೆಲಹೊತ್ತು ಸುಮ್ಮಗೆ ಉಳಿದ. ಆಮೇಲೆ, ಇನ್ನು ಸುಮ್ಮಗುಳಿಯುವದು ಸಾಧ್ಯವಿಲ್ಲ ಎನ್ನುವ ಹಾಗೆ "ಉಳಿದವರ ಚಾರಿತ್ರ್ಯದ ಬಗ್ಗೆ ಮಾತನಾಡುವ ಮೊದಲು ನಿನ್ನ ಚಾರಿತ್ರ್ಯವನ್ನಷ್ಟು ನೋಡಿಕೋ..." ಎಂದ. ವಾಕ್ಯದ ಧಾಟಿ ನೋಡಿದರೆ, ಅದು 'ಸುಟ್ಟಮೋರೆಯವನೇ,' ಇಲ್ಲವೇ ಇಂತಹದೇ ಬೈಗುಳವೊಂದರಲ್ಲಿ ಕೊನೆಗೊಳ್ಳುವ ಹಾಗಿತ್ತು. ದನಿ ಇನ್ನೂ ಗೊಗ್ಗರುಗೊಗ್ಗರಾಗಿತ್ತು.

"ನನ್ನ ಚಾರಿತ್ರ್ಯದ ಕಾಳಜಿ ನನಗೆ ಬಿಡು. ಆದರೆ ನಿನ್ನ..."

“ನಿನ್ನ ಚಾರಿತ್ರ್ಯದ ಕತೆ ನಿನಗೇ ಗೊತ್ತಿದ್ದರಲ್ಲವೇ ಸೂಳೇಮಗನೇ... ಅಮ್ಮನನ್ನು ಕೇಳು...” ಶ್ರೀನಿವಾಸನ ಸಿಟ್ಟು ಮಸ್ತಕಕ್ಕೇರಿತ್ತು.

“ಕೇಳಿಯೇ ಕೇಳುತ್ತೇನೆ. ಅದಕ್ಕೇ ಬಂದಿದ್ದೇನೆ. ನಿನ್ನ ಮಿಷ್ಟಾನ್ನ ಭೋಜನಕ್ಕಲ್ಲ. ಆದರೆ ಜೋಕೆ! ಬೈಗುಳಕ್ಕೆ ಇಳಿದೆಯೋ ಹಲ್ಲು ಉದುರಿಸುತ್ತೇನೆ. ಇದು ಬರೀ ಮಸ್ಕರಿಗೆಂದು ತಿಳಿಯಬೇಡ. ಎಲ್ಲದಕ್ಕೂ ಸಿದ್ಧನಾಗಿಯೇ ಬಂದಿದ್ದೇನೆಂದು ಹೇಳಿದೆನಲ್ಲ. ನನ್ನ ಕಂಪನಿಯವರು ಹೂಡಿದ ಪಿತೂರಿಯಲ್ಲಿ ನೀನೂ ಸಾಮೀಲಾದದ್ದು ನನಗೆ ಗೊತ್ತಿಲ್ಲವೆಂದು ತಿಳಿಯಬೇಡ. ಎಲ್ಲವನ್ನೂ ಸ್ಪಷ್ಟಮಾಡಿಕೊಳ್ಳಲು ನಾನೇ ಬರುವವನಿದ್ದೆ. ನೀನಾಗಿ ಕರೆದೆಯಲ್ಲ—ಉತ್ತಮ ಆಯಿತು.”

ಶ್ರೀನಿವಾಸನ ಮೋರೆ ಬಣ್ಣಗೆಡಹತ್ತಿತು.

“ಹಲ್ಲು ಉದುರಿಸುವ ಧಮಕೀ ಹಾಕ್ತಿಯೆನೋ ಅವನಿಗೆ? ಆ ನೀರಿದೆಯೇನೋ ನಿನ್ನೊಳಗೆ? ತನ್ನ ಸ್ವಂತ ಮೆಹನತ್ತಿನಿಂದ ಅವನು ಮೇಲೆ ಬಂದದ್ದೂ. ಇಂದು ನಮ್ಮ ಜಾತಿಯವರ ಸಮಾಜದಲ್ಲಿ—ಮುಂಬಯಿಯಲ್ಲೇ ಪರ್ತಗಾಳಿಯ ಮಠದಲ್ಲಿ, ಗೋಕರ್ಣದ ಮಠದಲ್ಲಿ—ಅವನು ಗಳಿಸಿದ ಪ್ರತಿಷ್ಠೆ ನಿನ್ನಿಂದ ನೋಡುವುದಾಗುವದಿಲ್ಲ ಅಲ್ಲವೇನೋ? ಈ ದೊಡ್ಡ ಮನೆ, ಅವನ ಈಗನ ಚಂದದ ಸಂಸಾರ ಕೂಡ ನಿನ್ನ ಕಣ್ಣು ಕುಕ್ಕಸುತ್ತಿರಬೇಕು. ಅಲ್ಲವೇನೋ? ಬರೀ ಸೂಳೆಯರ ಸಂಗಾ ಮಾಡಿ ಬೀದೀಬಸವನ ಹಾಗೆ ತಿರುಗುವ ನಿನಗೆ ಎಂಥಾ ಸ್ಥಾನಾ ಮಾನಾ ಇವೆಯೊ? ನಿನ್ನನ್ನು ದೂರಿ ಏನು ಉಪಯೋಗ ಬಿಡೂ. ಹಲ್ಕಾ ಜನರಿಗೆ ಹುಟ್ಟಿದವನು ನೀನು. ರಕ್ತದ ಗುಣ ಎಲ್ಲಿ ಹೋಗಬೇಕು. ನಿನಗೆ ಗೊತ್ತಿಶಿದೆಯೋ ಇಲ್ಲವೋ. ನಿನ್ನಮ್ಮ ನಮ್ಮ ಜಾತಿಯವಳಲ್ಲ—ಕಲಾವಂತರವಳು. ಗೋವೆಯ ಮಂಗೇಶೀ ದೇವಾಲಯದಲ್ಲಿ ಕುಣಿತ ಮಾಡುತ್ತಿದ್ದ ಹುಡುಗಿ. ಅವಳ ಅಮ್ಮ, ಅಜ್ಜಿ ಎಲ್ಲ ಕುಣಿತದ ಜೊತೆ ಸೂಳೇತನ ಕೂಡ ಮಾಡ್ತಿದ್ರೂ...”

ಪದ್ದಕ್ಕನಿಂದ ಮಿನಿಟಿಗೆ ಒಂದೊಂದರಂತೆ ಎಂಜಲು ಸಿಡಿಸುತ್ತ ಬರುತ್ತಿದ್ದ ಈ ಮಾತುಗಳಿಂದ ನಾಗಪ್ಪನ ಮೋರೆಯ ಮೇಲೆ ಆಗುತ್ತಿರಬಹುದಾದ ಬದಲುಗಳನ್ನು ಊಹಿಸಿಯೇ ಎರಡೂ ಕೈಗಳಿಂದ ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತುಬಿಟ್ಟ, ಶ್ರೀನಿವಾಸ. ಆದರೆ ನಾಗಪ್ಪನ ಮೋರೆ ಅವನು

ಊಹಿಸಿಕೊಂಡ ರೀತಿಯಲ್ಲಿ ಬದಲಾಗುತ್ತಲೇ ಇರಲಿಲ್ಲ: ವಿಲಕ್ಷಣ ಆಸ್ಥೆಯಿಂದ ಮುಗುಳುನಗುತ್ತ ಕೇಳುತ್ತಿದ್ದ: "ಪದ್ದಕ್ಕಾ ನಿಲ್ಲಿಸಬೇಡ... ಕತೆ ಬಹಳ ರಸಭರಿತವಾಗಿದೆ... ಶ್ರೀನಿವಾಸ ನಿನಗೆ ಹೇಳಿರಬೇಕು—ನಾನು ಸದ್ಯ ಒಂದು ದೊಡ್ಡ ಕಾದಂಬರಿ ಬರೆಯುವದರಲ್ಲಿ ಮಗ್ನನಾಗಿದ್ದೇನೆ. ಆಗ ನೀನು ಹೊಗಳಿದ ನಮ್ಮ ಸಮಾಜದಲ್ಲಿಯ ದೊಡ್ಡ ದೊಡ್ಡ (ಕುಂಡೆಗಳುಳ್ಳ) ಪ್ರತಿಷ್ಠಿತರ ಧವಳ ಚರಿತೆಗಳ ಬಗ್ಗೆಯೇ ಇದೆ ಕಾದಂಬರಿ. "ಈಗ ನೀನು ಹೇಳುತ್ತಿದ್ದ ಕತೆಯನ್ನು ಅದರಲ್ಲೇ ಒಂದು ಅಡ್ಡ ಕತೆಯಾಗಿ ಸೇರಿಸಿಬಿಡುತ್ತೇನೆ. ಪಂಚಪಕ್ವಾನ್ನದ ಜೊತೆಗೆ ನಂಜಿಕೊಳಲ್ಲಿಕ್ಕೇನಾದರೂ ಬೇಡವೆ? ಹೇಳು ಹೇಳು... ಇಷ್ಟೇ: ನನ್ನ ಅಮ್ಮನ ಅಮ್ಮ, ಅಮ್ಮನ ಅಜ್ಜಿಯರ ಬಗ್ಗ ನಿನಗೆಲ್ಲ ಗೊತ್ತಿರಬೇಕಾದರೆ ನೀನೂ ಕೂಡ ಆವರ ಕೇರಿಯಲ್ಲೇನಾದರೂ..."

"ಮಸ್ಕರಿ ಮಾಡ್ತೀಯೇನೋ ನಿರ್ಲಜ್ಜ. ನಾನು ಹೇಳುತ್ತಿದ್ದದ್ದು ನಿನ್ನ ಮೇಲೆ ಏನೂ ಪರಿಣಾಮ ಮಾಡುತ್ತಿಲ್ಲ ಎಂದು ನಟಿಸಬೇಡ."

"ಪರಿಣಾಮ ಮಾಡುತ್ತಿಲ್ಲ ಎಂದು ಹೇಗೆ ಹೇಳಲಿ ಪದ್ದಕ್ಕ (ಪರಿಣಾಮ ಮಾಡಲಿಕ್ಕೆಂದೇ ನೀನು ಈಗ ಹೇಳುತ್ತಿರುವಾಗ)? ಆದರೆ ನೀನು ಶ್ರೀನಿವಾಸ ತಿಳಕೊಂಡ ಕಾರಣಕ್ಕಾಗಿ ಅಲ್ಲ. ನನ್ನ ಅಮ್ಮ ಕಲಾವಂತ ಹೆಣ್ಣಾಗಿದ್ದಳು, ಅವಳನ್ನು ಮದುವೆಯಾದ ಅಪ್ಪ ಕೂಡ ಹನೇಹಳ್ಳಿಯ ಸಾರಸ್ವತ ಸಮಾಜದ ಸಂಭಾವಿತರು ಅನೇಕ ವರ್ಷಗಳ ವರೆಗೆ ತಿಳಕೊಂಡಂತೆ ಬ್ರಾಹ್ಮಣನಾಗಿರದೇ ಯಾವುದೋ ಜಾತಿಯವನಾಗಿದ್ದ..."

"ನಿನಗಿದು ಗೊತ್ತಿತ್ತೇನೋ?" ಶ್ರೀನಿವಾಸ ಬಾಯಿ ಬಿಟ್ಟ. ಗಂಟಲು ಸಡಿಲಿಸಿತ್ತು.

"ಗೊತ್ತಿರಲಿಲ್ಲ. ನೀನೇ ಇಂತಹ ಅಗಾಧ ಶೋಧವೊಂದರಲ್ಲಿ ತೊಡಗಿದ್ದೀ ಎನ್ನುವದು ಸಂತೋಷಭವನದ ನಾಯಕನಿಂದ ತಿಳಿಯಿತು." ಎಂದ. ಶ್ರೀನಿವಾಸ ಹಾಗೂ ಪದ್ದಕ್ಕ ತನ್ನನ್ನೇ ಮಿಕಿಮಿಕಿ ನೋಡುತ್ತ ಕೂತದ್ದನ್ನು ನೋಡಿ ತನ್ನಷ್ಟಕ್ಕೇ ಅಂದಕೊಂಡ—ನನಗೆ ಮುಖ್ಯವೆಂದು ತೋರಿದ್ದು ನನ್ನ ಅಪ್ಪ-ಅಮ್ಮ ಯಾವ ಜಾತಿಯವರು ಎನ್ನುವದಲ್ಲ. ಈ ವಯಸ್ಸಿನಲ್ಲಂತೂ ಅದರ ಬಗ್ಗೆ ನನಗೆ ಏನೂ ಅನ್ನಿಸುವದಿಲ್ಲ. ಆದರೆ ನನಗಿನ್ನೂ ಅರ್ಥವಾಗದೇ ಇದ್ದದು ಇದನ್ನೆಲ್ಲ

ಉಪಯೋಗಿಸಿ ನೀವು ನನ್ನನ್ನು ಹಣಿಯಲು ಹೊರಟದ್ದರ ಉದ್ದೇಶ: ಇದ್ದಕ್ಕಿದ್ದಂತೆ ನಾವು ಮನುಷ್ಯಜಾತಿಯಿಂದ ಕೆಳಗಿಳಿಯುತ್ತಿದ್ದರ ಕಾರಣ. ಆದರೆ ಇಷ್ಟು ದಿನ ಯಾವುದನ್ನು ತಿಳಿಯಲು ತಾನು ಹೆದರಿದ್ದೇನೆ ಎಂದು ಅನ್ನಿಸಿತ್ತೋ ಅದೆಲ್ಲ ಈಗ ತೀರ ಹಾಸ್ಯಾಸ್ಪದವೆನ್ನಿಸಹತ್ತಿದೆಯಲ್ಲ ಎಂಬ ಅನ್ನಿಸಿಕೆಯಿಂದ ತಾನೇ ಆಶ್ಚರ್ಯಪಟ್ಟ. ಇಂತಹ ಯಾವ ಒಂದು ಭಾವನೆಯೂ ನಿಜವೆನ್ನಿಸುವದಿಲ್ಲವಲ್ಲ ಎಂದುಕೊಳ್ಳುತ್ತಿರುವಾಗ ಮೂವರೂ ಒಮ್ಮೆಲೇ ಮೌನ ತಳೆದದ್ದು ಲಕ್ಷ್ಯಕ್ಕೆ ಬಂದು: ಪದ್ದಕ್ಕಾ, ನಮ್ಮಮ್ಮ ಇಂತಹದೇ ಮನೆತನದವಳು. ಅಪ್ಪ ಇಂತಹದೇ ಜಾತಿಯವನು ಎಂದು ನಿನಗೆ ಯಾವಾಗ ಗೊತ್ತಾಯಿತು? ಹೇಗೆ ಗೊತ್ತಾಯಿತು? ಅದಕ್ಕಿಂತ ಹೆಚ್ಚಾಗಿ ಇದನ್ನೆಲ್ಲ ನಿನ್ನಿಂದ ಹೇಳಿಸಲೆಂದೇ ನಿನ್ನನ್ನು ಇಲ್ಲಿಗೆ ಕರೆಸಿದ್ದರ ಹಿಂದಿನ ಹೇತು ಯಾವದು? ಇಂತಹ ಮುದಿ ವಯಸ್ಸಿನಲ್ಲಿ ನನಗಿದನ್ನೆಲ್ಲ ಹೇಳಿ ನನ್ನ ಮನಸ್ಸನ್ನು ನೋಯಿಸುವ ಚಪಲ ನಿನಗೆ ಯಾಕೆ? ಹೇಳಿದೆನಲ್ಲ: ನನಗೀಗ ಇವೆಲ್ಲ ಬರೀ ಕುತೂಹಲದ ವಿಷಯಗಳಾಗೇ ಉಳಿದಿವೆ. ಆದರೂ...ಇಲ್ಲ, ನಾಗಪ್ಪ ಈ ಯಾವ ಪ್ರಶ್ನೆಗಳನ್ನೂ ಕೇಳಲಿಲ್ಲ. ಕೇಳುವ ಗರಜೇ ತೋರಲಿಲ್ಲ. ಇದ್ದಕ್ಕಿದ್ದಂತೆ ಒಂದು ಬಗೆಯ ಅನಾಸಕ್ತಿ ಬಂದುಬಿಟ್ಟಿದೆಯೆಂಬ ಅನ್ನಿಸಿಕೆಯಿಂದ ತಾನೇ ಚಕಿತನಾದ: ಇದಾವುದರಲ್ಲೂ ತನಗೆ ನಂಬಿಕೆಯೇ ಇದ್ದಿರದಿದ್ದರೆ, ಶ್ರೀನಿವಾಸನೊಡನೆ ತಾನು ಇಷ್ಟು ದಿನ ಕಾದ, ಒಂದು ರೀತಿಯ ದ್ವೇಷಕ್ಕೆ ಅರ್ಥವೇನು? ಇದೀಗಿನ ತನ್ನ ಔದಾಸೀನ್ಯಕ್ಕೆ ತಾನು ಇಷ್ಟು ದಿನ ಅನುಭವಿಸಿದ್ದು, ಅದರಿಂದಾಗಿ ಹುಟ್ಟಿರಬಹುದಾದ ಸುಸ್ತು ಇವೇ ಕಾರಣಗಳಾಗಿರಬಹುದೆ? ಅಥವಾ ಅಪ್ಪ-ಅಮ್ಮರ ಜಾತಿಗಿಂತ (ಇವೂ ತನ್ನನ್ನು ಈಗ ಬಾಧಿಸುತ್ತಿಲ್ಲ ಎನ್ನುವದು ನಿರ್ವಿವಾದ) ತನ್ನನ್ನು ಕಾಡುತ್ತಿದ್ದ ಭಯದ ಜಾಗ ಫಕ್ಕನೆ ಈ ಮುದುಕಿಯ ಮಾತಿನಿಂದ ಪ್ರಕಟವಾದೀತೆಂದು ದಿಗಿಲುಗೊಂಡಿರುವೆನೆ? ಇವಳಿಗೆ ಗೊತ್ತಿರಬಹುದೇ- ನನ್ನ ಅಂಗಿಗೆ ಬೆಂಕಿ ಬಿದ್ದ ಪ್ರಕರಣ? ತಂಗಿ ಕಳೆದುಹೋದ ಪ್ರಸಂಗ? ತನಗೆ ಒಬ್ಬ ಅಣ್ಣನಿದ್ದ ಎಂದು ಕೇಳಿದ್ದೆ - ಮುಂದೇನಾದ? ಇವಳನ್ನು ಕೆಣಕಿದರೆ ಫಕ್ಕನೆ ಹೇಳಿಬಿಟ್ಟಾಳೆ?...

ಬಾಯಿಂದ ಹೊರಟ ಮಾತು ಮಾತ್ರ ಮನಸ್ಸಿನಲ್ಲಿ ಹೊಳಹು ಹಾಕಿದ್ದಕ್ಕೆ ತೀರ ವ್ಯತಿರಿಕ್ತವಾಗಿತ್ತು: ಇದನ್ನು ಮಾತನಾಡುತ್ತಿದ್ದವನು ತನ್ನ ಅನುಭವಕ್ಕೆ ಈ ವರೆಗೂ ಬಂದಿರದ ಇನ್ನೊಬ್ಬನೇ ನಾಗಪ್ಪನಾಗಿದ್ದ ಎಂಬಂತಹ ಅರಿವು: “ನೋಡು

ಶ್ರೀನಿವಾಸ, ನನಗೂ ಕೂಡ ನಿನ್ನ ಹಾಗೇ-ನೀನೇ ಕೆಲ ಹೊತ್ತಿನ ಮೊದಲು ಅಂದಂತೆ-ಜಾತಿ-ಪಾತಿಯಲ್ಲಿ ನಂಬಿಕೆ ಇಲ್ಲ. ಆದರೂ ಅಪ್ಪನ ದೃಷ್ಟಿಯಿಂದ ನೋಡಿದಾಗ, ಅವನು ಬದುಕ್ಕಿದ್ದ ಕಾಲದ ದೃಷ್ಟಿಯಿಂದ, ಹನೇಹಳ್ಳಿಯಂಥ ಸಣ್ಣ ಹಳ್ಳಿಯ ಸಮಾಜದ ದೃಷ್ಟಿಯಿಂದ ವಿಚಾರಮಾಡಿದಾಗ ನನಗೆ ಅವನ ಬಗ್ಗೆ ಅಪಾರ ಅಭಿಮಾನವೇ ಅನ್ನಿಸುತ್ತದೆ ನೋಡು: ಬ್ರಾಹ್ಮಣನಾಗಿಯೂ ಆ ಕಾಲದಲ್ಲಿ ಒಬ್ಬ ಕಲಾವಂತ ಹುಡುಗಿಯನ್ನು ಮದುವೆಯಾಗುವದೆಂದರೆ ನಿಜಕ್ಕೂ ದೊಡ್ಡ ಧೈರ್ಯದ ಕೆಲಸ ಎನ್ನಬೇಕು. ಇಲ್ಲವಾದರೆ, ಒಬ್ಬ ಹುಡುಗಿಗೆ ಲಗ್ನವಾಗುವ ಭರವಸೆ ಕೊಟ್ಟು, ಹೊಟ್ಟೆ ತರಿಸಿ ಅವಳ ಭಾವನೋ ಅಕ್ಕನ ಮಿಂಡನೋ ಯಾರೋ ಹಜಾಮನೆಂದು…”

ನಾಗಪ್ಪನ ಈ ವಾಕ್ಯ ಪೂರ್ಣಗೊಳ್ಳುವುದರ ಒಳಗೇ ಶ್ರೀನಿವಾಸ ಭಾರ ಬಂದವನ ಹಾಗೆ ಗಡಗಡ ನಡುಗುತ್ತಿದ್ದ. ಸಿಟ್ಟಿನಿಂದ ಮೋರೆ ಕಪ್ಪುಗಟ್ಟಹತ್ತಿತ್ತು. ಕೊರಳ ಸೆರೆಗಳು ಉಬ್ಬಿಕೊಂಡಿದ್ದುವು. ಬಾಯಿಂದ ಮಾತು ಹೊರಡುವದೇ ಕಠಿಣವಾಗಿ ಮೂಗಿನ ಹೊರಳೆಗಳಿಂದ ಕೆರಳಿದ ಗೂಳಿಯ ಹಾಗೆ ಹೂಂಕಾರದ ಗಾಳಿ ಬಿಡಹತ್ತಿದ್ದ: ಸಮಯ ಬಂದರೆ ತನಗೂ ಹೀಗೆ ಶಿಕಾರಿಯಾಡುವ ಹುಕಿ ಬರುವದು ಸಾಧ್ಯವಿದೆ ಎಂಬ ಅರಿವಿನಿಂದ ನಾಗಪ್ಪನಿಗೆ ಮೋಜೆನಿಸಿತು. ಶ್ರೀನಿವಾಸನ ಹೂಂಕಾರದ ಕೊನೆಗೊಮ್ಮೆ ಮಾತು ಕಂಡಿತು:

“ಬೋಳೀಮಗನೇ ಬೋಳಿಮಗನೇ, ಈಗ ನಾನು ಕೇಳುತ್ತೇನೆ: ಹೀಗೆ ಹಿಂದಿನದೆಲ್ಲವನ್ನು ಅಗೆದು ತೆಗೆದು ನನ್ನನ್ನೇಕೆ ಸತಾಯಿಸುತ್ತೀಯೋ? ಹೇಳೋ. ನಿನ್ನ ಇರಾದೆಯನ್ನಾದರೂ ತಿಳಿಸೋ. ಆ ಸೀತಾರಾಮ -ಅವನೊಬ್ಬ ಹಜಾಮ! ಬರೀ ಅವರಿವರ ಶಪ್ಪಾ ಕೆತ್ತುವುದರಲ್ಲೇ ಜನ್ಮ ಹೋಯಿತು. ಹಾಳಾದವನು ಎಲ್ಲಾ ಕಡೆಯಲ್ಲಿ ಟಮಕೀ ಬಾರಿಸುತ್ತ ತಿರುಗುತ್ತಿದ್ದಾನೆ: ನೀನು ನನ್ನ ಮೇಲೆ ಕಾದಂಬರಿ ಬರೆಯುತ್ತಿದ್ದೀಯಂತೆ. ಈಗಾಗಲೇ ಅರ್ಧದ ಮೇಲೇ ಬರೆದು ಮುಗಿಸಿದ್ದೀಯಂತೆ. ಎಲ್ಲವನ್ನು ಉಘಡಾ-ಉಘಡೀ ಹೇಳಿದ್ದೀಯಂತೆ. ಮೊನ್ನೆ ಅರ್ಜುನ್‌ರಾವ್ ಭೇಟಿಯಾದಾಗ ಕೂಡ ಅದನ್ನೇ ಹೇಳಿದ… ಅಮ್ಮನ ಬಗ್ಗೆ ಬರೆದಾಗ ನಾನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಆದರೆ ಅದರಲ್ಲಿ ನಮ್ಮ ಬಡತನದ ಬಗ್ಗೆ ಬರೆದದ್ದು. ಬಡವನಾಗಿ ಹುಟ್ಟಿದರೆ ಏನಾಯಿತೋ (ಬೋಳೀಮಗನೇ) ಆದರೆ…ಸ್ವಂತ ಮೆಹನತ್ತಿನಿಂದ ಈ ಎತ್ತರಕ್ಕೆ ಏರಿದವನನ್ನು ಕೆಳಗೆ ಎಳೆಯುವುದರಲ್ಲಿ ನಿನಗದೇನು

ಸುಖವೊ? ನನ್ನ ಬದನಾಮೀ ಮಾಡ್ತೀಯೇನೋ? ಒಮ್ಮೆ ಕೈತಪ್ಪಿ ಆದದ್ದಕ್ಕೆ ಪ್ರಾಯಶ್ಚಿತ್ತವೆ ಇಲ್ಲವೇನೋ? ಸ್ವತಃ ಸತ್ತವಳ ಅಕ್ಕನೇ ಇದನ್ನೆಲ್ಲ ಮರೆತಾಗ ನಿನಗೆ ಯಾಕೋ ಇಷ್ಟೊಂದು ಜಿದ್ದು? ಸತ್ಯ ನಿನಗೆ ಗೊತ್ತಿಲ್ಲ. ನಾನು ಹೇಳಹೊರಟರೆ ನಾಲಿಗೆ ಹಿಡಿದುಕೊಳ್ಳುತ್ತದೆ. ನಿನ್ನ ಹಾಗೆ ಬರೆಯುವ ಕಲೆ ನನಗಿಲ್ಲವೋ…ಇಲ್ಲವಾದರೆ ನಿನ್ನ ಚಾರಿತ್ರ್ಯ ಏನೆಂಬುದನ್ನು ನಾನೂ ತೋರಿಸಿಕೊಡುತ್ತಿದ್ದೆ…”

ಶ್ರೀನಿವಾಸನ ದನಿಯಲ್ಲಿ ಸಿಟ್ಟಿನ ಬದಲು ಒಂದು ರೀತಿಯ ದೈನ್ಯ, ಅಳುಬುರುಕತನ ಸೇರುತ್ತಿರುವದನ್ನು ಕಂಡು ಮುದುಕಿ ಒಮ್ಮೆಲೇ ಕೆರಳಿದಳು. ಕೂತಲ್ಲಿಂದ ಕೂಡಲೇ ಏಳಲಾಗದ್ದಕ್ಕೆ ಕುಂಡಿ ಸರಿಸುತ್ತ ನೇರವಾಗಿ ನಾಗಪ್ಪ ಕೂತ ಸೋಫಾದ ತೀರ ಹತ್ತಿರಕ್ಕೆ ಬಂದಳು. ಒಂದರೆ ನಿಮಿಷ ಶ್ರೀನಿವಾಸನ ಕಡೆ ತಾತ್ಸಾರ ತುಂಬಿದ ದೃಷ್ಟಿ ಚೆಲ್ಲಿದಳು. ಆಮೇಲೆ ಇನ್ನೆಲ್ಲೋ ನೋಡುತ್ತ: “ಅದೇನು ಕೈಗೆ ಬಳೆ ಹಾಕಿಕೊಂಡ ಹಾಗೆ ಮಾತನಾಡ್ತೀssಯೋ. ನೀರಿಲ್ಲದವನ ಹಾಗೆ ನೀನು ಆಗಬೇಡವೋ. ಷಂಢನಾಗಬೇಡವೋ. ನಿನ್ನ ಅಪ್ಪನ ಹಾಗೆ ಆಗಬೇಡವೋ. ಹೇಳುss. ಎಲ್ಲವನ್ನುss. ಕೇಳುವ ಧೈರ್ಯವಿದ್ದರೆ ಕೇಳಲಿ: ಅವನ ಅಪ್ಪ-ಅಮ್ಮರ ಬಗ್ಗೆss, ಸೋದರತ್ತೆಯ ಬಗ್ಗೆss, ಅಣ್ಣನ ಬಗ್ಗೆss, ತಂಗಿಯ ಬಗ್ಗೆss. ಯಾಕೆ ಹೆದರಿಕೆ? ಬರೇ ನೀನು ಮೇಲೆ ಬರುತ್ತಿರುವದನ್ನು ಸಹಿಸುವುದಾಗದೇ ನಿನ್ನ ನಿನ್ನ ಬಗ್ಗೆ ಇಲ್ಲದ ಸುದ್ದಿ ಹಬ್ಬಿಸುವ ಈ ಹಲ್ಕಾss ಮನುಷ್ಯನ ಬಾಯಿ ಮುಚ್ಚಿಸುವ ತಾಕತ್ತು ನಿನಗಿಲ್ಲವೇನೋ, ಮೊನ್ನೆ ರಾತ್ರಿ, ಬೆಳಗಾಗುವ ತನಕ ನನ್ನಿಂದ ಎಲ್ಲ ಕೇಳಿ ತಿಳಿದು ಈಗ ಐನ್ ಹೊತ್ತಿಗೆ ಮೆತ್ತಗಾಗುತ್ತೀಯೇನೋ… ಹಳ್ಳಿಯಲ್ಲಿ ಸುಖವಾಗಿ ಜೀವ ಬಿಡುತ್ತಿದ್ದ ಮುದುಕಿಯನ್ನು ಟ್ಯಾಕ್ಸಿಯಲ್ಲಿ ತುರುಕಿ ಮೈ ನುಗ್ಗು ನುಗ್ಗು ಮಾಡಿಸಿ ಕರೆ ತರಿಸಿದ್ದು…”

ನಾಗಪ್ಪನಿಗೆ ಮುಂದಿನದೆಲ್ಲ ಕೇಳುತ್ತ ಕೂಡ್ರುವ ಮನಸ್ಸಾಗಲಿಲ್ಲ. ವಿಚಿತ್ರ ಸದ್ದು ಮಾಡುತ್ತ ತಡೆ ತಡೆದು ಹೊರಗೆ ಬರುತ್ತಿದ್ದ ಮುದುಕಿಯ ಮಾತುಗಳು ಅವಳು ಬಯಸಿದ ಪರಿಣಾಮ ಮಾಡುವ ಬದಲು ಅನಪೇಕ್ಷಿತ ಕಾರಣಕ್ಕಾಗಿ ಮೈಮೇಲೆ ಮುಳ್ಳು ನಿಲ್ಲಿಸುತ್ತಿದ್ದವು: ಅವಳ ವಿಲಕ್ಷಣ ಭಾಷೆಯಲ್ಲಿ ಪ್ರಕಟವಾಗಹತ್ತಿದ ಸಂಗತಿಗಳು ಮನುಷ್ಯ-ಸಂವೇದನೆಗೆ ದಕ್ಕುವ ಸತ್ಯಗಳಾಗಿ

ತೋರಲಿಲ್ಲ. ಅಥವಾ...ಈಗಾಗಲೇ ತನ್ನ ಸಂವೇದನಾಶಕ್ತಿಯೇ ಮೊಟಕಾಗಿರಬಹುದೇ? ಅನ್ನಿಸಿತು. ಕುಳಿತಲ್ಲಿಂದ ಎದ್ದವನೇ ಧಡ ಧಡ ಸದ್ದುಮಾಡುವ ಹೆಜ್ಜೆ ಇಡುತ್ತ ಸೀದಾ ತನ್ನ ಕೋಣೆಗೆ ನಡೆದ. ಹಾಗೆ ಹೋಗುವಾಗ ತನ್ನಲ್ಲಿ ಮೊಳೆತ ಭಾವನೆಯ ಗುರುತು ನಾಗಪ್ಪನಿಗೇ ಸಿಗಲಿಲ್ಲ: ಸಿಟ್ಟೇ? ತಿರಸ್ಕಾರವೆ? ಜಿಗುಪ್ಸೆಯೆ? ತಿಳಿಯಲಿಲ್ಲ. ಅನ್ನಿಸಿಕೆಗಳೆಲ್ಲ ಸುನ್ನವಾದ ಭಾಸ. ಕೋಣೆಗೆ ಹೋಗಿ ಡ್ರೆಸ್ಸು ಬದಲಿಸಬೇಕೆಂದು ಪ್ಯಾಂಟು ಕೈಗೆ ತೆಗೆದುಕೊಳ್ಳುತ್ತಿರುವಾಗ ಶ್ರೀನಿವಾಸ ಒಳಗೆ ಬಂದು ತನ್ನ ಹಿಂದೆಯೇ ಕದ ಮುಚ್ಚಿಕೊಂಡು ಅಗಳಿ ಇಕ್ಕಿದ. ಶ್ರೀನಿವಾಸನ ಬಣ್ಣಗೆಟ್ಟ ಮೋರೆ, ಗಾಬರಿ ಹಿಡಿದ ಕಣ್ಣುಗಳನ್ನು ನೋಡಿ ನಾಗಪ್ಪ ಥಕ್ಕಾದ: ಬೆಳಿಗ್ಗೆ ಇಲ್ಲಿಗೆ ಬರುವಾಗ ಊಹಿಸಿಕೊಂಡದ್ದಕ್ಕೆ ವ್ಯತಿರಿಕ್ತವಾದದ್ದೇನೂ ನಡೆಯದೇ ಇದ್ದರೂ ಶ್ರೀನಿವಾಸನ ಸದ್ಯದ ಅವತಾರವನ್ನು ನೋಡಿ ಮಾತ್ರ ದಂಗುಬಡೆದುಹೋದ: ಸಾಯಲು ಹೊರಟ ಹಣ್ಣು ಹಣ್ಣು ಮುದುಕಿಯ ಮುಖಾಂತರ ತಾನು ಇಷ್ಟು ದಿನ ಹೆದರಿಕೊಂಡ ತನ್ನ ಭೂತಕಾಲ ತೆರೆದಕೊಳ್ಳಹತ್ತಿದ ಗಳಿಗೆಯಲ್ಲೆ ಯಾವುದೋ ನಿಗೂಢ ಕಾರಣಕ್ಕಾಗಿ ಶ್ರೀನಿವಾಸನು ಮರೆಯಲು ಯತ್ನಿಸುತ್ತಿದ್ದುದ್ದಕ್ಕೆ ತಾನೇ ಜೀವಂತ ಪ್ರತೀಕವಾಗುತ್ತಿರಬೇಕು: ಎದುರಿಗೆ ಕೂತವನು ಹನ್ನೆರಡು ದಿನಗಳ ಹಿಂದಿನ ಶ್ರೀನಿವಾಸನಾಗಿಯೇ ಇರಲಿಲ್ಲ. ಅಷ್ಟೇಕೆ, ಬೆಳಗ್ಗೆ ಬಂದಾಗ ನೋಡಿದ್ದ ಶ್ರೀನಿವಾಸ ಕೂಡ ಆಗಿರಲಿಲ್ಲ: ತಾನು ಮಾತನಾಡುವ ಮೊದಲೇ ತನ್ನ ಚಾರಿತ್ರ್ಯವನ್ನು ಬಯಲಿಗೆಳೆಯುವ ಬೆದರಿಕೆ ಹಾಕುತ್ತಿರುವಾಗ ಒಂದೂ ಮಗ ತಾನೇ ಯಾವುದಕ್ಕೊ ಹೆದರಿಕೊಂಡಂತೆ ಬಿಳಿಚಿಕೊಂಡಿದ್ದಾನೆ. ಹೊತ್ತು ಹೋದ ಹಾಗೆ ಕೂತ ಕೂತಲ್ಲೇ ನಿರ್ವಿಣ್ಣನಾಗುತ್ತಿದ್ದಾನೆ. ಕುಸಿಯುತ್ತಿದ್ದಾನೆ; ನಾಗಪ್ಪನಿಗೆ ಈ ಘಟನೆ ಅನಿರೀಕ್ಷಿತ. ಈತನನ್ನು ಮೊದಲಿನಿಂದಲೂ ಬೆನ್ನಟ್ಟಿ ಬರುತ್ತಿದ್ದುದಕ್ಕೆ ತಾನು ಪ್ರತೀಕವಾಗುತ್ತಿದ್ದ ಈ ಈ ಪ್ರಕ್ರಿಯೆ ದೊಡ್ಡ ಸೋಜಿಗ. ನಾಗಪ್ಪ ಮಾತನಾಡಲಿಲ್ಲ: ಲುಂಗಿ ಕಳಚಿ ಪ್ಯಾಂಟು ಧರಿಸುವಾಗ ಥಟ್ಟನೆಂಬಂತೆ ಒಂದು ವಿಚಾರ ಹೊಳೆದುಹೋಯಿತು: ಶ್ರೀನಿವಾಸನ ಯಾತನೆಗೆ, ಅಸಾಧಾರಣವಾದ ಅದರ ತೀವ್ರತೆಗೆ ಅದನ್ನು ಮಾತಿನಲ್ಲಿ ಹಿಡಿಯುವ ಅಸಮರ್ಥತೆಯೇ ಕಾರಣವಾಗಿರಬಹುದೆ? ಎರಿಕ್ ಬರ್ನ್ ನೆನಪಿಗೆ ಬಂದ: ಭಾಷೆ ತಿಳಿಯುವ ಮುಂಚಿನ ಕಾಲದಲ್ಲಿ ಮೆದುಳಿನಲ್ಲಿ ಕೇವಲ ಪ್ರತಿಮೆಗಳಾಗಿಯೇ ನಿಂತ ಅನುಭವ ಈಗಲೂ ಮೂಡಿ ಕಾಡುತ್ತಿರಬಹುದೇ ಹೊರತು ಮಾತಿನಲ್ಲಿ ಹೊರದಾರಿಯನ್ನು

ಕಾಣುವಲ್ಲಿ ಸೋಲುತ್ತಿರಬಹುದು. ಈ ವಿವೇಕಪ್ರಜ್ಞೆ ಶ್ರೀನಿವಾಸನ ಬಗ್ಗೆ ಸಹಾನುಭೂತಿಯನ್ನು ಹುಟ್ಟಿಸುವಂತಹದ್ದಾಗಿತ್ತಾದರೂ ಸ್ವತಃ ತಾನೇ ಕಳೆದ ಹಲವು ದಿನಗಳಿಂದ ಅನುಭವಿಸುತ್ತ ಬಂದದ್ದು ಅದಕ್ಕೆ ಆಡ್ಡ ಬಂತು: ನಾಗಪ್ಪ ತನ್ನ ಮೌನ ಮುರಿಯಲಿಲ್ಲ. ಪ್ಯಾಂಟಿನ ಕಿಸೆಯೊಳಗಿಂದ ಹಣಿಗೆಯನ್ನು ಹೊರತೆಗೆದು ನಿಧಾನವಾಗಿ ಒಂದು ಬಗೆಯ ಬೇಫಿಕೀರತೆಯಿಂದ ಕೂದಲು ಬಾಚಿಕೊಳ್ಳಹತ್ತಿದ: ಈ ನಿಧಾನ, ಊಟಕ್ಕಾಗಿ ಬಂದೂ ಊಟ ಮಾಡುವ ಮೊದಲೇ ಹೋಗಲು ಹೊರಟು ನಿಂತವನ ಮೌನದಲ್ಲಿಯ ಬೇಫಿಕೀರತೆ ಶ್ರೀನಿವಾಸನನ್ನು ಇನ್ನಷ್ಟು ಹೆದರಿಸಲು ಕಾರಣವಾದವು: "ಊಟ ಮಾಡುವ ಮೊದಲೇ..."—ಮಾತನಾಡುವದು ಅಸಾಧ್ಯವಾಯಿತು. ಕೂತಲ್ಲಿಂದ ಎದ್ದವನೇ ಇವನು ಏನು ಮಾಡುತ್ತಿದ್ದಾನೆ ಎನ್ನುವುದು ನಾಗಪ್ಪನ ಲಕ್ಷ್ಯಕ್ಕೆ ಬರುವ ಮೊದಲೇ ಶ್ರೀನಿವಾಸ ನೆಲದ ಮೇಲೆ ಮಂಡಿಯೂರಿ ಕುಳಿತು ನಾಗಪ್ಪನ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದ: "ದಮ್ಮಯ್ಯ ನಾಗಪ್ಪಾ. ಇಷ್ಟೊಂದು ನಿರ್ದಯನಾಗಬೇಡ. ಇಷ್ಟೆಲ್ಲ ಕಷ್ಟಪಟ್ಟು ಬೆಳೆಸಿಕೊಂಡುಬಂದದ್ದನ್ನು ಹೀಗೆ ಮಣ್ಣುಗೂಡಿಸಬೇಡ" ಎಂದ. ಇದು ಬರಿ ನಾಟಕವಲ್ಲ. ಶ್ರೀನಿವಾಸ ನಿಜಕ್ಕೂ ಯಾವುದಕ್ಕೋ ಹೆದರಿದ್ದಾನೆ! ವಿವೇಕಶೂನ್ಯವಾದ ರೀತಿಯಲ್ಲಿ ಬೆಚ್ಚಿಕೊಂಡಿದ್ದಾನೆ: ಪ್ಯಾಂಟಿನ ಒಳಗೆ ಕೈಹಾಕಿ ಕಾಲುಗಳನ್ನು ಹಿಡಿದಲ್ಲೇ ಅಂಗೈಗಳು ಬೆವರಿನಿಂದ ಒದ್ದೆಯಾಗಿದ್ದುವು. ತನ್ನ ಕಣ್ಣುಗಳಲ್ಲಿ ಕಣ್ಣು ನೆಡಲು ಹವಣಿಸುತ್ತಿದ್ದವನ ಮೋರೆಯಲ್ಲಿ-ಹಣೆಯ ಮೇಲೆ, ಗದ್ದ ಮೂಗುಗಳ ಮೇಲೆ-ಬೆವರ ಹನಿಗಳು ಸಾಲುಗಟ್ಟಿದ್ದುವು. ನಾಗಪ್ಪ ಶಾಕ ಬಡೆದವನ ಹಾಗೆ ಶ್ರೀನಿವಾಸನ ಕೈಗಳಿಂದ ಕಾಲುಗಳನ್ನು ಬಿಡಿಸಿಕೊಂಡವನೇ ಕಿಡಕಿಗೆ ಬಂದು ಹೊರಗೆ ನೋಡುತ್ತ ನಿಂತ: ಕಣ್ಣ ಇದಿರಿನ ಪರಿಸರದಿಂದ ಹೊರಟ ಬೆಳಕು. ಕಣ್ಣ ಪರದೆಯ ಮೇಲೆ ಚಿತ್ರಗಳಾಗಿ ಮೂಡುತ್ತಿತ್ತೇ ಹೊರತು. ಮೆದುಳು ಆ ಚಿತ್ರಗಳ ಗುರುತು ಹಿಡಿಯಲು ನಿರಾಕರಿಸುತ್ತಿದ್ದಂತಿತ್ತು...

ಬೆನ್ನ ಹಿಂದಿನಿಂದ ವಿಚಿತ್ರ ಸದ್ದು. ಬೋಳೀಮಗ ಏನೋ ಹೇಳುತ್ತಿರಬೇಕು ಇಲ್ಲ, ತನ್ನಷ್ಟಕ್ಕೇ ಮಾತನಾಡಿಕೊಳ್ಳುತ್ತಿರಬೇಕು ಅನ್ನಿಸಿ ಮೈ ಜುಮ್ ಎಂದಿತು: ಕಿವಿಯ ಮೇಲೆ ಬೀಳುತ್ತಿದ್ದದ್ದು ಮಾನವಸಹಜ ಭಾಷೆಯಾಗಿ ತೋರಲಿಲ್ಲ; ಬರೇ ಅರ್ಥವಾಗದ ಸದ್ದು:

’ಬದುಕಿನಲ್ಲಿ ನಾನು ಎಷ್ಟೊಂದು ನೋವು ತಿಂದಿದ್ದೇನೆ. ಕಷ್ಟಪಟ್ಟಿದ್ದೇನೆ. ಆದರೆ ಯಾರ ಮುಂದೂ ದೀನನಾದವನಲ್ಲ. ಯಾರ ಕಾಲನ್ನೂ ಹಿಡಿದವನಲ್ಲ. ಈವತ್ತು ನಿನ್ನದನ್ನು ಹಿಡಿದೆ. ಒಪ್ಪುತ್ತೇನೆ: ನಾವು ಜಿದ್ದಿನ ಜನ ಎಂದು ನೀನು ತಿಳಕೊಂಡರೂ ಕೆಲವು ವಿಷಯಗಳಲ್ಲಿ ಮಾತ್ರ ನಿನಗಿದ್ದ ಧೈರ್ಯ ನನಗಿಲ್ಲ. ನನ್ನ ಕುಲದ ಬಗ್ಗೆ, ಚಿಕ್ಕಂದಿನ ಬಡತನದ ಬಗ್ಗೆ, ಚಾರಿತ್ರ್ಯದ ಬಗ್ಗೆ - ಯಾರಾದರೂ ಮಾತನಾಡಿದರೆ ಕೇಳುವ ಧೈರ್ಯ ನನಗೆ ಎಳ್ಳಷ್ಟೂ ಇಲ್ಲ. ಇದರ ಕಾರಣ ನಿನಗೆ ಗೊತ್ತಾಗಬೇಕು. ನಿನ್ನ ಹಾಗೆ ಮಾನಸಶಾಸ್ತ್ರ ಓದಿದವನಲ್ಲ ನಾನು. ಅಪ್ಪನ ಬಗ್ಗೆ ನಾನು ಆದರ ಇದ್ದವನಲ್ಲ. ಅವನು ಕೋಟಿತೀರ್ಥದಲ್ಲಿ ಮುಳುಗಿ ಜೀವ ಕಳೆದುಕೊಂಡಾಗ ಒಂದು ದರಿದ್ರ ಪೀಡೆ ತೊಲಗಿತು ಎಂದು ಸಂತೋಷಪಟ್ಟಿದ್ದನ್ನು ಯಾವ ಭಿಡೆ ಇಲ್ಲದೇ ಒಪ್ಪಿಕೊಳ್ಳುವ ಧೈರ್ಯವಿದೆ. ಆದರೆ ಅದೇ ದುರ್ಘಟನೆ ನಿನ್ನ ಕತೆಯಲ್ಲಿ ಮೂಡಿ ಬಂದು ಓದಲು ಸಿಕ್ಕಾಗ ಓದಿದ ಕೆಲವು ದಿನ ನಾನು ಅಂಜಿಕೊಂಡ ರೀತಿ ನನಗೊಬ್ಬನಿಗೇ ಗೊತ್ತು. ನೀನು ನನ್ನ ಅಪ್ಪನ ಹೆಸರನ್ನು ಕೂಡ ಬದಲಿಸದೇ ಎಲ್ಲ ವಿವರಗಳ ವಿಶ್ಲೇಷಣೆ ಮಾಡಿ ಕತೆ ಬರೆದಾಗ ಒಂದು ಹೇಳಹೆಸರಿಲ್ಲದ ಹಳ್ಳಿಯ ಕೊಂಪೆಯಲ್ಲಿ ನಡೆದ ಈ ದುರ್ಮರಣ ಜಗಜ್ಜಾಹೀರವಾಗುತ್ತದೆಯಲ್ಲ ಎಂಬ ಸತ್ಯಕ್ಕೆ ಭೀತನಾಗಿದ್ದೆ... ಮೊದಲಿನಿಂದಲೂ ನಿನ್ನನ್ನು ನೋಡಿದರೆ ನನಗೆ ಭಯ. ಯಾಕೆ ಎನ್ನುವದು ನನಗೇ ಗೊತ್ತಿಲ್ಲ. ನಾನು ನನ್ನಲ್ಲೇ ಬಚ್ಚಿಟ್ಟುಕೊಂಡದ್ದನ್ನು ಉಳಿದವರೆದುರು ಬಿಚ್ಚುವ ಧೈರ್ಯ ನನಗಿಲ್ಲವೇ ಇಲ್ಲ. ಉಳಿದವರಿಗೆ ಗೊತ್ತಾಗುವ ಶಕ್ಯತೆ ಇಲ್ಲದ ಎಂಥದ್ದನ್ನು ಬೇಕಾದರೂ ಮಾಡುವ ಎದೆಗಾರಿಕೆ ನನಗಿದೆ. ನಾನು ಬಚ್ಚಿಟ್ಟುಕೊಂಡ ಎಷ್ಟೋ ಸಂಗತಿಗಳು ನಿನಗೊಬ್ಬನಿಗೇ ಗೊತ್ತಿವೆ ಎನ್ನುವುದನ್ನು ಬಲ್ಲೆ. ಆದರೆ ನಿನಗೂ ಗೊತ್ತಿಲ್ಲ ಎಂದಕೊಂಡದ್ದು? ಅದು ಕೂಡ ನನಗೀಗ ಗೊತ್ತಾಗಿಬಿಟ್ಟಿದೆಯೆ? ಗೊತ್ತಾಗಿಬಿಡಬಹುದೆ? ಇಷ್ಟು ದಿನ ಬಂದಿರದ ಸಂಶಯ, ನೀನು ಕಾದಂಬರಿ ಬರೆಯುತ್ತಿದ್ದೀ ಎಂದು ತಿಳಿದದ್ದೇ, ಹೀಗೇಕೆ ಕಾಡುತ್ತಿದೆಯೋ ಅರಿಯೆ. ಅಪ್ಪ ಕೋಟಿತೀರ್ಥದಲ್ಲಿ ಸತ್ತದ್ದು ನಿನಗೆ ಗೊತ್ತಿದೆ. ಯಾಕೆ ಎನ್ನುವದು ಗೊತ್ತಿದೆಯೆ? ಹೇಗೆ ಎನ್ನುವದು? ಅದು ಆತ್ಮಹತ್ಯೆಯೆಂದು ನಿಜಕ್ಕೂ ನಂಬುತ್ತೀಯಾ? ಶಾರದೆಯ ಬಗ್ಗೆ ಕೂಡ ಏನೋ ಗೊತ್ತಾಗಿದೆ ಎಂಬ ಗುಮಾನಿ. ಆದರೆ ಅವಳ ಜೊಚ್ಚಿಲು-ಮಗುವಿನ ಬಗ್ಗೆ? ಆ ಮಗುವಿನ ತಂದೆಯ ಬಗ್ಗೆ? ನಿನಗೆ ಗೊತ್ತಿರಬಹುದಾಗಿದ್ದದ್ದಕ್ಕೆ ಹೆದರಿಕೆಯಲ್ಲ; ಗೊತ್ತಿದ್ದದ್ದನ್ನು ಬಿಚ್ಚುವ ನಿನ್ನ

ದುರಭ್ಯಾಸಕ್ಕೆ. ಅಮ್ಮನ ಬಗ್ಗೆ ಕತೆ ಬರೆದಾಗಲೇ ಹೆದರಿಕೊಂಡಿದ್ದೆ. ಈಗ ನೇತ್ರಾವತಿಯ ಸಾವಿನ ಬಗ್ಗೆ ಕಾದಂಬರಿ ಬರೆಯುತ್ತೀಯಂತೆ. ಈಗಾಗಲೇ ಅರ್ಧದಷ್ಟು ಬರೆದು ಮುಗಿಸಿದ್ದೀಯಂತೆ. ನೀನು ಹೈದರಾಬಾದ್ ಬಿಟ್ಟು ಮುಂಬಯಿಗೆ ಬಂದದ್ದೇ ಈ ಕಾದಂಬರಿ ಬರೆಯಲಿಕ್ಕಂತೆ – ಸೀತಾರಾಮ ಹೇಳಿದ. ಎಲ್ಲ ಬಿಟ್ಟು ಖೇತವಾಡಿಯ ಆ ಹೊಲಸು ಕೋಣೆಗಳಲ್ಲಿ ಉಳಿದುಕೊಂಡದ್ದರ ಕಾರಣ ಕೂಡ. ಅರ್ಜುನ್‌ರಾವ್ ಕೂಡ ಹಾಗೇ ಹೇಳಿದ. ಸಂತೋಷಭವನದ ನಾಯಕನೂ ಸಹ. ಈ ಮೂವರಿಗೂ ನನ್ನ ಬಗ್ಗೆ ಹೊಟ್ಟೆಕಿಚ್ಚು. ಬೇಡವಾದದ್ದನ್ನೆಲ್ಲ ಹೇಳಿ ಹೆದರಿಸುತ್ತಾರೆ. ಖೇತವಾಡಿ ಅದರಲ್ಲೂ ಖೇಮರಾಜಭವನ, ಗೋಲಪೀಠಾಗಳ ವರ್ಣನೆ ಮಾಡಿದ ರೀತಿಯನ್ನಂತೂ ಒಂದು ದಿನ ನಮ್ಮ ಮನೆಯಲ್ಲೇ ಸತ್ಯನಾರಾಯಣಪೂಜೆಗೆ ಬಂದ ಜನರ ಇದಿರು ಉಪ್ಪು-ಖಾರ ಹಚ್ಚಿ ಹೇಳುತ್ತ ಬಾಯಿ ಚಪ್ಪರಿಸುತ್ತಿದ್ದ ಸೀತಾರಾಮ. ಹೆಸರುಗಳನ್ನು ಕೂಡ ಬದಲಿಸಿಲ್ಲವಂತೆ... ಹೌದೇನೋ ನಾಗಪ್ಪಾ? ಯಾಕೋ ನಿನಗೆ ನನ್ನ ಮೇಲೆ ಇಷ್ಟೊಂದು ಹೆಗೆ? ಈ ಕಾದಂಬರಿ ಈಗ ಯಾಕೆ? ಇಷ್ಟೆಲ್ಲ ವರ್ಷಗಳ ಮೇಲೆ? ನನ್ನ ಅಭ್ಯುದಯದ ಕಾಲದಲ್ಲಿ? ಈವತ್ತು ನಮ್ಮ ಸಮಾಜದಲ್ಲಿ ನನಗೊಂದು ಮಾನದ ಸ್ಥಾನವಿದೆ. ಸಾರಸ್ವತ-ಬ್ರಾಹ್ಮಣ-ಲೀಗಿನ ಅಧ್ಯಕ್ಷ ಆಗಲಿದ್ದೇನೆ. ನಗರಪಾಲಿಕೆಯ ಚುನಾವಣೆಗೆ ನಿಂತಿದ್ದೇನೆ. ಮುಂದೆ ದೈವ ತೆರೆದರೆ ಎಸ್ಸೆಂಬ್ಲೀ ಇಲೆಕ್ಷನ್ನಿಗೂ, ಹಣ ಬೇಕಾದಷ್ಟು ಗಳಿಸಿದ್ದೇನೆ ನಾಗಪ್ಪಾ, ಸ್ವಂತ ಮೆಹನತ್ತಿನಿಂದ. ಸದ್ಯ ಟ್ರಾನ್ಸ್‌ಪೋರ್ಟ ಬಿಸಿನೆಸ್ಸೂ ಶುರುಮಾಡಿದ್ದೇನೆ-ಈಗ ಎರಡು ವರ್ಷಗಳಾಗುತ್ತ ಬಂದವು. ಆ ಮೂಲಕವೇ ನಿನ್ನ ಕಂಪನಿಯೊಡನೆ ಸಂಬಂಧ. ನಿನ್ನ ಪರಿಚಯದ ಆಧಾರದ ಮೇಲೇ ನಿನ್ನ ಇಲ್ಲಿಯ ಆಫೀಸಿಗೆ ಹೋಗಿದ್ದೆ. ಆಗಲೇ ಖಂಬಾಟಾನ ಪರಿಚಯವಾಯಿತು. ಅತ್ಯಂತ ಖೋಟಾ ಮನುಷ್ಯ. ಎಲ್ಲ ದಗಲ್ಬಾಜಿಯ ವ್ಯವಹಾರ. ಖಂಬಾಟಾನ ಹೆಂಡತಿ, ನಿನ್ನ DMDಯ ಹೆಂಡತಿ ಇಬ್ಬರೂ ನನ್ನ ಕಂಪನಿಯಲ್ಲಿ ಭಾಗೀದಾರರು. ಇದು ನಿಮ್ಮ ಕಂಪನಿಯಲ್ಲಿ ಎಷ್ಟು ಮಂದಿಗೆ ಗೊತ್ತಿದೆಯೋ ಅರಿಯೆ. ಹಾಗೆಂದೇ ಅಲ್ಲವೆ ಕಂಪನಿಗೆ ಬರುವ, ಕಂಪನಿಯಿಂದ ಹೊರಗೆ ಹೋಗುವ ಎಲ್ಲ ಮಾಲುಗಳ ಸಾಗಾಣಿಕೆಯ ಮೂರು ವರ್ಷಗಳ ಕಾಂಟ್ರ್ಯಾಕ್ಟು ನಮಗೆ ಸಿಕ್ಕದ್ದು? ಕಾಂಟ್ರ್ಯಾಕ್ಟಿನ ಮೇಲೆ ಸಹಿ ಮಾಡಿದವರು ಹೈದರಾಬಾದ ಫ್ಯಾಕ್ಟರಿಯ ಮ್ಯಾನೇಜರರು; ಆದರೆ MDಯವರ ಇನೀಶಲ್ಲೂ ಇವೆ ಅದರ ಮೇಲೆ. ಸದ್ಯ ನಿನ್ನ ಬಂದೂಕವಾಲಾ ದೊಡ್ಡ ಲಫಡಾದಲ್ಲಿ

ಸಿಕ್ಕಿಕೊಂಡಿದ್ದಾನೆ. ಹತ್ತು ಟನ್ನಿನಷ್ಟು ಕಚ್ಚಾ ಮಾಲನ್ನು ನಿಮ್ಮ ಫ್ಯಾಕ್ಟರಿಯಿಂದ ಕಳ್ಳರೀತಿಯಿಂದ ಸಾಗಿಸಿ ಮುಂಬಯಿಯ ಒಬ್ಬ ದೊಡ್ಡ ವ್ಯಾಪರಿಗೆ ಮಾರಿದ್ದಾರೆ. ಈ ಮಾಲನ್ನು ತಯಾರಿಸುತ್ತಿದ್ದ ಕಾರಖಾನೆಯಲ್ಲಿ ತಾಂತ್ರಿಕ ತೊಂದರೆಯಿಂದಾಗಿ ಉತ್ಪಾದನೆ ಹಲವು ತಿಂಗಳವರೆಗೆ ನಿಂತೇ ಹೋದಾಗ ಈ ಸರಕಿನ ಧಾರಣೆ ಪೇಟೆಯಲ್ಲಿ ಮೂಲಧಾರಣೆಯ ಹತ್ತುಪಟ್ಟಿನಷ್ಟಾಯಿತು. ಬಂದೂಕವಾಲಾ ಹಾಗೂ ಅವನ ಚೇಲಾಗಳು ಕೂಡಿ ಕಾರಖಾನೆಯ ಒಂದು ವಿಭಾಗಕ್ಕೆ ಬೆಂಕಿ ಹತ್ತಿದ ನಾಟಕ ಮಾಡಿ ಈ ಮಾಲು ಆ ಬೆಂಕಿಯಲ್ಲಿ ಸುಟ್ಟುಹೋದಂತೆ ವರದಿ ಮಾಡಿದ್ದಾರೆ. ಬೆಂಕಿ ಹತೋಟಿಯ ಹೊರಗೆ ಹೋಗಿ, ಪಾಪ ಮೂರು ಜನ ಸತ್ತರಂತೆ. ಈ ಎಲ್ಲ ಲಫಡಾದ ವಿವರಗಳೆಲ್ಲ ಯಾರಿಗೋ ಹೇಗೊ ಗೊತ್ತಾಗಿ ಸಹಿಮಾಡಿರದ ಪತ್ರದ ಪ್ರತಿಗಳನ್ನು ಕಂಪನಿಯ ದೇಶದಲ್ಲಿಯ, ವಿದೇಶದಲ್ಲಿಯ ಡೈರೆಕ್ಟರರಿಗೆ, ಷೇರುದಾರರಿಗೆ ಕಳಿಸಿದ್ದಾರಂತೆ. ಈ ಪತ್ರದ ಹಿಂದಿನ ತಲೆ ನಿನ್ನದು ಎಂದು ಬಂದೂಕವಾಲಾನ ಸಂಶಯ. ಈ ತನಿಖೆಯ ಹಗರಣ ನಿನ್ನ ಬಾಯಿ ಮುಚ್ಚಿಸುವ ದುಷ್ಟ ಉಪಾಯ. ಈಗ ನಿನ್ನ MD ಯವರು ಏಕಾಏಕೀ ಅಮೇರಿಕ ಹೊರಟುಹೋದದ್ದಕ್ಕೂ ಇದಕ್ಕೂ ಏನೂ ಸಂಬಂಧ ಇಲ್ಲವೆಂದು ತಿಳಿಯಬೇಡ. ಸಮಯ ಬಂದರೆ ತಮ್ಮ ತಪ್ಪನ್ನು ಮುಚ್ಚಿಕೊಳ್ಳಲು ನಿನ್ನನ್ನು ಬಲಿಕೊಟ್ಟರೂ ಕೊಟ್ಟರೇ. ನನಗೊಬ್ಬನಿಗೇ ಗೊತ್ತಿದೆ ಯಾವ ವ್ಯಾಪಾರಿಗೆ ಈ ಕಳ್ಳಮಾಲನ್ನು ಮಾರಿದ್ದಾರೆ ಎನ್ನುವದು. ಹಾಗೆಂದೇ ನಮ್ಮ ಸೊಸೈಟಿಯಲ್ಲಿ ಮೂರು ಫ್ಲ್ಯಾಟ್ಸ್ ಬುಕ್ ಮಾಡಿದ್ದು; ಪ್ರತಿಯೊಂದಕ್ಕೆ ರೋಖು ಹಣ ೨೫೦೦೦ ರೂಪಾಯಿ ನನ್ನ ಕೈಯಲ್ಲಿ ಕೊಟ್ಟದ್ದು: ಮುಂದೊಂದು ದಿನ ಕಂಪನಿಯ ಡೈರೆಕ್ಟರ್ ಮಾಡುವ ಭರವಸೆ ಕೊಟ್ಟದ್ದು.'

ವಾರಗಟ್ಟಲೆ, ತಿಂಗಳುಗಟ್ಟಲೆ, ವರ್ಷಗಟ್ಟಲೆ ಅನುಭವಿಸುತ್ತ ಬಂದದ್ದು ಐದು ಮಿನಿಟುಗಳ ಮಾತಿನಲ್ಲಿ ಹಿಡಿಯುವದು ಶಕ್ಯವಾಗಿ ತೋರಲಿಲ್ಲ ಶ್ರೀನಿವಾಸನಿಗೆ. ಮಾತನಾಡೋಣವೆಂದು ಬಾಯಿ ತೆರೆದರೆ ತುಟಿಗಳು ಥರ ಥರ ಅದರುತ್ತಿದ್ದುವೆ ಹೊರತು ಶಬ್ದ ಹುಟ್ಟುತ್ತಿರಲಿಲ್ಲ. ಹುಟ್ಟಿದ್ದು ಇನ್ನೊಬ್ಬನಿಗೆ ಅರ್ಥವಾಗಬಹುದಾದ ಭಾಷೆಗಿಂತ ಹೆಚ್ಚಾಗಿ ಒಂದು ಖಾಸಗೀ ಸಂಜ್ಞಾಕ್ರಮವನ್ನು ಹೋಲುವ ವಿಚಿತ್ರ ಸದ್ದಾಗಿ, ನರಳಿಕೆಯಾಗಿ ನಾಗಪ್ಪನ ಕಿವಿಗಳನ್ನು ಹೊಕ್ಕಾಗ, ನಾಗಪ್ಪ ನಿಂತಲ್ಲೇ ಬೆವರಿ ಸಣ್ಣಗೆ ನಡುಗಹತ್ತಿದ: ಅದೆಷ್ಟು ಹೊತ್ತು ನಿನ್ನ ಮಾತಿನ

ಹಾದಿ ಕಾಯಲೋ ಬೋಳೀಮಗನೇ. ಬಾಯಿ ಬಿಡೋ ಅದೇನು ಪೆಟ್ಟು ತಿಂದ ನಾಯಿಯ ಹಾಗೆ ಕುಂಯ್ಗುಡುತ್ತೀ: ಹುಟ್ಟಿದ ನಡುಕ ಬೆನ್ನ ಹಿಂದೆ ಕೂತವನ?-ನಿಂತವನ?-ದೃಷ್ಟಿಗೆ ಬೀಳದಿರಲಿ ಎನ್ನುವಂತೆ ಕಿಡಕಿಯ ಕಟ್ಟಿಗೆಯ ಚೌಕಟ್ಟನ್ನು ಗಟ್ಟಿಯಾಗಿ ಅದುಮಿ ಹಿಡಿದ. ಬೆನ್ನಹಿಂದಿನವನ ನರಳಿಕೆಯ ಸದ್ದು ಹೆಚ್ಚುತ್ತ ಹೋದ ಹಾಗೆ, ಕಿಡಕಿಯ ಹತ್ತಿರ ನಿಲ್ಲುವದು ನಾಗಪ್ಪನಿಗೆ ಅಸಾಧ್ಯವಾಗಹತ್ತಿತು: ಹೊರಗಿನ ಪರಿಚಯದ ಪರಿಸರ ಕೂಡ ಎಂದಿನ ಗೆಳೆತನವನ್ನು ಬಿಟ್ಟುಕೊಟ್ಟು ಕೆಲ ಹೊತ್ತಿನ ಮೊದಲಷ್ಟೇ ಸಂಧಿಸಿದ ಮುದುಕಿಯ ಬೀಭತ್ಸವಾದ ದ್ವೇಷದಂಥ ಕುರೂಪ ಮುಸುಕೆಳೆದುಕೊಳ್ಳುತ್ತಿದ್ದ ಭಾಸವಾಗಿ ಸರಕ್ಕನೆ ಹಿಂತಿರುಗಿದಾಗ ಅಪ್ರತಿಭನಾದ: ಮಂಚದ ಅಂಚಿನಲ್ಲಿ ಕೂತ ಶ್ರೀನಿವಾಸ ಕೆಲವೇ ಕ್ಷಣಗಳಲ್ಲಿ ತಾರುಣ್ಯವನ್ನು ಕಳೆದುಕೊಂಡು ಹಣ್ಣು ಹಣ್ಣು ಮುದುಕನಾದವನ ಹಾಗೆ ತೋರುತ್ತಿದ್ದ! ಎದ್ದು ನಿಲ್ಲುವ ತಾಕತ್ತೇ ಇಲ್ಲದವನ ಹಾಗೆ ತೂಗಾಡುತ್ತ ಮಂಚದಿಂದ ಎದ್ದ. ಮುದ್ದೆಯಾಗಿ ನಾಗಪ್ಪನ ಕಾಲಮೇಲೆ ಬಿದ್ದು; "ನನ್ನ ಬಗ್ಗೆ ಕಾದಂಬರಿ ಬರೀಬೇಡಾss." ಎಂದ. "ಬೇಕಾದರೆ ಬೇಕಾದರೆ..." ಮುಂದಿನ ಮಾತುಗಳು ಕುರಿಯ ಹಾಗೆ ಬೇ ಬೇ ಬೇ ಎಂದು ಅಸಂಬದ್ಧವಾದ ಧ್ವನಿ ಎಬ್ಬಿಸಿದುವು. ಆದರೆ ನಾಗಪ್ಪನಿಗೆ ಮಾತ್ರ- ಸ್ವತಃ ಆಡಿದವನಿಗೇ ಅರ್ಥವಾಗಿರಲಾರದ — ಮಾತಿನ ಪ್ರತಿ ಶಬ್ದವೂ ಸ್ಫುಟವಾಗಿ ಕೇಳಿಸದಂತಾಗಿ ಶ್ರೀನಿವಾಸನ ಕೈಗಳಿಂದ ಕಾಲುಗಳನ್ನು ಬಿಡಿಸಿಕೊಂಡವನೇ ಕೋಣೆಯ ಕದಗಳನ್ನು ತೆರೆದು ಅಲ್ಲಿಂದ ಓಟ ಕಿತ್ತ.

ಓಡುವ ರಭಸಕ್ಕೆ ಎರಡು ಸಾರೆ ಹೆಜ್ಜೆ ತಪ್ಪಿ ಮುಗ್ಗರಿಸಿ ಬೀಳುವಂತಾಯಿತು: ಓಟಕ್ಕೆ ಪ್ರೇರಣೆಯಾದದ್ದರಲ್ಲಿ ಭಯ ಹಾಗೂ ಜಿಗುಪ್ಸೆ ಒಂದು ಇನ್ನೊಂದರೊಡನೆ ಸ್ಪರ್ಧಿಸುವಂತಿದ್ದು, ಇಲ್ಲಿಗೆ ಬಂದಾಗ ಕಳಚಿಟ್ಟ ಬೂಟುಗಳನ್ನು ಈಗ ಹಾಕಿಕೊಳ್ಳುವ ವ್ಯವಧಾನವೂ ಇಲ್ಲದವನ ಹಾಗೆ ಬರಿಗಾಲಲ್ಲೇ ಮನೆಯಿಂದ ಹೊರಬಿದ್ದು ಭಡ ಭಡ ಜಿನ್ನೆಯ ಮೆಟ್ಟಿಲಿಳಿದು, ಅಂಗಳದಲ್ಲಿ ಕಾಲಿಟ್ಟವನೇ ಏನೋ ಭಯಾನಕವಾದದ್ದು ಬೆನ್ನಟ್ಟಿ ಬಂದವನ ಹಾಗೆ ಓಡುತ್ತಿದ್ದ ರೀತಿಗೆ ನೋಡಿದ ಜನ ಬೆಕ್ಕಸಬೆರಗಾದರು. ಆದರೆ ಇದಾವುದರ ಪರಿವೆಯೇ ಇಲ್ಲದವನ ಹಾಗೆ ನಾಗಪ್ಪ ಓಡುತ್ತಿದ್ದ. ಓಡೋಡಿ ಕೆಡಲ್ ರೋಡಿಗೆ ಬರುವಷ್ಟರಲ್ಲಿ ಕೂದಲು ಕೆದರಿಕೊಂಡಿದ್ದುವು. ಮೈ ಧಾರಾಳವಾಗಿ ಬೆವೆತ್ತಿತ್ತು. ಕಲ್ಲು-ಮಣ್ಣುಗಳ ಮೇಲೆ ತಿಕ್ಕಿದ ಪಾದಗಳು ಉರಿಯತೊಡಗಿದವು. ಒಳ್ಳೇ

ಬಿಸಿಲಿನ ಹೊತ್ತು. ಹೊಟ್ಟೆ ಚೆನ್ನಾಗಿ ಹಸಿದಿತ್ತು ಎಂಬುದರ ನೆನಪು ಕೂಡ ಮಾಯವಾಗಿತ್ತು. ಟ್ಯಾಕ್ಸಿ ಹಿಡಿದು ಆದಷ್ಟು ಬೇಗ ಕೋಣೆ ಸೇರಬೇಕು ಎಂಬ ಒಂದೇ ಒಂದು ವಿಚಾರ ಮನಸ್ಸಿನಲ್ಲಿಯ ಉಳಿದೆಲ್ಲವನ್ನೂ ಮೆಟ್ಟಿ ನಿಂತಿದ್ದರೂ ರಸ್ತೆಗೆ ಬಂದದ್ದೇ ಧುತ್ ಎಂದು ಇದಿರಾದದ್ದು ಟ್ಯಾಕ್ಸಿಯೆಂದು ಗುರುತು ಹಿಡಿಯುವದೇ ಕಠಿಣವಾಯಿತು. ಇವನು ಓಡಿ ಬಂದ ರೀತಿಯನ್ನು ಕಂಡೇ ಏನೋ ವಿಶೇಷವನ್ನು ಊಹಿಸಿಕೊಂಡ ಟ್ಯಾಕ್ಸೀವಾಲಾನೇ- 'ಟ್ಯಾಕ್ಸೀ ಬೇಕೇನು ಸಾಹೇಜ್' ಎಂದು ಕೇಳಿದಾಗ ಯಾಂತ್ರಿಕವಾಗಿ ಟ್ಯಾಕ್ಸಿಯನ್ನು ಸಮೀಪಿಸಿ, ಯಾಂತ್ರಿಕವಾಗಿಯೇ ಕದ ತೆರೆದು ಸೀಟಿನ ಮೇಲೆ ಮೈಚೆಲ್ಲಿ ಕಣ್ಣುಮುಚ್ಚಿದ: ತನಗೇ ತಿಳಿಯದ ಹಾಗೆ ಎಲ್ಲಾದರೂ ತೆರೆದುಕೊಂಡಾವೋ ಎಂಬ ಅಳುಕಿನಿಂದೆಂಬಂತೆ ಎರಡೂ ಕೈಗಳಿಂದ ಅವುಗಳನ್ನು ಗಟ್ಟಿಯಾಗಿ ಮುಚ್ಚಿ ಹಿಡಿದ. ಟ್ಯಾಕ್ಸಿಯವನು ಮೀಟರಿನ ಪತಾಕೆಯನ್ನು ಕೆಳಗೆ ಇಳಿಸುತ್ತ 'ಎಲ್ಲಿಗೆ ಹೋಗುವದು ಸಾಹೇಬ್' ಎಂದು ಕೇಳಿದಾಗ 'ಖೇತವಾಡಿ - ಏಳನೇ ಗಲ್ಲಿ' ಎನ್ನುವದೂ ಕಠಿಣವಾಯಿತು. ಶ್ರೀನಿವಾಸ ಬೇ ಬೇ ಬೇ ಎಂದು ಬೊಗಳಿದ ಮಾತುಗಳು ನೆನಪಿಗೆ ಬರಹತ್ತಿದುವು: ಅವನು ಅಂದದ್ದಾದರೂ ಹೌದೆ? ಅಥವಾ...ಇಲ್ಲ, ನಾಗಪ್ಪನಿಗೆ ಯಾವ ಸಂಶಯವೂ ಉಳಿಯಲಿಲ್ಲ. ಸರಿಯಾಗಿಯೇ ಕೇಳಿದ್ದೇನೆ ಎನ್ನುವದು. ಮನದಟ್ಟಾಗುತ್ತಿದ್ದ ಹಾಗೇ ಹೊಟ್ಟೆ ತೊಳಸಿದಂತಾಗಿ ಟ್ಯಾಕ್ಸಿಯವನಿಗೆ ವಾಹನವನ್ನು ರಸ್ತೆಯ ಅಂಚಿಗೆ ತರುವಂತೆ ಹೇಳಿ ಅವನು ಹಾಗೆ ತರುವ ಪುರಸೊತ್ತೂ ಇಲ್ಲದವನ ಹಾಗೆ ಕಿಟಕಿಯೊಳಗಿಂದ ತಲೆ ಹೊರಗೆ ಹಾಕಿ ಬಕಬಕ ಕಾರಿಕೊಂಡ. ಪುಣ್ಯಕ್ಕೆ ಆ ಹೊತ್ತಿಗೆ ವಾಹನಗಳ ಓಡಾಟ ಕಡಿಮೆಯಾಗಿದ್ದರಿಂದ ಟ್ಯಾಕ್ಸಿಯ ಎಡಮಗ್ಗಲಲ್ಲಿ ಓಡುವ ಇನ್ನೊಂದು ವಾಹನ ಇರಲಿಲ್ಲ. ಬಸ್‌ಸ್ಟಾಪಿನಲ್ಲಿ ನಿಂತವರಲ್ಲಿ ಕೆಲವರು-ಕುಡುಕನಿರಬೇಕು ಎಂಬ ಸಂಶಯದಿಂದ ಕಣ್ಣುಕಿಸಿದು ನೋಡಿದರು. ಟ್ಯಾಕ್ಸೀ ಡ್ರೈವರನ ತಲೆಯಲ್ಲೂ ಅದೇ ಸಂಶಯ! ಆದರೂ ಬಹಳ ಹೊತ್ತಿನ ತನಕ ಗಿರಾಕಿ ಸಿಗದೆ ಬೇಜಾರುಪಟ್ಟವನಿಗೆ ದೂರದ ಪ್ರಯಾಣದ ಗಿರಾಕಿಯೊಂದು ಸಿಕ್ಕಿದ್ದರಿಂದ ನೊಂದು ಕೇಳುವ ಧೈರ್ಯವಾಗದೇ ಅವನು ಹೇಳಿದಂತೆ ಜನರಿಲ್ಲದ ಜಾಗ ಬಂದೊಡನೆ ಟ್ಯಾಕ್ಸಿಯನ್ನು ಫೂಟ್‌ಪಾಥಿನ ಅಂಚಿಗೆ ಒಯ್ದು ನಿಲ್ಲಿಸಿದ. ಅದೇ ಶಮನವಾಗಹತ್ತಿದ ಓಕರಿಕೆ ಹಾಗೆ ನಿಲ್ಲಿಸಿದ್ದೇ ತಡ, ನಿಲ್ಲಿಸಿದ್ದರ ಕಾರಣದ ನೆನಪಿನಿಂದಲೇ ಇನ್ನೊಮ್ಮೆ ಕೆರಳಿ ಟ್ಯಾಕ್ಸೀ ಕದ ತೆರದು

ಕುಳಿತಲ್ಲಿಂದಲೇ ಕಾರಿಕೊಂಡ ಶ್ರೀನಿವಾಸನ ಮನೆಯ ಊಟದ ಪ್ರತೀಕ್ಷೆಯಿಂದಲೇ ಹಸಿದಕೊಂಡ ಹೊಟ್ಟೆ ಅವನಲ್ಲಿ ತಿಂದ ಬಿಸ್ಕೂಟು ಆಂಬೋಡೆಗಳನ್ನು, ಅರ್ಜುನ್‌ರಾವ್‌ರ ಮನೆಯಲ್ಲಿ ತಿಂದದ್ದರಲ್ಲಿ ಅರಗದೇ ಉಳಿದ ಬಟಾಟೇ ಪೋವೆ, ಕುಡಿದದ್ದಕ್ಕಿಂತ ಎಷ್ಟೋ ಪಟ್ಟು ಹೆಚ್ಚಾದ ಚಹದ ಬಣ್ಣದ ನೀರಿನಂತಹದನ್ನು-ಎಲ್ಲ ಎಲ್ಲವನ್ನೂ ಹೊರಗೆ ತಂದಿತು. ಟ್ಯಾಕ್ಸಿವಾಲಾನಿಗೆ ಈಗ ಸಂಶಯವೇ ಉಳಿಯಲಿಲ್ಲ... ಕಳ್ಳಸರಾಯಿಯನ್ನು ಎಂದೂ ಮುಟ್ಟಿರದ ಪೋಕ್ತನ ಹಾಗೆ - 'ಥತ್! ಸೂಳೇಮಗನೇ, ಇಷ್ಟು ಹೊತ್ತಿಗೇ ಲಕ್ಕಾಗಿ ಬಂದಿದ್ದೆಯಾ' ಎಂದುಕೊಂಡು ಕಾಲಿಗೆ ಚಪ್ಪಲಿ ಕೂಡ ಹಾಕಿಕೊಳ್ಳದೇ ತೂಗಾಡುತ್ತ ಬಂದಾಗಿನ ನಾಗಪ್ಪನ ವೇಷವನ್ನು ನೆನೆದುಕೊಂಡು ಮೂಗು ಮುಚ್ಚಿಕೊಂಡ. ನಾಗಪ್ಪ ಕದ ಮುಚ್ಚಿ, ಪ್ಯಾಂಟಿನ ಕಿಸೆಯೊಳಗಿಂದ ಕೈ-ರೂಮಾಲನ್ನು ಹೊರತೆಗೆದು. ಬಾಯಿ-ಮೋರೆಗಳನ್ನು ಒರಸಿಕೊಳ್ಳುತ್ತ, 'ಹೋಗೋಣ' ಎಂದಾಗಿನ ಕ್ಷೀಣ ಧ್ವನಿ ತನಗಾದರೂ ಕೇಳಿಸಿತ್ತೇ ಎಂಬ ಸಂಶಯ ಬಂದದ್ದರಿಂದ, ಇನ್ನೂ ಮೂಗಿನ ಮೇಲಿನ ಕೈ ತೆಗೆಯದೇ ತನ್ನತ್ತ ನೋಡುತ್ತಿದ್ದ ಡ್ರೈವರನಿಗೆ ಹೊರಡುವಂತೆ ಸನ್ನೆಮಾಡಿದ.

ಟ್ಯಾಕ್ಸೀ ಸ್ಟಾರ್ಟ ಮಾಡುತ್ತ "ಮಾಲು ಒಳ್ಳೆಯದಿರಲಿಕ್ಕಿಲ್ಲ ಸಾಹೇಬ್." ಎಂದ ಡ್ರೈವರನ ಉದ್ಧಟತನಕ್ಕೆ ಸಿಟ್ಟಿನ ಬದಲು ನಗು ಬರುವಂತಾದರೂ ಸದ್ಯ ಯಾವ ಭಾವನೆಯನ್ನೂ ವ್ಯಕ್ತಪಡಿಸುವ ತ್ರಾಣವೇ ಇಲ್ಲದವನ ಹಾಗೆ ಸೀಟಿನ ಮೇಲೆ ಆದಷ್ಟು ನಿಡಿದಾಗಿ ಮೈಚಾಚಿ ಕಣ್ಣು ಮುಚ್ಚಿಕೊಂಡ: ಮುಚ್ಚಿಕೊಂಡಲ್ಲೇ ಮತ್ತೆ, ನಡೆದದ್ದೆಲ್ಲ ನೆನಪಿಗೆ ಬರಹತ್ತಿದ ಭಯವಾಗಿ ಎದ್ದು ನೆಟ್ಟಗೆ ಕುಳಿತ: ಯಾವುದನ್ನೂ ಕುರಿತು ವಿಚಾರಮಾಡುವ ಧೈರ್ಯವೇ ಇರಲಿಲ್ಲ. ವಿಚಾರಮಾಡಿದರೆ ಶ್ರೀನಿವಾಸ ಕಾದಂಬರಿ ಬರೆಯದಿರಲು ಒಡ್ಡಿದ ಆಮಿಷದ ನೆನಪಾಗಬಹುದು, ನೆನಪಾದರೆ ತಿರುಗಿ ಕಾರಿಕೊಂಡೇನು ಎಂಬ ಕಾತರದಿಂದ ಮುಂದಿನ ಸೀಟಿನ ಅಂಚನ್ನು ಗಟ್ಟಿಯಾಗಿ ಅದುಮಿ ಹಿಡಿದ. ಅವುಡುಗಚ್ಚಿದ. ಕಣ್ಣುಗಳನ್ನು ದೊಡ್ಡದು ಮಾಡಿ ನೋಡಿದ. ಮುಂದಿನ ಕನ್ನಡಿಯ ತುಂಡಿನಲ್ಲಿ ತನ್ನ ಚಟುವಟಿಕೆಗಳನ್ನು ಅವಲೋಕಿಸುತ್ತಿದ್ದ ಡ್ರೈವರನ ಕಣ್ಣುಗಳನ್ನು ತನ್ನವು ಸಂಧಿಸಿದೊಡನೆ ಮಂದವಾಗಿ ನಕ್ಕ. ಡ್ರೈವರನ ಮೋರೆಯ ಮೇಲೂ ನಗು ಮೂಡಿತು. "ಯಾವ ಊರು?" ಎಂದು ಕೇಳಿದಾಗ "ಮಂಗಳೂರಿನ

ಕಡೆಯವನು" ಎಂದಾ ಡ್ರೈವರನಿಂದ ಉತ್ತರ ಬಂತು. "ಹೌದೆ? ಭಾಷೆ ಕೊಂಕಣಿಯೋ ಕನ್ನಡವೋ?" ಎಂದು ಕೇಳಿದ್ದಕ್ಕೆ "ತುಳು. ಆದರೆ ಕೊಂಕಣಿ ಕನ್ನಡ ಎರಡೂ ಬರುತ್ತವೆ." ಎಂದ. ನಾಗಪ್ಪ ತಾನು ಉತ್ತರಕನ್ನಡದವನೆಂದೂ, "ಕನ್ನಡದಲ್ಲಿ ಲೇಖಕನೆಂದು ಪರಿಚಯ ಮಾಡಿಕೊಟ್ಟ. ಡ್ರೈವರನಿಗೆ ಕನ್ನಡ ಲೇಖಕರ ಹೆಸರುಗಳಾವವೂ ಗೊತ್ತಿರಲಿಲ್ಲ. ಆದರೂ ಗೌರವದ ಭಾವನೆಯನ್ನು ಮೋರೆಯ ಮೇಲೆ ಬೆಳಗಿಸಿ ನೋಡುತ್ತಿದ್ದಾಗ ತಾನು ಆಗ ಕಾರಿಕೊಂಡದ್ದು ಸರಾಯಿಯಲ್ಲ ಎನ್ನುತ್ತಿರುವಾಗಲೇ ಡ್ರೈವರ್ ಸಂಕೋಚದ ಮುದ್ದೆಯಾಗಿ, ಕ್ಷಮೆ ಬೇಡುವ ದನಿಯಲ್ಲಿ - "ನನಗೆ ಈಗ ಗೊತ್ತಾಯಿತು ಸರ್, ಮರೆತುಬಿಡಿ," ಎಂದ. ತಾನು ಕನ್ನಡದಲ್ಲಿ ಬರೆಯುತ್ತಿದ್ದದ್ದೇನು ಎನ್ನುವದನ್ನು ಹೇಳಬೇಕೆನ್ನುವಷ್ಟರಲ್ಲಿ ಮತ್ತೆ ಕಾರಿಕೊಳ್ಳುವಂತಾಯಿತು. ಈ ಹೊತ್ತಿಗೆ ಹೊಟ್ಟೆಯೆಲ್ಲ ಖಾಲಿಯಾದ್ದರಿಂದ ಓಕರಿಕೆಯ ಸದ್ದೇ ದೊಡ್ಡದಾಯಿತು: ಆಹಾರದಲ್ಲಿ ಏನನ್ನಾದರೂ ಬೆರೆಸಿದರೋ ಏನೋ ಎನ್ನುವಂತಹ ಅನುಮಾನ ಪ್ರಕಟಿಸಿದ ಡ್ರೈವರನಿಗೆ ಆದದ್ದಾದರೂ ಏನು ಎಂದು ಹೇಳೋಣವೆಂದರೆ ತುಟಿಗಳು ನಡುಗಹತ್ತಿದುವು. ಆದರೆ ಕೆಲ ಸಮಯದ ನಂತರ, 'ಓಕರಿಕೆಗೆ ಕಾರಣವಾದದ್ದು ಸತ್ಯದ ಅಜೀರ್ಣ' ಎನ್ನಬೇಕೆಂದನ್ನಿಸಿತು. ಟ್ಯಾಕ್ಸಿಯವನಿಗೆ ಅರ್ಥವಾಗಲಿಕ್ಕಿಲ್ಲ ಎಂದು ಸುಮ್ಮನಾದ. ಆದರೆ ಅಜೀರ್ಣದ ನೆಪದಿಂದ ನೆನಪಿಗೆ ಬಂದದ್ದು ಇನ್ನೊಮ್ಮೆ ಟ್ಯಾಕ್ಸಿಯನ್ನು ರಸ್ತೆಯ ಬದಿಗೆಳೆಯುವಂತೆ ಕೇಳಿಕೊಳ್ಳಲು ಕಾರಣವಾಯಿತು: ನಿಲ್ಲಿಸಲು ಹೇಳಿದ ಜಾಗದ ಸಮೀಪ ಪೋಲೀಸ್ ಕಾನ್ಸ್ಟೇಬಲ್ ನಿಂತದ್ದರಿಂದ ಯಾವ ಲಫಡಾದಲ್ಲೂ ಸಿಕ್ಕಿಕೊಳುವ ಧೈರ್ಯವಿಲ್ಲದ ಟ್ಯಾಕ್ಸೀವಾಲಾ ತುಸು ಮುಂದೆ ಹೋಗಿ ವಾಹನ ನಿಲ್ಲಿಸಿದ. ಒಳಗಿನದೇನೂ ಹೊರಗೆ ಬರದಿದ್ದರೂ ಓಕರಿಕೆಯ ಒತ್ತಡಕ್ಕೆ ಹೊಟ್ಟೆ ನೋಯಹತ್ತಿತು. ಗಂಟಲು ಉರಿಯಹತ್ತಿತು: ಡಾಕ್ಟರ ಕಡೆಯಿಂದ Anti-spasmodic ಇಂಜೆಕ್ಷನ್ ಆಗಲಿ ಗುಳಿಗೆಯಾಗಲೀ ತೆಗೆದುಕೊಂಡರೆ ಹೇಗೆ ಎಂಬ ವಿಚಾರ ಬಂದು ಕೈ ಗಡಿಯಾರ ನೋಡಿಕೊಂಡ—ಒಂದೂವರೆ ಗಂಟೆ! ಇಷ್ಟು ಹೊತ್ತಿಗೆ ಆಗಲೇ ಊಟ ಮುಗಿಸಿ ಗಡದ್ದಾಗಿ ನಿದ್ದೆ ಮಾಡಬಹುದಾಗಿತ್ತು ಎಂಬ ವಿಚಾರದ ಹಿಂದೆಯೇ ಊಟ ತಪ್ಪಿದ್ದರ ಕಾರಣ ನೆನಪಿಗೆ... ಬರಲು ತಡವಾಗಲಿಲ್ಲ. ಈ ಸರತಿ ಟ್ಯಾಕ್ಸಿಯನ್ನು ನಿಲ್ಲಿಸೆಂದು ಹೇಳುವ ಪುರಸೊತ್ತೂ ಇರಲಿಲ್ಲ. ಅಬ್ಬಾ! ಹೊಟ್ಟೆಯಲ್ಲಿ ಇಷ್ಟೊಂದು ನೀರು ಹೇಗೋ... ಟ್ಯಾಕ್ಸಿಯವನು ವಾಹನವನ್ನು

ತಿರುಗಿ ಬದಿಗೆಳೆದ. ಇವನ ಅವಸ್ಥೆ, ಈಗ ನಿಜಕ್ಕೂ ಚಿಂತೆಗೆ ಕಾರಣವಾಯಿತು. ಕನ್ನಡ ನಾಡಿನವನೆಂದು ಈಗ ಗೊತ್ತಾದ್ದರಿಂದ ಹುಟ್ಟಿದ ಒಂದು ಬಗೆಯ ಆತ್ಮೀಯತೆಯೂ ಈಗ ಈ ಚಿಂತೆಗೆ ಇನ್ನಷ್ಟು ಪುಟಕೊಟ್ಟಿತು.

"ಸರ್.,.ನೀವು ತಪ್ಪು ತಿಳಿಯದಿದ್ದರೆ... ಇಲ್ಲೇ ವರ್ಲೀ ನಾಕಾದಲ್ಲಿ ಡಾ.ಶೆಟ್ಟಿ ಅಂತ ಇದ್ದಾರೆ. ದವಾಖಾನೆಯ ಮೇಲ್ಗಡೆಯಲ್ಲೇ ಮನೆ. ನಮ್ಮ ಕಡೆಯವರೇ..."

ಟ್ಯಾಕ್ಸಿಯವನ ಸೂಚನೆಗೆ ಸನ್ನೆಯಿಂದಲೇ ಒಪ್ಪಿಗೆ ವ್ಯಕ್ತಪಡಿಸಿದ; ಮಾತನಾಡುವ, ಸರಿಯಾಗಿ ಕೂಡ್ರುವ ತಾಕತ್ತೂ ಇಲ್ಲದೇ ಸೀಟಿನಲ್ಲಿ ಮೈ ಮುದುಡಿ ಬಿದ್ದುಕೊಂಡ. ಹೊಟ್ಟೆಯಲ್ಲಿ ಒಂದು ಬಗೆಯ ನಡುಕ-ಚಳಿ ಹತ್ತಿದ ರೀತಿ!

ಡಾ. ಶೆಟ್ಟಿಯವರು ಇನ್ನೂ ದವಾಖಾನೆಯಲ್ಲೇ ಇದ್ದರು. ದವಾಖಾನೆ ರಸ್ತೆಯ ಬಲದ ಅಂಚಿನಲ್ಲಿತ್ತು. ಡ್ರೈವರ್ ಮುಂದಿನ ಕೂಟಸ್ಥಾನಕ್ಕೆ ಹೋಗಿ ಯೂ-ಟರ್ನ್ ಮಾಡಿ ರಸ್ತೆಯ ಇನ್ನೊಂದು ಅಂಚಿಗೆ ಬಂದು ವಾಹನವನ್ನು ಸರಿಯಾಗಿ ದವಾಖಾನೆಯ ಇದಿರಿಗೇ ನಿಲ್ಲಿಸಿದ. ತಾನೇ ಮೊದಲು ಇಳಿದು ಓಡೋಡಿ ಹೋಗಿ ಡಾಕ್ಟರರನ್ನು ಕಂಡು ವರದಿ ಕೊಟ್ಟು ಬಂದ. ಡಾಕ್ಟರರ ಮೋರೆ ಕಂಡದ್ದೇ ತ್ರಾಣ ಬಂದವನ ಹಾಗೆ ಟ್ಯಾಕ್ಸಿಯಿಂದ ಇಳಿದು ದವಾಖಾನೆಯತ್ತ ನಡೆಯಹತ್ತಿದ. ಫೂಟ್‌ಪಾಥಿನ ಮೇಲೆ ಒಮ್ಮೆ ಜೋಲಿ ತಪ್ಪಿ ಮುಗ್ಗರಿಸಿ ಬೀಳುವಂತಾಯಿತು, ಅಷ್ಟೇ. ಡಾಕ್ಟರರ ಹೆಸರೇ ಅವರು ಕನ್ನಡದವರೆಂದು ಸಾರುತ್ತಿತ್ತು. ಟ್ಯಾಕ್ಸೀವಾಲಾ ಕೂಡಾ ಹಾಗೇ ಹೇಳಿದ್ದ:

"ನನಗೇನೂ ಆಗಿಲ್ಲ ಡಾಕ್ಟರರೇ. Psycho-somatic ಕಂಪ್ಲೇಂಟು. ಹೇಳಲಿಕ್ಕೆ ಹೋದರೆ ಮತ್ತೆಲ್ಲಿ ವಾಂತಿಯಾದೀತೆಂಬ ಭಯ: ಮಾತು ಮಾಡಬಹುದಾದ್ದನ್ನು ಹೊಟ್ಟೆಯೇ ಮಾಡಲಿಕ್ಕೆ ಹತ್ತಿದೆಯೆಂದು ತೋರುತ್ತದೆ, ಏನಾದರೂ ಎಂಟೀ-ಸ್ಪೆಸ್ಮಾಡಿಕ್..."

"ಓಹೋಹೋ! ಮಾತು ಆರಂಭಿಸಿದಾಗ ಸೈಕಾಲಾಜಿಯ ವಿದ್ಯಾರ್ಥಿ ಎಂದುಕೊಂಡಿದ್ದೆ. ವೈದ್ಯಕೀಯದಲ್ಲಿಯೂ...?" ಡಾಕ್ಟರರು ನಗುತ್ತ ಪ್ರಶ್ನೆ ಪೂರ್ತಿಗೊಳಿಸುವ ಮೊದಲೇ ಅವನ ನಾಲಗೆ, ಹೊಟ್ಟೆ, ನಾಡಿಗಳ ಪರೀಕ್ಷೆ

ನಡೆಸಿದಾಗ, ಟ್ಯಾಕ್ಸೀವಾಲಾ—"ಕನ್ನಡದಲ್ಲಿ ದೊಡ್ಡ ಲೇಖಕರೂ ಸಹ. ಡಾಕ್ಟರರೇ," ಎಂಬ ಮಾತು ಜೋಡಿಸಿದ. ಡಾಕ್ಟರರು ಇಂಜೆಕ್ಷನ್ ಕೊಡುವ ತಯಾರಿ ಮಾಡುತ್ತ ತುಂಬ ಅಭಿಮಾನದಿಂದ "ಹೌದೆ? ಏನು ಬರೆಯುತ್ತೀರೊ?" ನಾಗಪ್ಪನಿಗೆ ಮತ್ತೆ ಓಕರಿಕೆ ಬರುತ್ತಿದ್ದುದನ್ನು ನೋಡಿ ಕಂಪೌಂಡರ್ ಎಲ್ಯೂಮಿನಿಯಮ್ ಬಟ್ಟಲು ತಂದ: ಡಾಕ್ಟರ್ ಹೆಚ್ಚು ಮಾತನಾಡಿಸಲು ಹೋಗದೇ ಇಂಜೆಕ್ಷನ್ ಚುಚ್ಚಿದರು. ಕೆಲವು ಗುಳಿಗೆಗಳನ್ನು ಕೊಟ್ಟು—"ಮನೆಗೆ ಹೋಗಿ ಸ್ವಸ್ಥ ನಿದ್ದೆಮಾಡಿರಿ. ಇನ್ನೂ ತೊಂದರೆಯಾದರೆ ಸಂಜೆ ಬಂದು ಕಾಣಿರಿ," ಎಂದು ಬೀಳ್ಕೊಟ್ಟರು.

ಇಂಜಿಕ್ಷನ್ನಿನ ಪರಿಣಾಮ ಆಗಹತ್ತಿದಂತೆ ಹೊಟ್ಟೆಯ ಜೊತೆಗೆ ಕಣ್ಣಿಗೂ ನಿದ್ದೆ ಬರುತ್ತಿದ್ದಂತೆ ತೋರಿತು: ಖೇತವಾಡಿಯ ೭ನೇ ಗಲ್ಲಿಗೆ ಬಂದ ನಂತರವೇ ಹತ್ತಿದ ಜೊಂಪಿನಿಂದ ಎಚ್ಚತ್ತ. ಖೇಮರಾಜಭವನಕ್ಕೆ ಬಂದು, ಟ್ಯಾಕ್ಸಿಯವನನ್ನು ಆಭಾರಮನ್ನಿಸಿ ಬೀಳ್ಕೊಟ್ಟು, ನಿಚ್ಚಣಿಕೆಯ ಮೆಟ್ಟಿಲುಗಳನ್ನೇರಿ ಮೂರನೇ ಮಂಜಲೆಯ ಕಡೆಗೆ ಹೋಗುತ್ತಿದ್ದದ್ದು ನೆನಪಿದೆ. ಆದರೆ ಆ ಮುಂದಿನದೆಲ್ಲ ಎಂದೋ ಕಂಡ ಕನಸಿನ ಛಾಯೆಯೂ: ಅಷ್ಟೊಂದು ನಿತ್ರಾಣನಾಗಿದ್ದರೂ ಹಿಂದೆ ಯಾವದೋ ವಿಚಿತ್ರ ಗಳಿಗೆಯಲ್ಲಿ ಎಣಿಸಿ ನೋಡಿದಂತಹ ೩೯ ಪಾವಟಿಗೆಗಳನ್ನು ಹೇಗೆ ಹತ್ತಿ ಹೋದೆ? ಬೂಟು-ಚಪ್ಪಲಿಗಳಿಲ್ಲದೇನೇ ರೂಮಿನತ್ತ ಹೆಜ್ಜೆ ಇಡುತ್ತಿದ್ದಾಗ ಯಾರಾದರೂ ನೋಡಿದರೆ? ತನ್ನ ವೇಷ ಭೂಷಗಳನ್ನು ನೋಡಿ ಆಶ್ಚರ್ಯಪಟ್ಟರೆ? ಕೋಣೆಯ ಬೀಗ ತೆರೆದದ್ದು, ಹಾಸಿಗೆ ಸೇರಿದ್ದು ಈ ಯಾವ ವಿವರಗಳ ನೆನಪೂ ಇಲ್ಲ: ಗಾಢನಿದ್ದೆಯಿಂದ ಎಚ್ಚರಗೊಂಡವನ ಹಾಗೆ ಹಾಸಿಗೆಯಲ್ಲಿ ಎದ್ದುಕುಳಿತು. ಗಡಿಯಾರ ನೋಡಿಕೊಂಡಾಗ ಸಂಜೆಯ ಐದು ಗಂಟೆ! ಗಂಟೆ ನೋಡಿಕೊಂಡದ್ದೇ ತಟ್ಟನೆ ಅರಿವನ್ನು ತಟ್ಟಿದ ಸಂಗತಿ: ಹೊಟ್ಟೆ ಅತೀವ ಹಸಿದಿದೆಯೆಂಬುದು. ಹಾಸಿಗೆಯಿಂದ ಎದ್ದಾಗ ಕಾಲುಗಳು ಗಡಗಡ ನಡುಗಿದುವು. ನಾಗಂದಿಗೆಯ ಮೇಲಿಂದ ಡಬ್ಬಿಯೊಂದನ್ನು ಪ್ರಯಾಸಪಟ್ಟು ಕೆಳಗಿಳಿಸಿ ಮುಚ್ಚಳ ತೆರೆದರೆ ಎಂದೋ ತಂದಿರಿಸಿದ ಬ್ರಿಟಾನಿಯಾ ಬಿಸ್ಕೀಟುಗಳಲ್ಲಿ ಮೂರು ಹೇಗೋ ತಪ್ಪಿ ಉಳಿದಿದ್ದುವು. ಮೂರನ್ನೂ ಹಪಾಪಿಯಂತೆ ಒಂದೇ ಕ್ಷಣದಲ್ಲಿ ಫಸ್ತುಮಾಡಿದ. ಹಣ್ಣುಗಳನ್ನಿಡುತ್ತಿದ್ದ ಸರಿಗೆಯ ತೂಗು-ಬುಟ್ಟಿಯಲ್ಲಿ ನೋಡಿದರೆ ಒಂದೇ ಒಂದು ಬಾಳೇಹಣ್ಣು ಇತ್ತು, ತೆಗೆದು ತಿಂದ. ಮಣ್ಣಿನ ಹೂಜೆಯಲ್ಲಿ ನೀರು ತುಂಬಲು ಮರೆತದ್ದರಿಂದ ನೇರವಾಗಿ ನಲ್ಲಿಯಿಂದ ನೀರನ್ನು ಗ್ಲಾಸಿನಲ್ಲಿ ತುಂಬಿ ಕುಡಿದ. ತುಸು

ಸಮಾಧಾನವೆನಿಸಿತು. ಇನ್ನು ಕೆಲಹೊತ್ತಿನ ಮೇಲೆ ಕೆಳಗಿನ ಉಡುಪೀ ರೆಸ್ಟೋರೆಂಟಿಗೆ ಹೋಗಿ ಏನಾದರೂ ತಿಂದು ಚಹ ಕುಡಿದು ಬಂದರಾಯಿತು ಎಂದುಕೊಂಡು ಒಂದು ಬಗೆಯ ಆಲಸ್ಯದಿಂದೆಂಬಂತೆ ತಿರುಗಿ ಹಾಸಿಗೆಗೆ ಮೈ ಚಾಚಿದ್ದೇ ತಡ. ಈ ಒಂದು ಕ್ಷಣಕ್ಕಾಗಿಯೇ ಕಾದು ನಿಂತಂತಿದ್ದ ಅರಿವೊಂದು ಮೂಡಿಬಂದ ರಭಸಕ್ಕೆ ನಾಗಪ್ಪ ತತ್ತರಿಸಿ ಬೆವರಹತ್ತಿದ: ಈ ಬೋಳೀಮಗ ಶ್ರೀನಿವಾಸ—ನಾಡೂ ಮಾಸ್ಕೇರಿಯ ಪದ್ಮನಾಭ ನಾರಾಯಣಕೇಣಿ ಅವರ ತೊಡೆಗಳ ನಡುವೆ ಜೋತಾಡುತ್ತಿದ್ದುದರ ತೆವಲಿಗೆ ನಿರುದ್ದಿಶ್ಯವಾಗಿ ಹುಟ್ಟಿದ ಹಡಬಿಟ್ಟೇ ಶ್ರೀನಿವಾಸ— ಈಗ ಕೆಂಪು ಸೀರೆ ಸುತ್ತಿಕೊಂಡ ನಿರ್ಜೀವ ಮುದ್ದೆಯಾಗಿಯೂ ಒಂದು ಕಾಲಕ್ಕೆ ಜಿದ್ದಿನ ಪ್ರತಿರೂಪವಾದ ಪದ್ದಕ್ಕನ ಮಗನಾಗಿ ಶೋಭಿಸುವ ಛಲದ ಶೀನಿವಾಸ—ತಾನೆಂದೂ ಬಡತನವನ್ನು ನೋಡಿಯೇ ಇರಲಿಲ್ಲ ಎಂಬಂತೆ ಈಗ ಬದುಕುತ್ತ ಆಗಿನದೆಲ್ಲವನ್ನೂ ಮರೆಯಲು ಹೋರಾಟ ನಡೆಸಿದ ಶ್ರೀನಿವಾಸ—ಅಪ್ಪನ ಶ್ರಾದ್ಧಕ್ಕೆ ಕೂತಾಗ, ಅಪ್ಪನಿಗೆ ರಾತ್ರೆ ನಿದ್ದೆ ಬೀಳದ ಬೇಸರಕ್ಕೆ ಹುಟ್ಟಿದ ಮಕ್ಕಳಲ್ಲಿವೇ ನಾವು?—ಎಂದು ಪುರೋಹಿತರ ಜತೆ ಮಾತನಾಡಿದ ಹಲ್ಕಟ್‌ಬಾಯ ಶ್ರೀನಿವಾಸ- ತನ್ನದರ ಪ್ರತಾಪ ಪರೀಕ್ಷಿಸಲು ನೇತ್ರಾವತಿಯನ್ನು ಬಲಿಕೊಟ್ಟ ಶ್ರೀನಿವಾಸ— ಶ್ರೀಮಂತಿಕೆಯ ನಿಚ್ಚಣಿಕೆಯನ್ನೇರಲೆಂದೇ ಕೌಮಾರ್ಯ ಕಳಕೊಂಡವಳನ್ನು ಮದುವೆಯಾಗಿಯೂ ಹೀರೋ ಆಗಿ ಮೆರೆದ ಶ್ರೀನಿವಾಸ—ಫಿರೋಜನೊಡನೆ ಕೂಡಿ ಪಿತೂರಿಯಾದ ಶ್ರೀನಿವಾಸ—ನನ್ನನ್ನು ಶಿಕಾರಿಯಾಡುತ್ತಿದ್ದ ಶ್ರೀನಿವಾಸ—ಸಾರಸ್ವತ ಸಮಾಜದ ಒಬ್ಬ ಗಣ್ಯವ್ಯಕ್ತಿಯಾಗಲೂ ಹೊರಟ ಶ್ರೀನಿವಾಸ—ರಾತೋರಾತ್ ತನ್ನ ಹಿಂದಿನದೆಲ್ಲವನ್ನೂ ಮರೆಯಲು ಹೊರಟ ಶ್ರೀನಿವಾಸ—ಮರೆಸಲು ಹೊರಟ ಶ್ರೀನಿವಾಸ—ತನ್ನ ಬಗ್ಗೆ ಕಾದಂಬರಿ ಬರೀಬೇಡಾ ಎಂದ ಶ್ರೀನಿವಾಸ—ಕಾಲು ಹಿಡಿದ ಶ್ರೀನಿವಾಸ—ಬೇಕಾದ್ದನ್ನು ಕೇಳು ಎಂದ ಶ್ರೀನಿವಾಸ—ಬೇಕಾದರೆ ಹಣ—ಬೇಕಾದರೆ ಶಾರದೆ...

ನಾಗಪ್ಪನಿಗೆ ಹಾಸಿಗೆಯಲ್ಲಿ ಬಿದ್ದಲ್ಲೇ ಮತ್ತೆ ವಾಂತಿಯಾಗುವ ಭಯವಾಗಿ ಮೋರಿಗೆ ಓಡಿದ.

## ಅಧ್ಯಾಯ ಏಳು

ನಾಗಪ್ಪನಿಗೆ ತಾನು ಎಚ್ಚರಗೊಂಡದ್ದು ನಿದ್ದೆಯಿಂದಲೋ ಮೂರ್ಛೆಯಿಂದಲೋ ಎಂಬುದು ತಟ್ಟನೆ ತಿಳಿಯಲಿಲ್ಲ. ಹಾಸಿಗೆಯಿಂದ ಎದ್ದು ಕುರ್ಚಿಯಲ್ಲಿ ಕೂತಾಗ ಯೋಚಿಸುವ, ನೆನಸುವ, ಧೇನಿಸುವ ಸಾಮರ್ಥ್ಯವನ್ನೇ ಕಳಕೊಂಡಂತೆ ಮನಸ್ಸು ಸುನ್ನವಾಗಿತ್ತು. ಕೈಕಾಲುಗಳೆಲ್ಲ, ತಿಂಗಳುಗಟ್ಟಲೆ ಬೇನೆ ಬಿದ್ದವನ ಹಾಗೆ, ನಿತ್ರಾಣವಾಗಿದ್ದುವು. ಕೋಣೆಯೊಳಗಿನ ಬೆಳಕನ್ನು ನೋಡಿ ಹೊತ್ತು ಎಷ್ಟಾಗಿದೆಯೆಂದು ಗೊತ್ತುಹಿಡಿಯುವದು ಕೂಡ ಕಷ್ಟಕರವಾಯಿತು. ಕೈಗಡಿಯಾರ ನೋಡಿಕೊಳ್ಳೋಣವೆಂದರೆ ಅದರ ಮೋರೆಯೇ ಸರಿಯಾಗಿ ಕಾಣದಾಯಿತು. ಹೊತ್ತು ಹೋದ ಹಾಗೆ ಮೆಲ್ಲನೆ ನೆನಪಿಗೆ ಬರಹತ್ತಿತು: ಹಾಸಿಗೆಯ ಮೇಲೆ ಅಡ್ಡವಾಗುವ ಮೊದಲಷ್ಟೇ ಡಾಕ್ಟರರು ಕೊಟ್ಟಗುಳಿಗೆಗಳಲ್ಲೊಂದನ್ನು ನುಂಗಿದ್ದು. ಅದರಲ್ಲಿ ಗುಂಗಿಯ ಔಷಧಿಯೂ ಇದೆಯೆಂದು ತೋರುತ್ತದೆ; ಹೇವರಿಸುವ ಹೊಟ್ಟೆಯೊಂದಿಗೆ ವಿಚಾರ-ಶಕ್ತಿಯ ಮೇಲೂ ಪರಿಣಾಮ ಮಾಡಿರಬೇಕು. ಯಾವುದಕ್ಕೂ ತೀವ್ರವಾಗಿ ಪ್ರತಿಕ್ರಿಯಿಸುವ ಶಕ್ತಿಯೇ ಒಸರಿಹೋದಂತೆ ತೋರಿತು. ಡಾಕ್ಟರರ ಗುಳಿಗೆಯ ನೆನಪಿನಿಂದ ಅದಕ್ಕೆ ಕಾರಣವಾದ ಓಕರಿಕೆ, ಅದಕ್ಕೆ ಕಾರಣವಾದ—ಶತಸಹಸ್ರ ಬೈಗುಳಗಳನ್ನು ತಿಂದ—ಶ್ರೀನಿವಾಸ, ಅವನಾಡಿದ ಮಾತುಗಳು ಎಲ್ಲವೂ ನೆನಪನ್ನು ತಟ್ಟಿ ಹೋದರೂ ದೇಹವಾಗಲೀ ಮನಸ್ಸಾಗಲೀ ಯಾವುದೇ ರೀತಿಯಿಂದ ಪ್ರತೀಕಾರ ತೋರಿಸಲಿಲ್ಲ. ಇನ್ನೂ ಕೆಲ ಹೊತ್ತಿನ ಮೇಲೆ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಂತ ಅನ್ನಿಸಿಕೆಯೊಂದೇ: ಹೊಟ್ಟೆ ಅತೀವ ಹಸಿದಿದೆ—ರೆಸ್ಟೊರೆಂಟಿಗೆ ಹೋಗಿ ಏನಾದರೂ ತಿಂದು ಬರಬೇಕು...

ಈ ನಿರ್ಧಾರದಿಂದಲೇ ಬುದ್ಧಿ ಚುರುಕುಗೊಂಡಿತೆಂಬಂತೆ ತಕ್ಷಣ ಕುರ್ಚಿಯಿಂದ ಎದ್ದ. ಈ ನಿರ್ಧಾರ ಬದಲಿಸುವ ಮೊದಲೇ ಕೋಣೆಯ ಹೊರಗೆ ಬೀಳಬೇಕು ಎಂಬ ತರಾತುರಿಯಿಂದೆಂಬಂತೆ ಭರಭರ ಮೋರೆ ತೊಳೆದುಕೊಂಡ. ಡ್ರೆಸ್ಸು ಬದಲಿಸಿ ಕಾಲಲ್ಲಿ ಚಪ್ಪಲಿಗಳನ್ನು ಮೆಟ್ಟಿದ. ಕದ ಮುಚ್ಚಿ ಬೀಗಹಾಕಿದ. ಅವಸರ ಅವಸರವಾಗಿ ಜಿನೆ ಇಳಿದು ರಸ್ತೆಗೆ ಬಂದ. ಇಷ್ಟು ಕೂಡ ದೊಡ್ಡ ಪ್ರಯಾಸದ ಕೆಲಸವಾಗಿತ್ತೆಂಬಂತೆ ಕಾಲರಿನ ಅಡಿಯ ಕೊರಳ ಭಾಗ ಬೆವೆತಿತು.

ವಿಚಾರಮಾಡುವ ಮೊದಲೇ ೬ನೇ ಗಲ್ಲಿಗೆ ಹೊರಳಿದ. ಗಲ್ಲಿಯ ಕೊನೆಯಲ್ಲಿ ಸೂರ್ಯಾಸ್ತದ ಕಿರಣಗಳು ಮೂಡಿಸಿದ ಅರಿಸಿಣ ಬಣ್ಣದ ಬೆಳಕಿನ ಕಲೆ ಗಡಿಯಾರ ನೋಡಿಕೊಳ್ಳುವಂತೆ ಮಾಡಿತು—ಆರೂವರೆಯಾಗಿತ್ತು. ಖೇತವಾಡೀ ಮೇನ್‌ರೋಡ್ ಸೇರಿ ಪ್ರಾರ್ಥನಾ-ಸಮಾಜದ ಕಡೆಗೆ ಹೊರಳಿದವನ ಹೆಜ್ಜೆಗಳು ನೇರವಾಗಿ—ವಿಧಿಯ ಕೈವಾಡದಿಂದೆಂಬಂತೆ—ಎಲ್ಲ ಬಿಟ್ಟು ಸಂತೋಷಭವನದ ಕಡೆಗೇ ಬೀಳುತ್ತಿದ್ದರೂ ನಡಿಗೆಯ ದಿಕ್ಕನ್ನು ಬದಲಿಸುವ ಗಟ್ಟಿತನ ಮನಸ್ಸಿಗೆ ಇಲ್ಲವೇ ಇಲ್ಲ ಎಂಬಂತಾಗಿತ್ತು. ಇದೂ ಸಾಲದೆಂಬಂತೆ, ಬೆನ್-ಹೆಮ್-ಹಾಲ್-ಲೇನ್ ಸೇರುವಷ್ಟರಲ್ಲಿ ಸುತ್ತಲಿನ ವಾತಾವರಣದಲ್ಲಿ ಒಂದು ಬಗೆಯ ಅಳುಬುರುಕತನ ಸೇರಿಕೊಂಡುಬಿಟ್ಟಿದೆ ಅನ್ನಿಸಿ ನಾಗಪ್ಪನ ಮನಸ್ಸಿಗೂ ಅರ್ಥವಾಗದ ಹಳಹಳಿ ಮುತ್ತಿಕೊಂಡಿತು: ಸಂತೋಷಭವನಕ್ಕೆ ಬಂದು ತನ್ನ ಎಂದಿನ ಕೋಣೆಯನ್ನು ಹೊಕ್ಕದ್ದೇ ಕಣ್ಣ ಮುಂದೆ ಧುತ್ ಎಂದು ಹಾಜರಾದ ಮಾಣಿಗೆ ಮೊತ್ತಮೊದಲು ಇತ್ತ ಆದೇಶವೆಂದರೆ ಕೋಣೆಯ ಹಿತ್ತಿಲ ಬದಿಯ ಕಿಡಕಿಯ ದಡಿಯ ಮೇಲಿರಿಸಿದ ಅಗರಬತ್ತಿಗಳನ್ನು ತೆಗೆಯಲು ಕೇಳಿಕೊಂಡದ್ದು—ತನ್ನ ಮನಸ್ಸಿನ ಹಳಹಳಿಗೆ, ವಾತಾವರಣದಲ್ಲಿಯ ಅಳುಬುರಕತನಕ್ಕೆ ಅವುಗಳೇ ಮೂಲವಾಗಿದ್ದುವು ಎನ್ನುವಂತೆ! ರಾಯರ ಈ ಆದೇಶ ವಿಚಿತ್ರವಾಗಿ ಕಂಡಿತಾದರೂ ರಾಯರ ಬಗ್ಗೆ ತುಂಬ ಗೌರವ ಇಟ್ಟುಕೊಂಡ ಮಾಣಿ ಕೂಡಲೇ ಹೇಳಿದ ಹಾಗೇ ಮಾಡಿ ತಿರುಗಿ ಹಾಜರಾದೊಡನೆ—“ಹೇಳಿ, ಏನು ತರಲಿ? ಉತ್ತಪ್ಪ, ವಡೆ ಹಾಗೂ ಉಪ್ಮಾ?” ನಾಗಪ್ಪ ಮುಗುಳುನಗುತ್ತ— “ಸೈ” ಎಂದ. “ಉಪ್ಮಾ ಮೊದಲು ತಾ. ಉತ್ತಪ್ಪಾ, ವಡೆ ಕಾಫಿಯ ಜತೆಗೆ. ಅದಕ್ಕೂ ಮೊದಲು ತಾಜಾ ಲಿಂಬೇ ಹಣ್ಣು, ಸೋಡಾ ಹಾಕಿ ಶರ್ಬತ್: ಹೊಟ್ಟೆ ಸರಿಯಿಲ್ಲ” ಎಂದ. “ರಾಯರ ಮೋರೆ ನೋಡಿದಾಗಲೇ ಅನ್ನಿಸಿತ್ತು,” ಎನ್ನುತ್ತ ರಾಯರಿತ್ತ ಆಜ್ಞೆ ಪಾಲಿಸಲು ಅಲ್ಲಿಂದ ಹೆಜ್ಜೆ ಕಿತ್ತ.

ಕೆಲ ಹೊತ್ತಿನ ಮೇಲೆ ಮಾಣಿ, ಆ ವಾರದ ಪ್ರಜಾಮತ, ನಿನ್ನೆಯ ದಿನಾಂಕದ ಸಂಯುಕ್ತ-ಕರ್ನಾಟಕ ಇವುಗಳ ಜತೆಗೆ ಶರ್ಬತ್ತಿನ ಗ್ಲಾಸ್ ತಂದು ಟೇಬಲ್‌ಮೇಲೆ ಇರಿಸಿದ. ಪ್ರಜಾಮತ ಈ ಮೊದಲು ನೋಡಿದ್ದೇ ಆಗಿತ್ತು. ಆದ್ದರಿಂದ ಸಂಯುಕ್ತಕರ್ನಾಟಕದ ಪುಟಗಳಲ್ಲಿ, ಕಣ್ಣುಹಾಯಿಸುತ್ತ ಲಿಂಬೇ ಹಣ್ಣಿನ ಶರಬತ್ತು ಕುಡಿಯಹತ್ತಿದ: ಅದರ ತಂಪು, ಹುಳಿ ಬೆರೆಸಿದ ಸಿಹಿ ಹೊಟ್ಟೆಗೆ

ಹಿತವೆನಿಸಿದುವು. ಪಾನೀಯದೊಳಗಿನ ಸಕ್ಕರೆಯೂ ಮೆದುಳಿನ ವಿಚಾರಮಾಡುವ ತಾಕತ್ತನ್ನೂ ಚುರುಕುಗೊಳಿಸುತ್ತಿದೆ ಅನ್ನಿಸಿತು. ಉಪ್ಮಾ ಬಂದಿತು. ಬಹಳ ಖುಶಿಯಿಂದ ಬಾಯಿ ಚಪ್ಪರಿಸುತ್ತ ಅದನ್ನು ಮುಗಿಸಿದ. ಹಾಗೂ ಉತ್ತಪ್ಪ ವಡೆಗಳು ಬರುವ ಹಾದಿಯನ್ನೆ ಕಾಯಹತ್ತಿದ. ಅವೂ ಬಂದವು. ಕಾಫಿಯೂ ಬಂದಿತು. ಇವೇ ತಿಂಡಿಗಳನ್ನು ಸಂತೋಷಭವನದಲ್ಲಿ ಈಗ ಎಷ್ಟು ದಿನಗಳಿಂದ ತಿನ್ನುತ್ತ ಬಂದಿದ್ದರೂ ಇಂದು ಅವುಗಳ ರುಚಿಯೇ ಬೇರೆಯಾಗಿತ್ತು ಎಂಬಂತಹ ಖುಶಿಯಲ್ಲಿ ಮಾಣಿಗೆ ದೊಡ್ಡ ಟಿಪ್ಸ್‌ಕೊಟ್ಟು ಹೊರಬಿದ್ದವನಿಗೆ ಚೌಪಾಟಿಗೆ ಹೋಗುವ ಉಮೇದು ಬಂದಿತು. ರುಚಿಕರವಾದ ತಿಂಡಿಕೊಟ್ಟ ಖುಶಿ; ಬೆಳಗ್ಗಿನಿಂದಲೂ ಹಸಿದ ಹೊಟ್ಟೆ ಪಟ್ಟ ಸಂತೃಪ್ತಿಯ ಖುಶಿ; ಚೌಪಾಟಿಗೆ ಹೋಗಬೇಕು ಎನ್ನುವ ಆತುರ ತಂದ ಖುಶಿ—ಇವುಗಳ ಹಿಡಿತದಲ್ಲಿದ್ದವನಿಗೆ ಗಲ್ಲಿಯ ಮೇಲೆ ಕೂತ ಬೃಹದಾಕಾರದ ನಾಯಕ ಕೂಡ ಲಕ್ಷ್ಯಕ್ಕೆ ಬರಲಿಲ್ಲ. ಅವನನ್ನು ಅಲ್ಲಿ ನೋಡಿ ಆಶ್ಚರ್ಯಪಟ್ಟ ನಾಯಕನೇ ಮಾಣಿಯನ್ನು ಕರೆದು : ಇದೀಗ ರಸ್ತೆ ಸೇರಿದವನು ನಾಗಪ್ಪನಲ್ಲವೇ? ಎಂದು ಕೇಳಿ ಖಾತ್ರಿ ಮಾಡಿಕೊಂಡ.

ಚೌಪಾಟಿಗೆ ಹೋಗಿ ಸಮುದ್ರದಂಡೆಯ ಉಸುಕಿನಲ್ಲಿ ಕಾಲು ಚೆಲ್ಲಿ ಕೂತವನಿಗೆ ಸೂರ್ಯ ಎಂದೋ ಮುಳುಗಿ ದಂಡೆಯ ಮೇಲೆ ಆಗಲೇ ಮಬ್ಬುಗತ್ತಲೆ ಕವಿದದ್ದು ಲಕ್ಷ್ಯಕ್ಕೆ ಬಂದರೂ ಈ ಪರಿಸರಕ್ಕೆ ಹೀಗೆ ಪ್ರತಿಕ್ರಿಯಿಸಬೇಕು ಎಂಬ ಎಚ್ಚರ ಮಾತ್ರ ಇದ್ದಂತೆ ತೋರಲಿಲ್ಲ. ಚಂಪೀವಾಲಾ, ಕುಲ್ಫಿವಾಲಾ, ನಾರಿಯಲ್‌ಪಾಣೀವಾಲಾ, ಭೇಳ್‌ಪುರೀವಾಲಾ ಇವರೆಲ್ಲ ತಮ್ಮ ತಮ್ಮ ಸರಕುಗಳ ಹೆಸರುಗಳನ್ನು ಕೂಗುತ್ತ ಎಬ್ಬಿಸಿದ ಗದ್ದಲ ಒಳಗೆ ನೆಲಸಹತ್ತಿದ ಪ್ರಶಾಂತತೆಗೆ ಭಂಗ ತರಲಿಲ್ಲ; ಆಪೆರಾ-ಹೌಸದ ಆಸುಪಾಸಿನ ಬೆಲೆವೆಣ್ಣುಗಳ ಏಜೆಂಟರು ಆಗೀಗ ಕೊಡುತ್ತಿದ್ದ ಕಿರುಕುಳ ಕೂಡ. ಇದು ಯುದ್ಧದ ಕೊನೆಯಲ್ಲಿ ಬರುವ ಶಾಂತಿಯೋ ಅದರ ಪೂರ್ವದ್ದೋ ಎನ್ನುವ ಕುತೂಹಲವೂ ತಟ್ಟಲಿಲ್ಲ. ನಾಳೆ: ತಾನು ಇಷ್ಟು ದಿನ ಪಡುತ್ತ ಬಂದ ಯಾತನೆಯ ಕೊನೆ! ಯಾಕಂದರೆ ತಾನೇ ಇದನ್ನೆಲ್ಲ ಕೊನೆಗೊಳಿಸಬೇಕೆಂದು ನಿಶ್ಚಯಿಸಿದ್ದೇನೆ. ನಾಳೆಯ ಮುಖಾಮುಖಿಯ ಬಗ್ಗೆ ತನಗೀಗ ಯಾವುದೇ ಬಗೆಯ ಉದ್ವೇಗವೂ ಇಲ್ಲ ಎಂಬುದರ ಅರಿವು ಇದ್ದೂ ಅದರ ಬಗ್ಗೆ ಆಶ್ಚರ್ಯವೆನ್ನಿಸಲಿಲ್ಲ. ಬೆಳಿಗ್ಗೆ ಶ್ರೀನಿವಾಸನ ಮನೆಯಲ್ಲಿ ಬಂದ ಅನುಭವ ಈ ನಿಶ್ಚಲತೆಗೆ ಕಾರಣವಾಗಿದ್ದೂ ಈ ಕಾರಣದ ಬಗ್ಗೆ ಕೂಡ

ವಿಚಾರಮಾಡುವ ಆತುರ ತೋರಲಿಲ್ಲ. ನಾಗಪ್ಪನಿಗೆ ಈ ಕ್ಷಣಕ್ಕೆ ಮಹತ್ವದ್ದೆಂದು ತೋರಿದ್ದು ಒಳಗಿನ ನಿರ್ಭಯತೆಯೇ: ಭೂತಕಾಲಕ್ಕಾಗಲೀ ಇನ್ನೂ ಕಂಡಿರದ ಭವಿಷ್ಯತ್ತಿಗಾಗಲೀ  ಕೈಚಾಚಿ ವೃಥಾ ಬಳಲುವುದನ್ನು ಬಿಟ್ಟುಕೊಟ್ಟು ತನ್ನೆಲ್ಲ ಶಕ್ತಿಗಳನ್ನು ಇದೀಗಿನ ಈ ಒಂದು ಕ್ಷಣದ ಮೇಲೇ ಏಕಾಗ್ರಗೊಳಿಸಿದಾಗ ಹುಟ್ಟಿದ ಪ್ರಚಂಡ ಆತ್ಮವಿಶ್ವಾಸ! ಇದನ್ನು ಮತ್ತೆ ಎಂದಿಗೂ ಸಡಿಲುಗೊಳ್ಳಲು ಬಿಡಬಾರದು. ವಾಂತಿಯ ರೂಪದಲ್ಲಿ ಈ ತಾನು ನಿಷೇಧ ವ್ಯಕ್ತಪಡಿಸಿದ್ದು ಶ್ರೀನಿವಾಸ ಅನೂಹ್ಯವಾದ ರೀತಿಯಲ್ಲಿ ಕಣ್ತೆರೆಯಿಸಿದಂಥ ನಿಷ್ಠುರವಾದ ಬೀಭತ್ಯವಾದ ವಾಸ್ತವತೆಗಷ್ಟೇ ಅಲ್ಲ. ಇಲ್ಲದ ಆಸೆ ಅಪೇಕ್ಷೆಗಳಿಗೆ ಕಟ್ಟುಬಿದ್ದುದರಿಂದಲೇ ಹೆದರಿಸುತಿದ್ದ ಭೂತಕಾಲಕ್ಕೂ; ಆಮಿಷವೊಡ್ಡಿ ವಿಲಿವಿಲಿ ಒದ್ದಾಡಿಸುತ್ತಿದ್ದ ಭವಿಷ್ಯತ್ತಿಗೂ...

ನಾಗಪ್ಪ ಕೂತಲ್ಲೇ ಅಂಗತ್ತನಾಗಿ ತಂಪು ಉಸಿಕಿನಲ್ಲಿ ಬೆನ್ನು ಚಾಚಿದ. ಮೇಲಿನ ನಿರಭ್ರವಾದ ನೀಲಿ ಆಕಾಶದಲ್ಲಿ ಕಣ್ಣು ನೆಟ್ಟು ಕೂತ. ಯಾವುದನ್ನೂ ಕುರಿತು ವಿಚಾರಮಾಡಲು ನಿರಾಕರಿಸುತ್ತ ಖಾಲಿಯಾದ ಮನಸ್ಸು ಸುತ್ತಲಿನ ಸದ್ದುಗದ್ದಲಕ್ಕೆ ಕಿವಿ ಮುಚ್ಚಿತ್ತು. ಮೇಲಿನ ಆಕಾಶವನ್ನು ಎಷ್ಟೊಂದು ಏಕಾಗ್ರತೆಯಿಂದ ವೀಕ್ಷಿಸುತ್ತಿದ್ದನೆಂದರೆ ತಾನು ಕ್ರಮೇಣ ಅದರಲ್ಲಿ ಕರಗಿ ಹೋಗುತ್ತಿದ್ದೇನೆಂಬಂತಹ ಅನುಭಾವಿಯ ಅನುಭವ; ಬೆಚ್ಚಿಬಿದ್ದವನಂತೆ ಎದ್ದ. ದೂರದಲ್ಲಿ ಪರಿಚಯದ ಕ್ಲಾಕ್‌ಟಾವರ್ ಎಂಟು ಗಂಟೆಯ ದನಿ ಮೊಳಗಿಸಿತು: ಯಾವುದೇ ರೀತಿಯಿಂದ ಭಾವುಕನಾಗದೇ ಎದ್ದ. ಊಟ ಮಾಡುವಷ್ಟು ಹಸಿವೆ ಇರಲಿಲ್ಲ. ಭೈಯಾನ ಅಂಗಡಿಯಲ್ಲಿ ಗ್ಲಾಸು ತುಂಬ ಕೆನೆ ತೇಲುವ ಹಾಲು ಕುಡಿದರಾಯಿತು ಎಂದಹೊಂಡು ಮನೆಯ ಕಡೆಗೆ ಹೆಜ್ಜೆ ಇಡಹತ್ತಿದ..

ಭೈಯಾನಲ್ಲಿ ಹಾಲು ಕುಡಿದು. ಮನೆಗೆ ಹೋಗುವ ನಿಚ್ಚಣಿಕೆಯ ಮೆಟ್ಟಲುಗಳನ್ನು ಏರುತ್ತಿದ್ದಾಗ ಅರಿವು ಮೂಡಹತ್ತಿತ್ತು: ತಾನು ಸಂಜೆ ಕೋಣೆಯಿಂದ ಹೊರಬೀಳುವಾಗ ಶಿಂಪಿಯವರ ಮನೆಗೆ ಇನ್ನೂ ಬೀಗವಿತ್ತು. ಅರ್ಜುನ್‌ರಾವರ ತಾಯಿ ತಾನು ತನ್ನ ಕೋಣೆಗೆ ಬೀಗ ಹಾಕುವಾಗ—ತನ್ನ ಹತ್ತರ ಏನೋ ಮಾತನಾಡುವ ಕುತೂಹಲದಿಂದೆಂಬಂತೆ—ತನ್ನ ಕಡೆಗೇ ನೋಡುತ್ತ ಬಾಗಿಲಲ್ಲಿ ನಿಂತದ್ದನ್ನು ನೋಡಿಯೂ ತಾನು ಅವಳತ್ತ ಲಕ್ಷ್ಯಕೊಡದೇ ಸೀದ

ಜಿನ್ನೆಯ ಕಡೆಗೆ ಹೆಜ್ಜೆ ಇಟ್ಟಿದ್ದೆ ಎನ್ನುವುದು ನೆನಪಾಯಿತು. ಶಿಂಪಿಯವರ ಮನೆಗೆ ಈಗಲೂ ಬೀಗವಿತ್ತು!

ಮನೆಯ ಕದ ತೆರೆದು ದೀಪ ಹಾಕಿದಾಗ, ಕದದ ಸಮೀಪ ಪತ್ರ ಬಿದ್ದದ್ದು ಕಂಡುಬಂತು. ಇಂದು ರವಿವಾರ—ಪೋಸ್ಟಲ್ ಡೆಲಿವರಿ ಇಲ್ಲ. ಯಾರೋ ಖುದ್ದು ಬಂದು ಒಳಗೆ ತೂರಿ ಹೋಗಿರಬೇಕು. ಪತ್ರವನ್ನು ತೆರೆದು ಓದಿ ನೋಡಿ—Oh! hell ಎಂದ. ತನಿಖೆಯನ್ನು ನಾಳೆ—ಸೋಮವಾರದ ಬದಲು, ಮಂಗಳವಾರಕ್ಕೆ ಮುಂದೂಡಲಾಗಿತ್ತು! ಇದು, ಈ ತನಿಖೆಯ ಆಯೋಗವನ್ನು ಇದಿರಿಸುವ ತನ್ನ ಮನೋಧೈರ್ಯವನ್ನು ಮುರಿಯುವ ಹಂಚಿಕೆ ಎಂದು ತಿಳಿದ ನಾಗಪ್ಪ ಮನಸ್ಸನ್ನು ತಿರುಗಿ ಕ್ಷೋಭೆಗೆ ಒಳಗಾಗಲು ಬಿಡದೇ—ಅಡ್ಡಿಯಿಲ್ಲ, ಮಂಗಳವಾರವಾದರೆ ಮಂಗಳವಾರ. ನೋಡೋಣ ಸತ್ವಪರೀಕ್ಷೆ ಯಾವ ಹಂತವನ್ನು ಮುಟ್ಟುತ್ತದೆಯೋ ಎಂದು! ಶ್ರೀನಿವಾಸನ ಬಗ್ಗೆ ಬರೆಯಬೇಕೆಂದು ಯೋಜಿಸಿದ ಕಾದಂಬರಿಯನ್ನು ನಾಳೆಯಿಂದಲೇ ಆರಂಭಿಸಿದರಾಯಿತು ಎಂದುಕೊಂಡ: ತಾನು ಈ ಕಾದಂಬರಿಯನ್ನು ಬರೆಯುವುದರ ಬಗ್ಗೆ ಶ್ರೀನಿವಾಸನಿಗಿದ್ದ ಭೀತಿ ಇಷ್ಟೊಂದು ವಿಕೋಪಕ್ಕೆ ಹೋದ ಕಾರಣವೇನು? ಈ ಅವಾಸ್ತವವಾದ ಭಯದ ಸ್ವರೂಪ ಅರಿಯುವ ಪ್ರಯತ್ನವೇ ಕಾದಂಬರಿಯ ವಸ್ತುವಾಗಬೇಕು. ಇಷ್ಟು ದಿನ ಬರಿಯೆ ಹುಡಿಹುಡಿಯಾಗಿ ಭಾವಗೋಚರವಾದದ್ದರ ಕೇಂದ್ರ ಈಗ ಅನಾಯಾಸವಾಗಿ ಹರಳುಗಟ್ಟುತ್ತಿದ್ದದ್ದು ಅರಿವಿಗೆ ಬಂದಾಗ ಮನಸ್ಸು ಪುಲಕಿತವಾಯಿತು. ಶ್ರೀನಿವಾಸ, ಒಂದೂ ಮಗ, ಬರೆಯದಿರಲು ಒಡ್ಡಿದ ಅಸಹ್ಯವಾದ ಆಮಿಷವೇ ಈಗ ಕಾದಂಬರಿಯ ಲೇಖನಕ್ಕೆ ಪ್ರಚೋದನೆಯಾಗುತ್ತಿದ್ದದ್ದು ನೋಡಿ ಮೋಜು ಎನಿಸಿತು...

ನಾಗಪ್ಪ ಬೆಳಿಗ್ಗೆ ಐದು ಗಂಟೆಗೇ ಎದ್ದದ್ದು ಬರೆಯುವ ನಿರ್ಧಾರದಿಂದಲೇ ಆಗಿದ್ದರೂ ಹಾಸಿಗೆಯಲ್ಲಿ ಬಿದ್ದಲ್ಲೇ ಅವನಿಗೆ ಅರಿವಾಗುವ ಮೊದಲೇ ತೊಡಗಿಸಿಕೊಂಡದ್ದು ನಿನ್ನೆ ಶ್ರೀನಿವಾಸನ ಮನೆಯಲ್ಲಿ ನಡೆದದ್ದರ ಪುನರ್ವಿಮರ್ಶೆಯಲ್ಲೇ! ಹಿಂದಿನದಕ್ಕೆ ಕೈಚಾಚಲಾರನೆಂದು ನಿನ್ನೆಯಷ್ಟೇ ಚೌಪಾಟಿಯ ಉಸುಕಿನಲ್ಲಿ ಅಡ್ಡವಾದಾಗ ನಿರ್ಧಾರ ಮಾಡಿದ್ದ. ಮಾಡಿದರೇನಂತೆ! ಈ ವರೆಗಿನ ತನ್ನ ಆಯುಷ್ಯದಲ್ಲಿ ಇಂತಹ ಮನೋನಿರ್ಧಾರಗಳು ಎಷ್ಟು ಸಾವಿರ ಸನ್ನಿವೇಶಗಳಲ್ಲಿ ನಡೆದಿವೆಯೋ ನಾಗಪ್ಪ ಲೆಕ್ಕ ಹಿಡಿಯಲಾರ. ಕೊನೆಗೂ

ಮನೋನಿರ್ಧಾರವೊಂದೇ ನಮ್ಮ ಕ್ರಿಯೆಯನ್ನು ನಿಶ್ಚಯಿಸಲಾರದಷ್ಟೇ: ನಿನ್ನೆ ಶ್ರೀನಿವಾಸ ತನ್ನ ಪೂರ್ವೇತಿಹಾಸದ ಬಗ್ಗೆ ಬರೆಯದಿರಲು ಮುಂದೆ ಒಡ್ಡಿದ ಪ್ರಲೋಭನೆಗೆ ತನ್ನಿಂದಾದ ಪ್ರತೀಕಾರದಲ್ಲಿ ಮನಸ್ಸಿಗಿಂತ ಹೆಚ್ಚಾಗಿ ಹೊಟ್ಟೆಯೇ ಪ್ರಮುಖ ಪಾತ್ರ ವಹಿಸಿದಂತಿತ್ತು. ರೋಗದ ಲಕ್ಷಣ ತಳೆದ ಈ ಮೇಲೇರುವ ಪಂದ್ಯಾಟದಲ್ಲಿ ಕೈ ಹಿಡಿದ ಹೆಂಡತಿಯ ಶೀಲವೂ ಸಿಕ್ಕಿಬಿದ್ದಿದೆಯೆ? ಖಂಬಾಟಾ ಮೇಲೇರಿದ್ದೇ ಹೀಗೆಂದು ಕೇಳಿದ್ದೆ. ಅತ್ಯಂತ 'ಮೊಡ್' ಲಾವಣ್ಯವತಿಯಾದ ಶಿರೀನ್ ಖಂಬಾಟಾನ ಹೆಂಡತಿ ಹೇಗಾದಳೋ...! ನಮ್ಮ MD, DMD ಇಬ್ಬರೂ ಇವಳನ್ನು ಇಟ್ಟುಕೊಂಡಿದ್ದಾರಂತೆ! ನಾಗಪ್ಪನಿಗೆ ತನ್ನ ವಿಚಾರಸರಣಿಯನ್ನು ಮುಂದುವರಿಸುವುದಾಗಲಿಲ್ಲ... ಹಾಸಿಗೆಯಿಂದ ಏಳುವಾಗ ಶಾರದೆ ನೆನಪಿಗೆ ಬಂದು, ಆಶಾ—ಚೇತನರ ಮೋರೆಗಳೂ ಕಣ್ಣಮುಂದೆ ನಿಂತು ಕಣ್ಣುಗಳು ತುಂಬಿಬಂದುವು...

ಈ ಎಲ್ಲ ವೈಯಕ್ತಿಕ ಅಭ್ಯುದಯದ ಅಭಿಲಾಷೆ ಹಾಗೂ ಲೈಂಗಿಕತೆಯ ಕಲಸುಮೇಲೋಗರದಿಂದ ಹುಟ್ಟಿದ ಹೇವರಿಕೆಯನ್ನು ಮರೆಯಲೆಂದೇ ನಾಗಪ್ಪ ತನ್ನ ಮನಸ್ಸನ್ನು ಇನ್ನೊಂದೆಡೆ ಹಾಯಿಸಲು ಯತ್ನಿಸಿದ—ಮಗ್ಗಲು-ಮನೆಯ ಜಾನಕೆಯ ಮೇಲೆ: ಅವಳ ಮನೆಯಲ್ಲಿ ಊಟ ಮಾಡಿ ಬಂದ ರಾತ್ರಿ ಬೇರಾವ ಹೆಣ್ಣೂ ತನ್ನ ಮೇಲೆ ಇಷ್ಟೊಂದು ಪ್ರಚಂಡವಾದ ಪರಿಣಾಮ ಮಾಡಿರಲಿಲ್ಲ ಎಂಬುದನ್ನು ಪ್ರಜ್ಞಾತೀತವಾದ ತನ್ನ ದೇಹವೇ ಭಿಡೆ, ಲಜ್ಜೆಗಳನ್ನು ಬಿಟ್ಟೇ ಒಪ್ಪಿಕೊಂಡದ್ದು ಈಗ ನೆನಪಿಗೆ ಬಂದಾಗ ನಾಗಪ್ಪನಿಗೆ ತನ್ನ ಬಗ್ಗೆಯೆ ನಾಚಿಕೆಯೆನಿಸಿತು: ತಾನೂ ಈ ಶ್ರೀನಿವಾಸರಿಂದ, ಬಂದೂಕವಾಲಾರಿಂದ, ಖಂಬಾಟಾರಿಂದ, ಪಟೇಲರಿಂದ ಬೇರೆಯಾಗಿಲ್ಲವೇನೋ! ಎಂದುಕೊಳ್ಳುತ್ತ ಹಾಸಿಗೆಯಿಂದ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಲು ಹೊರಟ: ಈಹೊತ್ತು ಕೋಣೆಯಲ್ಲಿ ಕೂಡ್ರುವದೇ ಬೇಡ. ಹೀಗೆ ಹೊರಗಿನ ಸಂಪರ್ಕವನ್ನು ಕಳೆದುಕೊಂಡು ಈ ಹೊಲಸು ಕೋಣೆಯಲ್ಲೇ ಕುಳಿತುಬಿಟ್ಟರೆ ಮನಸ್ಸು ಎಂತಹ ಹೊಲಸು ಆಳಕ್ಕೂ ಇಳಿದುಬಿಟ್ಟೀತು. ಎಲ್ಲಾದರೂ ಹೋಗಬೇಕು. ದೂರ ಹೋಗಬೇಕು. ಸ್ವಚ್ಛವಾದ ಬಿಸಿಲಲ್ಲಿ, ಗಾಳಿಯಲ್ಲಿ, ಗಿಡ-ಮರಗಳಿದ್ದಲ್ಲಿ, ಹಸಿರು ಇದ್ದಲ್ಲಿ, ದೇವರು ಸೃಷ್ಟಿಸಿದ್ದರ ಸಹವಾಸದಲ್ಲಿ ಕೆಲವು ಕಾಲ ಕಳೆಯಬೇಕು. ಎರಡು ಕಾಲುಗಳುಳ್ಳ, ಎರಡು ಕೈಗಳುಳ್ಳ, ತಲೆಬುರುಡೆಯಲ್ಲಿ ಬೃಹದಾಕಾರದ ಮೆದುಳಿದ್ದ

ಈ ಪ್ರಾಣಿಯಲ್ಲಿ ಮನುಷ್ಯತ್ವದ ಸಾಕ್ಷಾತ್ಕಾರವಾಗುವದು ಕಟ್ಟಕಡೆಗೆ, ಇಂತಹ ಅಪರೂಪದ ಕ್ಷಣಗಳಲ್ಲಿ ಮಾತ್ರವೇನೋ...ಬರೆಯದಿದ್ದರೂ ಅಡ್ಡಿಯಿಲ್ಲ! ಓದುವದೂ ಬೇಡ! ಹೀಗೇ ಗೊತ್ತು-ಗುರಿಯಿಲ್ಲದೇನೇ ಆಲೆಯುತ್ತಿರುವದು...

ಹೀಗೆ ಅಲೆಯುವ ನಿರ್ಧಾರವೇ ಸ್ಫೂರ್ತಿದಾಯಕವಾಗಿತ್ತೆನ್ನುವಂತೆ ನಾಗಪ್ಪ ಅತ್ಯಂತ ಉತ್ಸಾಹದಿಂದ ಅದರ ಸಿದ್ಧತೆಗೆ ತೊಡಗಿದ.

ಕೊನೆಗೊಮ್ಮೆ, ನಾಗಪ್ಪ ಕಾಯುತ್ತಿದ್ದ ದಿನ ಉದಯಿಸಿತ್ತು.

ಹಾಸಿಗೆಯಿಂದ ಏಳುವಾಗ ಯಾವುದೇ ಬಗೆಯ ಆತಂಕ, ಕಾತರಗಳು ಮನಸ್ಸನ್ನು ತಟ್ಟಿರಲಿಲ್ಲ. ಇದಾವುದರಲ್ಲಿ ತನಗೀಗ ಆಸ್ಥೆಯೇ ಉಳಿದಿಲ್ಲ ಎಂಬ ಭಾವನೆಯ ಬಗ್ಗೆ ಕೂಡ ವಿಶೇಷ ಲಕ್ಷ್ಯ ಹರಿಸಿರಲಿಲ್ಲ. ಇಷ್ಟು ದಿವಸ ಕಾದಿದ್ದೆ. ಆ ಮುಹೂರ್ತ ಈಗ ಬಂದಿದೆ ಎಂಬ ತಟಸ್ಥ ಭಾವನೆಯಿಂದಲೇ ಕಂಪನಿಯ ಡ್ರೈವರ್ ಬಂದದ್ದೇ ಕಾರಿನಲ್ಲಿ ಹೋಗಿ ಕುಳಿತಿದ್ದ. ತನ್ನ ಡ್ರೆಸ್ಸಿನ ಬಗ್ಗೆ ವಿಶೇಷ ಕಾಳಜಿ ವಹಿಸದೇ ಕಪ್ಪುಬಣ್ಣದ ರೇಯ್ಮಂಡ್ ಮಿಲ್ಲಿನ ಟೆರ್ರೀವೂಲ್ ಪ್ಯಾಂಟು, ಅಚ್ಚ ನೀಲಿ ಬಣ್ಣದ ಸ್ಟ್ರಾಯ್ಪ್ಸ್‌ಗಳಿದ್ದ ಉದ್ದ ತೋಳಿನ ಲಿಬರ್ಟಿ ರೆಡೀಮೇಡ್ ಶರ್ಟು ತೊಟ್ಟಿದ್ದ. ಟಾಯ್ ತೊಡಬೇಕೋ ಬೇಡವೋ ಎಂಬ ಪ್ರಶ್ನೆಗೆ ಕೂಡ ಕ್ಷಣಾರ್ಧದಲ್ಲಿ ಉತ್ತರ ಕಂಡಕೊಂಡವನ ಹಾಗೆ ಕೈಗೆ ತೆಗೆದುಕೊಂಡ ಟೈಯನ್ನು ತಿರುಗಿ ಸ್ಟ್ಯಾಂಡಿನ ಮೇಲಿರಿಸಿ, ಶರ್ಟಿನ ಕೊನೆಯ ಒಂದು ಗುಂಡಿಯನ್ನು ಬಿಟ್ಟು ಉಳಿದೆಲ್ಲವುಗಳನ್ನೂ ಹಾಕಿಕೊಂಡಿದ್ದ. ಬೂಟು ಹಾಕಿಕೊಳ್ಳುವಾಗ ಮಾತ್ರ ಕ್ಷಣಹೊತ್ತು ವಿಚಲಿತನಾಗಿದ್ದ—ಕರಿಯ ಬಣ್ಣದ ಬೂಟುಗಳು ಶ್ರೀನಿವಾಸನ ಮನೆಯಲ್ಲಿ ಬಿಟ್ಟು ಬಂದಿದ್ದ! ಮರುಗಳಿಗೆ ಹಾಗೆ ಬಿಟ್ಟು ಬಂದದ್ದರ ಕಾರಣ ನೆನಪಿಗೆ ಬಂದು, ಮುಗುಳುನಗುತ್ತ, ಬಹಳ ದಿನಗಳಿಂದ ಹಾಕಿಕೊಂಡಿರದ ಕಂದೀಬಣ್ಣದ ಹಳೇ ಬೂಟುಗಳನ್ನೇ ಹಾಕಿಕೊಂಡಿದ್ದ. ಕಪ್ಪುಬಣ್ಣದ ಪ್ಯಾಂಟಿಗೆ ಅವು ಹೊಂದುವದಿಲ್ಲ ಎಂಬುದನ್ನು ಅರಿತೂ ಅದರ ಪರಿವೆಯೇ ಇಲ್ಲದವನ ಹಾಗೆ ಕನ್ನಡಿಯ ಮುಂದೆ ನಿಂತು ಕೊದಲು ಬಾಚಿಕೊಂಡಿದ್ದ: ಕಣ್ಣಮುಂದೆ ಮೂಡಿದ ಮೋರೆ ತನ್ನದಲ್ಲವೇ ಅಲ್ಲ ಎನ್ನುವಂತಹ ಪರಕೀಯತೆಯ ಭಾವನೆಯಿಂದ ಕಣಕಾಲ ನಿರುಕಿಸಿದ್ದ. ಕಾರಿನಲ್ಲಿ ಕೂತು ತಾಜಮಹಲ್ ಹೊಟೆಲ್ ಅತ್ತ ಸಾಗಿದವನ ಮನಸ್ಸಿನಲ್ಲಿ ಮೂಡಿ ನಿಂತದ್ದು ಅದೇ ಮೋರೆ: ತನ್ನದಾಗಿಯೂ ಬೇರೆಯೇ ಒಬ್ಬನದಾಗಿ ತೋರಿದ್ದು: ಅದರ ಕಣ್ಣುಗಳಲ್ಲಿ ಮೂಡಿದ ನಿಷ್ಪಾಪ ಮುಗ್ಧತೆ ನಾಗಪ್ಪನನ್ನು ಎಷ್ಟೊಂದು ಆಳಕ್ಕೆ ಕಲಕಿಬಿಟ್ಟಿತ್ತೆಂದರೆ ಅದರಿಂದಾಗಿ ಹುಟ್ಟಿದ ಅಂತರ್ಮುಖತೆಯಿಂದ ಹೊರಗೆ ಬರಲು ಬಹಳ ಹೊತ್ತು ಹಿಡಿಯಿತು...

ಹೊರಗೆ ಬಂದಾಗ ಕಾರು ಸಮುದ್ರದ ದಂಡೆಗುಂಟ ಹರಿದ ಹರವಾದ ಮರೀನ್-ಡ್ರೈವ್-ರಸ್ತೆಯ ಮೇಲೆ ಓಡುತ್ತಿತ್ತು: ಪರಿಚಯದ ನೀರು ದೂರ ಎಡಕ್ಕೆ ಪರಿಚಯದ ರೇಲು-ಹಳಿ. ಅದರ ಬದಿಯಲ್ಲೇ ಆಟದ ದೊಡ್ಡ ದೊಡ್ಡ ಮೈದಾನಗಳು. ಕಾರಿನ ಹಿಂದೆ, ಮುಂದೆ ಎಡೆಬಿಡದೇ ಸಾಗುತ್ತಿದ್ದ ವಾಹನಗಳ ಸಾಲುಗಳು. ಪರಿಸ್ಥಿತಿಯ ಸಂಪೂರ್ಣ ಪರಿಚಯವಿದ್ದವನಂತೆ ತೋರುವ ಡ್ರೈವರ್ ಗಂಭೀರ ಮೌನ ತಳೆದು ಕೂತಿದ್ದ. ನಾಗಪ್ಪನಿಗೆ ತಾನೇ ಏನಾದರೂ ಮಾತನಾಡಬೇಕು ಅನ್ನಿಸಿ ಬಾಯಿ ತೆರೆಯೋಣವೆಂದರೆ ಮಾತೇ ಹೊರಡದಾಯಿತು. ಕಣ್ಣುಗಳು ಮಾತ್ರ ತಮ್ಮಿಂದ ತಾವೇ ತುಂಬಿಬಂದುವು. ಎಷ್ಟೊಂದು ಧಿರೋದಾತ್ತ ಮಾತುಗಳಲ್ಲಿ ಇದೆಲ್ಲದರ ಸೋಕ್ಷಮೋಕ್ಷಕ್ಕೆ ಮನಸ್ಸನ್ನು ಗಟ್ಟಿಮಾಡಿದ್ದೇನೆಂದು ಹೇಳಿಕೊಂಡರೂ ಏಕೋ ತಾಜಮಹಲ್ ಹೊಟೆಲ್ಲು ಸಮೀಪವಾಗುತ್ತಿದ್ದಂತೆ ಶಬ್ದಗಳ ಆಚೆ ನಿಂತ ಯಾವುದಕ್ಕೋ ಮನಸ್ಸು ಮೆಲ್ಲಗೆ ಕರಗಹತ್ತಿತು: ಇಷ್ಟು ದಿನ ಕೇವಲ ಮಾನಸಿಕವಾದದ್ದು ಈಗ ಪ್ರತ್ಯಕ್ಷ ಕಣ್ಣೆದುರಿನಲ್ಲಿ ನಡೆಯಲಿತ್ತು. ಇಷ್ಟು ವರ್ಷ ಬೆಳೆಸಿಕೊಂಡು ಬಂದ ಒಂದು ಕರ್ರಿಯರ್ ತನ್ನ ಶಿಖರಾವಸ್ಥೆಗೆ ಮುಟ್ಟಲಿದ್ದ ಕ್ಷಣದಲ್ಲೇ ಈಗ ಉಧ್ವಸ್ತಗೊಳ್ಳಲಿತ್ತು. ಕಾರಣ: ಮನುಷ್ಯನ ಶಿಕಾರಿಯಾಡುವ ಪ್ರವೃತ್ತಿ, ಕಾರಣ: ಕೆಲವರ ಬದುಕುವ ರೀತಿಗೇ ಮೂಲವಾದ ಭೀತಿ... ನಾಗಪ್ಪಾ ನಾಗಪ್ಪಾss... ಬೋಳೀಮಗನೇ ತಿರುಗಿ ಆರಂಭವಾಯಿತೇನೋ ನಿನ್ನ ರಿಪಿ ರಿಪಿ? ನೀನು ಒಪ್ಪಿಕೊಳ್ಳದಿದ್ದರೂ ನೀನೇ ಹೆದರಿಕೊಂಡಿದ್ದೀಯೋ: ಎಲ್ಲೋ ಆಳದಲ್ಲಿ ಫಿರೋಜ್ ನಿನ್ನ ಬಗ್ಗೆ ಹಗೆ ಕಾದಿರದಿದ್ದರೆ?... ಶ್ರೀನಿವಾಸ ಅವನ ಪಿತೂರಿಯಲ್ಲಿ ಸಾಮೀಲಾಗಿರದಿದ್ದರೆ?... ಇದೆಲ್ಲ ನಡೆಯುತ್ತಿರಲೇ ಇಲ್ಲವೆಂದಲ್ಲವೆ?... ಮತ್ತೆ ಮೂಲ ಪದಕ್ಕೇ ಬಂದು ಮುಟ್ಟಿದೆಯಲ್ಲವೋ... ಇದೆಲ್ಲ ನಿರರ್ಥಕ... ಗಳಿಗೆ ಹತ್ತಿರವಾಗುತ್ತಿದೆ... ಹೊರಗೆ ಬಾ... ಸಿದ್ಧನಾಗು...

ಕಾರು ನರಿಮನ್-ಪ್ಯಾಂಟಿಗೆ ಬಂದು ಸಚಿವಾಲಯದತ್ತ ಹೊರಳಿತು: ಆಕಾಶದತ್ತ ಚೆಂಗನೆ ನೆನೆದು ಕತ್ತು ಸೆಟೆದು ನಿಂತ ಸ್ಕಾಯ್-ಸ್ಕ್ರೆಪರ್ ಕಟ್ಟಡಗಳು; ತಮ್ಮ ತಮ್ಮ ಆಫೀಸುಗಳಲ್ಲಿ ನಿನ್ನೆ ಅರ್ಧಕ್ಕೇ ಬಿಟ್ಟು ಬಂದ ಕೆಲಸಗಳಿಗೆ ಹಿಂತಿರುಗುವ ಅವಸರದಲ್ಲಿದ್ದ ಜನ; ಇರಿವೆಗಳ ಹಾಗೆ ಸಾಲುಗಟ್ಟಿ ಹರಿಯುತ್ತಿದ್ದ ವಾಹನಗಳು: ಕಣ್ಣಿನಲ್ಲಿ ಮೂಡಿಯೂ ಮನಸ್ಸನ್ನು ತಟ್ಟುತ್ತಿರಲಿಲ್ಲ. ಸ್ಟ್ರ್ಯಾಂಡ್-

ಬುಕ್-ಸ್ಟಾಲಿನಲ್ಲಿ ಸೇಲ್ಸ್‌ಮನ್ ಆಗುವ; ಖೇತವಾಡಿಯ ಗಲ್ಲಿಯೊಂದರಲ್ಲಿ ನ್ಯೂಸ್-ಪೇಪರಿನ ಅಂಗಡಿ ತೆರೆಯುವ; ಹಳ್ಳಿಯ ಸಾಲೆಯಲ್ಲಿ ಮಾಸ್ತರನಾಗುವ ಬಲವಿಲ್ಲದ ಸಂಕಲ್ಪಗಳು ಹಗಲುಗನಸುಗಳ ಹಾಗೆ ಮನಸ್ಸನ್ನು ತಟ್ಟುವುದರಲ್ಲೇ ಮಾಯವಾಗುತ್ತಿದ್ದವು... ಕಾರು ರೀಗಲ್ ಸಿನೇಮಾ-ಥಿಯೇಟರ್ ದಾಟಿ ಗೇಟ್‌ವೇ-ಆಫ್-ಇಂಡಿಯಾದ ಕಡೆಗೆ ಸಾಗಿತು: ಇತ್ತ, ಕಡೆಗೆ ಬರದೇ ಎಷ್ಟು ಕಾಲವಾಯಿತು? ಪೂರ್ವದಿಕ್ಕಿನ ಸಮುದ್ರದ ಮೇಲೆ ಹಲವು ಹಡಗುಗಳು ತೇಲುತ್ತಿದ್ದವು. ಒಂದು ಹಡಗದಿಂದ ನಿಷ್ಕಾರಣವಾಗಿ ಹೊರಟ ಸೈರನ್ ನಾಗಪ್ಪ ಮನಸ್ಸನ್ನು ಮುತ್ತಿದ ಹಳವಂಡದಿಂದ ಅರ್ಧ ಎಚ್ಚರಗೊಂಡು ಕುಳಿತ: ಅರೆ! ಕೂತಲ್ಲೇ ಜೊಂಪು ಹತ್ತಿರಬೇಕು ಎಂದುಕೊಂಡು ಕಣ್ಣರಳಿಸಿದ...

ಆಗ ಕಾರು ತಾಜಮಹಲ್-ಹೊಟಲ್ಲಿನ ಭವ್ಯ ಕಟ್ಟಡದ ಇದಿರು ನಿಂತ ಮೇಲೆಯೇ, ಡ್ರೈವರ್ ಕೆಳಗಿಳಿದು ನಮ್ರತೆಯಿಂದ ಕದ ತೆರೆದ ಮೇಲೆಯೇ ಲಕ್ಷ್ಯಕ್ಕೆ ಬಂದಿತು: ಇದು ತಮ್ಮ ಕಂಪನಿಯ ಕಾರು ಅಲ್ಲ ಎನ್ನುವದು. ಲಕ ಲಕ ಹೊಳೆಯುವ ಈ ದೊಡ್ಡ ಕಾರು ಮರ್ಸೆಡೀಸ್‌ಬೆಂಝ್ ಎನ್ನುವದು. ಕದ ತೆರೆದು ನಿಂತ ಡ್ರೈವರ್ ಕೂಡ ಪರಿಚಯದವನಾಗಿರಲಿಲ್ಲ; ಪರಿಶುಭ್ರವಾದ ಯುನಿಫಾರ್ಮು; ತಲೆಗೆ ಕಪ್ಪು ಅಂಚು ಉಳ್ಳ ಬಿಳಿಯ ಹ್ಯಾಟು... ಕಾಲಿಗೆ ಮೋರೆ ಕಾಣುವಷ್ಟು ಹೊಳಪಿನ ಕಪ್ಪ ಬಣ್ಣದ ಬೂಟುಗಳು...

ನಾಗಪ್ಪ ತನಗೆ ಹತ್ತಿದ ಗುಂಗಿನಿಂದ ಸಂಪೂರ್ಣವಾಗಿ ಎಚ್ಚರಗೊಂಡದ್ದು ಮಾತ್ರ ಖಂಬಾಟಾ ನಿಷ್ಕಾರಣವಾಗಿ ಹಲ್ಲು ಕಿಸಿಯುತ್ತ, ಹ ಹ ಹ! ಹೆ ಹೆ ಹೆ! ಎಂಬ ವಿಚಿತ್ರ ಸದ್ದುಮಾಡುತ್ತ ಎಲ್ಲಿಂದಲೋ ಬಂದು ಕಣ್ಣಮುಂದೆ ಪ್ರಕಟವಾಗಿ ಬಾ ಬಾ ಬಾ ಎಂದು ಕೈ ಮುಂದೆ ಚಾಚಿದಾಗಲೇ! ಏನಾದರೂ ಕೇಳಲೇ ಬೇಕೆನ್ನುವ ಹುಕಿಯಿಂದೆಂಬಂತೆ—"ಕಾರು ಹೊತ್ತಿಗೆ ಸರಿಯಾಗಿ ಮುಟ್ಟಿತೆ?" ಎನ್ನುತ್ತ ಇನ್ನೊಮ್ಮೆ ಹಲ್ಲು ಕಿಸಿದು ನಗುತ್ತ ಹಸ್ತಾಂದೋಲನಕ್ಕಾಗಿ ಚಾಚಿಯೇ ಹಿಡಿದ ಕೈಯನ್ನು ನಾಗಪ್ಪ ಗಮನಿಸಿಯೇ ಇಲ್ಲ ಎಂಬುದನ್ನು ಅರಿತು ಪೆಚ್ಚನಾಗಿ, ಕೈಯನ್ನು ಮೆಲ್ಲಗೆ ಪ್ಯಾಂಟಿನ ಕಿಸೆಗೆ ಸೇರಿಸಿದ. ತನ್ನ ಪ್ರತಿಕ್ರಿಯೆಯಲ್ಲಿ ದೊಡ್ಡ ಕ್ರಾಂತಿಯಾಗುತ್ತಿದೆ ಎಂಬುದು ಲಕ್ಷ್ಯಕ್ಕೆ ಬಂದದ್ದು ಆಗ- ಕಣ್ಣ ಮುಂದೆ, ಕಣ್ಣುತುಂಬಿ ನಿಂತ ಖಂಬಾಟಾ ಆಕಾರದಲ್ಲಿ, ಮಹತದಲ್ಲಿ ಒಮ್ಮೆಲೇ ಕುಗ್ಗಿಹೋದಂತೆ ತೋರಿದಾಗ! ಕಾರ್‍ರಿಡಾರಿನ ನೆಲಕ್ಕೆ ಹಾಸಿದ ಕೆಂಪು ಬಣ್ಣದ ರತ್ನಗಂಬಳಿಯನ್ನು,

ಗೋಡೆಗಳ, ಸೀಲಿಂಗಿನ ಭವ್ಯ ಸಿಂಗಾರವನ್ನು ಒಮ್ಮೆ ಅವಲೋಕಿಸಿ ಅದು ತನ್ನ ಮೇಲೆ ಅಂತಹ ಅವಾಸ್ತವವಾದ ಪರಿಣಾಮವನ್ನೇನೂ ಮಾಡುತ್ತಿಲ್ಲ ಎಂಬುದು ಗಮನಕ್ಕೆ ಬರುತ್ತಿರುವಾಗ! ಕೇಳಿದ: "ಎಲ್ಲರೂ ಬಂದು ತಲುಪಿದ್ದಾರೊ?" ಇದು ತನ್ನ ದನಿಯೆಂಬುದನ್ನು ಗುರುತು ಹಿಡಿಯಲು ಖಂಬಾಟಾನಿಗೆ ಕಷ್ಟವಾಗುತ್ತಿದ್ದುದನ್ನು ಕಂಡು ಖುಶಿಪಟ್ಟ. ಕಷ್ಟವಾದದ್ದು ಖಂಬಾಟಾನಿಗಷ್ಟೇ ಅಲ್ಲ. ಸ್ವತಃ ತನಗೂ...

ಲಿಫ್ಟ್ ಇದ್ದ ಜಾಗದತ್ತ ಹೋಗುವಾಗ ಗೋಡೆಯ ಮೇಲಿನ ಆಳೆತ್ತರದ ಕನ್ನಡಿಯಲ್ಲಿ ತನ್ನನ್ನೊಮ್ಮೆ ನೋಡಿಕೊಂಡ: ತನ್ನ ಅನುಭವಕ್ಕೆ ಸ್ಪಷ್ಟವಾಗಿ ವೇದ್ಯವಾಗುವಷ್ಟರ ಮಟ್ಟಿಗೆ ತನ್ನಲ್ಲಾದ ಪರಿವರ್ತನೆ ಬರಿಯೆ ಒಳಗಿನದೇ? ಎಂಬ ಗುಮಾನಿಯಿಂದೆಂಬಂತೆ ಆಪಾದಮಸ್ತಕ ನೋಡಿಕೊಂಡ: ಹೊರಗೇನೂ ಬದಲಾಗಿರಲಿಲ್ಲ—ತಲೆಯಲ್ಲಿ ಕೋಡು ಮೂಡಿರಲಿಲ್ಲ: ಹಣೆಯಲ್ಲಿ ಇನ್ನೊಂದು ಕಣ್ಣುತೆರೆದಿರಲಿಲ್ಲ. ಕಾಫ್ಕಾನ ಕತೆಯಲ್ಲಿ ಗ್ರೆಗರ್‌ಸಾಮ್ಸಾಗೆ ಆದದ್ದು ನೆನಪಿಗೆ ಬಂದು ತನ್ನಷ್ಟಕೇ ಮುಗುಳು ನಕ್ಕ. ಖಂಬಾಟಾ ಇನ್ನೂ ತನ್ನ ಅರಿವಿನ ಗಡಿಯಲ್ಲೇ ನಿಂತಿದ್ದ. ಕನ್ನಡಿಯಲ್ಲಿ ನೋಡಿಕೊಂಡಾಗ, ಲಿಫ್ಟಿಗಾಗಿ ಕಾಯುತ್ತ ಸಾಲುಗಟ್ಟಿ ನಿಂತವರನ್ನು ಗಮನಿಸಿದಾಗ ತಾನು ಸೂಟು ಧರಿಸಬೇಕಿತ್ತೇನೋ ಅನ್ನಿಸಿತು. ಕನಿಷ್ಠ ಟೈಯನ್ನಾದರೂ ತೊಡಬೇಕಿತ್ತೇನೋ. ಖಂಬಾಟಾ ಸೂಟಿನಲ್ಲಿದ್ದದ್ದು ಲಕ್ಷ್ಯಕ್ಕೆ ಬಂದದ್ದು, ಆಗ! ಖಂಬಾಟಾನನ್ನು ಬುಡದಿಂದ ತುದಿಯವರೆಗೆ ನೋಡುತ್ತಿದ್ದಂತೆ ನಗು ತಡೆಯುವದು ಅಸಾಧ್ಯವಾಯಿತು: ಯಾವ ಅಜ್ಜನ ಕಾಲಕ್ಕೆ ಹೊಲಿಸಿದ್ದೊ—ಈಗ ಬೊಜ್ಜು ಬೆಳೆದು ದಪ್ಪವಾದ ದೇಹಕ್ಕೆ ಬಿಗಿಯಾಗುತ್ತಿತ್ತು! ಈಗಿನ ಫ್ಯಾಶನ್ನಿಗೆ ಶೋಭಿಸುವಂತಹದೂ ಅಲ್ಲ ಮತ್ತೆ. ತೊಟ್ಟ ಶರ್ಟು ಕೂಡ ಟೈಯ್ ತೊಡಲು ಸರಿಯಾದ ಕಾಲರ್ ಇಲ್ಲದ್ದು. ಶುದ್ಧ ಪೆದ್ದನಂತೆ ತೋರುತ್ತಿದ್ದ. ಶಿರೀನಳ ಬಗ್ಗೆ ಕೇಳಿದ್ದನ್ನು ಸಂಕೋಚಬಿಟ್ಟು ನೆನೆದುಕೊಂಡಾಗ, ಸಂಕೋಚ ಬಿಟ್ಟೇ ಈಗದನ್ನು ನಂಬಿದಾಗ, ಮೋರೆಯ ಮೇಲೆ ತಂತಾನೇ ಪ್ರಕಟವಾದ ಭಾವಕ್ಕೆ ಖಂಬಾಟಾ ಅತೀವ ಗೊಂದಲಿಸಿದ. ಎಷ್ಟು ಗೊಂದಲಿಸಿದನೆಂದರೆ ತಾವು ಇಳಿಯಬೇಕಾದದ್ದು ಏಳನೇ ಮಜಲು ಎಂಬುದು ಮರೆತು ಎಂಟನೇ ಮಜಲಿಗೆ ಹೋಗಿ ತನ್ನ ಎಚ್ಚರಗೇಡಿತನವನ್ನು ತಾನೇ ಶಪಿಸಿಕೊಂಡ.

ಲಿಫ್ಟಿನಿಂದ ಹೊರಗೆ ಬಂದು ತತತಾ ಪಪಪಾ ಎನ್ನುತ್ತ ಕ್ಷಮೆಯೋ ವಿವರಣೆಯೋ ಯಾವುದೂ ಸ್ಪಷ್ಟವಾಗಿ ಗೊತ್ತಾಗದ ಹಾಗೆ ಗೊಣಗುಟ್ಟುತ್ತ ನಿಚ್ಚಣಿಕೆಯ ಮೆಟ್ಟಿಲಿಳಿದು ಏಳನೇ ಮಜಲೆಗೆ ನಾಗಪ್ಪನನ್ನು ಕರೆದೊಯ್ದ. ಕಾರ್‍ರಿಡಾರಿನ ಮೇಲೆ, ಮೆಟ್ಟಿಲುಗಳ ಮೇಲೆಲ್ಲ ಕೆಂಪು ಮೈಗೆ ಬಿಳಿಯ ಹೂವುಗಳನ್ನು ಚಿತ್ರಿಸಿಕೊಂಡ ರತ್ನಗಂಬಳಿಗಳು. ಮೆಟ್ಟಿಲು ಸಾಲಿನ ಎದುರಿನಲ್ಲಿಯೇ ಗೋಡೆಯಷ್ಟು ಎತ್ತರವಾದ ನಿಲುವುಗನ್ನಡಿ. ಬಗೆ ಬಗೆಯ ದೀಪಗಳು ಸೀಲಿಂಗಿನಿಂದ ತೂಗುವ ಶೆಂಡಲಿಯರ್‌ಗಳು. ಪೂರ್ವದ ಕಿಡಕಿಗಳಿಂದ ಕಾಣುವ ಸಮುದ್ರ: ಯಾವ ಒಂದು ತರಾತುರಿಯೂ ಇಲ್ಲದವನ ಹಾಗೆ—ತಾನು ಈ ಹೊಟೆಲ್ಲಿಗೆ ಬಂದದ್ದೇ ಇವೆಲ್ಲವುಗಳನ್ನು ನೋಡಲಿಕ್ಕೆ ಎನ್ನುವ ಹಾಗೆ—ನಿಧಾನವಾಗಿ ತದೇಕಚಿತ್ತದಿಂದ ಎಲ್ಲವನ್ನೂ ಅವಲೋಕಿಸಹತ್ತಿದ. ನಾಗಪ್ಪನ ಈ ಬೇಫಿಕೀರತೆಯೇ ಖಂಬಾಟಾನನ್ನು ಇನ್ನಷ್ಟು ಗೊಂದಲಕ್ಕೀಡುಮಾಡಿತು. ಕಿಡಕಿಯ ಹತ್ತಿರ ಬಂದು ಸಮುದ್ರದ ನೀರನ್ನು ಜನ್ಮದಲ್ಲಿ ಇದೇ ಮೊದಲು ಬಾರಿ ನೋಡುತ್ತಿದ್ದವನ ರೀತಿ ನೋಡುತ್ತ ನಿಂತುಬಿಟ್ಟ ನಾಗಪ್ಪನನ್ನು ತಾವು ಇಲ್ಲಿಗೆ ಬಂದ ಉದ್ದೇಶದ ಬಗ್ಗೆ ಹೇಗೆ ಎಚ್ಚರಿಸುವದು ಎಂದು ತಿಳಿಯದ ಖಂಬಾಟಾ—ಒಳಗೆ ಹೋಗುವ ಹೊತ್ತು ಆಗಲೇ ಮೀರಿಹೋಗಿದೆ, ಅವರೆಲ್ಲ ತಮ್ಮ ಹಾದಿಕಾಯುತ್ತಿದ್ದಾರೆ—ಎಂಬ ಉತಾವಳಿಯ ಭಾವನೆಯಿಂದ ಕೈ ಬೆರಳುಗಳನ್ನು ಹೊಸೆಯುತ್ತ—We are getting late, ಎಂದ. ತನ್ನ ದನಿಯಲ್ಲಿಯ ದೈನ್ಯತೆಗೆ ತಾನೇ ನಾಚಿಕೆಪಟ್ಟ. “Late for What?” ಎಂಬ ನಾಗಪ್ಪನ ಮರುಸವಾಲಿನಿಂದ ಮಾತ್ರ ಖಂಬಾಟಾನ ತಾಳ್ಮೆಗೆ ಧಕ್ಕೆ ತಗಲದೇ ಇರಲಿಲ್ಲ: “ಒಳಗೆ ಹೋದ ಮೇಲೆ ಗೊತ್ತಾದೀತು ಭೆಂಛೋದ್—late for what ಎನ್ನುವದು,” ಎಂದು ಒದರಿ ಹೇಳುವಷ್ಟರ ಮಟ್ಟಿಗೆ ಬಂದ ಸಿಟ್ಟನ್ನು ಶತಪ್ರಯತ್ನದಿಂದ ಅದುಮಿ ಹಿಡಿಯುತ್ತ—"They are waiting for us” ಎಂದ.

ಖಂಬಾಟಾ ‘us’ ಎಂದದ್ದನ್ನು ಗಮನಿಸಿ, “ಯಾಕೆ? ನನ್ನ ಜೊತೆಗೆ ಪಾಪ ನಿನ್ನನ್ನೂ ಸೇರಿಸಿದ್ದಾರೆಯೆ!” ಎಂದು ಕೇಳಿದನೇ ಹೊರತು ನಾಗಪ್ಪ ಕಿಡಕಿಯಿಂದ ಕದಲಲಿಲ್ಲ. ಕದಲುವ ಆತುರವನ್ನೂ ತೋರಲಿಲ್ಲ: ಒಂದು ಬಗೆಯ ವಿಸ್ಮಯ, ಕೌತುಕ ತುಂಬಿದ ಕಣ್ಣುಗಳಿಂದ ತಾವು ನಿಂತ ಕಾರ್‍ರಿಡಾರನ್ನು, ಹೊಟೆಲ್ಲಿನ ಬಾಹ್ಯಪರಿಸರವನ್ನು ನೋಡುತ್ತ ನಿಂತೇ ಉಳಿದ. ತನ್ನ ಸಂಕಲ್ಪ ಬಲವನ್ನು ಮೀರಿ

ನಿಂತಂತಹದೇನೋ ಒಳಗೊಳಗೇ ಸದ್ದಿಲ್ಲದೇ—ಖಂಬಾಟಾ ತನ್ನನ್ನು ಕರದೊಯ್ಯಲಿದ್ದ ರೂಮಿನಲ್ಲಿ ನಡೆಯಲಿದ್ದುದನ್ನು ಇದಿರಿಸಿಲು—ತನ್ನಷ್ಟಕ್ಕೆ ಸಿದ್ಧವಾಗುತ್ತಿದೆ ಎಂಬಂತಹ ಅರ್ಧ ಕಣ್ತೆರದ ಅರಿವು ಈ ತನ್ನ ನಿಷ್ಪಾಪವೆಂದು ತೋರುತ್ತಿದ್ದ ಅವಲೋಕನದ ಹಿಂದೆ ಕೆಲಸ ಮಾಡುತ್ತಿದೆ ಎನ್ನುವ ಅನ್ನಿಸಿಕೆಯಿಂದ ನಾಗಪ್ಪ ಪುಲಕಿತನಾಗದೇ ಉಳಿಯಲಿಲ್ಲ. ತಾಳ್ಮೆಗೆಟ್ಟ ಖಂಬಾಟಾಗೆ ಇದೆಲ್ಲ ಉದ್ಧಟತನವೆಂದು ತೋರಹತ್ತಿ ಒಳಗೊಳಗೇ ಕುದಿಯಹತ್ತಿದ. ಆದರೆ ನಾಗಪ್ಪನನ್ನು ಅಲ್ಲಿಂದ ಕದಲಿಸುವದು ಹೇಗೆ ಎನ್ನುವದು ತಿಳಿಯದೆ ಹತಾಶನಾದ. ನಾಗಪ್ಪನೇ ಅವನ ಸಹಾಯಕ್ಕೆ ಬಂದ. ಕೈಗಡಿಯಾರ ನೋಡಿಕೊಳ್ಳುತ್ತ, “ಒಳಗೆ ಹೋಗುವ ಹೊತ್ತಾಯಿತಲ್ಲವೆ? ಕೋಣೆ ಯಾವುದೆಂದು ಗೊತ್ತಿದೆಯೇ?” ಎಂದು ಕೇಳಿದ. ಅವನು ಕೇಳಿದ ರೀತಿಗೇ ಖಂಬಾಟಾನ ಮೈ ಉರಿಯಹತ್ತಿತು. ಆದರೆ ಏನು ಮಾಡಲೂ ನಿರುಪಾಯನಾದವನ ಹಾಗೆ—“please hurry up. ಈಗಾಗಲೆ ಹತ್ತು ಮಿನಿಟುಗಳ ವಿಲಂಬವಾಗಿದೆ,” ಎನ್ನುತ್ತ ಹೊಟೆಲ್ಲಿನ ಏರ್-ಕಂಡೀಶಂಡ್ ತಂಪಿನಲ್ಲಿಯೂ ಹಣೆಯ ಮೇಲೆ ಹನಿಗೂಡಹತ್ತಿದ ಬೆವರನ್ನೊರಸಿಕೊಳ್ಳಲು ಕಿಸೆಯಿಂದ ಕೈರುಮಾಲನ್ನು ಹೊರ ತೆಗೆದ. ತಾವು ಹೋಗಬೇಕಾದ ರೂಮು ತಲುಪಿದೊಡನೆ ಕರೆ-ಗಂಟೆಯನ್ನು ಒತ್ತಿ, ಕದ ತೆರೆಯುವುದನ್ನೇ ಕಾಯುತ್ತ, ಹಣೆಯ ಮೇಲಿನ ಬೆವರನ್ನೊರಸಿಕೊಂಡ.

ನಾಗಪ್ಪ ಖಂಬಾಟಾನ ದಶೆ. ನೋಡಿ ಒಳಗೊಳಗೇ ನಗುತ್ತ, “ನಿನಗೆ ಈ ತನಿಖೆ ಉಂಟುಮಾಡಿದ ಆತಂಕವನ್ನು ಸುಲಭವಾಗಿ ಗ್ರಹಿಸಬಲ್ಲೆ. ಆದರೆ ಕಾಳಜಿ ಮಾಡಬೇಡ. I won't be too harsh on you. But I won't spare Phiroz.” ಎಂದ. ಇವನ ವಾಕ್ಯ ಪೂರ್ಣವಾಗುವದಕ್ಕೂ ಕದ ತೆರೆದು ಸ್ವತಃ ಫಿರೋಜನೆ ಧುತ್ ಎಂದು ಕಣ್ಣ ಮುಂದೆ ಹಾಜರಾಗುವದಕ್ಕೂ ಗಂಟುಬಿದ್ದಿತು. ಖಂಬಾಟಾ ಕಂಗೆಟ್ಟು ನೆಲಕ್ಕೆ ಇಳಿಯುವ ಸ್ಥಿತಿಯಲ್ಲಿದ್ದ. ಫಿರೋಜನೇ ಅವನನ್ನು ಪಾರುಮಾಡಿದ: ನೀನು ಹೋಗಬಹುದೆಂದು ಕಣ್ಸನ್ನೆಯಿಂದ ತಿಳಿಸಿದವನೇ ನಾಗಪ್ಪನತ್ತ ತಿರುಗಿ, “ಹೆಲ್ಲೋ ಹೆಲ್ಲೋ ನಾಗ್...come in, come in,” ಎಂದು ಕೈ ಮುಂದೆ ಮಾಡಿದ. ನಾಗಪ್ಪ, ತನ್ನ ಅಂತಃಶಕ್ತಿಗಳೆಲ್ಲ ಸಂಪೂರ್ಣವಾಗಿ ತನ್ನ ವಶದಲ್ಲಿವೆ ಎಂಬ ಆತ್ಮವಿಶ್ವಾಸ ಪ್ರಕಟಿಸುತ್ತ, “ಹೆಲ್ಲೋ ಫಿರೋಜ್” ಎಂದೂ ಒಳಹೊಕ್ಕನೇ ಹೊರತು ಅವನು ಮುಂದೆ ಮಾಡಿದ ಕೈಯನ್ನು ಕುಲುಕಲಿಲ್ಲ. ಅದರತ್ತ ನೋಡಿಯೇ ಇಲ್ಲವೆಂದು

ನಟಿಸುತ್ತ, ಕಣ್ಣಇದಿರಿನ ದೊಡ್ಡ ಸೋಫಾದಲ್ಲಿ ಆಸನಾರೂಢರಾಗಿದ್ದ ಇಬ್ಬರು ಗೃಹಸ್ಥರನ್ನು ಒಮ್ಮೆ ನೋಡಿ ರೂಮಿನ ಕಣ್ಣುಕುಕ್ಕಿಸುವ ಅಲಂಕಾರವನ್ನು ಮೆಚ್ಚಿಕೆ ತುಂಬಿದ ಕಣ್ಣುಗಳಿಂದ ನೋಡುತ್ತ ನಿಂತ. ಕೋಣೆಯ ಕದ ಮುಚ್ಚಿ ಒಳಗೆ ಬಂದ ಫಿರೋಜ್ ನಾಗಪ್ಪನ ನಡತೆಯಿಂದ ವಿಚಲಿತನಾಗಿದ್ದರೂ ಹಾಗೆಂದು ತೋರಿಸಿಕೊಳ್ಳದೇ "ಬಾ ನಾಗ್, ನನ್ನಿಬ್ಬರು ಗೆಳೆಯರ ಪರಿಚಯ ಮಾಡಿಸುತ್ತೇನೆ: This is Mr. Dastur – managing director of Dastur & Co. Private Limited. ಸದ್ಯವೇ ನಮ್ಮ ಕಂಪನಿಯ ಬೋರ್ಡಿನ ಮೇಲೂ ಬರಲಿದ್ದಾರೆ" ಎಂದ.

"ನಿನ್ನನ್ನು ಭೇಟಿಯಾದದ್ದು ಬಹಳ ಬಹಳ ಸಂತೋಷ, ಮಿಸ್ಟರ್ ದಸ್ತೂರ್," ಎಂದು ಬೇಕಷ್ಟೇ ನಕ್ಕು ಹಸ್ತಲಾಘವ ಮಾಡಿದ, ನಾಗಪ್ಪ.

ಫಿರೋಜ್, ಇನ್ನೊಬ್ಬ ಗ್ರಹಸ್ಥನತ್ತ ತಿರುಗಿ "And this is Mr. Patel— Director of…"

ಫಿರೋಜನ ವಾಕ್ಯ ಮುಂದುವರಿಯುವ ಮೊದಲೇ ನಾಗಪ್ಪನೇ ಅಂದ- "ಆಫ್ ಪಟೇಲ್ ಎಂಡ್ ಕೋ ಪ್ರ್ಯಾವೇಟ್ ಲಿಮಿಟೆಡ್. He too is going to be on our board soon."

ಫಿರೋಜನಿಗೆ ಇದು ಸೇರಲಿಲ್ಲ. ಆದರೂ ತನ್ನ ಅಸಂತೋಷವನ್ನು ತೋರಗೊಡದೇ- "your guess is right…" ಎನ್ನುತ್ತಿರುವಾಗ ಪಟೇಲನೊಡನೆ ಹಸ್ತಾಂದೋಲನ ಮಾಡುತ್ತ, ನಾಗಪ್ಪ-"And you must be a Parsee Patel?" ಎಂದು ಕೇಳಿದ. ಪಟೇಲ ಈ ಪ್ರಶ್ನೆಯನ್ನು ಹೇಗೆ ಉತ್ತರಿಸಬೇಕು ಎನ್ನುವದು ತಿಳಿಯದೇ ಹಲ್ಲು ಕಿಸಿದು ನಕ್ಕ. ನಾಗಪ್ಪನ ಕಣ್ಣ ಮುಂದೆ ಖಂಬಾಟಾನ ಚಿತ್ರ ನಿಲ್ಲುತ್ತಿರುವಾಗ ಫಿರೋಜನ ಮೋರೆ ಬಣ್ಣಗೆಡಹತ್ತಿತು. ನಾಗಪ್ಪ, ಪಟೇಲನ ಇದಿರಿನ ಸೋಫಾದಲ್ಲಿ ಕೂಡ್ರುತ್ತ:

"ಪಟೇಲರು ಗುಜರಾಥಿಗಳಲ್ಲೂ ಇದ್ದಾರೆ ಪಾರ್ಸೀಗಳಲ್ಲೂ ಇದ್ದಾರೆ— ಆದ್ದರಿಂದ ನಮ್ಮ MD ಇದ್ದಾರಲ್ಲ ಅವರು ಗುಜರಾಥೀ ಪಟೇಲರು" ಎಂದ. ಅವನು ಈ ಮೊದಲು ಕೇಳಿದ ಪ್ರಶ್ನೆಯ ಅರ್ಥ ಈಗ ಹೊಳೆಯಿತೆನ್ನುವಂತೆ

ಪಾರ್ಸೀ ಪಟೇಲನ ಮೋರೆಯ ಮೇಲೆ ನಿರಂಬಳತೆ ಬೆಳಗಿತು. ಆದರೆ ನಾಗಪ್ಪನ ಮುಂದಿನ ಮಾತುಗಳು ಮಾತ್ರ ಮೂವರನ್ನು ಮತ್ತೆ ಗೊಂದಲಕ್ಕೀಡು ಮಾಡಿದುವು:

“ಮೇಲಾಗಿ ಈ ತನಿಖೆಯ ಆಯೋಗದಲ್ಲಿ ಫಿರೋಜನ ಜತೆಗೆ ಇನ್ನಿಬ್ಬರು ಸದ್ಗೃಹಸ್ಥರು ಇದ್ದಾರೆ ಎಂದು ನಮ್ಮ ಖಂಬಾಟಾನಿಂದ-ನಿಮಗೆ ಅವನ ಪರಿಚಯ ಇಲ್ಲವಾದರೆ, ಅವನು ನಮ್ಮ ಪರ್ಸೊನಲ್ ಆಂಡ್ ಎಡ್ಮಿನಿಸ್ಟ್ರೇಶನ್ ಮ್ಯಾನೇಜರ್-ತಿಳಿದಾಗ 'ಈ ಇಬ್ಬರು ಸದ್ಗೃಹಸ್ಥರ ಹೆಸರುಗಳನ್ನು ತಿಳಿಯಬಹುದೇ?' ಎಂದು ಕೇಳಿದ್ದೆ. ಖಂಬಾಟಾ- 'ಅದು ನಿನಗೆ ತನಿಖೆಯ ಹೊತ್ತಿಗೆ ಗೊತ್ತಾಗಿಯೇ ಆಗುತ್ತದೆ' ಎಂದಿದ್ದ. ಮುಂದೆ ನನಗೆ ಕಳಿಸಿದ ಪತ್ರದಲ್ಲೂ ಹಾಗೇ ತಿಳಿಸಿದ್ದ. ಆಗಲೇ ನಾನು ಮನಸ್ಸಿನಲ್ಲಿ ಎಣಿಸಿದ್ದೆ: ಫಿರೋಜ್ ನೇಮಿಸಿದ ಆಯೋಗವೆಂದ ಮೇಲೆ ಆ ಇಬ್ಬರು ಸದ್ಗೃಹಸ್ಥರು ಪಾರ್ಸೀ ಇರಲೇಬೇಕು ಎಂದು.”

ಮೂವರೂ ಸೋಫಾಗಳಲ್ಲಿ ಕೂತಲ್ಲೇ ಚಡಪಡಿಸಿದ್ದನ್ನು ಗಮನಿಸಿ—

“ನನ್ನನ್ನು ತಪ್ಪು ತಿಳಿಯಬೇಡಿ ಮಾರಾಯರೇ... ನೀವು ಪಾರ್ಸೀ ಎಂದು ತಿಳಿದು ಮನಸ್ಸಿಗಾದ ಉಲ್ಲಾಸ ಎಷ್ಟೆಂದು ಹೇಳಲಿ! ಯಾಕೆಂದರೆ, ಪಾರ್ಸೀ ಜನರ ನ್ಯಾಯಬುದ್ಧಿಯಲ್ಲಿ ದೊಡ್ಡ ವಿಶ್ವಾಸ ಇಟ್ಟುಕೊಂಡವನು ನಾನು.” ಎಂದ.

ಸನ್ನಿವೇಶ ಸಂಪೂರ್ಣವಾಗಿ ತಮ್ಮ ಹತೋಟಿಯ ಹೊರಗೆ ಹೋಗುತ್ತಿದೆ ಎಂಬುದನ್ನು ಗಮನಿಸಿದ ದಸ್ತೂರ್ ಫಿರೋಜನ ಕಡೆಗೊಮ್ಮೆ ನೋಡಿ, ಕಣ್ಣುಮಿಟುಕಿಸಿ, ಮೂಗಿನ ಹೊರಳೆಗಳನ್ನು ಕ್ಷಣಕಾಲ ಅರಳಿಸಿ, ಸರಿಯಾಗಿದ್ದ ತನ್ನ ಟೈಯ್ ಮೇಲೆ ಅದನ್ನು ಸರಿಪಡಿಸುವಂತೆ ಕೈಯಾಡಿಸಿ, ಗಂಟಲು ಸಡಿಲಿಸಿ—

“Thanks young man—thanks for the nice compliments. Justice you will certainly have from. us...And relax...”

ದಸ್ತೂರನ ಈ ಮಾತಿಗೆ ನಾಗಪ್ಪ ತುಂಬ ಸುಖವಾಗಿ ಮುಗುಳು ನಕ್ಕ:

“ನಾನೂ ನಿಮಗೆ ಅದನ್ನೇ ಹೇಳುವವನಿದ್ದೆ...ಅರ್ಥಾತ್ ನನ್ನ ಈ ಇನ್‌ಫಾರ್ಮಲ್ ಡ್ರೆಸ್ಸಿಗೆ ನಿಮ್ಮ ಆಕ್ಷೇಪಣೆ ಇಲ್ಲದಿದ್ದರೆ ಮಾತ್ರ...ಮತ್ತೆ ಒಂದನ್ನು

ಮೊದಲೇ ಸ್ಪಷ್ಟಪಡಿಸಬೇಕೇನೋ... I am not the type to be influenced or in any way pressurised by the decor of the place or of its occupants."

ಈ ಮಾತಿನ ಪರಿಣಾಮ ಇವನನ್ನು ಮೊದಲಿನಿಂದಲೂ ಒಂದು ಬಗೆಯ ಕೌತುಕದಿಂದಲೇ ನೋಡುತ್ತ ಕುಳಿತ ಪಟೇಲನ ಮೇಲೆ ಎಷ್ಟೊಂದು ಆಗಿತ್ತೆಂದರೆ ತಾನು ಏನು ಮಾಡುತ್ತಿದ್ದೇನೆ ಎನ್ನುವುದರ ಅರಿವು ಬರುವ ಮೊದಲೇ ಧಡಕ್ಕನೆ ಕೂತಲ್ಲಿಂದ ಎದ್ದು ನಿಂತವನೇ-

"ನಿಮಗೆ ಹೇಗೆ ಅನ್ನಿಸುತ್ತದೆಯೋ ಗೊತ್ತಿಲ್ಲ. But I agree with this young man," ಎಂದು ಕೋಟು, ಟೈ ಕಳಚಿದ: ಹೊಟೆಲ್ಲಿನ ಏರ್ ಕಂಡೀಶನಿಂಗ್ ಕೂಡ ಸರಿಯಾಗಿ ಕೆಲಸ ಮಾಡುತ್ತಿಲ್ಲ." ಎಂದ.

ದಸ್ತೂರನೂ ಕೋಟು ಕಳಚಿದ; ಟಾಯ್ ತೆಗೆಯಲಿಲ್ಲ. ಉದ್ಧಟತನವೆಂದು ತೋರಬಹುದಾದ ನೇರವಾದ ಮಾತುಗಳಿಂದ ಅದಾಗಲೇ ನಾಗಪ್ಪ, ಪಟೇಲ್ ಹಾಗೂ ದಸ್ತೂರರ ಗೆಳೆಯನಾಗಿಬಿಟ್ಟಿದ್ದಾನೆ ಎಂಬ ಅನ್ನಿಸಿಕೆಯಿಂದಲೇ ಫಿರೋಜ್ ಒಳಗೊಳಗೇ ಸಿಟ್ಟಿನಿಂದ ಕುದಿಯಹತ್ತಿದ. ಆದರೂ ತಾನೊಬ್ಬನೇ 'ನಿನ್ನೊಡನೆ ಹಗೆ ಕಾದವನು' ಎಂಬಂತೆ ತೋರಬಾರದೆಂದು ಕುಳಿತಲ್ಲಿಂದ ಎದ್ದು ಕೋಟು ತೆಗೆದ, ಹಾಗೂ, ನಾಗಪ್ಪನಿಗೆ— "What will you care to have—hot or cold?" ಎಂದು ಕೇಳಿದ.

"I will join you, gentleman-I am game for any thing." ಇದನ್ನು ಹೇಳಿದ ನಾಗಪ್ಪ ಪಟೇಲ ಹಾಗೂ ದಸ್ತೂರರಿಬ್ಬರಿಗೂ ತುಂಬ ಮೋಹಕನಾಗಿ ಕಂಡ: ಅವರ ಮೋರೆಯ ಮೇಲೆ ಮುಚ್ಚುಮರೆಯಿಲ್ಲದೆ ವ್ಯಕ್ತವಾದ ಮೆಚ್ಚಿಗೆಯನ್ನು ನೋಡಿ ಫಿರೋಜ್ ಅಸೂಯೆಪಟ್ಟ.

"Beer won't be a bad idea," ಎಂದು ದಸ್ತೂರ್ ಸೂಚಿಸಿದ್ದಕ್ಕೆ, ನಾಗಪ್ಪ, ಕೈಗಡಿಯಾರ ನೋಡಿ, "early for the day but good for the season," ಎಂದು ಸಮ್ಮತಿ ಇತ್ತಾಗ; ಫಿರೋಜ್ ಕೂತಲ್ಲಿಂದ ಎದ್ದು 'ರೂಮ್

ಸರ್ವೀಸ್'ಗೆ ಫೋನ್ ಮಾಡಿ ನಾಲ್ಕು ಬಿಯರ್ ಬಾಟಲಿಗಳನ್ನೂ ಅದರ ಜತೆಗೆ ಒಂದು ಪ್ಲೇಟು ಕೆಶ್ಯೂನೆಟ್ಸ್ ಹಾಗೂ ಒಂದು ಪ್ಲೇಟು ವೇಫರ್ಸ್ ಕಳಿಸುವಂತೆ ಕೇಳಿಕೊಂಡು ತನ್ನ ಸ್ಥಾನಕ್ಕೆ ಮರಳಿದ.

ದಸ್ತೂರ್ ಎಲ್ಲವನ್ನೂ ಎಲ್ಲಿ ಹಾಳುಮಾಡಿಬಿಡುತ್ತಾನೋ ಎಂಬ ಅಸಮಾಧಾನ ತುಂಬಿದ ಫಿರೋಜನ ಕಣ್ಣುಗಳನ್ನು ಸಂಧಿಸಿದ್ದೇ ತಡ ದಸ್ತೂರ್— 'ಹೆದರಬೇಡ. ಎಲ್ಲವನ್ನೂ ನನಗೆ ಬಿಡು' ಎನ್ನುವ ರೀತಿ— ಇನ್ನೊಮ್ಮೆ ಕಣ್ಣುಮಿಟುಕಿಸಿದ. ನಾಗಪ್ಪನ ಸೂಕ್ಷ್ಮ ದೃಷ್ಟಿಯಿಂದ ಇದನ್ನು ಅಡಗಿಸುವದು ಮಾತ್ರ ಸಾಧ್ಯವಾಗಲಿಲ್ಲ: ಈ ನಗುಮೋರೆಯ ಪಾರ್ಸೀ ಫಿರೋಜನಷ್ಟೇ ಧೂರ್ತನೆಂಬುದನ್ನು ಅವನು ಎಂದೋ ಅರಿತಿದ್ದ. ತನ್ನ ಬೇಟೆಯನ್ನು ಸರಿಯಾದ ಸನ್ನಿವೇಶದಲ್ಲಿ, ಸರಿಯಾದ ಮುಹೂರ್ತದಲ್ಲಿ ಹಿಡಿಯಲು ಎಷ್ಟು ಹೊತ್ತು ಬೇಕಾದರೂ ಕಾಯುವ ತಾಳ್ಮೆಯಿದ್ದ ಪ್ರಾಣಿಯಿದು...

ದಸ್ತೂರನೇ ಈ ನಾಟಕದ ಸೂತ್ರಧಾರನೆಂಬುದನ್ನು ನಾಗಪ್ಪ ಅರಿಯದೇ ಇರಲಿಲ್ಲ. ಪರದೆ ಏಳುವ ಸಂಧಿಯನ್ನೇ ಕಾಯುತ್ತಿದ್ದಾನೆ ಒಂದೂ ಮಗ: ಎಲ್ಲ ಪಾರ್ಸಿಗಳೂ ತಮ್ಮ ಮೂಗಿನಿಂದಲೇ ಎದ್ದು ಕಾಣುತ್ತಿದ್ದರೂ ಈ ಪಾರ್ಸೀಯ ಮೂಗಿನಲ್ಲೇನೋ ವಿಶೇಷವಿದೆ ಎಂಬಂತೆ ಲಕ್ಷ್ಯವನ್ನು ಅದರ ಮೇಲೇ ಕೇಂದ್ರೀಕರಿಸಿದಾಗ ಥಟ್ಟನೆ ಇವನೆಲ್ಲೋ ಪೊಲ್ಲೀ ಉಮ್ರಿಗಾರನನ್ನು ಹೋಲುತ್ತಾನೆ ಎಂಬುದು ಹೊಳೆದಾಗ ಒಂದು ಬಗೆಯ ತುಂಟತನದ ಮುಗುಳುನಗೆ ನಾಗಪ್ಪನ ಮೋರೆಯನ್ನು ಬೆಳಗಿಸಿತು. ಆ ನಗೆಯ ಅರ್ಥವಾಗದೇ ಗೊಂದಲಿಸಿದ ದಸ್ತೂರ್ ಮೋರೆಯ ಮೇಲೊಮ್ಮೆ ಕೈಯಾಡಿಸಿಕೊಂಡ, ಹಾಗೂ:

"I would like to clarify one thing- that this is not an investigation but an interview." ಎಂದ. ವಿವರಣೆ ಕೊಟ್ಟ ದನಿಯಲ್ಲಿ ಗಾಂಭೀರ್ಯವಿದ್ದರೂ ಅವನಿಗೆ ಅಂಟಿಕೊಂಡಂತಿದ್ದ ಒಂದು ರೀತಿಯ ಪೆದ್ದುತನ ನಾಗಪ್ಪನ ಸೂಕ್ಷ್ಮಗ್ರಹಣ-ಶಕ್ತಿಯಿಂದ ತಪ್ಪಿಸಿಕೊಳ್ಳಲಿಲ್ಲ. ದಸ್ತೂರನ ವಾಕ್ಯ ಮುಗಿಯುತ್ತಲೆ:

“I think we should educate our Personnel Department to know the differnce between the two” ಹೀಗೆ ಹೇಳಿ, ನಾಗಪ್ಪ ಫಿರೋಜನ ಕಡೆಗೆ ನೋಡಿದ. ಹಾಗೆ ನೋಡುವಾಗಿನ ದೃಷ್ಟಿಯಲ್ಲಿಯ ತಾತ್ಸಾರದಲ್ಲಿ ಖಂಬಾಟಾನ ಜತೆಗೆ ಶಿರೀನಳೂ ಒಳಗೊಂಡಿದ್ದಳೆನ್ನುವದು ಫಿರೋಜನಿಗೆ ಗೊತ್ತಾಗುವದು ಶಕ್ಯವಿರಲಿಲ್ಲ.

ಇವನಲ್ಲಿ ಕ್ರಾಂತಿಕಾರಕ ಬದಲಾಗಿಬಿಟ್ಟಿದೆ ಎಂಬುದನ್ನು ಯಾವಾಗಲೋ ಮನಗಂಡ ಫಿರೋಜ್ ತಾಳ್ಮೆಗೆಟ್ಟು—“This is an investigation too,” ಎಂದ. ಒಳಗೆ ಕುದಿಯುವ ಸಿಟ್ಟು ಇದ್ದಾಗಲೂ ಸನ್ನಿವೇಶ ಬೇಡಿದರೆ ಬೇಕಾದಷ್ಟು ಸಿಹಿಯಾಗಿ ಮಾತನಾಡುವ, ಶಾಂತತೆಯ ಮುಖವಾಡ ಧರಿಸುವ ಕಲೆಯಿದ್ದ ಫಿರೋಜ್ ಕೂಡ ತನಗೆ ಬಂದ ಸಿಟ್ಟನ್ನು ಅಡಗಿಸುವದರಲ್ಲಿ ಸೋತಿದ್ದ. ಇದನ್ನು ಗಮನಿಸಿದ ನಾಗಪ್ಪ—

“Ofcourse you mean—this is an investigation through an interview,” ಎನ್ನುತ್ತ ಮುಗುಳುನಕ್ಕ.

ಫಿರೋಜ್ ವರ್ಣಿಸಿದ ವ್ಯಕ್ತಿತ್ವದ ಇಸಮ್ ಅಲ್ಲವಿದು ಎಂದು ಅರಿತ ಪಟೇಲ್ ನಡುವೆ ಬಾಯಿ ಹಾಕಿ:

“Enough of these preliminaries. Let us come straight to the business.” ಎನ್ನುತ್ತಿರುವಾಗ ಸಮವಸ್ತ್ರಧಾರಿಯಾದ ಬೇರರ್ ಆರ್ಡರ್ ಮಾಡಿದ ಬಿಯರ್ ಹಾಗೂ ತಿನಿಸುಗಳೊಂದಿಗೆ ಕದ ದೂಡಿ ಒಳಗೆ ಬಂದ. ಪಟೇಲ—‘straight to the business’ ಅನ್ನುವುದಕ್ಕೂ ಬೇರರ್ ಬಿಯರ್ ಒಳಗೆ ತರುವುದಕ್ಕೂ ತಾಳೆಯಾದದ್ದರ ಮೇಲೇ ಜೋಕ್ ಮಾಡುವ ಲಹರಿಯನ್ನು ಪ್ರಯತ್ನಪೂರ್ವಕವಾಗಿ ತಡೆದು, ಗಂಭೀರವಾಗಿ: “ನಾನಂತೂ ಸಿದ್ಧನಾಗಿ ಕುಳಿತಿದ್ದೇನೆ,”ಎಂದ, ನಾಗಪ್ಪ. ದನಿಯಲ್ಲಿ ‘ಬಹಳ ದಿನಗಳಿಂದ ಅದಕ್ಕಾಗಿ ಕಾಯುತ್ತಿದ್ದೇನೆ’ ಎನ್ನುವ ಧಾಟಿಯಿತ್ತು.

ಬೇರರ್, ತಂದ ಬಾಟಲಿಗಳನ್ನು ಇಟ್ಟುಹೋಗದೇ, ಒಂದೊಂದೇ ತೆರೆದು ಬಿಯರನ್ನು ಕಾಚಿನ ಮಗ್ಗುಗಳಲ್ಲಿ ತುಂಬಹತ್ತಿದ. ತಂಪು ಬಿಯರಿನ ವಾಸನೆ ಮೂಗು ಹೊಕ್ಕದ್ದೇ ನಾಗಪ್ಪ ಖುಶಿಪಟ್ಟ. ಪಟೇಲ ಬಾವಾಜೀ ಕೂಡ ಬಾಯಿ ಚಪ್ಪರಿಸಹತ್ತಿದ. ಫಿರೋಜ್ ಹಾಗೂ ದಸ್ತೂರ್ ಇದೀಗ ಬರುತ್ತೇವೆ ಎನ್ನುವದನ್ನು ಕಣ್ಣಿನಿಂದಲೇ ಸೂಚಿಸುತ್ತ ಮಗ್ಗಲು-ಕೋಣೆಗೆ ಹೋದರು: ಎರಡೂ ಮಗ ಮಜಾಮಾಡುತ್ತಿದ್ದದ್ದು ಈ ಏರ್-ಕಂಡೀಷಂಡ್ 'ಸ್ವೀಟ್'ನಲ್ಲಿ! ಎಷ್ಟೊಂದು ಹುಡುಗಿಯರೊಡನೆ ಚಕ್ಕಂದವಾಡಿದ್ದಾನೋ ಎಂದುಕೊಳ್ಳುವಾಗ—ಥ್ರೀಟೀ, ಡಾಯನಾರ ಚಿತ್ರಗಳ ಹಿಂದೆಯೇ ಮೇರಿಯ ಚಿತ್ರವೂ ಕಣ್ಣಮುಂದೆ ಬಂದು ನಿಂತಿತು: ಅವಳೊಡನೆ ಟೆಲಿಫೋನ್ ಮೇಲೆ ಮಾತನಾಡುತ್ತಿದ್ದಾಗ ಅವಳ ಬಾಯಿಂದ ಕೇಳಿದ—ಇದೇ ತಾಜಮಹಲ್ ಹೊಟೆಲ್ಲಿನಲ್ಲಿ ಫಿರೋಜ್‌ಕೊಟ್ಟ—ಪಾರ್ಟಿಯ ವರ್ಣನೆಯಿಂದ ತನ್ನಲ್ಲಿ ಸಹಿಸಲಸಾಧ್ಯವಾಗುವಷ್ಟರ ಮಟ್ಟಿಗೆ ಹುಟ್ಟಿದ ಅಸೂಯೆಯ ನೆನಪಿನಿಂದ ಮನಸ್ಸು ಯಾವುದೇ ಬಗೆಯ ಕ್ಷೋಭೆಗೆ ಒಳಗಾಗಲಿಲ್ಲ; ಖುಶಿಯಾಯಿತು. ಹನ್ನೆರಡು ದಿನಗಳ ತೆರಪಿಲ್ಲದ ಯಾತನೆಯ ನಂತರ ನೆಲಸಹತ್ತಿದ ಈ ಭಾವನೆಗಳ ಸ್ಥೈರ್ಯವನ್ನು ಇನ್ನೆಂದಿಗೂ ಕೆಡಿಸಿಕೊಳ್ಳಬಾರದು ಎಂದು ಮನಸ್ಸು ಆಣೆಮಾಡುವದರಲ್ಲಿ ತೊಡಗಿದಾಗ ಬೇರರ್, ಪಟೇಲನ ಆದೇಶದ ಮೇರೆಗೆ, ಬಿಯರ್ ತುಂಬಿದ ಒಂದು ಮಗ್ಗನ್ನು ನಾಗಪ್ಪನ ಕೈಗೂ ಇನ್ನೊಂದನ್ನು ಪಟೇಲನ ಕೈಗೂ ಕೊಟ್ಟ. ವೌಚರದ ಮೇಲೆ ಸಹಿ ಬೇಕಿತ್ತೇನೋ. ತುಸು ತಡೆದು ಬಾ ಎಂದು ಪಟೇಲ ಸೂಚಿಸಿದಾಗ ಬೇರರ್ ಹೊರಟುಹೋದದ್ದೇ "Come on young man let us not waste time" ಎಂದು ಮಗ್ ಎತ್ತಿ ಹಿಡಿದು 'ಚಿಯರ್ಸ್' ಎಂದ ಪಟೇಲ. ನಾಗಪ್ಪನೂ 'ಚಿಯರ್ಸ್' ಎನ್ನುತ್ತ ಬಿಯರಿನ ತಂಪು ಗುಟುಕೊಂದನ್ನು ಸೀಪಿದ್ದೇ ತಡ—ಆಹಾ ಎನ್ನುವಷ್ಟು ಉಲ್ಲಸಿತನಾದ.

ದಸ್ತೂರ್ ಹಾಗೂ ಫಿರೋಜ್ ಇನ್ನೂ ಮಗ್ಗಲು-ಕೋಣೆಯಿಂದ ಹೊರಗೆ ಬರದೇ ಇದ್ದುದನ್ನು ಗಮನಿಸಿ, ಇನ್ನೊಂದು ಗುಟುಕು ಬಿಯರನ್ನು ಸೀಪುತ್ತ:

“I am sorry I seem to have upset some of your earlier strategy.” ಎಂದ ನಾಗಪ್ಪ ಹಾಗೂ ತನ್ನ ಮಾತಿನ ಪರಿಣಾಮಕ್ಕಾಗಿ ಪಟೇಲನ ಮೋರೆ ನೋಡಹತ್ತಿದ.

ಪಟೇಲನಿಗೆ ಫಿರೋಜನ ಈ ಲಫಡಾದಲ್ಲಿ ವಿಶೇಷ ಆಸ್ಥೆ ಇದ್ದಂತೆ ತೋರಲಿಲ್ಲ: “ಸ್ಟ್ರಾಟಜಿ ಎಲ್ಲಿ ಬಂತು ಮಣ್ಣು. ನಮ್ಮ ಫಿರೋಜನದು ಅತ್ಯಂತ ನರ್ವಸ್ ಜಾತಿ. ನೀವು ಗೆಳೆಯರು ಕೂಡಿ ಕಳಿಸಿದ ಮೂಗರ್ಜಿಯಿಂದ ಹೆದರಿಕೊಂಡುಬಿಟ್ಟಿದ್ದಾನೆ. ಇಷ್ಟೇ—be practical and accept the offer that is being made to you…” ಎನ್ನುತ್ತ ಬಿಯರಿನ ತಂಪನ್ನು ಅದು ತರುತ್ತಿದ್ದ ಮತ್ತನ್ನು ಆಸ್ವಾದಿಸಹತ್ತಿದ.

ಒಂದೂ ಮಗನೆ, ನನಗೆ ಚಂಡಿಕೆ ಹಚ್ಚುತ್ತೀಯೇನೋ. ಅಂದರೆ ಆ ಸಹಿಯಿಲ್ಲದ ಪತ್ರವನ್ನು ಬರೆದವನು ನಾನೇ ಎಂಬುದನ್ನು ಖಾತ್ರಿಮಾಡಿಕೊಳ್ಳುವುದಕ್ಕೆ ಈ ಹಗರಣ. ಭೆಂಛೋದ್! ನೀನೂ ಧೂರ್ತನೇ ಹಾಗಾದರೆ, ನಿನ್ನ ಉಳಿದಿಬ್ಬರು ಗೆಳೆಯರು ಹೀಗೆ ಗಪ್‌ಚಿಪ್ ಎದ್ದು ಹೋದದ್ದು ಕೂಡ ಮೊದಲೇ ಯೋಚಿಸಿಕೊಂಡ ಯುಕ್ತಿ ಅಲ್ಲವೇನೋ?…ಇದಾವುವರ ಅರ್ಥ ತನಗಾಗುತ್ತಿಲ್ಲ ಎಂಬಂತೆ ನಟಿಸುತ್ತ ಹಾಗೂ ತಾವಿಬ್ಬರೇ ಗುಟ್ಟಿನಲ್ಲಿ ಈ ತನಿಖೆಯ ಬಗ್ಗೆ ಮಾತನಾಡುವದು ಸರಿಯಲ್ಲವೇನೋ ಎಂಬ ಭಾವನೆಯನ್ನು ವ್ಯಕ್ತಪಡಿಸುವ ಧಾಟಿಯಲ್ಲಿ, ನಾಗಪ್ಪ :

“ತನ್ನ ಗುಟ್ಟನ್ನು ನೀವು ಹೀಗೆ ಹೊರಗೆಡಹಿದ್ದೀರಿ ಎಂದು ಗೊತ್ತಾದರೆ ಫಿರೋಜ್ ನಿಮ್ಮನ್ನು ದ್ವೇಷಿಸದೇ ಇರಲಾರ…ನಮ್ಮ ಹತ್ತೇ ಮಿನಿಟುಗಳ ಪರಿಚಯದಲ್ಲಿ ನೀವು ನನ್ನನ್ನು ತುಂಬ ಮೆಚ್ಚಿಕೊಂಡಂತಿದೆ. ಅದಕ್ಕಾಗಿ ಆಭಾರಿಯಾಗಿದ್ದೇನೆ. ಆದರೆ ನನಗೆ ಹೆಚ್ಚು ಕುತೂಹಲವಿದ್ದದ್ದು ನಿಮ್ಮ ಹಾಗೂ ಫಿರೋಜನ ಪರಿಚಯ ಹೇಗೆ ಆಯಿತು? ಎಂದು ತಿಳಿಯುವುದರಲ್ಲಿ - I mean not just because both of you are Parsees…” ಎಂದ.

ಪಟೇಲ ಅಕ್ಷರಶಃ ಸೋಫಾದಲ್ಲಿ ಜಿಗಿದುಬಿದ್ದ : “Ofcourse not… ofcourse not…” ವಿವರಣೆ ಕೊಡುವ ವರಾತಿನಲ್ಲಿ ಪ್ರತಿಭಟನೆಯ ಅಂಶವೇ

ದೊಡ್ಡದಾಗಿತ್ತು. ಫಿರೋಜ್ ಹಾಗೂ ದಸ್ತೂರರು ಬೇಕಾದ್ದಕ್ಕಿಂತ ಹೆಚ್ಚು ಹೊತ್ತು, ಒಳಗಿದ್ದಾರೆ ಅನಿಸಿ—"Come on fellows —your beer is getting warm..." ಎಂದು ಕರೆದೊಡನೆ ಇಬ್ಬರೂ ಲಗುಬಗೆಯಿಂದ ಹೊರಗೆ ಬಂದು ತಾವು ಅವರಿಬ್ಬರನ್ನೇ ಬಿಟ್ಟು ಒಳಗೆ ಹೋಗಬೇಕಾಗಿ ಬಂದದ್ದರ ಬಗ್ಗೆ ಕ್ಷಮೆಯಾಚಿಸಿ ತಮ್ಮತಮ್ಮ ಬಿಯರ್ ಮಗ್ಗುಗಳನ್ನೆತ್ತಿ 'ಚಿಯರ್ಸ್' ಎಂದರು.

"ನೀವು ಕೂಡಲೇ ಹೊರಗೆ ಬಂದದ್ದು ಒಳ್ಳೆಯದಾಯಿತು. ನಾನು ಕೇಳಹತ್ತಿದ ಪ್ರಶ್ನೆಗಳಿಂದ ಪಾಪ, ಪಟೇಲರಿಗೆ ಉಂಟಾದ ಫಜೀತಿ ಹೇಳತೀರದು..." ನಾಗಪ್ಪ ತುಂಟತನದಿಂದ ಮುಗುಳುನಗುತ್ತ ಪಟೇಲನ ಕಡೆಗೆ ನೋಡಿದಾಗ ಪಟೇಲನ ಲಕ್ಷ್ಯವೆಲ್ಲ ಸೀಲಿಂಗಿನ ಬಣ್ಣದ ಮೇಲೂರಿತ್ತು.

ನಾಗಪ್ಪ ಅಲ್ಲಿಗೇ ತಡೆಯಲಿಲ್ಲ—"ನೀವು ಇಲ್ಲಿಂದ ಹೊರಟುಹೋದದ್ದೇ ತಡ, ನಮ್ಮ ಪಟೇಲಸಾಹೇಬರು ಎರಡೂ ಬಿಸಿನೆಸ್ಸುಗಳನ್ನು ಒಂದೇ ಕಾಲಕ್ಕೆ ಆರಂಭಿಸಿಬಿಟ್ಟರು-ನನಗೆ ಬಿಯರ್ ಕುಡಿಸುವುದರ ಜತೆಗೆ ನೀವು ಅವರಿಗೆ ವಹಿಸಿಕೊಟ್ಟ ಕೆಲಸವನ್ನೂ. ಅವರು ನನಗೆ ಹೇಳಿದ್ದರ ಮುಖ್ಯ ಸಾರಾಂಶ ಇಷ್ಟೆಂದು ನನ್ನ ಗ್ರಹಿಕೆ: ಬೋರ್ಡ ಮೆಂಬರರಿಗೆ ಕಳಿಸಿದ ಸಹಿಯಿಲ್ಲದ ಪತ್ರ ನಾನು ಬರೆದದ್ದು ಹೌದು ಎಂದಾದರೆ, ನನಗೇನೋ ದೊಡ್ಡ ಆಫರ್ ಬರಲಿದೆಯಂತೆ. ನಾನದನ್ನು ಸ್ವೀಕರಿಸಿ ತೆಪ್ಪಗೆ ಬಾಯಿಮುಚ್ಚಿಕೊಂಡಿರುವದು ಒಳ್ಳೆಯದು ಎಂದು ಅವರ ಸಲಹೆಯೆಂದು ತೋರುತ್ತದೆ... ಅಲ್ಲವೇ ಪಟೇಲರೆ?" ಪಟೇಲನ ಕಡೆಗೆ ತಿರುಗಿದರೆ ಅಲ್ಲಿ ಅವನು ತನ್ನ ಜಾಗದಲ್ಲಿ ಇರಲೇ ಇಲ್ಲ. ಇವನು ಮಾತಿಗೆ ಆರಂಭಿಸಿದ ರೀತಿ ನೋಡಿಯೇ ಬೆದರಿದವನು ಬಿಯರಿಗೆ ಹೆಚ್ಚಿನ ಜಾಗ ಮಾಡಿಕೊಡುವ ನೆಪದಿಂದೆಂಬಂತೆ ಕ್ಲೋಕ್-ರೂಮ್ ಹುಡುಕುತ್ತ ಒಳಗೆ ಹೋಗಿದ್ದ.

ದಸ್ತೂರ್ ಹಾಗೂ ಫಿರೋಜರಂತೂ ಇವನ ಮಾತಿನ ರೀತಿಗೆ ಥಕ್ಕಾಗಿ ಬಿಟ್ಟರು. ಈ ಹತ್ತು ಹನ್ನೆರಡು ದಿನಗಳಲ್ಲಿ ಇವನಲ್ಲಿ ಹೀಗೆ ಆಮೂಲಾಗ್ರವಾಗಿ ಬದಲಾಗುವಂತಹದು ಏನು ನಡೆಯಿತೋ ಎನ್ನುವದು ತಿಳಿಯದೇ ಅವನು ದಿಗ್ಭ್ರಮೆಗೊಂಡ. ಕಾರಣ ಏನೇ ಇರಲಿ, ಬದಲಾದದ್ದಂತೂ ನಿಃಸಂಶಯ. ಇವನ ವ್ಯಕ್ತಿತ್ವದ ಬಗ್ಗೆ ಫಿರೋಜ್ ಈ ಮೊದಲು ಮಾಡಿಕೊಟ್ಟ ಕಲ್ಪನೆಗೂ ಪ್ರತ್ಯಕ್ಷದಲ್ಲಿ ಕಂಡವನಿಗೂ ಇರುವ ಅಂತರವನ್ನು ಕಂಡು ದಸ್ತೂರ್ ಒಳಗೊಳಗೇ ಫಿರೋಜನ

ಬಗ್ಗೆ ಸಿಡಿಮಿಡಿಗೊಂಡ. ಫಿರೋಜನೇ ತಾನು ಸಿಕ್ಕಿಸಿಕೊಂಡ ಈ ಪೇಚಿನ ಪ್ರಸಂಗವನ್ನು ನಿಭಾಯಿಸಿಕೊಳ್ಳಲೀ ಎಂದು ಕೈಚೆಲ್ಲಿ ಕೂತ ಥರ ನಾಗಪ್ಪನ ಕಡೆಗೆ ಕೌತುಕ ತುಂಬಿದ ದೃಷ್ಟಿಯಿಂದ ನೋಡುತ, ಬಿಯರ್ ಸೇವಿಸಹತ್ತಿದ. ಸ್ವಭಾವತಃ ಪುಕ್ಕಲು-ಪ್ರಕೃತಿಯವನಾದ ಫಿರೋಜ್ ದಸ್ತೂರನ ಈ ನಿಲುವಿನಿಂದ ಇನ್ನಷ್ಟು ಗಾಬರಿಯಾದ. ಇದನ್ನು ಸೂಕ್ಷ್ಮವಾಗಿ ಗ್ರಹಿಸಿದ ನಾಗಪ್ಪ, ಇಷ್ಟೊಂದು ಸುಲಭವಾಗಿ ತನ್ನ ಪರವಾಗಿ ಬೆಳೆಯುತ್ತಿದ್ದ ಸನ್ನಿವೇಶವನ್ನು ವ್ಯರ್ಥವಾಗಲು ಬಿಡಬಾರದು ಎನ್ನುವ ಹಟದಿಂದೆಂಬಂತೆ ಅಂದ:

"ಆ ಪತ್ರ ಬರೆದದ್ದು ನಾನಲ್ಲ. ಆ ಪತ್ರದಲ್ಲಿ ಏನೇನು ಇದೆ ಎಂಬುದು ಕೂಡ ನನಗೆ ಗೊತ್ತಿಲ್ಲ. ಇಷ್ಟೇ: ಆ ಪತ್ರದಲ್ಲಿ ನಮೂದಿಸಿರಬಹುದಾದ ಕೆಲವರ ಕರಾಮತಿಗಳ ಬಗ್ಗೆ ನನ್ನ ಹತ್ತಿರ ಸಾಕಷ್ಟು ಮಾಹಿತಿ ಇದೆ. ಅದರಿಂದ ಈ ತನಿಖೆಯ ಆಯೋಗಕ್ಕೆ ಉಪಯೋಗವಾಗಬಹುದಾದ ಪಕ್ಷದಲ್ಲಿ ನಾನು ಯಾವ ಬಕ್ಷೀಸಿನ ಅಪೇಕ್ಷೆ ಇಲ್ಲದೇನೆ ನಿಮ್ಮ ಮುಂದೆ ಇರಿಸಲು ಸಿದ್ಧನಿದ್ದೇನೆ."

ಫಿರೋಜನಿಂದ ಇನ್ನೂ ಸುಮ್ಮನಿರುವದು ಸಾಧ್ಯವಾಗಲಿಲ್ಲ. ತನಗೆ ಬಂದ ಸಿಟ್ಟನ್ನು ಅಡಗಿಸುವ ಪ್ರಯತ್ನ ಕೂಡ ಮಾಡದೇ ಗುಡುಗಿದ:

"Don't be impertinent. ಇಲ್ಲಿ ನಿನ್ನ ಬಗ್ಗೆ ತನಿಖೆ ನಡೆದಿದೆಯೇ ಹೊರತು... ನೀನೇ ತನಿಖೆ ನಡೆಸಲು ಹೊರಟಂತೆ ಮಾತನಾಡಬೇಡ."

ನಾಗಪ್ಪ, ಫಿರೋಜನ ಮಾತುಗಳಿಂದ ಆಶ್ಚರ್ಯಪಡುತ್ತಿರುವಾಗಲೂ, ಸನ್ನಿವೇಶದಲ್ಲಿಯ ಈ ಹೊಸ ಸಾಧ್ಯತೆಯನ್ನು ಕಂಡು ಪುಲಕಿತನಾಗಿ ಮುಗುಳುನಕ್ಕ: "ಅದರ ಅರಿವು ನನಗೆ ಇದೆ ಫಿರೋಜ್... ಈ ಪರಿಸ್ಥಿತಿಗೆ ವ್ಯತಿರಿಕ್ತವಾದದ್ದೇನನ್ನೂ ನಾನು ಅಂದಿಲ್ಲ... unless we are prompted by our unconscious to hear things which were not said."

ನಾಗಪ್ಪನ ಈ ಮಾತುಗಳಿಂದ ಫಿರೋಜ್ ಇನ್ನಷ್ಟು ಕೆರಳಿದ. ಆಗ ದಸ್ತೂರ್ ಒಮ್ಮೆಲೇಮಾತಿಗೆ ಪೂರ್ವಯೋಜಿತ ದಿಕ್ಕು ಕೊಡಲು ಕಾದು ಕೂತವನ ಹಾಗೆ–ಕೇಳಿದ:

“ಓಕೇ ಮಿಸ್ಟರ್ ನಾಗನಾಥ್. ಹೇಳಿ: ತಂದೆ-ತಾಯಿಗಳಿಗೆ ನೀವು ಒಟ್ಟೂ ಎಷ್ಟು ಮಂದಿ ಮಕ್ಕಳು?”

ನಾಗಪ್ಪ ನಿರುತ್ತರನಾದ: ಎಲ್ಲ ಬಿಟ್ಟು ತನಿಖೆ ಇದೇ ಪ್ರಶ್ನೆಯಿಂದೇಕೆ ಆರಂಭವಾಯಿತು? ತೀರ ಸಹಜವೆಂದು ತೋರುತ್ತಿದ್ದ ಈ ಪ್ರಶ್ನೆ ತನ್ನ ಮೇಲೆ ಇದೇಕೆ ಇಷ್ಟೊಂದು ಭಾವನಾತ್ಮಕ ಆಘಾತ ಉಂಟುಮಾಡುತ್ತಿದೆ? ಈ ಪ್ರಶ್ನೆ ಸಹಜವಾದದ್ದೇ? ಅಥವಾ... ಶ್ರೀನಿವಾಸ ಕೊನೆಗೂ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ತನ್ನ ಬಗ್ಗೆ ಗುಪ್ತ ಮಾಹಿತಿಯನ್ನು ಒದಗಿಸಿರಬಹುದೆ? ಬೇರೆ ಯಾವುದೇ ಪ್ರಶ್ನೆಯಿಂದ ತನಿಖೆ ಆರಂಭವಾಗಿದ್ದರೂ ನಾಗಪ್ಪ ಕೇಳುವುದನ್ನು ನಿಶ್ಚಯಿಸಿಕೊಂಡಿದ್ದ: 'ದಯಮಾಡಿ — ಈ ತನಿಖೆಯ ಉದ್ದೇಶವೇನು? ಅದನ್ನು ನಡೆಸುವ ಅಧಿಕಾರ ನಿಮಗೆ ಯಾರು ಕೊಟ್ಟಿದ್ದಾರೆ? ಎಂಬುದನ್ನು ಸ್ಪಷ್ಟ ಪಡಿಸಿರಿ... ಇಲ್ಲವಾದರೆ, ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಡುವದು ಶಕ್ಯವಿಲ್ಲ... ಆದರೆ ಈಗ ದಸ್ತೂರ್ ಕೇಳಿದ ಪ್ರಶ್ನೆಯಿಂದ ಮಾತ ನಾಗಪ್ಪ ತಬ್ಬಿಬ್ಬಾದ; ಈ ಮುಖಾಮುಖಿಯನ್ನು ಇದಿರಿಸಲು ಬೇಕಾದ ಸಂಕಲ್ಪಬಲವನ್ನು ನಿಶ್ಚಯಿಸಿದ ಅನೇಕ ಶಕ್ತಿಗಳಲ್ಲಿ ಮಹತ್ವದ್ದೊಂದು ಐನ್ ಗಳಿಗೆಯಲ್ಲಿ ಕುಸಿದು ಬೀಳುತ್ತಿದೆ ಎಂಬಂತಹ ಅನುಭವದಿಂದ ಧೃತಿಗೆಡಹತ್ತಿದ.

ಫಿರೋಜ್ ಈ ಸಂಧಿಯನ್ನು ವ್ಯರ್ಥಹೋಗಲು ಬಿಡಲಿಲ್ಲ: “Come on Nag, don't let your subconscious read meanings which are not there in so simple a question.” ಫಿರೋಜನ ಈ ಮಾತುಗಳಿಂದ ಅವನು ಬಯಸಿದ ಪರಿಣಾಮ ದಸ್ತೂರನ ಮೇಲೆ ಆಗದೇ ಉಳಿಯಲಿಲ್ಲ: ತನ್ನ ಪ್ರಶ್ನೆಯಿಂದ ನಾಗಪ್ಪನ ಮನಸ್ಸಿಗೆ ಆಘಾತವಾಗಿದೆ ಎನ್ನುವದು ಅವನ ಲಕ್ಷ್ಯಕ್ಕೆ ಬರದೇ ಇರಲಿಲ್ಲ. ಆದರೆ ಫಿರೋಜನ ಧ್ವನಿಯಲ್ಲಿಯ ವ್ಯಂಗ್ಯವೇ ನಾಗಪ್ಪನಿಗೆ ಆಹ್ವಾನವಾಯಿತು:

“ಕ್ಷಮಿಸಿ ಮಿಸ್ಟರ್ ದಸ್ತೂರ್, ಅನಿರೀಕ್ಷಿತವಾದ ನಿಮ್ಮ ಪ್ರಶ್ನೆ ನನ್ನ ವ್ಯಕ್ತಿತ್ವದ ಒಂದು ಸೂಕ್ಷ್ಮಸ್ಥಾನವನ್ನು ತಟ್ಟಿದ್ದು ನಿಜ. (ಹೀಗೇ ಹೇಳಹೊರಟರೆ ನಿಮಗೆ ಅರ್ಥವಾಗಲಿಕ್ಕಿಲ್ಲ. ಅರ್ಥವಾಗುವಂತೆ ಹೇಳಲಿಕ್ಕೆ ಸಮಯ ಸಾಲದು). ಒಂದನ್ನು ಹೇಳಿ –ಯಾಕಂದರೆ ಇದು ನನ್ನ ಕರ್ರಿಯರಿನ ಪ್ರಶ್ನೆ: ಈ ತನಿಖೆಯ

ಉದ್ದೇಶವೇನು? ಅದನ್ನು ನಡೆಸಲು ನಿಮ್ಮನ್ನು ನೇಮಿಸಿದವರು ಯಾರು? ಅಧಿಕಾರ ಕೊಟ್ಟವರು ಯಾರು? ನನ್ನ ಮೇಲಿನ ಆರೋಪಗಳಾದರೂ ಏನು? ಹೊರಿಸಿದವರು ಯಾರು? - ಈ ಪ್ರಶ್ನೆಗಳಿಗೆ ಉತ್ತರ ಸಿಗದೇ ನಿಮ್ಮ ಯಾವ ಪ್ರಶ್ನೆಗಳಿಗೂ ಉತ್ತರ ಕೊಡುವದು ಅಸಾಧ್ಯ..."

ಯಾವುದೇ ಬಗೆಯ ನಾಟಕೀಯತೆ ಇಲ್ಲದೇ, ದಸ್ತೂರನ ಕಣ್ಣುಗಳಲ್ಲಿ ಕಣ್ಣುನೆಟ್ಟು ತನಗೆ ಆಡಲು ಶಕ್ಯವಾದ ಈ ಮಾತಿನಿಂದ ನಾಗಪ್ಪನಿಗೆ ಸಮಾಧಾನವಾಗದೇ ಇರಲಿಲ್ಲ. ಉಳಿದವರ ಮೇಲೆ ಅದು ಉಂಟುಮಾಡಿರಬಹುದಾದ ಪರಿಣಾಮ ತಿಳಿಯುವ ಕುತೂಹಲ ಹುಟ್ಟಲಿಲ್ಲ. ಯಾಕಂದರೆ ಅಂತಹ ಉದ್ದೇಶವೇ ಆ ಮಾತಿಗೆ ಇರಲಿಲ್ಲ.

ಇತ್ತ ದಸ್ತೂರನೂ ಈ ತನಿಖೆಗೆ ಬೇಕಾದ ಅನೌಪಚಾರಿಕತೆಯನ್ನು ಕಾಯ್ದುಕೊಂಡೂ ಗಂಭೀರನಾಗಲು ಈಗ ನಿರ್ಧರಿಸಿದಂತಿತ್ತು: ಬಿಯರಿನ ಪಾತ್ರೆಯನ್ನು ಟೀಪಾಯಿಯ ಮೇಲಿಟ್ಟು, ಕೆಲ ಹೊತ್ತಿನ ಮೊದಲಷ್ಟೇ ಬದಿಯ ಕೋಣೆಯಿಂದ ತಂದಿರಿಸಿದ ಫೈಲನ್ನು ಕೈಗೆ ತೆಗೆದುಕೊಂಡು, ಚೂಪಾಗಿ ಕೆತ್ತಿ ತಂದ ಪೆನ್ಸಿಲ್ ಒಂದನ್ನು ಒಮ್ಮೆ ಫೈಲ್ ಮೇಲೆ ಬಡೆಯುತ್ತ; ಇನ್ನೊಮ್ಮೆ ಮೂಸಿನೋಡುವ ರೀತಿ ಮೂಗಿನ ಹತ್ತಿರ ಹಿಡಿಯುತ್ತ; ಮಗದೊಮ್ಮೆ ಗಲ್ಲದ ಮೇಲೆ ಒತ್ತುತ್ತ ಕೆಲ ಹೊತ್ತು ಮುಗುಳುನಗೆ ಮೌನ ಧರಿಸಿ ಕುಳಿತ: ಒಂದೂ ಮಗ ಸಿದ್ಧವಾಗ್ತಾಽಽ ಇದಾನೆ. ಮೊದಲನೇ ಪೇಚಿನ ಪ್ರಶ್ನೆಗೆ ಶಬ್ದ ಹುಡುಕ್ತಾ ಇದಾನೆ: ನಾಗಪ್ಪನೂ ಉತ್ತರ ಕೊಡಲು ಸಿದ್ಧನಾಗಿ ದಸ್ತೂರ್ ಬಾಯಿ ತೆರೆಯುವುದನ್ನೇ ಕಾಯುತ್ತ ಕುಳಿತ: ಇನ್ನು ಹೆದರಕೊಡದು. ಭಾವುಕನಾಗಕೊಡದು. ಫಕ್ಕನೆಂಬಂತೆ ಒಂದು ಸಂಶಯ: ತನಗೆ ನೇರವಾಗಿ ಹೇಳಲು ಹಿಂದೆಗೆದದ್ದನ್ನು ಶ್ರೀನಿವಾಸ ಫಿರೋಜನಿಗೆ ತಿಳಿಸಿಲ್ಲವಷ್ಟೇ? ತನಿಖೆಯ ದಿನ ಮುಂದೆ ಬೀಳಲು ಕೊನೆಯ ಗಳಿಗೆಯಲ್ಲಿ ಶ್ರೀನಿವಾಸನಿಂದ ದೊರೆತಿರಬಹುದಾದ ಮಾಹಿತಿಯೇ ಕಾರಣ ಅಲ್ಲವಷ್ಟೇ? ಈ ಸಂಶಯದಿಂದ ನಾಗಪ್ಪನ ಧೈರ್ಯ ಮಾತ್ರ ಎಳ್ಳಷ್ಟೂ ಕುಗ್ಗಲಿಲ್ಲ. ಬದಲು ದಸ್ತೂರನ ಪ್ರಶ್ನೆಯನ್ನು ಕೇಳುವ ಆತುರ ಹೆಚ್ಚಿತು - ಅಷ್ಟೇ. ಆ ಆತುರವನ್ನು ಮೋರೆಯ ಮೇಲೆ ಸ್ಪಷ್ಟವಾಗಿ ಮೂಡಿಸಿ ದಸ್ತೂತನನ್ನೇ ಎವೆಯಿಕ್ಕದೇ ನೋಡುತ್ತ ಕೂತ.

ದಸ್ತೂರ್ ಪ್ರಶ್ನೆ ಕೇಳಲು ತೆಗೆದುಕೊಳ್ಳುತ್ತಿದ್ದ ವೇಳೆ ಪಟೇಲ್ ಹಾಗೂ ಫಿರೋಜರ ಮೇಲೂ ಪರಿಣಾಮಮಾಡುತ್ತಿದ್ದಂತೆ ತೋರಿತು: ಇಬ್ಬರೂ ಕೂತಲ್ಲೇ ಚಡಪಡಿಸುತ್ತ ಕುಂಡೆ ಸರಿಸಿದರು - ದಸ್ತೂರ್ ಬಾಯಿ ತೆರೆಯಲು ಹವಣಿಸುತ್ತಿದ್ದ. ಆದರೆ ಶಬ್ದವಾಗಲು ಬಯಸುತ್ತಿದ್ದ ಪ್ರಶ್ನೆ ಒಳಗೆಲ್ಲೋ ತಡವರಿಸುತ್ತಿದ್ದದ್ದು ನಾಗಪ್ಪನ ಚೂಪು ದೃಷ್ಟಿಯಿಂದ ಮರೆಯಿಸಲಾಗಲಿಲ್ಲ: ಗಾಳಾ ಹಾಕ್ತಾನೆ ಎರಡೂ ಮಗ. ಲೆಕ್ಕಾಹಾಕ್ತಾನೆ - ಎಲ್ಲಿಂದ ಶುರುಮಾಡಲಿ? ಹೇಗೆ ಶುರುಮಾಡಲಿ? ಹೇಗಾದರೂ ಮಾಡೋ. ಪಾರ್ಸೀ ಸಾಲಾss. ಈ ತನಿಖೆಯ ಭವಿತವ್ಯ ನೀನು ಹೇಗೆ ಆರಂಭಮಾಡುತ್ತೀ ಎಂಬುದನ್ನೇನು ಅವಲಂಬಿಸಿಲ್ಲವೋ; ನಾನು ಹೇಗೆ ಕೊನೆಗೊಳಿಸುತ್ತೇನೆ ಎಂಬುದರ ಮೇಲೆ ನಿಂತಿದೆ. ಮತ್ತು ನಾನು ಹೇಗೆ ಕೊನೆಗೊಳಿಸುತ್ತೇನೆ ಎಂಬುದು ನನಗೆ ಗೊತ್ತಿದೆ, ನಿಮಗೂ ಗೊತ್ತಾಗುತ್ತದೆ. ಉತಾವಳಿ ಮಾಡಬೇಡ. ನ್ಯಾಯವನ್ನು ಬೇಡಲು ಬಂದಿಲ್ಲ. ಬಂದದ್ದು ನೀವು ಎಸಗಿದ ಅನ್ಯಾಯವನ್ನು ಬಯಲಿಗೆಳೆಯಲು. ಬಾ. ನೀವು ಬರುವುದನ್ನೇ ಕಾಯುತ್ತ ಇದ್ದೇನೆ ಕಳೆದ ಎರಡು ವಾರಗಳಿಂದಲೂ...

ನಾಗಪ್ಪ ಬಿಯರಿನ ತಂಪು ಗುಟುಕೊಂದನ್ನು ಹೀರಿದ; ತುಂಬ ಸಮಾಧಾನ ಎನಿಸಿತು. ಫಿರೋಜ್ ಪೈಪ್ ಸ್ವಚ್ಛಮಾಡುವ ಉದ್ಯೋಗದಲ್ಲಿ ನಿರತನಾಗಿದ್ದ. ಪಟೇಲ್ ಬಿಯರಿನ ಅಮಲನ್ನು ಆಸ್ವಾದಿಸುತ್ತ, ದಸ್ತೂರನ ಮುಂದಿನ ಚಾಲಿನ ಹಾದಿ ಕಾಯುತ್ತ ಚಡಪಡಿಸುತ್ತಿದ್ದ. ಕುಂಡೆ ಸರಿಸುತ್ತಿದ್ದ. ಭುಜ ಹಾರಿಸುತ್ತಿದ್ದ. ದಸ್ತೂರ್ ಮಹದ್ಗಾಂಭೀರ್ಯದಲ್ಲಿ ಆರಂಭಿಸಿದ. ಅವನ ವ್ಯಕ್ತಿತ್ವಕ್ಕೆ ಶೋಭಿಸದ ಈ ಗಾಂಭೀರ್ಯದಲ್ಲಿಯ ಸುಳ್ಳುತನವೇ ನಾಗಪ್ಪನ ಸಿಟ್ಟಿಗೆ ಕಾರಣವಾಯಿತು. ಆದರೂ ತಾಳ್ಮೆ ನಟಿಸುತ್ತ ಕುಳಿತ. ಕೇಳಿದ.

ದಸ್ತೂರ್—"ಕಳೆದ ಎರಡು ವಾರಗಳಿಂದ ನೀವು ಪಡಬೇಕಾಗಿ ಬಂದ ನೋವು, ಆತಂಕಗಳನ್ನು ನಾನು ಸುಲಭವಾಗಿ ಊಹಿಸಬಲ್ಲೆ. ಆದರೂ..."

ನಾಗಪ್ಪನಿಂದ ಈ ಸುಳ್ಳನ್ನು ಸಹಿಸುವುದಾಗಲಿಲ್ಲ. ಫಿರೋಜನ ಕೈಕೆಳಗೆ ಅವನ ಇಂತಹವೇ ಸುಳ್ಳಿನ ಕತೆಗಳನ್ನು ಕೇಳುತ್ತ ಹದಿನೆಂಟು ವರುಷ ಹೇಗೆ ಕೆಲಸ ಮಾಡಿದೆ ಎನ್ನುವುದರ ಬಗ್ಗೆ ಈಗ ಆಶ್ಚರ್ಯವೆನಿಸಿತು:

“ನೀವು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಬೇಕಾಗಿಲ್ಲ ಮಿಸ್ಟರ್ ದಸ್ತೂರ್. ಮೇಲಾಗಿ, ನನ್ನ ನೋವನ್ನು ಆತಂಕವನ್ನು ನೀವು ಎಂದೂ ಊಹಿಸಲಾರಿರಿ. ಯಾಕಂದರೆ ನಾನಿದ್ದ ಸನ್ನಿವೇಶದಲ್ಲಿ ನೀವು ಇಲ್ಲವೇ ಇಲ್ಲ. ಆದರೂ ನಿಮ್ಮ ಅಂತಃಕರಣಕ್ಕೆ ಆಭಾರಿಯಾಗಿದ್ದೇನೆ...”

ನಾಗಪ್ಪನ ಮಾತಿನಲ್ಲಿಯ ಪ್ರತಿಭಟನೆಯ ಧ್ವನಿ ಉಳಿದ ಮೂವರ ಲಕ್ಷ್ಯಕ್ಕೆ ಬರದೇ ಇರುವದು ಶಕ್ಯವಿರಲಿಲ್ಲ. ಕಣ್ಣೆದುರಿನ ಸೋಫಾದಲ್ಲಿ ಸಿಡಿಮಿಡಿಗೊಳ್ಳುತ್ತ ಆಸ್ಫೋಟನದ ಸಂಧಿ ಕಾಯುತ್ತಿದ್ದ ಬಂಡಾಯವನ್ನು ಕೂಡಲೇ ಹತೋಟಿಗೆ ತರಬೇಕಾದರೆ ತಾನು ಕಳೆದ ಮೂವತ್ತು ವರ್ಷಗಳ ವ್ಯಾವಸಾಯಿಕ ಅನುಭವದಲ್ಲಿ ಕಲಿತ ಎಲ್ಲ ಚಾಣಾಕ್ಷತೆಯನ್ನೂ ಈಗ ಉಪಯೋಗಿಸಬೇಕಾದದ್ದರ ಗರಜನ್ನು ಕಂಡುಕೊಂಡ ದಸ್ತೂರ್, ನಾಗಪ್ಪನ ಮಾತುಗಳಿಂದ ವಿಚಲಿತನಾಗದೇ:

“I know. I know. Please don’t take me literally. Every man has his own style of breaking the ice... ಇನ್ನೊಬ್ಬನ ಅಪರಿಚಿತ ವಿಶ್ವವನ್ನು ಪ್ರವೇಶಿಸುವ; ಅಪರಿಚಿತನಿಗೆ ನಮ್ಮ ವಿಶ್ವದಲ್ಲಿ ಬರಮಾಡಿಕೊಳ್ಳುವ ಪರಿ ವ್ಯಕ್ತಿವ್ಯಕ್ತಿಗೆ ಭಿನ್ನವಾದದ್ದೆಂದು ಅನಿಸುವದಿಲ್ಲವೆ? ಈಗ ನಾವೇ, ಈವರೆಗೂ ಪರಸ್ಪರ ಪರಿಚಯವಿಲ್ಲದೆಯೂ ಗೆಳೆಯರಾಗಲು ಹೊರಟಿದ್ದೇವೆ. ಯಾವ ಸಂಕೋಚವೂ ಇಲ್ಲದೇನೆ ನನ್ನನ್ನು ನಿಮ್ಮ ಗೆಳೆಯನೆಂದು ತಿಳಿಯಿರಿ ಮಿಸ್ಟರ್ ನಾಗನಾಥ. ಹಿತೈಷಿಯೆಂದು ತಿಳಿಯಿರಿ. ದಯಮಾಡಿ ಎಲ್ಲ ದುರಾಗ್ರಹಗಳನ್ನೂ ಸದ್ಯ ಬದಿಗೆ ತಳ್ಳಿರಿ—ನಾವಿಬ್ಬರೂ ತಳ್ಳೋಣ. ಮನಸ್ಸಿನಲ್ಲಿಯ ಎಲ್ಲ ಅಪನಂಬಿಕೆಗಳನ್ನೂ. ನಾವು ನಾವು ಹೇಳಲಿದ್ದುದನ್ನು ತೆರೆದ ಮಸಸ್ಸಿನಿಂದ ಕೇಳೋಣ.”

ಕೈಯಲ್ಲಿ ಹಿಡಿದ ಪಾತ್ರೆಯಲ್ಲಿಯ ಬಿಯರಿನಷ್ಟೇ ತಂಪಾದ ಈ ಮಾತು ನಾಗಪ್ಪನ ಮೇಲೆ ದಸ್ತೋರ್ ಬಯಸಿದ ಪರಿಣಾಮ ಮಾಡದೇ ಇರಲಿಲ್ಲ. ಹೊಟ್ಟೆಯೊಳಗೆ ಅದಾಗಲೇ ಸೇರಿದ ಬಿಯರೂ ಈ ಪರಿಣಾಮದಲ್ಲಿ ಭಾಗವಹಿಸಿತ್ತು. ಇದನ್ನರಿತ, ಹೊರಗಿನಿಂದ ಪೆದ್ದನಂತೆ ಕಂಡರೂ ಉಳಿದಿಬ್ಬರಿಗಿಂತ ಧೂರ್ತತನದಲ್ಲಿ ಮೇಲುಗೈಯಾದ ಪಟೇಲ್ ಕೂಡಲೇ ಖಾಲಿಯಾಗಹತ್ತಿದ ಬಿಯರಿನ ಪಾತ್ರೆಗಳನ್ನು ತುಂಬಹತ್ತಿದ. ಆಗಿನಿಂದಲೂ ಸರಿಯಾದ

ಮಾತುಕತೆಯನ್ನೇ ಅಸಾಧ್ಯ ಮಾಡಿದ ನಾಗಪ್ಪನ ಪ್ರತಿಭಟನೆಯ ನಿಲುವಿಗೆ—ತಾತ್ಪೂರ್ತಿಕವಾಗಿಯಾದರೂ—ತಡೆ ಹಾಕಿದ್ದು ದಸ್ತೂರನ ಮಾತುಗಳಿಂದಾದ ದಿಗಿಲೇ: ತಮ್ಮ ಮಾತಿಗೆ ಕಿವಿಗೊಡಲು ಸಿದ್ಧನಾದುದನ್ನು ಗಮನಿಸಿಯೇ ಸಂತೋಷಪಟ್ಟ ಮೂವರು ಬಾವಾಗಳೂ ಬಿಯರಿನ ಪಾತ್ರೆಗಳನ್ನು ಏಕಕಾಲಕ್ಕೆ ಎತ್ತಿದಾಗಿನ ಆಕಸ್ಮಿಕದಿಂದ ತಾವೇ ಮುಜಗರಪಟ್ಟರು. ಬಿಯರಿನ ಮತ್ತಿಗೆ ಖುಶಿಯಾದ ನಾಗಪ್ಪ ಮಾತ್ರ ಅದರ ಕಡೆಗೆ ತನ್ನ ಲಕ್ಷ್ಯ ಕೊಡಲಿಲ್ಲ. ದಸ್ತೂರನ ಮುಂದಿನ ಮಾತುಗಳ ಹಾದಿ ಕಾದ.

"ನೆನಪಿದೆಯೆ?—ನಾನು ಈ ಭೇಟಿಯನ್ನು both an interview and an investigation ಎಂದು ಕರೆದದ್ದು? 'ಇಂಟವ್ರ್ಯೂ' ಎಂದು ಯಾಕೆ ಕರೆದೆನೆಂದರೆ—ನಿಮಗೆ ಒಂದು ಹೊಸೆ ಹುದ್ದೆಗೆ—ನಿಮ್ಮಿಂದ ಕಲ್ಪಿಸಲೂ ಅಸಾಧ್ಯವಾಗುವಷ್ಟರ ಮಟ್ಟಿಗೆ ಹೊಸದಾದ ಸ್ಥಾನಕ್ಕೆ ಬಡತಿಯಾಗುವ ಸಂಭವ ಇದೆ. ನಂಬುವಿರಾ—ನೇಮಣೂಕಿಯ ಜಾಗ ಹಾಂಕಾಂಗ್ ಎಂಬುದನ್ನು? ಇನ್‌ವೆಸ್ಟಿಗೇಶನ್ ಎಂದು ಕರೆದದ್ದರ ಕಾರಣವಿಷ್ಟೇ: ಕೆಲವು ತಿಂಗಳ ಹಿಂದೆ ಫ್ಯಾಕ್ಟರಿಯಲ್ಲಿ ನಡೆದ ಬೆಂಕಿಯ ಅನಾಹತದಲ್ಲಿ ನಿಮ್ಮ ಕೈಯಿದೆ ಎಂಬ ದುಷ್ಟ ಕಂಪ್ಲೇಂಟೊಂದು ಈ ಬಡತಿಗೆ ಅಡ್ಡ ಬಂದಿದೆ."

ಈ ಭೇಟಿಯ ಭವಿತವ್ಯವೇ ದಸ್ತೂರ್ ಅಷ್ಟೊಂದು ಚಾಲಾಖಿನಿಂದ ಮಂಡಿಸಿದ್ದಕ್ಕೆ ನಾಗಪ್ಪನಿಂದಾಗುವ ಪ್ರತಿಕ್ರಿಯೆಯನ್ನು ಅವಲಂಬಿಸಿದೆ ಎನ್ನುವ ಹಾಗೆ ಫಿರೋಜ್ ಅತ್ಯಂತ ಕಾತರದಿಂದ ಅವನತ್ತ ನೋಡಿದ. ಅವನ ಪ್ರತಿಕ್ರಿಯೆ ಬರಲು ತಡವಾಗಲಿಲ್ಲ. ಆದರೆ ಅದು ಬಂದದ್ದು ಫಿರೋಜ್ ಇಷ್ಟು ದಿನ ಅರ್ಥಮಾಡಿಕೊಂಡಂಥ ನಾಗಪ್ಪನ ವ್ಯಕ್ತಿತ್ವದ ನೆಲೆಯಿಂದಲ್ಲವಾಗಿತ್ತು. ಒಂದರ್ಥದಲ್ಲಿ, ತನ್ನ ವ್ಯಕ್ತಿತ್ವದ ಈ ಪಾತಳಿಯ ಅರಿವು ಸ್ವತಃ ನಾಗಪ್ಪನಿಗೇ ಆಗಿರಲಿಲ್ಲವೇನೋ! ಯಾಕೆಂದರೆ, ಬೇಟೆಗಾರರು ನೇರವಾಗಿ ತನ್ನ ಮರ್ಮಸ್ತಾನಕ್ಕೆ ಗುರಿ ಹಿಡಿದ ಕೋವಿಯ ನಳಿಗೆಯಲ್ಲಿ ಕಣ್ಣಿಟ್ಟು ನಿಲ್ಲುವ ಸನ್ನಿವೇಶ ಹಿಂದೆಂದೂ ಹೀಗೆ ಇದಿರಾಗಿ ನಿಂತಿರಲಿಲ್ಲ. ಆತ್ಮ ಸಂರಕ್ಷಣೆಯ ಪ್ರಾಣಿಬಲ ತಾನೇ ತಾನಾಗಿ ಕತ್ತೆತ್ತಿ ನಿಂತಿತು:

It.is very interesting Mr. Dastur... ಈ ದೂರು ನನ್ನ ಬಗ್ಗೆ ಹುಟ್ಟಿಸಿದ ಸಂಶಯವನ್ನು ನಾನು ಕೂಡಲೇ ದೂರಮಾಡಬೇಕು ಎನ್ನುವದನ್ನು ನಾನೂ ಒಪ್ಪುತ್ತೇನೆ. (ಆ ಒಂದು ಕಾರಣಕ್ಕಾಗಿಯೇ ನಿಮ್ಮ ಪೆದ್ದು ಮುಖಗಳನ್ನು ನೋಡುತ್ತ ಬಿಯರ್ ಕುಡಿಯುವ ಈ ದುರ್ಭಾಗ್ಯವನ್ನು ಸಹಿಸುತ್ತ ಕೂತದ್ದು.)—yes I must clear my name before being considered for the promotion. So let us start with the investigation."

ನಾಗಪ್ಪನ ಮಾತಿಗೆ ದಸ್ತೂರ್ ಪುಲಕಿತನಾದ:

"I am glad that you say so. There is nothing greater than one's own name, one's prestige, one's image-what do you say?"

ತಾನು ಈ ತನಿಖೆಗೆ ಇತ್ತ ಸಮ್ಮತಿಯನ್ನು ತಪ್ಪು ತಿಳಿದ ಈ ಬಾವಾಜಿಗಳ ಫಜೀತಿ ಮಾಡದಿದ್ದರೆ...and there is nothing bigger than your dirty nose—you dirty pig: ನಾಗಪ್ಪ ಮಾತನಾಡದೆ ದಸ್ತೂರನ ಮೂಗನ್ನೇ ನೋಡುತ್ತ ಕುಳಿತುಬಿಟ್ಟ. ಬರಬರುತ್ತ ಅದು ನಿಜಕ್ಕೂ ಹಂದಿಯ ಮುಸುಡಿ ಆಗುತ್ತಿದ್ದುದನ್ನು ನೋಡಿ ಎಲ್ಲಿ ತಾನು ನಕ್ಕುಬಿಟ್ಟೇನೋ ಎಂದು ಭಯವಾಗಿ ತುಟಿ ಕಚ್ಚಿ ಹಿಡಿದ.

"You have nothing to fear, Mr- Nagnath," ದಸ್ತೂರನ ಈ ಮಾತಿಗೆ ನಗು ತಡೆಯುವದು ಅಸಾಧ್ಯವಾಗಿ ತೋರಿದ್ದರಿಂದ ಕಿಸೆಯೊಳಗಿಂದ ಕೈರುಮಾಲನ್ನಾ ಹೊರಗೆ ತೆಗೆದು. ಮೋರೆಯನ್ನು ಒರೆಸಿಕೊಳ್ಳುವ ನಟನೆ ಮಾಡುತ್ತ ತನ್ನ ನಗುವ ಲಹರಿಯನ್ನು ಹತ್ತಿಕ್ಕಿದಾಗ ಹಾಯೆನಿಸಿ-"Thank you Mr. Dastur, I depend upon you. I am innocent." ಎಂದ. ತಿರುಗೆಲ್ಲಿ ನಗು ಬಂದೀತೆಂಬ ಭಯದಿಂದ ಬಿಯರಿನ ಪಾತ್ರೆಯನ್ನು ಬಾಯಿಗೆ ಹಿಡಿದಾಗ ದಸ್ತೂರನ ಭರವಸೆ ಕೊಡುವ ಮಾತು:

“We know. ಆದರೆ ಈ ದುಷ್ಟ ಜಗತ್ತಿನಲ್ಲಿ ನಾವು ನಿರ್ದೋಷಿಗಳಾಗಿ ಇದ್ದರಷ್ಟೇ ಸಾಲದು. ನಿರ್ದೋಷಿಗಳಾಗಿ ಕಾಣಬೇಕು. ನಿರ್ದೋಷಿಗಳೆಂದು ತೋರಿಸಿಕೊಡಬೇಕು, we are here to help you.”

“I am sure you are, Mr. Dastur I have no words to thank you.”

ನಾಗಪ್ಪ ತನ್ನ ಮಾತುಗಳನ್ನು ತಾನೇ ನಂಬದಾದ...ನಾಗಪ್ಪಾ... ನಾಗಪ್ಪಾss-ಸುಳ್ಳಾಡಿದೆಯೋ ನಾಗಪ್ಪಾss... ಕೋಳೀಗಿರಿಯಣ್ಣನ ಕೇರಿಯ ನಾಗಪ್ಪಾss. ಕೋಳಿಯ ಪುಚ್ಛದಷ್ಟು ಮೆತ್ತಗಿನ ನಾಗಪ್ಪಾss, ಬೆಳೆದೆಯಲ್ಲವೋ ನಾಗಪ್ಪಾss. ಗಟ್ಟಿಯಾದಿಯೋ ನಾಗಪ್ಪಾss—ಜಾಣ ಆದಿಯೋ ನಾಗಪ್ಪಾ: ಬಾಟಲಿಯೊಳಗಿನ ಬಿಯರನ್ನು ಮಗ್ಗಿಗೆ ಯಾರು ಸುರಿದರೋ ತಿಳಿಯಲಿಲ್ಲ. ಆತನ ಕರುಳಲ್ಲಿ ಅನುಭವಿಸಿದ ತಂಪಿನಿಂದಾಗಿ ರಕ್ತದ ಬಿಸಿ ಮೆಲ್ಲಕ್ಕೆ ಏರಹತ್ತಿದ ಅನ್ನಿಸಿಕೆ. ಈ ವರೆಗೂ ತೆರೆದುಕೊಂಡಿರದ ವ್ಯಕ್ತಿತ್ವದ ಸತ್ಯಗಳು ತೆರೆದಕೊಳ್ಳದ ಹಾಗೆ ಮಾಡಿದ ಬಿಗಿತಗಳು ಈಗ ಮೆಲ್ಲಗೆ ಸಡಿಲುಗೊಂಡಿದ್ದುವು. ಇನ್ನೂ ಅವನ ಅನುಭವಕ್ಕೆ ಬಂದಿರದ ಒಂದು ಆಳದಿಂದ ಧೈರ್ಯ ಅನಾಮತ್ತಾಗಿ ತಲೆಯೆತ್ತಹತ್ತಿತ್ತು. “Four more bottles of beer please.”—ಇದು ಯಾರ ದನಿ? ಫಿರೋಜನದಲ್ಲವೆ?..ಭೆಂಛೋದ್..ಬಿಯರ್ ಕುಡಿಸಿ ಅಮಲೇರಿಸುವ ತಂತ್ರವೆ? ಕುಡಿಸು ಕುಡಿಸು. ಕುಡಿಸಿದಷ್ಟೇ ಬಂತು ನಿಮ್ಮಂತಹ ಧೂರ್ತ ಕದೀಮರೊಡನೆ ಕದೀಮನಾಗುವ ತಾಕತ್ತು ನನಗೂ ಬೇಕಷ್ಟು ಇದೆಯೋ ಫಿರೋಜ್...ಬಿಯರ್ ಕುಡಿದಾಗಷ್ಟೇ ಅಲ್ಲ ಮತ್ತೆ...

ಬಿಯರಿನ ಮತ್ತು ಸುಖದಾಯಕವಾಗಿತ್ತು. ಪಾರ್ಸೀ ಬಾವಾನ ಮುಂದಿನ ಮಾತುಗಳನ್ನು ಕೇಳುವ ಉತ್ಸುಕತೆ ಹೆಚ್ಚಿತ್ತು:

ದಸ್ತೂರ್: “No need to thank me Mr. Nagnath... Let us begin from the beginning...”

ಶುರು ಮಾಡೋ ಬೋಳೀಮಗನೇ ಬೇಕಾದಲ್ಲಿಂದ ಶುರು ಮಾಡು. ನಿನ್ನಜ್ಜನ ತರಡಿನಿಂದಲೇ ಶುರು ಮಾಡು ಬೇಕಾದರೆ: ನಿನ್ನ ಈ ಇಲ್ಲದ ಕಿತಾಪತಿಗೆ ಅದೇ ಅಲ್ಲವೇ ಬೇರು...

"ಫ್ಯಾಕ್ಟರಿಯಲ್ಲಿ ಬೆಂಕಿ ಹತ್ತಿತ್ತಲ್ಲ..."

"ಆ ಬೆಂಕಿ ಹತ್ತಿದ್ದಲ್ಲ...that is if you want me to speak the truth...ಆ ಬೆಂಕಿ ಹಚ್ಚಿದ್ದು."

"We want you to speak the truth. We are here to know it ಆ ಬೆಂಕಿ ಹತ್ತಿದ್ದಲ್ಲ; ಹಚ್ಚಿದ್ದು ಎಂಬ ಸಂಶಯ ಮೊಟ್ಟಮೊದಲು ಬಂದದ್ದು ಯಾವಾಗ?"

"ಮೊದಲಿನಿಂದಲೂ"

"ಯಾಕೆ?"

"ಆ ಡಿಪಾರ್ಟಮೆಂಟಿನಲ್ಲಿ ನಡೆಯುತ್ತಿದ್ದ ಅಂದಾದುಂದಿಯ ಬಗ್ಗೆ ನಾನು ಮೊದಲಿನಿಂದಲೂ ಪ್ರತಿಭಟಿಸುತ್ತ ಬಂದದ್ದು ಫಿರೋಜನಿಗೆ ಗೊತ್ತೇ ಇದೆ. ಪೆರೊಕ್ಸೈಡ್ ಉತ್ಪಾದನೆಗೆ ಸಂಬಂಧಪಟ್ಟ ಯಾವ ಜಾಗರೂಕತೆಯನ್ನೂ ನಾವು ವಹಿಸಲೇ ಇಲ್ಲ. ನಾನೇ ಮುಂದಾಗಿ ಜಗತ್ತಿನ ಉಳಿದ ದೇಶಗಳಲ್ಲಿಯ ದೊಡ್ಡ ದೊಡ್ಡ ಕಂಪನಿಗಳಿಗೆ ಪತ್ರ ಬರೆದು ಈ ಉತ್ಪಾದನೆಯ ವಿಷಯದಲ್ಲಿ ತೆಗೆದುಕೊಳ್ಳಬೇಕಾದ ಎಲ್ಲ safety measures ಕುರಿತ ಸಿದ್ಧಪಡಿಸಿದ ಮಾಹಿತಿಯನ್ನು ತರಿಸಿ MDಯವರಿಗೆ ಕಳಿಸಿದ್ದೆ, ಅದರಿಂದ ನನಗಾದ ಫಾಯದೆ ಎಂದರೆ ವಿನಾಕಾರಣ ಫಿರೋಜನಿಂದ ಗದರಿಸಿಕೊಂಡದ್ದು..."

"That incident must have hurt you deeeply. ಸ್ವಾಭಿಮಾನವಿದ್ದ ಯಾರಿಗೂ ನೋವಾಗುವದೇ..."

"ನನ್ನ ಭಾವನೆಗಳ ಪರಿಚಯ ಫಿರೋಜನಿಗಿದೆ."

“ನಿಮ್ಮ ಆ ನೋವನ್ನು ನೀವು ಯಾರ ಮುಂದಾದರೂ ಯಾವಾಗಾದರೂ ತೋರಿಸಿದ್ದೀರಾ?”

“Ofcourse—ನೇರವಾಗಿ ಫಿರೋಜನಿಗೇ...and Phiroz did not like me for that...”

ಪೈಪ್ ಬಾಯಲ್ಲಿ ಹಿಡಿದ ಫಿರೋಜನ ಮೋರೆ ವ್ಯಕ್ತಪಡಿಸಿದ ಭಾವನೆಯನ್ನು ಓದುವದು ನಾಗಪ್ಪನಿಗೆ ಸುಲಭವಾಗಿರಲಿಲ್ಲ. ಓದುವ ಕುತೂಹಲವೂ ಇರಲಿಲ್ಲ. ಕದ ದೂಡಿ ಒಳಗೆ ಬಂದ ಬೇರರ್ ದಸ್ತೂರ್ ಕೇಳ ಹೊರಟ ಪ್ರಶ್ನೆಗೆ ಕೆಲ ಹೊತ್ತು ತಡೆಹಾಕಿದ. ಬೇರರ್ ಈ ಮೊದಲು ಆರ್ಡರ್ ಮಾಡಿದ ಬಿಯರಿನ ಹೊಸ ನಾಲ್ಕು ಬಾಟಲಿಗಳನ್ನು, ಅವುಗಳ ಜೊತೆಗೆ ಸ್ನ್ಯಾಕ್ಸ್ ತಂದಿದ್ದ. ಸ್ನ್ಯಾಕ್ಸ್ ನೋಡಿದ ಕೂಡಲೇ ಹೊಟ್ಟೆ ಹಸಿಯುತ್ತಿದ್ದರ ಅರಿವು ಬಂತು ನಾಗಪ್ಪನಿಗೆ. ಬಿಯರಿನ ಹೊಸ ಬಾಟಲಿಗಳೂ ತುಂಬ ಸುಖದಾಯಕವಾಗಿ ಕಂಡವು. ಬೇರರ್, ತಂದ ಸರಂಜಾಮನ್ನು ಹೇಳಿದಲ್ಲಿ ಇಟ್ಟು, ವೌಚರುಗಳ ಮೇಲೆ ಫಿರೋಜನಿಂದ ಸಹಿ ಮಾಡಿಸಿಕೊಂಡು ಅಲ್ಲಿಂದ ಹೊರಟುಹೋದ.

ದಸ್ತೂರ್ ಆರಂಭಮಾಡಿದ ರೀತಿಯಿಂದ ತುಂಬ ಖುಶಿಯಾದ ಫಿರೋಜ್: “ನೀನು ಮುಂದುವರಿಸು ಬೋಮಿ. ನಾನೂ ಹಾಗೂ ದೋಸ್ತೂ (ಪಟೇಲನ ಅಂಕಿತನಾಮ) ಇದರ ಜವಾಬ್ದಾರಿ ತೆಗೆದುಕೊಳ್ಳುತ್ತೇವೆ” ಎಂದದ್ದೇ ಇಬ್ಬರೂ ಬಿಯರ್ ಹಾಗೂ ಸ್ನ್ಯಾಕ್ಸ್‌ಗಳ ವ್ಯವಸ್ಥೆಗೆ ತೊಡಗಿದರು.

ದಸ್ತೂರ್: “ನೇರವಾಗಿ ನಿಮ್ಮ ಬಾಸ್‌ಗೇ ನಿಮ್ಮ ಅಸಮಾಧಾನವನ್ನು ತಿಳಿಸುವ ನಿಮ್ಮ ಧೈರ್ಯ ಮೆಚ್ಚತಕ್ಕದ್ದೇ. ಆದರೆ ಫಿರೋಜನ ಹೊರತಾಗಿ ಇನ್ನಾರಿಗಾದರೂ?”

“ಹಾಗೆ ನೋಡಿದರೆ ನನ್ನ ಈ ವಿಷಯದಲ್ಲಿಯ ಅಸಮಾಧಾನ ಫ್ಯಾಕ್ಟರಿಯಲ್ಲಿ ಅನೇಕರಿಗೆ ಗೊತ್ತಿತ್ತು...”

“ಅದೇ... ಅವರಿಗೆ ಗೊತ್ತಾದದ್ದು ಹೇಗೆ? ನೀವೇ ಪ್ರತಿಯೊಬ್ಬನಿಗೆ ಹೇಳುತ್ತ ಹೋಗಿರಲಿಲ್ಲ?”

ನಾಗಪ್ಪ ಈ ಮಾತಿಗೆ ನಿರುತ್ತರನಾದ: ಬಿಯರಿನ ಅಮಲಿಗೋ ಫಿರೋಜ್ ಮುಂದೆ ಹಿಡಿದ ಪ್ಲೇಟಿನಲ್ಲಿಯ ಸ್ನ್ಯಾಕ್ಸ್‌ಗಳಲ್ಲಿ (ಚಿಕನ್‌ಟೀಕಾ, ಮಟನ್‌ಕಬಾಬ್, ಫಿಶ್‌ಫಿಂಗರ್ಸ್) ಯಾವುದನ್ನು ಎತ್ತಿಕೊಳ್ಳಲಿ ಎಂಬ ಸಂದಿಗ್ಧಕ್ಕೋ ಅಥವಾ ಎಲ್ಲೋ ಆಳದಲ್ಲಿ—'ಕೋಳಿಗಿರಿಯಣ್ಣನಕೇರಿಯವನೇ ಇದು ಸ್ಕಾಯ್‌ಸ್ಕ್ರೇಪರ್ ಜಗತ್ತಿನ ಪ್ರಶ್ನೆ: ಹುಷಾರ್—' ಎಂದು ಎದ್ದ ಇಷಾರೆಯ ದನಿಗೋ ನಾಗಪ್ಪ ಕಿರಿಕಿರಿಯಾದ. ಕೂಡಲೇ ಉತ್ತರಕೊಡದೇ ಕಬಾಬ್ ಒಂದನ್ನು ಎತ್ತಿಕೊಂಡು ಮೂಲೆ ಕಚ್ಚಿದ. ಬಿಯರಿನ ಗುಟುಕೊಂದನ್ನು ಸೀಪಿದ. ದಸ್ತೂರನತ್ತ, ನಿನ್ನ ಮಾತಿನ ಅರ್ಥವಾಗಿಲ್ಲ ಎನ್ನುವಂತೆ ನೋಡಿದ. ದಸ್ತೂರ್, ಸ್ಪಷ್ಟ ಪ್ಪಪಡಿಸಿದ:

"ನಿಮ್ಮ ಅಸಮಾಧಾನವನ್ನು ನೀವು ಆತ್ಮೀಯರೆಂದು ತಿಳಿದ ಯಾರಿಗಾದರೂ ಹೆಚ್ಚಿನ ವಿವರಗಳೊಂದಿಗೆ ವ್ಯಕ್ತಪಡಿಸಿದ್ದೀರಾ? ಉದಾ: 'I won't be surprised if the factory is set on fire, one of these days?' ಎಂದು ಮುಂತಾಗಿ?"

ದಸ್ತೂರನ ಈ ಹೇಳಿಕೆಯ ಪರಿಣಾಮ ನಾಗಪ್ಪನ ಮೇಲೆ ಅಷ್ಟೊಂದು ಆದಂತೆ ತೋರಲಿಲ್ಲ. "This is too general a statement to have been made to any particular person." ಎಂದ. ಆದರೂ ದಸ್ತೂರನ ಮಾತಿನ ಧಾಟಿಯಿಂದ ಯಾವುದೋ ಒಂದು ವಿಶೇಷ ವ್ಯಕ್ತಿಯ ಹೆಸರು ಮೆಲ್ಲಗೆ ಸೇರ್ಪಡೆಯಾಗ್ತಾ ಇದೆ ಎನ್ನುವದು ಲಕ್ಷ್ಯಕ್ಕೆ ಬಂದಿರಲಿಲ್ಲ. ತುಸು ಬೇಚೈನುಗೊಂಡರೂ ಅದನ್ನು ತೋರಿಸಿಕೊಳ್ಳಲಿಲ್ಲ.

ದಸ್ತೂರ್: "ನನ್ನ ಮುಂದಿನ ಮಾತಿನಿಂದ ನಿಮ್ಮ ನೆನಪೇನಾದರೂ ಚುರುಕುಗೊಳ್ಳುತ್ತದೋ ನೋಡಿ. ನೀವು ಅದೇ ವ್ಯಕ್ತಿಗೆ ಹೀಗೇನಾದರೂ ಹೇಳಿದಿರಾ?—'just to teach these blokes what chemical fires like I feel like changing the formulation and cause one.'

"Oh! No? It was only a way of expressing my anger..."

"ನೀವು ಹಾಗೆ ಹೇಳಿದ್ದಂತೂ ನಿಜ? ಯಾರಿಗೆನ್ನುವದು ಈಗಲಾದರೂ ನಿಮಗೆ ನೆನಪಾಗುತ್ತದೆಯೆ?"

ಯಾರಿಗೆನ್ನುವುದರ ಬಗ್ಗೆ ನಾಗಪ್ಪನಿಗೆ ಸಂಶಯವೇ ಉಳಿಯಲಿಲ್ಲ. ಆದರೆ ಹೈದರಾಬಾದಿನ ಫ್ಯಾಕ್ಟರಿಯಲ್ಲೇ ತನ್ನ ಬಗ್ಗೆ ಸಹಾನುಭೂತಿ ಇದ್ದ, ಆದರವಿದ್ದ (ಕೆಲವೊಂದು ಭಾವನಾತ್ಮಕ ಗಳಿಗೆಗಳಲ್ಲಿ ಇದನ್ನೇ ಪ್ರೀತಿಯೆಂದು ಕೂಡ ತಿಳಿದ) ಒಂದೇ ಒಂದು ವ್ಯಕ್ತಿ ಎಂಬ ತಿಳಿವಳಿಕೆಗೆ ಕಾರಣಳಾದ ರೀನಾ ಫಿರೋಜನ ಪಿತೂರಿಯಲ್ಲಿ?... ನಾಗಪ್ಪ ನಂಬದಾದ. ಯಾಕೆಂದರೆ ನಂಬುವ ಧೈರ್ಯವಾಗಲಿಲ್ಲ. ರೀನಾಳಂಥ ರೀನಾ ಕೂಡ ಸುಳ್ಳಾಗುವದು ಶಕ್ಯವಿದ್ದರೆ ತಾನು ತೊಡಗಿಸಿಕೊಂಡ ಈ ಪ್ರತಿಭಟನೆಗೆ ಯಾವ ಅರ್ಥವೂ ಉಳಿಯಲಿಲ್ಲ...ದೇವರೇ, ಇದು ಸುಳ್ಳಾಗಲೀ... ಸುಳ್ಳಾಗಲೀ. ಆಗಿನಿಂದಲೂ ಸಂತೋಷ ಕೊಡುತ್ತಿದ್ದ ಬಿಯರು ಹೊರಗೆ ಬರುವ ಭಯವಾಗಿ ಮುಖ ಒಮ್ಮೆಲೇ ಬಣ್ಣ ಕಳದುಕೊಳ್ಳಹತ್ತಿತು: ಕುಳಿತಲ್ಲಿಂದ ಎದ್ದವನೇ ಬಾತ್‌ರೂಮ್ ಹುಡುಕುತ್ತ ಮಗ್ಗಲು-ಕೋಣೆಗೆ ಧಾವಿಸಿದ. ಮೂತ್ರವಿಸರ್ಜನೆ ಮಾಡಿದ ಮೇಲೆ ತಣ್ಣಗಿನ ನೀರಿನಿಂದ ಮೋರೆ ತೊಳೆದುಕೊಂಡ, ಕಣ್ಣಿಗೆ ನೀರು ಬಡೆದ. ಮೆದುಳು ತುಸು ಚುರುಕುಗೊಂಡಂತೆನಿಸಿತು. ವಾಂತಿಯಾಗುವ ಹೆದರಿಕೆ. ಸದ್ಯಕ್ಕಂತೂ ದೂರವಾಗಿತ್ತು. ಅಂತೂ ತನಿಖೆಯ ಪ್ರಶ್ನೆಗಳು ಬರಬರುತ್ತ ತಾನು ಎಣಿಸಿರದ ಜಾಗಗಳಿಗೇ ತನ್ನನ್ನು ಎಳೆದೊಯ್ಯುತ್ತಿವೆ ಅನ್ನಿಸಿತು: ನಿರಪರಾಧಿಯಾಗಿಯೂ ಅಪರಾಧ ಸಿದ್ಧಗೊಳಿಸುವ ಪುರಾವೆಗಳು ಗಟ್ಟಿಯಾಗುತ್ತಿವೆ. ತೀರ ಪರಿಚಯದ್ದೆಂದು ತಿಳಿದ ಜಗತ್ತು ಮೆಲ್ಲಕ್ಕೆ ಅಪರಿಚಿತತೆಯ ಮುಸುಕೆಳೆದುಕೊಳ್ಳುತ್ತಿದೆ: ಕದದ ಮೇಲೆ ಬಡೆದ ಸದ್ದಿನ ಹಿಂದೆಯೇ–"Are you allright Mr. Nagnath?" ಎಂಬ ಪೆದ್ದು ಪಟೇಲನ ದನಿ. ನಾಗಪ್ಪ ದಡಬಡಿಸಿದ. ಹತ್ತಿದ ಗುಂಗಿನಿಂದ ಎಚ್ಚರಗೊಂಡ: ಪೊದೆಯಲ್ಲಿ ಅಡಗಿಕೊಂಡ ಭಯಗ್ರಸ್ತ ಪ್ರಾಣಿಯನ್ನು ಹೋ...ಹಾ.. ಎಂದು ಗುಲ್ಲೆಬ್ಬಿಸಿ ಹೊರಗೆ ಬರುವಂತೆ ಮಾಡುವ ಬೇಟೆಗಾರರ ಬೇಹುಗಾರಿಕೆ ಇದು ಎಂಬ ಭ್ರಮೆಯನ್ನು ಕೊಡವಿ ಹಾಕುವವನಂತೆ ತಲೆಯನ್ನು ಗಲಗಲ ಅಲ್ಲಾಡಿಸಿ–"I am allright. I will be out in a minute," ಎಂದ. ಸ್ವತಃ ಆಡಿದವನಿಗೇ ಕೇಳಿಸಿರಲಾರದಷ್ಟು ಕ್ಷೀಣಗೊಂಡ ನಾಗಪ್ಪನ ಧ್ವನಿಯೇ ಹೊರಗಿನಿಂದ ಕದಕ್ಕೆ ಕಿವಿ ಹಚ್ಚಿ ಆಲಿಸುತ್ತಿದ್ದ ಪಟೇಲನ ಹುರುಪಿಗೆ

ಇನ್ನಷ್ಟು ಕಳೆತಂದಿತ್ತು ಎನ್ನುವದು ಮಾತ್ರ ನಾಗಪ್ಪನಿಗೆ ಈಗ ಗೊತ್ತಾಗುವದು ಶಕ್ಯವಿರಲಿಲ್ಲ.

ನಾಗಪ್ಪ ಕದ ತೆರೆದು ಹೊರಗೆ ಬಂದದ್ದೇ, ಅವನ ದಾರಿ ಕಾಯುತ್ತ ನಿಂತ ಪಟೇಲ ನಟಿಸಿದ ಕಾಳಜಿ ತೋರಿಸುತ್ತ ಈ ಮೊದಲು ತನಗಾದ ಅಪಮಾನದ ಸೇಡು ತೀರಿಸಿಕೊಳ್ಳುವ ಗತ್ತಿನಲ್ಲಿ, ಗುಟ್ಟಾದ ಮಾತೊಂದನ್ನು ಹೇಳುವವನಂತೆ ಧ್ವನಿ ತಗ್ಗಿಸಿ–"ಕಾಳಜಿ ಮಾಡಬೇಡಿ ಮಿಸ್ಟರ್ ನಾಗನಾಥ. ನಾವೆಲ್ಲ ಇಲ್ಲವೇ ನಿಮ್ಮ ಬೆಂಬಲಕ್ಕೆ?" ಎಂದ. ಬೇರೆ ಯಾವ ಸಮಯದಲ್ಲಾದರೂ ತಲೆಯ ಮೇಲೆ ಜಪ್ಪಿಬಿಡುವಷ್ಟು ಸಿಟ್ಟುಬರುತ್ತಿತ್ತು, ನಾಗಪ್ಪನಿಗೆ. ಈಗ ಮಾತ್ರ ಯಾವುದಕ್ಕೂ ತೀವ್ರವಾಗಿ ಪ್ರತಿಕ್ರಿಯಿಸುವ ಸಾಮರ್ಥ್ಯವೇ ಇಲ್ಲವಾಗಿತ್ತು. ಅಷ್ಟೊಂದು ಬಿಯರನ್ನು ಕುಡಿಯಬಾರದಿತ್ತೇನೋ. ಇಲ್ಲವಾದರೆ ಈ ಮೂವರು ಠಕ್ಕರ ಫಜೀತಿ ಮಾಡದೇ ಬಿಡುತ್ತಿರಲಿಲ್ಲ...ತಾನು ಬಾತ್‌ರೂಮಿಗೆ ಹೋದದ್ದೇ ತನ್ನ ಬಗ್ಗೆ ಏನನ್ನೋ ಮಾತನಾಡಿಕೊಂಡು ಈಗ ತಾನು ಹಿಂತಿರುಗಿ ಬಂದದ್ದೇ ಗಪಕ್ ಎಂದು ಬಾಯಿ ಬಿಗಿಹಿಡಿದು ಕೂತವರ ರೀತಿ ತನ್ನತ್ತ ವಿಚಿತ್ರವಾಗಿ ನೋಡುತ್ತಿದ್ದ ಈ ಮೂವರು ನಿಜಕ್ಕೂ ಯಾರು? ಈ ಮೊದಲು ಎಂದಾದರೂ ಇವರನ್ನು ನೋಡಿದ್ದೇನೆಯೆ? ಬಲ್ಲೆನೆ?-ಥಟ್ಟನೆ ಹುಟ್ಟಿದ ಗುಮಾನಿ ಹೊತ್ತುಹೋದ ಹಾಗೆ ಬೆಳೆಯುತ್ತ ಹೋಯಿತು: ನರಿಮನ್-ಪಾಯಿಂಟ್‌ನಲ್ಲಿ ಎದ್ದುನಿಂತ ಸ್ಕಾಯ್‌ಸ್ಕ್ರೇಪರುಗಳಂತೆ ತನ್ನ ಭಾವನೆಗಳ ಪರಿಧಿಯೊಳಗೆ ಬರಲು ನಿರಾಕರಿಸುತ್ತ ಬಾಯಿ ಬಿಗಿಹಿಡಿದು ನಿಂತಂತಹದೇನೋ ತಾನು ಬೆಳೆದು ಬಂದ ಕೋಳಿಗಿರಿಯಣ್ಣನಕೇರಿಯತ್ತ ಕುಂಡೆ ತಿರುವಿ ತಿರಸ್ಕಾರದಿಂದ ನಗುತ್ತಿದೆ ಎನ್ನುವ ಭಾವನೆಯ ಹಿಡಿತದಿಂದ ಬಿಡಿಸಿಕೊಳ್ಳುವದು ಕಠಿಣವಾಯಿತು: ಕೂತಲ್ಲೇ ಬೆಳೆಯುತ್ತ ನಡೆದವರು, ಕಪ್ಪಾಗಿ ನಿಗೂಢರಾಗುತ್ತ ಮೂಕರಾದವರು ಮಾತು-ಕತೆಯನ್ನೇ ಅಸಾಧ್ಯ ಮಾಡಿದಾಗ-ತಾನು ಈ ರೂಮಿಗೆ ಬಂದದ್ದಾದರೂ ಯಾಕೆ ಎಂಬುದು ಕೂಡ ಮಸುಕುಗೊಳ್ಳಹತ್ತಿತು. ಯಾರು ಯಾರೋ ಮಾಡಿದ ಅಪರಾಧಗಳನ್ನು ಬಯಲಿಗೆಳೆಯುವ ಪಣ ತೊಟ್ಟು ಬಂದವನಿಗೆ ತನ್ನ ನಿರಪರಾಧತೆಯನ್ನು ಸಿದ್ಧಗೊಳಿಸುವ ಗರಜಿನ ಭಾರವೇ ದೊಡ್ಡದಾಗಹತ್ತಿತು.

ಇವನ ಒಳಗಡೆ ನಡೆಯುತ್ತಿದ್ದುದನ್ನು ಸರಿಯಾಗಿ ಅರಿತವನ ಹಾಗೆ, ದಸ್ತೂರ್ ದನಿಯಲ್ಲಿಯ ಗಾಂಭೀರ್ಯ ಹೆಚ್ಚಿಸಿ ಬಾಯಿ ಬಿಚ್ಚಿದ:

"Sorry to be personal—we can't help it. The matter is so serious we can't afford to take chances."

ನಾಗಪ್ಪ ಬಿಯರಿಗೆ ತಿರುಗಿ ಕೈಹಚ್ಚಲಿಲ್ಲ. ಬಾಥ್‌ರೂಮಿಗೆ ಹೋದಾಗ ಪಾತ್ರೆಯನ್ನು ಯಾರೋ ತುಂಬಿ ಇಟ್ಟಿದ್ದರು. ದಸ್ತೂರನ ಮೋರೆಯಲ್ಲಿಯದೇನೋ ತನ್ನ ದುಗುಡಕ್ಕೆ ಕಾರಣವಾಗಹತ್ತಿತ್ತು. ತಾನು ನಿಜಕ್ಕೂ ನಿರಪರಾಧಿ. ಆದರೆ ಈ ದಸ್ತೂರ್ ಅದನ್ನು ನಂಬುತ್ತಿಲ್ಲವೇನೋ ಎಂಬ ಶಂಕೆ-ಮೋರೆಯ ಮೇಲೆ-ದಯಮಾಡಿ ನಂಬು "ಎಂಬಂತಹ ಆರ್ಜವತೆಗೆ ಎಡೆಮಾಡಿಕೊಟ್ಟಿತ್ತು. ದಸ್ತೂರ್ ಬಹು ಗಂಭೀರವಾಗಿ ಕೇಳಿದ:

"ರೀನಾಳೊಡನೆ ನಿಮ್ಮ ಸಂಬಂಧವೇನು?"

ನಾಗಪ್ಪ ತೀರ ಅನಿರೀಕ್ಷಿತವಾಗಿ ಬಂದ ಈ ಪ್ರಶ್ನೆಯಿಂದ ತಬ್ಬಿಬ್ಬಾದ. ಅದಕ್ಕಿಂತ ಹೆಚ್ಚಾಗಿ, ಒಂದು ಅಸಾಧಾರಣ ಗಳಿಗೆಯಲ್ಲಿ ತಾನು ಬೆಂಕಿಯ ಬಗ್ಗೆ ಹೇಳಿದ್ದನ್ನು ಹೀಗೆ ತನ್ನ ವೈರಿಗಳಿಗೆ ತಿಳಿಸಿದವಳು ರೀನಾಳೇ ಎಂಬುದು ಖಂಡಿತವಾದದ್ದು ದಿಗ್ಭ್ರಮೆಗೆ ಕಾರಣವಾಗಿತ್ತು. ಆದರೂ ಈ ವೈಯಕ್ತಿಕ ಪ್ರಶ್ನೆಗೆ ಕೈಹಾಕುವ ಅಧಿಕಾರ ಈ ದಸ್ತೂರನಿಗೆಲ್ಲಿ? ತಾನು ಈ ಕಂಪನಿಯ ನೌಕರಿಯಲ್ಲಿದ್ದ ಕಾರಣಕ್ಕಾಗಿಯೇ ತಾನೆ? ಅದನ್ನು ಧಿಕ್ಕರಿಸುವ ನಿರ್ಧಾರ ಮಾಡಿಯೇ ತಾನಿಲ್ಲಿಗೆ ಬಂದದ್ದು. ಆದರೆ ಈಗ ಇದ್ದಕ್ಕಿದ್ದಂತೆ ತಾನು ನಿರಪರಾಧಿ ಎಂಬುದನ್ನು ಸಿದ್ಧಗೊಳಿಸಿ ತೋರಿಸುವ ಗರಜೇ ಬಹಳ ದೊಡ್ಡದಾಗಿ ತೋರುತ್ತಿದೆಯಲ್ಲ! ಬರಬರುತ್ತ ಈ ಪಾರ್ಸಿಯ ದರ್ಪ ಅವನ ಮೂಗಿನ ಹಾಗೇ ದೊಡ್ಡದಾಗುತ್ತ ನಡೆದಿದೆಯಲ್ಲ! ಒಂದು ಬಗೆಯ ಅನಾಸಕ್ತ ಕುತೂಹಲದಿಂದ ದಸ್ತೂರನ ಮುಂದಿನ ಪ್ರಶ್ನೆಯ ಹಾದಿಕಾದ. ದಸ್ತೂರ್ ಕೇಳಿದ:

"ನಿಮ್ಮಿಬ್ಬರಿಗೂ ಲೈಂಗಿಕ ಸಂಬಂಧವಿತ್ತೇ?"

ನಾಗಪ್ಪ ತನ್ನ ಕಿವಿಗಳನ್ನು ನಂಬದಾದ. ಇದು ತೀರ ಖಾಸಗಿ ಪ್ರಶ್ನೆ. ಇದನ್ನು ಕೇಳುವ ಅಧಿಕಾರ ನಿನಗಿಲ್ಲ ಎನ್ನಬೇಕೆಂದರೆ ಹಾಗೆ ಅನ್ನಲು ಕಾರಣವಾಗಬೇಕಾದ ಸಿಟ್ಟು ಕೂಡ ಹುಟ್ಟುವ ಮೊದಲೇ ಅಡಗಿಹೋಗಿತ್ತು: ರೀನಾಳನ್ನು ಬಿಟ್ಟು ಬೇರೆ ಯಾರೂ ಈ ಗೌಪ್ಯವನ್ನು ಒಡೆಯುವದು ಶಕ್ಯವಿರಲಿಲ್ಲ... ಅಥವಾ ತನ್ನನ್ನು

ಹೆದರಿಸಿ ಮಣಿಸಲೆಂದೇ ಇವರು ಹೂಡಿದ ನಾಟಕವೇ ಇದು? ದಸ್ತೂರನೇ ಇವನ ಮನಸ್ಸನ್ನು ಓದಿಕೊಂಡವನ ಹಾಗೆ ಈ ಸಂಶಯವನ್ನು ದೂರ ಮಾಡಿದ:

"ಬೆಂಕಿ ಎಂದ ಕೂಡಲೇ ಮೈ ಜುಮ್ ಎಂದು ನಡುಗಲು ಕಾರಣವಾಗುವಂತಹ ಶಾರೀರಿಕ ಊನವೇನಾದರೂ ನಿಮ್ಮಲ್ಲಿದೆಯೆ? Do you have a neurotic fear of fire?"

ಈಗ ಮಾತ್ರ ನಾಗಪ್ಪನಿಗೆ ಸಂಶಯವೇ ಉಳಿಯಲಿಲ್ಲ. ಇದೆಲ್ಲ ಇವನಿಗೆ ಹೇಗೆ ಗೊತ್ತಾಯಿತು ಎಂದು. ತಿಳಿಯುವ ಕುತೂಹಲ ಕೂಡ ಉಂಟಾಗಲಿಲ್ಲ: ರೀನಾಳ ಸಹವಾಸದಲ್ಲಿ ಕಳೆದ ಹಲವಾರು ರಾತ್ರಿಗಳು ನಾಗಪ್ಪ ಅತ್ಯಂತ ಸುಖದ ಕ್ಷಣಗಳಲ್ಲಿ ಮಾತ್ರ ನೆನೆದಂತಹವುಗಳು. ಮದುವೆಯಾಗಿ ಎರಡು ಮಕ್ಕಳ ತಾಯಿಯಾದ ಈ ಆಂಗ್ಲೋ-ಇಂಡಿಯನ್ ಹುಡುಗಿ ತಮ್ಮ ಈ ಸಂಬಂಧವನ್ನು ಗುಪ್ತವಾಗಿ ಇಡುವುದರ ಬಗ್ಗೆ ತನ್ನಿಂದ ಬೇಡಿದ ಭರವಸೆಗೆ ಉತ್ತರವೆಂಬಂತೆ ಈ ಗುಟ್ಟನ್ನು ತಾನು ತನಗೇ ಒಡೆಯಲು ನಿರಾಕರಿಸಿದಂತಿತ್ತು! ಅಚ್ಚರಿಯ ಸಂಗತಿಯೆಂದರೆ ರೀನಾಳೇ ಹೀಗೆ ತನಗೆ ಎರಡು ಬಗೆದದ್ದನ್ನು ತಿಳಿದಾಗ ಸಿಟ್ಟುಬರದೇ ಇದ್ದದ್ದು. ಮನುಷ್ಯ-ಸಂಬಂಧಗಳ ಸತ್ಯ ವಸ್ತು ತಿಳಿಯುವ ಶಕ್ತಿಯೇ ತನ್ನಲ್ಲೀಗ ಉಳಿದಿಲ್ಲ ಎಂಬಂಥ ತಟಸ್ಥ-ಭಾವನೆಯಿಂದಲೇ ಕೆಲ ಸಮಯ ಕೈಹಚ್ಚಿರದ ಬಿಯರಿನ ಪಾತ್ರೆಯನ್ನು ಕೈಗೆತ್ತಿ ಎರಡು ಗುಟುಕುಗಳನ್ನು ಒಂದೇ ಬಾರಿಗೆ ಸೀಪಿದ. ದಸ್ತೂರನ ಮಾತಿನಲ್ಲಿ ಸೇರಿಕೊಂಡ ವ್ಯಕ್ತಿಯನ್ನು ತಾನು ಈವರೆಗೂ ಕಂಡೇ ಇಲ್ಲವಲ್ಲ ಎನ್ನುವ ಕುತೂಹಲ ತುಂಬಿದ ಧಾಟಿಯಲ್ಲಿ ಹೇಳಿದ:

"ನೀವು ಹೇಳುತ್ತಿದ್ದದ್ದು. ತುಂಬ ಸ್ವಾರಸ್ಯ ಪೂರ್ಣವಾಗಿದೆ ಮಿಸ್ಟರ್ ದಸ್ತೂರ್ ನಿಲ್ಲಿಸಬೇಡಿ. ಕೇಳಲು ಬಹಳ ಉತ್ಸುಕನಾಗಿದ್ದೇನೆ..."

ಇದ್ದಕ್ಕಿದ್ದಂತೆ ಒಂದು ಬಗೆಯ ಜಿಗುಪ್ಸೆ. ನಿರುತ್ಸಾಹ, ದಣಿವು ಕೂಡಿದಂತಿದ್ದ ನಾಗಪ್ಪನ ದನಿ ದಸ್ತೂರನ ಉಕ್ಕುತ್ತಿದ್ದ ಉತ್ಸಾಹಕ್ಕೆ ಭಂಗತಂದಿತು. ಆದರೂ ಹಾಗೆಂದು ತೋರಗೊಡದೆ, ತನಿಖೆಯನ್ನು ಆರಂಭಿಸಿದ ರೀತಿಯಲ್ಲಿಯ ಅವನ ಜಾಣ್ಮೆಯನ್ನು ಮೆಚ್ಚಿಕೊಂಡ ಫಿರೋಜ್ ಹಾಗೂ ಪಟೇಲರನ್ನು ಇನ್ನಷ್ಟು ಖುಶಿಗೊಳಿಸಲೆಂಬಂತೆ, ಸರಿಯಾಗಿದ್ದ ಗಂಟಲನ್ನೆ ಸರಿಮಾಡುವವನ ಹಾಗೆ ಸದ್ದುಮಾಡಿ ದೊಡ್ಡ ಗತ್ತುಗಾರಿಕೆಯಲ್ಲಿ ಪ್ರಶ್ನೆ ಬಿಚ್ಚಿದ:

“ನಾನು ಈಗ ಕೇಳಲಿದ್ದ ಪ್ರಶ್ನೆಯನ್ನು ಮಾತ್ರ ಲಕ್ಷ್ಯಗೊಟ್ಟು ಕೇಳಿರಿ- it has serious implications...”

“ಈಗ ಕಂಪನಿಯಲ್ಲಿಯ ನನ್ನ ಭವಿತವ್ಯಕ್ಕೇ ಧಕ್ಕೆ ಬಂದೀತು ಎಂದು ತಾನೇ ನಿಮ್ಮ ಧಮಕಿಯ ಒಳ ಅರ್ಥ?”

ನಾಗಪ್ಪನ ಪ್ರಶ್ನೆಯ ಅರ್ಥ ತಿಳಿಯದಷ್ಟು ಧಡ್ಡ ತಾನಲ್ಲ ಎಂಬುದನ್ನು ಸೂಚಿಸುವ ಹಾಗೆ ತುಟಿಗಳ ಮೂಲೆಯಲ್ಲಿ ತುಂಟತನದ ನಗು ಮಿಂಚಿಸುತ್ತ ದಸ್ತೂರ್ ಮಾತನಾಡಿದ:

“ವಿಷಯ ಅಷ್ಟೊಂದು ಸರಳವಾಗಿದ್ದಾದರೆ ನಮ್ಮ ಚಿಂತೆ ಹುರುಳಿಲ್ಲದ್ದು; ಈ ತನಿಖೆಯೇ ಅನಗತ್ಯವಾದದ್ದು. ಯಾಕೆಂದರೆ ನಿಮ್ಮಂತಹ ಅಸಾಧಾರಣ ಪ್ರತಿಭೆಯ ತಂತ್ರಜ್ಞರು ನಮಗೆ ಬೇಕೇ ಬೇಕು. ಆದರೆ ನಮಗೆ ಇದಿರಾದ ತೊಡಕು ಬಹಳ ಗಂಭೀರ ಸ್ವರೂಪದ್ದು–may I say, it has criminal implications which might involve the whole management?”

ಬಿಯರಿನ ಪಾತ್ರೆ ಹಿಡಿದ ತನ್ನ ಕೈನಡುಗಿದ ರೀತಿಗೆ ಸ್ವತಃ ನಾಗಪ್ಪನೇ ಅತೀವ ನಾಚಿಕೆಪಟ್ಟ. ತುಂಬ ಪ್ರಯಾಸದಿಂದ ಮಗ್ಗನ್ನು ಟೀಪಾಯಿಯ ಮೇಲೆ ಇಡುವಷ್ಟು ಹೊತ್ತಿನಲ್ಲಿ ಹಣೆಯಲ್ಲಿ ಬೆವರ ಹನಿಗಳು ತೋರಣ ಕಟ್ಟಿದುವು. ಕಿಸೆಯಿಂದ ಕೈರುಮಾಲನ್ನು ಹೊರತೆಗೆದ.

ದಸ್ತೂರ್ ರಚಿಸಿಕೊಂಡ ಯುದ್ಧ ತಂತ್ರದ ಆಯಕಟ್ಟಿನ ಅಂಗವಾಗಿ ತೋರಿದ ಈ ಮಾತುಗಳು ಸ್ವತಃ ಫಿರೋಜ್-ಪಟೇಲರಿಗೇ ಅನಿರೀಕ್ಷಿತವಾದಂತಿದ್ದುವು: “a master-stroke” ಎನ್ನುವುದನ್ನು ಒಪ್ಪಿಕೊಂಡು ಕಣ್ಣ ಹೊಳಪಿನಿಂದಲೇ ಪ್ರಶಂಸೆ ವ್ಯಕ್ತಪಡಿಸಿದ ಫಿರೋಜ್ ತನ್ನ ಉತ್ಸಾಹವನ್ನು ಹತೋಟಿಯಲ್ಲಿಡಲು ಪೈಪಿನ ಮೊರೆ ಹೋಗಬೇಕಾಯಿತು. ಪೆದ್ದ ಪಟೇಲ ಮಾತ್ರ ಬಂದ ಹುರುಪಿಗೆ ತೊಡೆ ಬಡೆದುಕೊಂಡು, ತನ್ನ ಅಚಾತುರ್ಯಕ್ಕೆ ತಾನೇ ಮುಜುಗರಪಟ್ಟು ತುಟಿ ಕಚ್ಚಿಕೊಂಡ. ನಾಗಪ್ಪ ಇವಕ್ಕೆಲ್ಲ ಕಣ್ಣು ಮುಚ್ಚಿದ್ದ: “Criminal implications” ಈ ಎರಡೇ ಶಬ್ದಗಳು ಹಾಗೂ ಅವುಗಳನ್ನು ಉಚ್ಚರಿಸಿದಾಗಿನ ದನಿ ಮನಸ್ಸಿನ ಯಾವ ಯಾವವೋ ಆಳಗಳನ್ನು ತಟ್ಟಿದಾಗ

ಮೇಲೆದ್ದು ಬರುತ್ತಿದ್ದ ಭಯ ಈ ಮೊದಲು ಎಂದೆಂದೂ ಅನುಭವಕ್ಕೆ ಬಂದಿರದಂಥದ್ದು. ದಸ್ತೂರನ ಮುಂದಿನ ಮಾತಂತೂ ಆಡಿದ ದಸ್ತೂರನೇ ಬಹಳ ಖುಶಿಪಡುವಂತಹದಾಯಿತು. ಮಾತು ಹೊಳೆಯುತ್ತಲೇ- this beer is damn good-ಎಂದು ಬಿಯರನ್ನು ಹೊಗಳಿದಂತೆ ನಟಿಸಿ, ಫಿರೋಜನ ಕಡೆಗೊಮ್ಮೆ ನೋಡಿ:

"ನಾನು ಈಗ ಹೇಳುವ ಮಾತುಗಳನ್ನಂತೂ ನೀವೊಬ್ಬರೇ ರುಜುವಾತು ಗೊಳಿಸಬಲ್ಲಿರಿ. ಅವುಗಳಿಂದ ನಿಮಗೇ ಮನದಟ್ಟಾದೀತು-ನಾವು ನಿಮ್ಮ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಲು ಹೊರಟಿಲ್ಲ ಎನ್ನುವದು. ಹಾಗೇ ನಮ್ಮ ಲಕ್ಷ್ಯಕ್ಕೆ ಬಂದ ಸಂಗತಿಗಳ ಬಗ್ಗೆ ನಮಗೆ ಅನ್ನಿಸುತ್ತಿದ್ದ ಕಾಳಜಿಯ ಅರ್ಥವೂ ನಿಮಗಾದೀತು." ಎಂದ. ತಾನು ಹೇಳುತ್ತಿದ್ದ ಮುದ್ದೆಯನ್ನು ಸ್ಪಷ್ಟಪಡಿಸುವವನ ಹಾಗೆ, ಕ್ಷಣಕಾಲ ತಡೆದು–"I mean…we did not go after the facts—they came to our notice" ಎಂದ.

ನಾಗಪ್ಪನಿಗೆ ಈ ಎರಡು ಸಂಗತಿಗಳ ನಡುವಿನ ಸೂಕ್ಷ್ಮ ಅಂತರವನ್ನು ಅರಿಯುವ ತಾಳ್ಮೆಯಿರಲಿಲ್ಲ.

ದಸ್ತೂರ್ ಬಿಯರನ್ನು ಸೀಪುತ್ತ ತಾನು ಈಗ ಎಸೆಯುತ್ತಿದ್ದದ್ದು ತುಂಬ ಪ್ರತಾಪಶಾಲಿಯಾದ ಅಸ್ತ್ರ ಎಂಬುದಕ್ಕೆ ಎಲ್ಲರ ಮನ ಸೆಳೆಯುವಂತೆ ಅವರ ಕಡೆಗೆ ನೋಡಿ, ವಿನಾಕಾರಣ ಗಂಟಲು ಸಡಲಿಸಿ:

"Some horrible incident in your childhood made you grow under the suspicion that you were a part of a suicide pact—albeit miscarried of your parents…"

ರೀನಾ ರೀನಾ ರೀನಾ! ಯಾಕೆ ಯಾಕೆ ಈ ವಿಶ್ವಾಸಘಾತ…ತೀರ ವೈಯಕ್ತಿಕವಾದ ತನ್ನ ಯಾತನೆಯ ಗುಟ್ಟನ್ನು ರೀನಾಳಿಗೆ ಬಿಚ್ಚಬೇಕಾದ ಆ ಸನ್ನಿವೇಶವನ್ನು ನೆನೆಯುವದು ಕೂಡ ನಾಗಪ್ಪನಿಗೆ ಅಸಾಧ್ಯವಾಯಿತು. ಸುಖದ ಪರಾಕಾಷ್ಠೆಯ ಸ್ಥಿತಿಯಲ್ಲೇ ತೀವ್ರವಾದ ನೋವನ್ನು ತಿಂದೆ ಗಳಿಗೆ ಅದು: ಇಷ್ಟೊಂದು ಸುಖವನ್ನು ಇನ್ನಾವ ಗಂಡಸಿಂದಲೂ ಈ ವರೆಗೆ ಪಡೆದಿರಲಿಲ್ಲ

ಎನ್ನುವುದನ್ನು ರೀನಾ ತನ್ನ ಅಪ್ಪುಗೆಯಲ್ಲಿ ನರಳುತ್ತ ಒಪ್ಪಿಕೊಂಡು, ಉಳಿದೆಲ್ಲ ಬಟ್ಟೆ ಕಳಚಿಯೂ ಅಂಗಿ ಕಳಚಲು ತಾನು ನಾಚಿದ್ದನ್ನು ನೆನಪು ಮಾಡಿಕೊಟ್ಟಾಗ ರೀನಾಳ ಅಲೌಕಿಕ ದೇಹವು ಕೊಟ್ಟ ಆನಂದದ ಅಮಲಿನಲ್ಲಿದ್ದ ನಾಗಪ್ಪ ವಿಷಾದ ತುಂಬಿದ ನಗು ನಗುತ್ತ ಹೇಳಿದ್ದ: "I hide there a great secret of my childhood both painful and shameful." ಆದರೆ ಏನೆಂದು ಸ್ಪಷ್ಟಪಡಿಸಿರಲಿಲ್ಲ. ಚಿನ್ನಾಟದ ಭರದಲ್ಲಿ ಬೆತ್ತಲೆ ಎದೆಯನ್ನು ಹುಡುಕುತ್ತ ಬನಿಯನ್ನಿನ ಕೆಳಗೆ ಹೊರಟ ರೀನಾಳ ಕೈಯನ್ನು ಅತ್ಯಂತ ಖೂಬಿಯಿಂದಲೇ ಹೊರಗೆ ತೆಗೆದಿದ್ದ.

"ಹಂಚಿಕೆ—ಬಟ್ಟೆಗೆ ಬೆಂಕಿಯಿಕ್ಕಿ ಕೊಲ್ಲುವುದಾಗಿತ್ತೇ?"

ಎಲ್ಲಿಂದಲೋ ತೂರಿಬಂದಂತೆ ಬಂದು ಕಿವಿಹೊಕ್ಕ ಈ ಪ್ರಶ್ನೆಯಿಂದ ನಾಗಪ್ಪನ ಮೋರೆ ಎಷ್ಟೊಂದು ಬಿಳಿಚಿಕೊಂಡಿತ್ತೆಂದರೆ ಅದನ್ನು ಕೇಳಿದ ದಸ್ತೂರನಿಗೇ ಒಂದು ಬಗೆಯ ಭಯವಾಯಿತು:

"ಕೊಲ್ಲುವ ಕಲೆಯಲ್ಲಿ ನಿಮ್ಮದು ಪಳಗಿದ ಕೈಯೆಂದು ತೋರುತ್ತದೆ ಮಿಸ್ಟರ್ ದಸ್ತೂರ್. ಇಂತಹ ಮನೋವೈಜ್ಞಾನಿಕ ಮಸಲತ್ತುಗಳ ಬಗ್ಗೆ ಕೇಳಿಗೊತ್ತಿತ್ತು. ಅವುಗಳಿಗೆ ನಾನೇ ಬಲಿಯಾಗುತ್ತಿದ್ದದ್ದು ಮಾತ್ರ ಇದೇ ಮೊದಲು. ದಯಮಾಡಿ ನನ್ನನ್ನು ಕುಕ್ಕೂಬಾಳನೆಂದು ತಿಳಿಯಬೇಡಿ: "Give up this blackmail. Come out with it straight. Tell me—how can I save your friend Phiroz."

ತದೇಕಚಿತ್ತದಿಂದ ಇವನನ್ನು ಆಲಿಸುತ್ತಿದ್ದ ಫಿರೋಜನಿಗೆ ನಾಗಪ್ಪ ತನ್ನ ಹೆಸರನ್ನು ಅಷ್ಟೊಂದು ಹಗುರವಾಗಿ ಎತ್ತಿದ ರೀತಿಯಿಂದ ಸಿಟ್ಟು ಮಸ್ತೆಕಕ್ಕೇರಬೇಕು. ಆದರೂ ನಿರುಪಾಯನಾದವನ ಹಾಗೆ ಅಸಾಧಾರಣವಾದ ಸಂಯಮ ತೋರಿ ಬಾಯಿತೆರೆದಾಗ ದನಿಯಲ್ಲಿಯ ನಡುಕವನ್ನು ಅಡಗಿಸುವದು ಅವನಿಗೆ ಕಷ್ಟಸಾಧ್ಯವಾಯಿತು:

"ಇದು. ನನ್ನನ್ನು ಉಳಿಸುವ ಪ್ರಶ್ನೆಯಲ್ಲ ನಾಗ್—ಕಂಪನಿಯನ್ನು ಉಳಿಸುವ ಪ್ರಶ್ನೆ—DMD ಆಗಿದ್ದರಿಂದ, ಫ್ಯಾಕ್ಟರಿಯ ಮುಖ್ಯ

ಅಧಿಕಾರಿಯಾಗಿದ್ದರಿಂದ ಇದಕ್ಕೆಲ್ಲ ನಾನೇ ಜವಾಬ್ದಾರನೆಂಬುದನ್ನು ಒಪ್ಪಿಕೊಂಡಾಗಲೂ…"

"ಯಾವುದಕ್ಕೆಲ್ಲ ನೀನೇ ಜವಾಬ್ದಾರ ಫಿರೋಜ್?"

"ಫ್ಯಾಕ್ಟರಿಯಲ್ಲಿ ಇಂಥ ಸಂಗತಿಗಳು ನಡೆಯುತ್ತದೆ ಎನ್ನುವುದಕ್ಕೆ…"

"ಎಂಥ ಸಂಗತಿಗಳು? ನೀನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುತ್ತಿದ್ದದ್ದು. ನನಗೆ ಗೊತ್ತಿದೆಯೆಂದು ಗ್ರಹೀತ ಹಿಡಿಯುವದು ಸಾಧುವಲ್ಲ ಫಿರೋಜ್. ಎಂಥ ಸಂಗತಿಗಳನ್ನು ನಿರ್ದೇಶಿಸಿ ಮಾತನಾಡುತ್ತಿದ್ದೀ ಎನ್ನುವದು ಸ್ಪಷ್ಟವಾಗಲೀ…"

ಫಿರೋಜ್, ದಸ್ತೂರ್ ಹಾಗೂ ಪಟೇಲರ ಕಡೆಗೆ ನೋಡಿದ. ಹೇಳಲು ಅಡ್ಡಿಯಿಲ್ಲ ಎನ್ನುವ ಇಷಾರೆ ಇಬ್ಬರಿಂದಲೂ ಸಿಕ್ಕದ್ದೇ, ಫಿರೋಜ್ ಹೇಳಲು ಉದ್ಯುಕ್ತನಾದ. ನಾಗಪ್ಪನ ಮೋರೆಗೆ ಮತ್ತೆ ಕಳೆಯೇರಿತು. ಬಹಳ ಹೊತ್ತಿನವರೆಗೆ ಮುಟ್ಟಿರದ ಬಿಯರ್-ಮಗ್ ಎತ್ತಿಕೊಂಡು ಸೀಪಿದ. ಆಗಿನಿಂದಲೂ ಈ ಎಲ್ಲದಕ್ಕೆ ಕಾರಣನಾಗಿಯೂ ಅದರ ಹೊರಗೇ ಉಳಿದ ಫಿರೋಜನನ್ನು ನೇರವಾಗಿ ವಿಚಾರಣೆಗೆ ಒಳಪಡಿಸುವ ಈ ಸಂಧಿಯು ನಾಗಪ್ಪನ—ತಾತ್ಕಾಲಿಕವಾಗಿಯೇ ಆಗಲೊಲ್ಲದೇಕೆ—ಉತ್ಸಾಹಕ್ಕೆ ಕಾರಣವಾಯಿತು:

ಫಿರೋಜ್: "you know about the pilferage of…"

ನಾಗಪ್ಪ: "ಗೊತ್ತಿಲ್ಲವೆಂದು ತಿಳಿಯುವದೇ ಲೇಸೇನೋ…"

ಫಿರೋಜ್: "ಓಕೇ. ಹತ್ತು ಟನ್ನಿನಷ್ಟು ಕೆಮಿಕಲ್ ನಂಬರ್ ೩೮೯…"

ನಾಗಪ್ಪ: "ಕಳವಿಗೆ ಹೋದದ್ದು ೧೮೯ ಮಾತ್ರ ಎಂದು ನನಗನ್ನಿಸುವದಿಲ್ಲ…

ನಾಗಪ್ಪನ ಈ ಮಾತಿಗೆ ಪಟೇಲ್, ದಸ್ತೂರ್ ಇಬ್ಬರೂ ದಿಗಿಲುಗೊಂಡು—ಈ ಸಂಗತಿ ತಮಗೆ ಗೊತ್ತಿರಲಿಲ್ಲ ಎನ್ನುವ ಹಾಗೆ ಫಿರೋಜನತ್ತ ನೋಡಿದರು. ಅವನು ನಿರುಪಾಯನಾದವನ ಹಾಗೆ:

"Yes—and a large quantity of 387."

ಇದನ್ನು ಕೇಳಿದ್ದೇ ತಡ ದಸ್ತೂರ್ ಗಾಬರಿ ತುಂಬಿದ ದನಿಯಲ್ಲಿ—How much? ಎಂದು ಕೇಳಿದ್ದಕ್ಕೆ ಫಿರೋಜನಿಂದ ಉತ್ತರ ಬರುವ ಮೊದಲೇ ನಾಗಪ್ಪನತ್ತ ತಿರುಗಿ—"you did not mention this in your letter" ಎಂದ.

"ಆ ಪತ್ರ ನಾನು ಬರೆದದ್ದಲ್ಲ ಮಿಸ್ಟರ್ ದಸ್ತೂರ್. ನಾನದನ್ನು ಓದಿಲ್ಲ ಕೂಡ. ಅದೆಲ್ಲ ಮುಖ್ಯವಲ್ಲ. ನೀವು ಚಿಂತಿಸಬೇಕಾದ ಮಹತ್ವದ ಸಂಗತಿ '೩೮೭ actual users' licence ಪ್ರಕಾರ ಪರದೇಶದಿಂದ ಆಮದು ಮಾಡಿದ ಕೆಮಿಕಲ್ ಎಂಬುದು. ಕಳ್ಳಸಂತೆಯಲ್ಲಿ ಮಾರುವುದುಳಿಯಲಿ ಅದನ್ನು ಇನ್ನೊಬ್ಬರಿಗೆ ಮಾರುವದೇ ದೊಡ್ಡ ಗುನ್ನೆಯೆಂಬುದು ನಿಮಗೆ ಗೊತ್ತಿರಬೇಕು..."

ಇದು ಹೌದೆ? ಎನ್ನುವ ದೃಷ್ಟಿಯಿಂದ ದಸ್ತೂರ್ ಫಿರೋಜನತ್ತ ನೋಡಿದ. ಅವನ ಮೋರೆಯ ಮೇಲೆ ಸ್ಪಷ್ಟವಾಗಿ ಮೂಡಿದ ಅಂಜಿಕೆಯೇ ಹೌದೆಂದು ಉತ್ತರ ಕೊಟ್ಟಿತು. ದಸ್ತೂರ್ ತನಗಾದ ತೀವ್ರ ಅಸಮಾಧಾನವನ್ನು ಅಡಗಿಸುವ ಪ್ರಯತ್ನ ಮಾಡದೇನೆ ಬಾತ್‌ರೂಮಿಗೆ ಹೋಗುವ ನೆಪಮಾಡಿ ಅಲ್ಲಿಂದ ಎದ್ದ: ಹೋಗುವ ಮೊದಲು—"Please read this... I will be back soon"—ಎನ್ನುತ್ತ ಚೆಂದವಾಗಿ ಟೈಪ್ ಮಾಡಿದ ರಿಪೋರ್ಟನ್ನು ಕೈಗೆ ಕೊಟ್ಟ. ಸನ್ನಿವೇಶ ತೆಗೆದುಕೊಂಡ ಈ ಹೊಸ ತಿರುವು ನಾಗಪ್ಪನಿಗೆ ಹುರುಪುಕೊಟ್ಟಿತು... ಹೊಟ್ಟೆ ಚೆನ್ನಾಗಿ ಹಸಿದಿದೆ. ಎಂಬುದನ್ನು ಈಗ ಅರಿತವನಂತೆ ಪ್ಲೇಟುಗಳಲ್ಲಿ ತಣ್ಣಗಾಗುತ್ತಿದ್ದ ಕಬಾಬ್‌ಗಳಲ್ಲಿ ಒಂದನ್ನೆತ್ತಿ ಕೈಗಡಿಯಾರ ನೋಡಿಕೊಂಡು ಹುಬ್ಬೇರಿಸಿದ. ಆಗಲೇ ೧೨ ಗಂಟೆ ದಾಟಿತ್ತು. ಫಿರೋಜ್ ಇಂತಹ ಸಮಯಗಳಲ್ಲೆಲ್ಲ ಮೊರೆಹೊಗುತ್ತಿದ್ದ ಪೈಪ್ ಕೈಗೆತ್ತಿಕೊಂಡು ತಂಬಾಕು ತುಂಬಹತ್ತಿದ್ದ—ಆಗಿನಿಂದಲೂ ಅದನ್ನು ತುಂಬದೇ ಇದ್ದದ್ದೇ ಇದೀಗ ಬಹಿರಂಗವಾದದ್ದಕ್ಕೆ ಕಾರಣವಾಗಿತ್ತು, ಎಂಬಂತೆ!

ಪಟೇಲ, ದಸ್ತೂರ್ ಬಿಟ್ಟುಹೋದ ಫೈಲು ನೋಡುವ ಕುತೂಹಲದಿಂದ ಅದನ್ನು ಕೈಗೆತ್ತಿಕೊಂಡಾಗ ಅದರೊಳಗಿಂದ ಎರಡು ಫೋಟೋಗಳು ಜಾರಿ ಕೆಳಗೆ ಬಿದ್ದುವು. ಅವನ ಈ ಅಧಿಕಪ್ರಸಂಗಕ್ಕೆ ಬೇಸರಪಟ್ಟ ಫಿರೋಜ್ ನಾಗಪ್ಪ ನೋಡುವ ಮೊದಲೇ ಅವಸರ ಅವಸರವಾಗಿ ಫೋಟೋಗಳನ್ನು ನೆಲದಿಂದ ಎತ್ತಿ

ಫೈಲಿನಲ್ಲಿ ಇಡುತ್ತ—ನೀನು ಕೂತಲ್ಲೆ ಕುಂಡೆ ಗಟ್ಟಿಮಾಡಿ ಕೂತುಕೋ ಎನ್ನುವವನ ಹಾಗೆ ಅವುಡುಗಚ್ಚಿ—"Please for heaven"s sake" ಎಂದ. ನಾಗಪ್ಪ ಮಾತ್ರ ಇವಾವುಗಳ ಕಡೆಗೆ ಲಕ್ಷ್ಯಕೊಡುವ ಸ್ಥಿತಿಯಲ್ಲಿ ಇರಲಿಲ್ಲ. ಫಿರೋಜನ ಫಜೀತಿ ಮಾಡುವ ಹಗಲುಗನಸು ಕಾಣುತ್ತ ದಸ್ತೂರ್ ತನ್ನ ಸ್ಥಾನಕ್ಕೆ ಮರುಳುವುದರ ಹಾದಿ ಕಾಯುತ್ತಿದ್ದ. ದಸ್ತೂರ್ ಬಂದ. ಬಂದವನೇ, ತನ್ನ ಫೈಲು ಜಾಗದಲ್ಲಿ ಇಲ್ಲದ್ದನ್ನು ಗಮನಿಸಿ- ಅದನ್ನು ತೆಗೆದದ್ದು ಯಾರು ಎಂಬುದು ತನಗೆ ಗೊತ್ತಿದೆ ಎನ್ನುವಂತೆ ಪಟೇಲನ ಕಡೆಗೆ ನೋಡಿ ಬೇಸರ ವ್ಯಕ್ತಪಡಿಸಿದ. ಈ ಎಲ್ಲ ನಾಟಕ ಮುಂದೆ ಬರುವ ಪೇಚಿನ ಪ್ರಶ್ನೆಗೆ ಹಿನ್ನೆಲೆಯಾಗಿತ್ತು ಎನ್ನುವುದರ ಕಲ್ಪನೆ ಕೂಡ, ನಿರಾತಂಕವಾಗಿ ರಿಪೋರ್ಟು ಓದಲು ಮೊದಲುಮಾಡಿದ ನಾಗಪ್ಪನಿಗೆ. ಇರುವದು ಶಕ್ಯವಿರಲಿಲ್ಲ. ಆದರೆ ರಿಪೋರ್ಟು ಓದುತ್ತ ಹೋದಂತೆ ದೊಡ್ಡವಾಗುತ್ತ ಹೋದ ಕಣ್ಣುಗಳು ಸಣ್ಣವಾಗದಾದವು. ಮೈ ಸಣ್ಣಗೆ ನಡುಗುತ್ತ ಬೆವರಹತ್ತಿತು. ದೇವರೇ, ಬಾನಾವಳಿಯ ಔಷಧದಂಗಡಿಯಿಂದ ಬಾರ್ಬಿಚ್ಯುರೇಟ್ ಗುಳಿಗೆಗಳನ್ನು ಕೊಳ್ಳುವ ಧೈರ್ಯವಾಗದೇ ಅಥವಾ ಕೊಳ್ಳುವ ಧೈರ್ಯವಾಗಿಯೂ ಅವುಗಳನ್ನು ನುಂಗುವ ಧೈರ್ಯವಾಗದೇ ಬದುಕಿ ಉಳಿದರೆ—ನಿನ್ನಾಣೆ ಸ್ಟ್ಯಾಂಡ್ ಬುಕ್-ಸ್ಟಾಲಿನಲ್ಲಿ ಸೇಲ್ಸ್‌ಮನ್ನನಾಗುತ್ತೇನೆ. ಇಲ್ಲ ಖೇತವಾಡಿಯ ಗಲ್ಲಿಯೊಂದರಲ್ಲಿ ಪಾಗಡಿ ಕೊಟ್ಟಾದರೂ ನ್ಯೂಸ್-ಪೇಪರ್ ಮಾರುವ ಅಂಗಡಿ ತೆರೆಯುತ್ತೇನೆ... ಕೋಳೀಗಿರಿಯಣ್ಣನ ಕೇರಿಯ ಸಾಲೆಯಲ್ಲಿ ಮಾಸ್ತರನಾಗುತ್ತೇನೆ. ಆದರೆ ಇದರಿಂದೊಮ್ಮೆ ಪಾರುಮಾಡು:

"What do you want me to do with this report, Mr Dastur?"

ಇದ್ದಕ್ಕಿದ್ದಂತೆ ತನ್ನ ದನಿಯಲ್ಲಿ ಅಳುಬುರುಕತನ ಸೇರಿಕೊಂಡುಬಿಟ್ಟಿದೆ ಎಂಬುದನ್ನು ಗಮನಿಸಿಯೂ ಅದರ ಬಗ್ಗೆ ಏನೂ ಮಾಡಲಾಗದವನ ಹಾಗೆ ಕೈ ಚೆಲ್ಲಿ ಕೂತ: ಈ ದಸ್ತೂರ್ ಇಂಥದ್ದರಲ್ಲೆಲ್ಲ ಪಳಗಿದ ಕೈಯೆಂದು ತೋರುತ್ತದೆ. ಆಗಿನಿಂದಲೂ ತನಿಖೆ ನಡೆಸಿದ ರೀತಿ ನೋಡಿದರೇನೆ ಗೊತ್ತಾಗುತ್ತದೆ—ಇದೆಲ್ಲ ತನ್ನನ್ನು ಮಾನಸಿಕವಾಗಿ ಮುರಿಯುವ ಮಸಲತ್ತು: ಒಮ್ಮೆ ತಾನು ಗೆದ್ದಂತೆ ಮರುಗಳಿಗೆ ಅನಿರೀಕ್ಷಿತವಾದ ಪೇಚಿಗೆ ಸಿಕ್ಕಿ ತಾನೇ ಸೋತಂತೆ ನಟಿಸುವ ಈ ಕದೀಮ ಬಲು ಧೂರ್ತ. ಅವನ ವ್ಯವಸಾಯವೇ ಇದೆಂದು ತೋರುತ್ತದೆ. ಅಳುಕುತ್ತಲೇ ನಾಗಪ್ಪ ದಸ್ತೂರನ ಕಡೆಗೆ ನೋಡಿದ: ತನ್ನ ಮೇಲೇ ದೃಷ್ಟಿನೆಟ್ಟು

ಕುಳಿತವನ ಕಣ್ಣುಗಳಲ್ಲಿ ಈವರೆಗೂ ಕಂಡಿರದ—ಒಂದು ಬಗೆಯ ಶ್ವಾಪದ ದೃಷ್ಟಿಯ—ತೀಕ್ಷ್ಣತೆ ಬಂದಿತ್ತು. ಮಾಟ ಮಾಡುವ ಬಲ ಬಂದಿತ್ತು: ತನ್ನನ್ನು ಸಪಾಟು ಮಾಡುವ ಸಿದ್ಧತೆಯ ಪ್ರತಿ ವಿವರವನ್ನು ತಾಲೀಮು ಮಾಡಿಯೇ ಬಂದ ತಂಡವಿದು! ದಸ್ತೂರನ ಉತ್ತರದ ಹಾದಿ ಕಾಯುತ್ತಿದ್ದಾಗ ಕೆಲ ಹೊತ್ತಿನ ಮೊದಲಷ್ಟೇ ಪಟೇಲನ ಕೈಯಿಂದ ಜಾರಿ ಬಿದ್ದ ಫೋಟೋಗಳಲ್ಲಿಯ ಒಂದರಲ್ಲಿ ಹೈದ್ರಾಬಾದ್ ವಿಮಾನ-ನಿಲ್ದಾಣದಲ್ಲಿ ತನ್ನನ್ನು ಕಂಡು ಮಾತನಾಡಿಸಿದ ಕಪ್ಪು ಕನ್ನಡಕ-ಧಾರಿಯಾದ ರೆಡ್ಡಿಯನ್ನು ಕಂಡಂತಿತ್ತು ಎಂಬುದು ಈಗ ಅವನ ನೆನಪಿಗೆ ಬಂದು ದಸ್ತೂರನನ್ನು ಇದಿರಿಸಿದ ಕಣ್ಣುಗಳು ದಿಗಿಲಿನಿಂದ ಮತ್ತೆ ದೊಡ್ಡವಾಗುತ್ತಿರುವಾಗ ದಸ್ತೂರ್ ಅಪ್ಪಣೆ ಮಾಡಿದ:

"Sign that report Mr Nagnath. Here is the pen."

ದಸ್ತೂರನಿತ್ತ ಆಜ್ಞೆ ನಾಗಪ್ಪ ಈ ಮೊದಲೇ ಊಹಿಸಿಕೊಂಡದ್ದೇ ಆದರೂ ನಿಷ್ಠುರವಾದ ಧ್ವನಿಯಲ್ಲಿ, ಖಚಿತವಾದ ಮಾತುಗಳಲ್ಲಿ ಅದು ಮೂಡಿ ಬಂದಾಗ ನಾಗಪ್ಪನ ಮೇಲೆ ಎಷ್ಟೊಂದು ಬಲವುಳ್ಳ ಆಘಾತ ಮಾಡಿತ್ತೆಂದರೆ ಕೈಯಲ್ಲಿ ಹಿಡಿದ ಆ ರಿಪೋರ್ಟನ್ನು ದಸ್ತೂರನ ಮೈಮ್ಯೆಲೆ ಬಿಸಾಕಿದವನೇ ಧಡಕ್ಕನೆ ಕೂತಲ್ಲಿಂದ ಎದ್ದೇ ನಿಂತ:

"No Mr Dastur. Let us not act as in films. ಆ ರಿಪೋರ್ಟಿನ ಮೇಲೆ ನಾನು ಸಹಿ ಮಾಡಲಾರೆ. ಜಗತ್ತಿನಲ್ಲಿಯ ಎಲ್ಲ ಐಶ್ವರ್ಯವನ್ನು ತಂದು ನನ್ನ ಮುಂದೆ ರಾಶಿ ಹಾಕಿದರೂ ಶಕ್ಯವಿಲ್ಲ. ನಾ ಪಡೆದ ತಾಂತ್ರಿಕ ಶಿಕ್ಷಣ ಅಷ್ಟೊಂದು ಧಡ್ಡತನದ ರಿಪೋರ್ಟಿನ ಮೇಲೆ ಸಹಿಮಾಡಲು ಸರ್ವಥಾ ಬಿಡಲಾರದು. ನೀವು ಹೀಗೆ ಬೆದರಿಕೆ ಹಾಕುವಾಗಲಂತೂ ಅಲ್ಲ. If you are amenable for rational discussion, I am prepared to discuss other methods of saving Phiroz..."

"Stop that nonsense. I have heard enough of it... ಮೊದಲು ನಿನ್ನನ್ನು ಉಳಿಸಿಕೋ. ಬೋಮೂ, ಒಂದು ಗಂಟೆಗೆ ಊಟದ ಅಪಾಂಯ್ಟಮೆಂಟ್ ಇದೆ ಎಂಬುದನ್ನು ಮರೆಯಬೇಡ." ಫಿರೋಜ್ ಈ ರೀತಿ ಗುಡುಗಿದ್ದು ಬಹಳ

ದಿನಗಳಿಂದ ಕೇಳಿರದ ನಾಗಪ್ಪನ ಮೈಮೇಲೆ ಮುಳ್ಳು ನಿಂತವು. ನಿರ್ವಿಣ್ಣನಾಗಿ ಮತ್ತೆ ಕೂತ.

ದಸ್ತೂರ್: “ಆ ರಿಪೋರ್ಟಿನ ಮೇಲೆ ಸಹಿ ಮಾಡುವದು ಧಡ್ಡತನವೆಂದು ಯಾಕೆ ತಿಳಿಯುತ್ತೀರಿ?”

ನಾಗಪ್ಪ: “ಅಲ್ಲದೇ ಏನು ಮತ್ತೆ! ಯಾಕೆ ಎಂಬುದು ಫಿರೋಜನಿಗೂ ಗೊತ್ತಿಲ್ಲದೇ ಇಲ್ಲ. ಕೆಮಿಕಲ್ ೩೮೭—ಇದು ಅನ್‌ಸೆಚ್ಯುರೇಟೆಡ್ ಆಸಿಡ್ ನೀವು ಸಹಿ ಮಾಡಲು ಆದೇಶವಿತ್ತ ರಿಪೋರ್ಟಿನಲ್ಲಿ ಸೂಚಿಸಲ್ಪಟ್ಟ ಸರಕಿನ ಉತ್ಪಾದನೆಗೆ ಎಳ್ಳಷ್ಟೂ ಕೆಲಸಕ್ಕೆ ಬಾರದ್ದು: ಪೆರೋಕ್ಸ್ಯಾಡ್ ಕೆಟೆಲಿಸ್ಟ್‌ದ ಉತ್ಪಾದನೆಗೆ ಬೇಕಾಗುವ ಥಲೇಟ್ ಪ್ಲಾಸ್ಟೀಸೈಝುರಿನಲ್ಲಿ ಇದರ ಉಪಯೋಗ ಶಕ್ಯವಿಲ್ಲ. ಬೆಂಕಿ ಬಿದ್ದ ವಿಭಾಗಕ್ಕೂ ಇದಕ್ಕೂ ಇಂಥ ಬಾದರಾಯಣ ಸಂಬಂಧವನ್ನಾದರೂ ಜೋಡಿಸಿ, ಆ ಬೆಣಿಯಲ್ಲಿ ಈ ಮಾಲು ಸುಟ್ಟು ಹೋಗಿದೆಯೆಂದು ತೋರಿಸಲು ಈ ರಿಪೋರ್ಟಿನ ಆಧಾರ ಪಡೆಯುವ ಹುನ್ನಾರನ್ನು ಕಲ್ಪಿಸಿದ ತಲೆ ಬಹಳ ಧೂರ್ತತನದ್ದು. ಆದರೆ ಕೆಮಿಸ್ಟ್ರಿಯ ಗಂಧ-ಗಾಳಿಯಿಲ್ಲದ್ದು. ೩೮೭ ಆಮದು ಆದದ್ದು ಈ ಕೆಲಸಕ್ಕಾಗಿ ಅಲ್ಲವೇ ಅಲ್ಲ. ಅದರ ಉಪಯೋಗ ಪೊಲೀಎಸ್ಟರ್ ಉತ್ಪಾದನೆಯ ಮೇಲೆ ನಾನು ಹಾಗೂ ಇನ್ನಿಬ್ಬರು ಸಂಗಡಿಗರು ಕೂಡಿ ಸಿದ್ಧಗೊಳಿಸಿದ—ನಾನು ತುಂಬ ಅಭಿಮಾನಪಟ್ಟುಕೊಂಡ—ಪ್ರಾಜೆಕ್ಟ್-ರಿಪೋರ್ಟಿನಲ್ಲಿ ವಿವರಿಸಲ್ಪಟ್ಟಿದೆ. ಅದರ ಪ್ರತಿ ಫಿರೋಜನ ಹತ್ತಿರ ಇದೆಯೋ ಇಲ್ಲವೋ ನಾನರಿಯೆ. ಇದ್ದಿದ್ದರೆ ಹೊಚ್ಚ ಹೊಸ ಸರಕಿನ ಉತ್ಪಾದನೆಯನ್ನು ಸಮರ್ಥಿಸುವ ಪ್ರಾಜೆಕ್ಟ್-ರಿಪೋರ್ಟ್ ಹೇಗೆ ಇರುತ್ತದೆ—ಇರಬೇಕು ಎನ್ನುವುದಾದರೂ ಗೊತ್ತಾಗುತ್ತಿತ್ತು. ನೀವು ಈಗ ತೋರಿಸಿದ ರಿಪೋರ್ಟಿನ ಧಡ್ಡತನಕ್ಕೆ ನನ್ನ ಹೆಸರಿನ ಶಿಕ್ಕಾ ಬೀಳುವದು ಶಕ್ಯವೇ ಇಲ್ಲ, ಮಿಸ್ಟರ್ ದಸ್ತೂರ್... ಇಷ್ಟೇ ನನ್ನ ಈ ಪೊಲೀಎಷ್ಟರ್ ಪ್ರಾಜೆಕ್ಟ್ ಬೋರ್ಡ ಆಫ್ ಡ್ಯಾರೆಕ್ಟರ್ಸದಿಂದ ಸ್ವೀಕೃತವಾಗಿಯೂ ಅದು ಈವರೆಗೂ ಕಾರ್ಯರೂಪಕ್ಕೇಕೆ ಇಳಿಯಲಿಲ್ಲ ಎನ್ನುವುದರ ಕಾರಣ ಗೊತ್ತಾದದ್ದು ಮಾತ್ರ ಈಗಲೇ ಎನ್ನುವುದನ್ನು ಒಪ್ಪಿಕೊಳ್ಳಬೇಕು...” ನಾಗಪ್ಪನ ಕೊನೆಯ ಮಾತಿನಲ್ಲಿ ಸೇರಿಕೊಂಡ ವ್ಯಂಗ್ಯದಲ್ಲಿ ಅವನು ಬಯಸಿದ ಮೊನಚಿಗಿಂತ ದಸ್ತೂರ್ ಕೆಲಹೊತ್ತಿನ ಮೊದಲಷ್ಟೇ ಮಾಡಿದ ಸೂಚನೆ ಹುಟ್ಟಿಸಿದ ನಡುಕವೇ ದೊಡ್ಡದಾಗಿತ್ತು.

ನಾಗಪ್ಪ ಹೇಳಿದ ಯಾವ ಮಾತೂ ತನಗೆ ಅನಿರೀಕ್ಷಿತವಾದ್ದದ್ದಲ್ಲ ಎಂಬ ಧಾಟಿಯಲ್ಲಿ ದಸ್ತೂರ್ ಹೇಳಿದ:

"ಇದೆಲ್ಲದರ ಬಗ್ಗೆ ನಾವು ವಿಚಾರಮಾಡದೇ ಇಲ್ಲ ಮಿಸ್ಟರ್ ನಾಗನಾಥ್. ಮೊದಲನೆಯದಾಗಿ, ಈಗ ನೀವು ಸಹಿ ಮಾಡಲಿದ್ದ ರಿಪೋರ್ಟು—ಪೂರ ಕೇಳಿಕೊಳ್ಳುವ ಮೊದಲೇ ಹಾಗೆ ಸಿಟ್ಟಿಗೇಳಬೇಡಿ—ನೀವು ಸದ್ಯ ಬರೆದದ್ದೆಂದು ನಾವು ಹೇಳಲೇ ಇಲ್ಲ. ಎಂಟು ವರ್ಷಗಳ ಹಿಂದೆ ಬರೆದದ್ದೆಂದು ತೋರಿಸಿದ್ದೇವೆ. ರಿಪೋರ್ಟಿನ ತಾರೀಖನ್ನು ಆ ರೀತಿ ಬದಲಿಸಿದ್ದು ನಿಮ್ಮ ಲಕ್ಷ್ಯಕ್ಕೆ ಬಂದಿರಲಿಕ್ಕಿಲ್ಲ: ಪ್ರಾಜೆಕ್ಟ್-ರಿಪೋರ್ಟು ಬರೆಯುವ ಅನುಭವ ನಿಮಗೆ ಗ ಇಲ್ಲದಿದ್ದರೆ ಆಶ್ಚರ್ಯವಲ್ಲ, ಮೇಲಾಗಿ ನೀವು ಆಗ ಉಲ್ಲೇಖಿಸಿದ ನಿಮ್ಮ ಇನ್ನೊಂದು ರಿಪೋರ್ಟಿಗಿಂತ ಇದು ಬಹಳ ಮುಂಚಿನದೆಂದು ತೋರಿಸಿದ ಹಾಗೂ ಆಗುತ್ತದೆ. ಎರಡನೆಯದಾಗಿ, ಈ ರಿಪೋರ್ಟಿನ ಉದ್ದೇಶ ನೀವು ತಿಳಿದಷ್ಟು ಹಿರಿದಾದ್ದಲ್ಲ—ತೀರ ಪರಿಮಿತವಾದದ್ದು ಹಾಗೂ ತಾತ್ಕಾಲಿಕವಾದದ್ದು. ರಸಾಯನ-ವಿಜ್ಞಾನಿಗಳ ಸಮಾಧಾನಕ್ಕಾಗಿ ಬರೆದದ್ದಂತೂ ಅಲ್ಲವೇ ಅಲ್ಲ. ಈಗ ಉದ್ಭವಿಸಿದ ಪೇಚಿಗೆ ಮೂಲ ಕಾರಣವಾದ ಆಡಿಟ್-ರಿಪೋರ್ಟು ಎತ್ತಿದ ಕೆಲವು ಆಕ್ಷೇಪಣೆಗಳನ್ನು ದೂರಮಾಡುವುದರ ಸಲುವಾಗಿ ಅಷ್ಟೇ. ಬರೇ ಆಡಿಟರರ ಸಮಾಧಾನಕ್ಕಾಗಿ-ಆಶ್ಚರ್ಯಪಡಬೇಡಿ: ರಿಪೋರ್ಟಿನ ಕಲ್ಪನೆಯನ್ನಷ್ಟೇ ಅಲ್ಲ, ಅದರ ಒಕ್ಕಣಿಕೆಯನ್ನು ಕೂಡ ಸೂಚಿಸಿದ್ದೇ ಅವರು. ಆಕ್ಷೇಪ ಎತ್ತಿದವರದೇ ಹರಕತ್ತು ಇಲ್ಲದಿದ್ದರೆ ನಾವೇಕೆ ತಲೆಕೆಡಿಸಿಕೊಳ್ಳಬೇಕು? ರಿಪೋರ್ಟಿನ ಮೇಲೆ ನಿಮ್ಮ ಸಹಿ ಇದ್ದರೆ ಒಳ್ಳೆಯದೆಂದು ಸಲಹೆ ಇತ್ತವರೂ ಅವರೇ. ಮೂರನೆಯದಾಗಿ— ಇದು ಹೇಳುತ್ತಿದ್ದದ್ದು ಬರೀ ನಿಮ್ಮ ಸಮಾಧಾನಕ್ಕಾಗಿ: ೩೮೭ ೩೮೯, ಇವೆಲ್ಲ ನಿರ್ದಿಷ್ಟ ರಾಸಾಯನಿಕಗಳ ಹೆಸರುಗಳೇನಲ್ಲವಲ್ಲ? ಕಂಪನಿಯವರೇ ತಮ್ಮ ಉತ್ಪಾದನೆಗೆ ಸಂಬಂಧಪಟ್ಟ ಗೌಪ್ಯವನ್ನು ಕಾಯ್ದುಕೊಳ್ಳಲು ನಿರ್ಮಿಸಿಕೊಂಡ ಸಂಕೇತಗಳು ತಾನೇ? ಇವು ಆಗೀಗ ಬದಲಾಗಬಾರದೆಂಬ ನಿಯಮವೇನಾದರೂ ಇದೆಯೇ? ಇದ್ದರೂ ಯಾರಾದರೂ ಕೈತಪ್ಪಿ ಒಂದರ ಬದಲು…"

ದಸ್ತೂರನಿಗೆ ಏನು ಸೂಚಿಸಬೇಕಾಗಿದೆ ಎಂಬುದನ್ನು ಊಹಿಸಿಯೇ ದಿಗಿಲುಗೊಂಡ ನಾಗಪ್ಪನ ಬಾಯಿಯಿಂದ ಹೊರಟ— " My God" ಎಂಬ ಉದ್ಗಾರ ಅಪೇಕ್ಷೆಯನ್ನು ಮೀರಿ ದೊಡ್ಡದಾದಾಗ ದಸ್ತೂರನ ವಾಕ್ಯ ಅರ್ಧಕ್ಕೇ

ಉಳಿಯಿತು. ಕರುಳಲ್ಲಿ ಸೇರಿಕೊಂಡ ನಡುಕವನ್ನು ಹೇಗೆ ತಡೆಯುವದೆಂದು ಗೊತ್ತಾಗದೇ ತಬ್ಬಿಬ್ಬಾಗಿ ದಸ್ತೂರನ ಕಡೆಗೇ ನೋಡುತ್ತಿದ್ದ ನಾಗಪ್ಪನ ಕಣ್ಣು ತಿರುಗಿ ಅಗಲವಾಗಹತ್ತಿದುವು. ತನಿಖೆಗೆ ಈಗ ಹೊಸತೇ ಒಂದು ತಿರುವು ಕೊಡುವವನ ಹಾಗೆ ದಸ್ತೂರ್ ಫೈಲ್ ತೊಡೆಯ ಮೇಲೆ ತೆಗೆದುಕೊಂಡ. ಬಿಚ್ಚಿದ. ಒಮ್ಮೆ ಅದನ್ನು ನೋಡಿದಂತೆ ಮಾಡಿ ಮತ್ತೆ ಮುಚ್ಚಿದ. ಮೇಲೆ ಮಹದ್ಗಾಂಭೀರ್ಯದಲ್ಲಿ ರಾಗವೆಳೆದ:

"Look here young man, I can easily appreciate your predicament. But as a student of human phsycology let me tell you a few things..." ಹೀಗೆ ಹೇಳಿ ಕಿಸೆಯೊಳಗಿಂದ ತನ್ನ ಹೆಸರಿನ ವಿಸಿಟಿಂಗ್-ಕಾರ್ಡ್ ಒಂದನ್ನು ನಾಗಪ್ಪನ ಕೈಗೆ ಕೊಡುತ್ತ—Not to impress upon you, but just to introduce myself properly ನಾನು M.A.—ಇಂಗ್ಲೆಂಡಿನ 'ಸ್ಕೂಲ್-ಆಫ್-ಸೋಶಿಯಾಲಾಜಿ'ಯಿಂದ— ಇಂಡಸ್ಟ್ರಿಯಲ್ ಸಾಯ್ಕಾಲಜಿ ನನ್ನ ಮುಖ್ಯ ವಿಷಯ. ಮುಂದೆ ಹಾರ್ವರ್ಡ್ಡಿನಿಂದ ಬಿಸಿನೆಸ್ ಮ್ಯಾನೇಜ್‌ಮೆಂಟಿನಲ್ಲಿ ಪೀ.ಎಚ್.ಡೀ. ಈ ವರೆಗಿನ ನನ್ನ ಮಾತುಕತೆಗೆ ನಾನು ಡಾಕ್ಟರ್ ದಸ್ತೂರ್ ಆಗಿರುವುದು ಮುಖ್ಯ ಅಲ್ಲವಾಗಿದ್ದರಿಂದ ಬರೇ ಮಿಸ್ಟರ್ ದಸ್ತೂರ್ ಎಂದು ಪರಿಚಯಮಾಡಲು ಫಿರೋಜನಿಗೆ ನಾನೇ ತಿಳಿಸಿದ್ದೆ. By the way your MD and I are contemporaries. ಇಂಗ್ಲಂಡಿನಲ್ಲಿ ಕೆಲವು ವರ್ಷ ಜೊತೆಗಿದ್ದೆವು ಕೂಡ. ನನಗೀಗ ವಯಸ್ಸು ೫೫. ಕಾಲುಶತಮಾನಕ್ಕೂ ಮೀರಿ ವಿವಿಧ ದುಡಿಮೆಯ ಕ್ಷೇತ್ರಗಳಲ್ಲಿ ಅನುಭವ. ನಾನು ನಿಮ್ಮ 'ಬಾಯೋ-ಡೇಟಾ' ನೋಡಿದ್ದೇನೆ ಮಿಸ್ಟರ್ ನಾಗನಾಥ್. ನೋಡಿ ಬಹಳ ಬಹಳ ಸಂತೋಷಪಟ್ಟಿದ್ದೇನೆ... (ನಾಗಪ್ಪ: ಬಹಳ ಬಹಳ ಸುಳ್ಳಾಡುತ್ತಾನೆ ಈ ಭೆಂಭೋದ್!) ಯಾರೂ ಅಭಿಮಾನಪಡುವ ಹಾಗಿದೆ ಅದು—ತಲೆದೂಗುವ ಹಾಗಿದೆ. (ನಾ: ನೀನೂ ಈ ನಿನ್ನ ಇಬ್ಬರು ಧೂರ್ತ ಸಂಗಡಿಗರೂ ಈಗ ಬಿಯರಿನ ಭಾರದಿಂದ ತೂಗುತ್ತಿದ್ದ ಹಾಗಯೆ?) ಆದರೆ ಈ ದುಷ್ಟ ಜಗತ್ತಿನಲ್ಲಿ ಇದೆಲ್ಲ ಯಾವ ಕೆಲಸಕ್ಕೂ ಬಾರದ್ದು. ಅಗಾಧವಾದ ವಿದ್ವತ್ತು, ಪಾಂಡಿತ್ಯ, ನಮ್ಮ ನಮ್ಮ ಪ್ರಾವೀಣ್ಯದ ಕ್ಷೇತ್ರಗಳಲ್ಲಿಯ ಸಾಧನೆ ಇವಷ್ಟೇ ಇದ್ದರೆ ಸಾಲದು. (ನಾ: ಉದ್ದುದ್ದ ಮೂಗುಗಳೂ, ದೊಡ್ಡದೊಡ್ಡ ಕುಂಡೆಗಳೂ, ದಪ್ಪದಪ್ಪ

ತೊಗಲೂ ಇರಬೇಕು. ತಪ್ಪಿದರೆ ಇಂಗ್ಲಂಡಿನಿಂದಲೋ ಅಥವಾ ಅಮೇರಿಕೆಯಿಂದಲೋ ಸಾಧ್ಯವಾದರೆ ಎರಡೂ ಕಡೆಗಳಿಂದ ಆಮದು ಮಾಡಿದ ಬಿರುದಾವಳಿಗಳಾದರೂ ಬೇಕು. ಹಾಗೂ ಗಲಗಲ ಜೋತಾಡುತ್ತ ಒಣಗಿದ ಗೊರಟುಗಳ ಹಾಗೆ ಶೋಭಿಸುವ ಇವುಗಳನ್ನು ಬೇಕಾದಾಗ, ಬೇಕಾದಷ್ಟೇ, ಗಾಳಿಗೆ ತೂರಿ ತೋರಿಸಬೇಕು!) ಇಲ್ಲಿ ನಾವು ವ್ಯವಹರಿಸಬೇಕಾಗಿ ಬರುವಂಥ ಜನ ಒಂದೆರಡು ತರಹದವರೇ! ಅವರ ಸ್ವಭಾವಗಳಲ್ಲಿ ಎಷ್ಟು ವಿಧ! ಬೆಳವಣಿಗೆಯ ಮಟ್ಟಗಳಲ್ಲಿ, ಕಾರ್ಯಾಸಕ್ತಿಯ ಪ್ರೇರಣೆಗಳಲ್ಲಿ ಎಷ್ಟು ಪರಿ! (ನಾ: ಹೀಗೆ ಸತತವಾಗಿ ಕೊರೆಯುವ ಈ ಒಂದೂ ಮಕ್ಕಳ ಪಿರಿಪಿರಿಯಲ್ಲೇ ಎಷ್ಟೊಂದು ಪರಿ!) ನಾನು ಇಲ್ಲಿ ಬಂದಾಗಿನಿಂದ ಕೂಲಂಕಷವಾಗಿ ಅವಲೋಕಿಸಿದ್ದೇನೆ (ನಾ: ಗಿಡುಗನ ಜಾತಿಯವನಾದದ್ದು ಸಾರ್ಥಕವಾಯಿತು) ನಿಮ್ಮ ವ್ಯಕ್ತಿತ್ವದ ಅನೇಕ ಸ್ತರಗಳನ್ನು ಸ್ಪಷ್ಟವಾಗಿ ಗುರುತಿಸಿದ್ದೇನೆ—ಅದರ ಹಲವು ಮುಖಗಳನ್ನು (ನಾ: ಈ ವಕ್ರತುಂಡ ಮಹಾಕಾಯನಿಗೆ ಆರತಿಯ ಎತ್ತೀರೆ!)... ಮೊದಲನೆಯದಾಗಿ ನಿಮ್ಮಲ್ಲಿಯ ಕ್ರಿಯೇಟಿವ್ ಆರ್ಟಿಸ್ಟ್—ನೀವು ಪ್ರಖ್ಯಾತ ಲೇಖಕರೂ ಅಂತೆ. (ನಾ: You are well informed!) ಕ್ರಿಯೇಟಿವ್ ಇಮ್ಯಾಜಿನೇಶನ್‌ದ ಮುಖಾಂತರ ಇನ್ನೊಬ್ಬರ ಭಾವನೆಗಳನ್ನು, ಅನ್ನಿಸಿಕೆಗಳನ್ನು ತಟ್ಟನೆ ಗ್ರಹಿಸಬಲ್ಲಿರಿ, ಅರ್ಥ ಮಾಡಿಕೊಳ್ಳಬಲ್ಲಿರಿ...(ನಾ: Thanks for the compliments... !) ಆದರೆ ಇದರ ಉಪಯೋಗ ನಿಮಗೆ ನಿಮ್ಮ ಸೃಷ್ಟಿಕಾರ್ಯದಲ್ಲಿ ಆಗುತ್ತಿರಬಹುದೇ ಹೊರತು ನಿತ್ಯವ್ಯವಹಾರದಲ್ಲಿ ಅಲ್ಲ ಎನ್ನುವುದನ್ನು ನೀವಿನ್ನೂ ಕಂಡುಕೊಂಡಂತಿಲ್ಲ. Moreover it makes you over-sensitive and sentimental-which you are (ನಾ: Shut up !). ಎರಡನೆಯದಾಗಿ, ಮೂಲಭೂತವಾದ ಕೆಲವು ಮೌಲ್ಯಗಳಲ್ಲಿ ನಿಮಗೆ ನಂಬಿಕೆ ಇದ್ದಂತಿದೆ. ಅದರ ಜೊತೆಗೇ, ಉಳಿದವರಿಗೂ ಅವುಗಳಲ್ಲಿ ನಂಬಿಕೆ ಇದೆ ಎಂಬ ವಿಶ್ವಾಸ, ಇರಲೇಬೇಕೆಂಬ ಹಟ. ನೀವು ಮೊದಲಿನಿಂದಲೂ ನಮ್ಮೊಡನೆ ನಡೆದುಕೊಂಡ ರೀತಿ ನೋಡಿದರೆ— ಸತ್ಯ ಹೇಗಾದರೂ ನನ್ನ ಬದಿಗಿದೆ. ಕೊನೆಯಲ್ಲಿ ಗೆಲ್ಲುವದು ಆ ಸತ್ಯವೊಂದೇ' ಎಂಬ ಪುರಾಣ-ಕಲ್ಪನೆಗೆ ಜೋತುಬಿದ್ದವರ ಹಾಗೆ ತೋರುತ್ತೀರಿ. ವಾಸ್ತವ-ಸಂಗತಿಗಳನ್ನು ಪ್ರಸ್ತುತಗೊಳಿಸಿದರೆ ಸಾಕು—ಸತ್ಯ ತನ್ನನ್ನು ತಾನೇ ಸಿದ್ಧಪಡಿಸಿಕೊಳ್ಳುತ್ತದೆ; ಬೆಳಕಿನಷ್ಟು ಸ್ಪಷ್ಟವಾಗುತ್ತ ನೋಡುವವರ ಕಣ್ಣು ತೆರೆಯಿಸುತ್ತದೆ ಎಂಬ

ಮೂಢನಂಬಿಕೆಯ ಆಧಾರದ ಮೇಲೆ ನೀವು ಅನ್ಯಾಯ ಎಂದು ತಿಳಕೊಂಡದ್ದರ ವಿರುದ್ಧ ವೇಳೆ ಅವೇಳೆಯಲ್ಲಿ ಹೀಗೆ ಸಿಡಿದೇಳುತ್ತೀರಿ: ತಾನೊಬ್ಬ ದೊಡ್ಡ ಬಂಡಾಯಗಾರನೆಂಬ ಸುಳ್ಳು ಜಂಭದಲ್ಲಿ ಓಲಾಡುತ್ತೀರಿ. ಬೆಳಕಿನಷ್ಟು ಸ್ಪಷ್ಟವಾದದ್ದಕ್ಕೆ ಕಣ್ಣುತೆರೆಯಿಸುವ ಬಲವಿರಬಹುದು, ಮಿಸ್ಟರ್ ನಾಗನಾಥ್. ಆದರೆ ತೆರೆದ ಕಣ್ಣಿನಲ್ಲಿ ಮೂಡಿದ ನೋಟ ಮಾತ್ರ ಆಸಕ್ತಿಬದ್ಧವಾದದ್ದು; ಅದು ನೋಡುವವನ ಸ್ವಾರ್ಥಕ್ಕೆ ಕಟ್ಟಿಬಿದ್ದದ್ದು ಎನ್ನುವುದರ ಕಲ್ಪನೆಯೂ ನಿಮಗಿಲ್ಲ. I have a great regard for the artist in you, Mr. Nagnath. But in matters that concern us the most as professionals, you are too naive and immature. Pardon me if I am blunt. The professional world is not a world of truth and values-not in any case of your imagination-but a world of self-interests. Ofcourse there are the organisational objectives and the organisational structure that evolves in the process of interlocking the individuals working for these objectives into a network of interpersonal relations and all that bullshit. Sorry for being so coarse. But I am sure you will agree with me when I say that the prime mover of the organisation-the motive force working behind the facade of its evolving structure and all that four letter jargon is the ambition of the individuals to climb its tall ladder... ನಾನಿದೆಲ್ಲ ಯಾಕೆ ಹೇಳುತ್ತಿದ್ದೇನೆ ಎನ್ನುವದು ಗೊತ್ತಾಗುವದಿಲ್ಲ, ಅಲ್ಲವೇ?—you look so cynical and bored. ಆದರೆ ನೀವೂ ಈ ಮೇಲೇರುವ ದುಷ್ಟ ಪಂದ್ಯಾಟಕ್ಕೆ ಹೊರತಾದವರಲ್ಲ ಎಂಬುದನ್ನು ತೋರಿಸಿಕೊಟ್ಟಾಗ ನಿಮ್ಮ ಬೋರ್ಡಮ್ ಇದ್ದಕ್ಕಿದ್ದಂತೆ ಹಾರಿಹೋಗುತ್ತದೆ—ಕಾಳಜಿ ಮಾಡಬೇಡಿ. ಆದರೆ ಇಷ್ಟೇ, ನಿಮ್ಮ ಮಹತ್ವಾಕಾಂಕ್ಷೆಯನ್ನು ಸಾಧಿಸಲು ನೀವು ಆಯ್ದುಕೊಂಡ ಉಪಾಯಗಳು ಮಾತ್ರ ತೀರ ಭೋಳೇತನದವು—ಧಡ್ಡತನದವು, ಈಗ ನಡೆದದ್ದಕ್ಕೆಲ್ಲ ಮೂಲಕಾರಣ ಕೂಡ ಈ ಧಡ್ಡತನವೇ. ಮೇಲೇರುವ ಹೆಬ್ಬಯಕೆ ಇದ್ದರಷ್ಟೇ ಸಾಲದು, ಮಿಸ್ಟರ್ ನಾಗನಾಥ್. ಬಯಕೆಯ ಜೊತೆ ಯೋಗ್ಯತೆ ಇದ್ದರೂ ಸಾಲದು. ಏಣಿ ಹತ್ತುವ

ಚತುರೋಪಾಯಗಳೂ ಗೊತ್ತಿರಬೇಕು… and that requires a political mind which you don't have. Not that you are less ambitious but that… Please don't try to interrupt me… ನೇರವಾಗಿ ಮುದ್ದೆಗೇ ಬಂದುಬಿಡುತ್ತೇನೆ…ಇಷ್ಟು ದೊಡ್ಡ ಪೀಠಿಕೆ ಯಾಕೆ ಹಾಕಿದೆನೆಂದರೆ, ನೀವು ಮಾಡಿಯೇ ಇರದ ಗುನ್ಹೆಯಲ್ಲಿ ನಿಮ್ಮನ್ನು ಸಿಕ್ಕಿಸುವ ಬೇತು ನಮ್ಮದಲ್ಲವೇ ಅಲ್ಲ ಎಂಬ ಭರವಸೆ ಈಯುವುದರ ಜೊತೆಗೆ ಗುನ್ಹೆಯನ್ನು ನೋಡುವುದರಲ್ಲೇ ನಮ್ಮಿಬ್ಬರಲ್ಲಿರಬಹುದಾದ ದೃಷ್ಟಿಭೇದವನ್ನು ಸ್ಪಷ್ಟಪಡಿಸಲು. ಈಗ—ನಮ್ಮ ಲಕ್ಷ್ಯಕ್ಕೆ ಬಂದಿರುವ ಸಂಗತಿಗಳು ಹಾಗೂ ಅವುಗಳ ಆಧಾರದ ಮೇಲೆ ನಿಮ್ಮ ಒಟ್ಟೂ ವ್ಯಕ್ತಿತ್ವದ ಬಗ್ಗೆ ನಾವು ಕಟ್ಟಿದ ಚಿತ್ರವನ್ನು ಈಗ ನಿಮ್ಮ ಕಣ್ಣೆದುರಿಗೆ ಹಿಡಿದೆವೆಂದರೆ ನಿಮಗೆ ತಾನಾಗಿಯೇ ಗೊತ್ತಾಗಿಬಿಡುತ್ತೆದೆ: ನಾವು ಹೇಳಿದ ರಿಪೋರ್ಟಿನ ಮೇಲೆ ನೀವು ಸಹಿ ಮಾಡಿಯೇ ಮಾಡುತ್ತೀರಿ ಎನ್ನುವುದರಲ್ಲಿ ನಮಗಿಷ್ಟೊಂದು ವಿಶ್ವಾಸ ಯಾಕೆ ಎನ್ನುವದು. ನಮಗೆ ಭರವಸೆ ಇದ್ದದ್ದು ನೀವು ಸಹಿ ಮಾಡುವುದರಲ್ಲಷ್ಟೇ ಅಲ್ಲ ಮತ್ತೆ. ಸಹಿಯ ತಾರೀಖನ್ನು ಕೂಡ ನಾವು ಹೇಳಿದ ಹಾಗೆ ತೋರಿಸುತ್ತೀರಿ ಎನ್ನುವುದರಲ್ಲೂ. ಯಾಕಂದರೆ, ಆ ಚಿತ್ರ ನೋಡಿದ ಕೂಡಲೇ ನೀವಾಗಿಯೇ ಒಪ್ಪಿಕೊಂಡುಬಿಡುತ್ತೀರಿ: 'ಹೌದು, ನಡೆದದ್ದಕ್ಕೆಲ್ಲ ನಾನೇ ಜವಾಬ್ದಾರನೆಂದು.' ಆಗ—ಈ ಹೊಸ ಜಗತ್ತಿನಲ್ಲಿಯ ಸತ್ಯದ ಹೊಸ ವ್ಯಾಖ್ಯೆಯೇನೆಂಬುದೂ ಗೊತ್ತಾದೀತು: 'ವಿಸಂಗತಿ ಇಲ್ಲದ್ದು!' ನೀವು ಕಲ್ಪಿಸಿಕೊಂಡ ಹಾಗೆ ವಾಸ್ತವ ಸಂಗತಿಗಳ ಆಧಾರದ ಮೇಲೆ ಸತ್ಯ ತನ್ನನ್ನು ತಾನೇ ಸಿದ್ಧಪಡಿಸಿಕೊಳ್ಳುವದಿಲ್ಲ. ಸಿದ್ಧಪಡಿಸಿದ ಚಿತ್ರದ ಮುಖಾಂತರ ಪ್ರಕಟವಾಗುವ ಸತ್ಯ ತನ್ನನ್ನು ಕಟ್ಟಿದ ವಾಸ್ತವ ಸಂಗತಿಗಳಿಗೇ ಹೊಸ ಅರ್ಥ ತಂದು ಕೊಡುತ್ತದೆ. ಕೆಲಿಡೋಸ್ಕೋಪಿನ ನಳಿಗೆಯಲ್ಲಿ ಬಿಡಿಬಿಡಿಯಾಗಿ ಗಿಲಿಗಿಲಿಸುವ ಗಾಜಿನ ತುಂಡುಗಳಿಗೆ ಯಾವ ಅರ್ಥವಿದೆ? ಆದರೂ ನಳಿಗೆಗೆ ತಗಲಿದ ಆಕಸ್ಮಿಕ ಆಘಾತ ಹುಟ್ಟಿಸಿದ ಆಕೃತಿಗೆ ನೋಡುವ ಕಣ್ಣನ್ನು ಸೆರೆಹಿಡಿದು ನಿಲ್ಲಿಸುವ ಬಲ ಬಂದದ್ದು ಪ್ರತ್ಯೇಕವಾಗಿ ನಿರರ್ಥಕವಾದ ಮತ್ತು ನಿಷ್ಪಯೋಜಕವಾದ ಗಾಜಿನ ತುಂಡುಗಳೇ ಒಂದಕ್ಕೊಂದು ಹೊಂದಿಕೊಂಡಾಗ ಹುಟ್ಟುವ ಚಿತ್ರದ ಸುಸಂಗತಿಯ ಮೂಲಕ—ಅದರ ಅನನ್ಯ ಸಾಂಗತ್ಯದ ಮೂಲಕ. ನಳಿಗೆಯನ್ನು ಇನ್ನೊಮ್ಮೆ ಅಲುಗಾಡಿಸಿದಾಗ ಹುಟ್ಟುವದು ಇನ್ನೊಂದೇ ಆಕೃತಿ: ಹೊಚ್ಚ ಹೊಸ ದೃಷ್ಟಿ ಸಂಭ್ರಮ! ಅವೇ ಗಾಜಿನ

ತುಂಡುಗಳು: ಆದರೆ ಹೊಂದಿಕೊಂಡ ರೀತಿ ಬೇರೆ; ತೆರೆದುಕೊಂಡ ಕಾಣ್ಕೆ ಬೇರೆ. ಗಾಜಿನ ತುಂಡುಗಳಿಗೆ ವೈಯಕ್ತಿಕವಾಗಿ ಮಹತ್ವ ಇಲ್ಲ; ಹೊಂದಾಣಿಕೆಗಿದೆ. ಭೌತಿಕ ಪ್ರಪಂಚದ ಕೆಲಿಡೋಸ್ಕೋಪಿನೊಳಗಿನ ಆಕೃತಿ ವಿನ್ಯಾಸಕ್ಕೆ ಕಾರಣವಾಗುವ ಕೈಯ ಅಲುಗಾಟ, ಕೂಡಿಬರುವ ಹೊಂದಾಣಿಕೆ ಆಕಸ್ಮಿಕವಾದರೆ ನಾನು ಆಗಿನಿಂದಲೂ ನಿರ್ದೇಶಿಸಲು ಯತ್ನಿಸುತ್ತಿದ್ದ ಮಾನವ ಪ್ರಪಂಚದ ಕೆಲಿಡೋಸ್ಕೋಪಿನಲ್ಲಿ ಸತ್ಯದ ಆವಿಷ್ಕಾರಕ್ಕೆ ಕಾರಣವಾಗುವ ಚಾಲನೆ, ಅದು ಕೂಡಿ ತರುವ ಹೊಂದಾಣಿಕೆ— ಇವು ಉದ್ದೇಶಪೂರ್ವಕವಾದವುಗಳು. ಇತಿಹಾಸದಂತಹ ಇತಿಹಾಸ ಪ್ರಕಟಿಸುವ ಸತ್ಯವೇನು ಚಿರಾಯುವಾದದ್ದು ಎಂದು ತಿಳಿಯುವಿರಾ! ಅದೂ ಕೂಡ ನಡೆದುಹೋದ ಘಟನೆಗಳನ್ನು ಎತ್ತಿಕೊಳ್ಳುವ, ಎತ್ತಿತೋರಿಸುವ ಕೈಬಲವನ್ನೇ ಅವಲಂಬಿಸಿದ್ದಲ್ಲವೆ? ಹಾಡೇಹಗಲಲ್ಲಿ ಕೊಲೆಯಾದವನು ಹುಟ್ಟಿಯೇ ಇರಲಿಲ್ಲವೆಂದು ಸಿದ್ಧಮಾಡಿ ತೋರಿಸುವಷ್ಟರ ಮಟ್ಟಿಗಿನ ಸಾಮರ್ಥ್ಯವುಳ್ಳ ಕೈಯಲ್ಲಿ ಸತ್ಯ ಎಂಥ ಗಟ್ಟಿಗತನದ ಲೋಹವೆಂದಾಗ ಬೇಡವೆ? ರಾಜಕೀಯದ ಗುಟ್ಟೇ ಇಲ್ಲಿದೆ ಮಿಸ್ಟರ್ ನಾಗನಾಥ್. ನೀವು ನಿಮ್ಮದೇ ಆದ ಪ್ರಪಂಚದಲ್ಲಿ ನಿಂತು ಪ್ರೇರೇಪಿಸಿದ ಕೃತಿಗಳು ಬೇರೆಯೇ ಒಂದು ಜಗತ್ತಿನಲ್ಲಿಯ ಹಿತಾಸಕ್ತಿಗಳಿಗೆ ಧಕ್ಕೆ ತಂದವು; and in the process you set into action a whole set of counter forces. ಈಗ ನೀವು ಅರಿತೋ ಅರಿಯದೆಯೋ ಇದಿರುಹಾಕಿಕೊಂಡದ್ದು ತುಂಬ ಬಲಾಢ್ಯವಾದ ತಂಡವನ್ನು— ಬಲಪ್ರಯೋಗದಲ್ಲಿ ಅಸಾಮಾನ್ಯವಾದ ಅನುಭವವಿದ್ದವರನ್ನು. ಸ್ವಲ್ಪದರಲ್ಲಿ ಹೇಳುವುದಾದರೆ: ಇವರು ಸಿದ್ಧಮಾಡಿ ತೋರಿಸಲು ಹೊರಟದ್ದಿಷ್ಟು: ನೀವೇ ಆಗ ಎದೆ ತಟ್ಟಿ ಹೇಳಿದ ಹಾಗೆ ಕಾರಖಾನೆಯಲ್ಲಿಯ ಬೆಂಕಿ ಹತ್ತಿದ್ದಲ್ಲ—ಹಚ್ಚಿದ್ದು: ಅದನ್ನು ಹಚ್ಚಿದವರು ನೀವು...please take it easy...ಹಾಗೆ ಒಮ್ಮೆಲೇ ಉದ್ರೇಕಗೊಳ್ಳಬೇಡಿರಿ. ನಾವೇನು ನಿಮ್ಮ ಮೇಲೆ ಇಲ್ಲದ ಸಲ್ಲದ ಆರೋಪ ಹೊರಿಸಲು ಹೊರಟಿಲ್ಲ. ಪುರಾವೆ ಒದಗಿಸುತ್ತೇವೆ. ಬೆಳಿಗ್ಗೆ ಬಂದದ್ದೇ, ಪಾರ್ಸಿಗಳ ನ್ಯಾಯ-ಬುದ್ಧಿಯಲ್ಲಿ ನೀವಾಗಿಯೇ ಪ್ರಕಟಿಸಿದ ವಿಶ್ವಾಸವನ್ನು ಇಷ್ಟು ಬೇಗ ಕಳೆದುಕೊಳ್ಳಬೇಡಿ. ಮೊದಲು, ನಾನು ಈಗ ಹೇಳುವುದನ್ನು ಪೂರ್ತಿಯಾಗಿ ಕೇಳಿಕೊಳ್ಳಿ. ಆ ಮೇಲೆ ಬೇಕಾದರೆ ನೀವು ಇದೆಲ್ಲ ಹೌದು, ಅಲ್ಲ ಅನ್ನಿ... ನಾವು ಕೇಳಿಕೊಳ್ಳುತ್ತೇವೆ. ನಾವೇನು ನೀವೇ ಪೆಟ್ರೋಲ್ ಇಲ್ಲ ಕೆರೋಸೀನ್ ಸುರಿದು, ಕಡ್ಡಿ ಗೀರಿ, ಬೆಂಕಿ

ಹಚ್ಚಿದಿರಿ ಎನ್ನಲು ಹೊರಟವರಲ್ಲ, ಮಿಸ್ಟರ್ ನಾಗನಾಥ್. ಕಡ್ಡಿ ಗೀರಿ ಹುಟ್ಟಿದ ಬೆಂಕಿಯೇ ಅಲ್ಲವಿದು ಎನ್ನುವುದನ್ನು ನಾವೂ ಒಪ್ಪುತ್ತೇವೆ; ನೀವೇ ನಿಮ್ಮ ಗೆಳತಿಯ ಇದಿರು ಬಣ್ಣಿಸಿದ ಕೆಮಿಕಲ್‌ಫಾಯರ್... ರಾಸಾಯನಿಕ ಉಪಕ್ರಮಗಳಿಂದ ಹುಟ್ಟಿಸಿದ್ದು! ಸದ್ಯದ ಬೆಂಕಿಯೂ ಈ ಜಾತಿಯದಾಗಿತ್ತು; ನೀವೇ ನಿರ್ಮಿಸಿದ ಪೆರೊಕ್ಸಾಯ್ಡ್ ಕೆಟಲಿಸ್ಟ್ ದ ಹೊಸ ಫಾರ್ಮ್ಯುಲೇಶನ್ ಕಾರಣವಾಗಿತ್ತು ಎಂಬುದಕ್ಕೆ ಸಾಕಷ್ಟು ಪುರಾದೆಗಳು ನಮ್ಮ ಹತ್ತಿರವೇ ಇವೆ: ನಿಮ್ಮ ಗೆಳತಿ ಒದಗಿಸಿದ ಮಾಹಿತಿಯೊಂದೇ ಆಧಾರವಲ್ಲ ಮತ್ತೆ. ಈಗ ನಮ್ಮಲ್ಲಿ ಉತ್ಪಾದನೆಯಲ್ಲಿದ್ದ ಕೆಟಲಿಸ್ಟಿಗಿಂತ ಹೆಚ್ಚು ಚುರುಕಾದ ಕೆಟೆಲಿಸ್ಟುಗಳಿಗೆ ಗ್ರಾಹಕರಿಂದ ಬೇಡಿಕೆ ವ್ಯಕ್ತವಾದದ್ದು, ಅದಕ್ಕೆ ಉತ್ತರರೂಪವಾಗಿ ನಾವು ಇಂಥ ಕೆಟೆಲಿಸ್ಟುಗಳ ನಿರ್ಮಾಣದ ಕೆಲಸ ನಿಮಗೆ ವಹಿಸಿಕೊಟ್ಟದ್ದು ಇಲ್ಲಿಯ ಎಲ್ಲರಿಗೂ ಗೊತ್ತಿದ್ದ ಸಂಗತಿಯೇ. ಇಂಥ ನಿರ್ಮಾಣಕಾರ್ಯದಲ್ಲಿ ತೊಡಗಿರುವಾಗಲೇ ಕೆಮಿಕಲ್-ಫಾಯರಿನ ಘಾತುಕ ಕಲ್ಪನೆ ನಿಮಗೆ ಹೊಳೆದಿರಬೇಕೆಂದು ನಮ್ಮ ಅಂದಾಜು. ನಮ್ಮ ಪ್ರಕಾರ ಈ ಕಲ್ಪನೆಯ ಅಂತಃಪ್ರೇರಣೆ ಬೆಂಕಿಯ ಬಗ್ಗೆ ನಿಮಗಿದ್ದ ಅತಿರೇಕದ ಭಯ. ನೀವು ನಿಮ್ಮ ಗೆಳತಿಯ ಇದಿರು–'just to teach these blokes what chemical fires are like, I feel like changing the formulation and create one' —ನಿಮಗೆ ವ್ಯಕ್ತಪಡಿಸಿದ ಸಿಟ್ಟಿಗೆ ಕಾರಣವಾದದ್ದು ಕೂಡ ಕಾರ್ಮಿಕರ ಬಗ್ಗೆ ನಿಮಗಿದ್ದಿರಬಹುದಾದ ಆತಂಕವಲ್ಲ— your neurotic fear of fire which in recent months had grown to become an obsession and once that happens the forces in the unconscious take charge of your thoughts and actions ...ನೀವು ಬೆಂಕಿಗೆ ಇಷ್ಟೊಂದು ಹೆದರುವುದರ ಕಾರಣ ನಮಗೆ ಗೊತ್ತಿದೆ ಮಿಸ್ಟರ್ ನಾಗನಾಥ್— you have our full sympathies. ನಿಮ್ಮ ಬಗ್ಗೆ ಕಲೆಹಾಕಿದ ಮಾಹಿತಿಯ ಆಧಾರದ ಮೇಲೆ, ಇದು ನೋಡಿ, ಒಂದು ಸಣ್ಣ ಟಿಪ್ಪಣಿ ನಾವು ಸಿದ್ಧಗೊಳಿಸಿದ್ದೇವೆ— ಆಮೇಲೆ ಓದಿ ನೋಡುವಿರಂತೆ, ನಿಮ್ಮ ಬದನಾಮಿ ಮಾಡುವ ಉದ್ದೇಶವಿಲ್ಲದ್ದರಿಂದ ಅದರಲ್ಲಿ ನಿಮ್ಮ ಹೆಸರನ್ನು ತೋರಿಸಿಲ್ಲ. ತಪ್ಪಿ ಬಂದಲ್ಲೆಲ್ಲ ನಾವೇ ಕಾಟು ಹಾಕಿದ್ದೇವೆ... There is enough material in it to support the portrait we have drawn of your psychological make-

up... ನಿಮ್ಮ ತಂದೆ-ತಾಯಿಗಳು, ನಿಮ್ಮ ಬಾಲ್ಯ, ಆಗ ಬೆಂಕಿಯ ಅಪಘಾತದಲ್ಲಿ ನೀವು ಸುಟ್ಟುಕೊಂಡದ್ದು, ಕಲಿಯುವ ದಿನಗಳಲ್ಲಿ ನೀವು ಪಟ್ಟ ಕಷ್ಟ. ಅನುಭವಿಸಿದ ಅಪಮಾನಗಳು, ತೀರ ಎಳೆವಯಸ್ಸಿನಲ್ಲೇ ಗೋವಾ-ಸರ್ಕಾರದಿಂದ ಜೈಲು ಕಂಡ ನಿಮ್ಮ ಅಣ್ಣ... ಹಾಗೆ ಕಣ್ಣರಳಿಸಿ ನೀವು ನೋಡಬೇಡಿ... ಆಶ್ಚರ್ಯವಾಗುತ್ತದೆಯಲ್ಲವೇ?... ನಿಮ್ಮ ಬಾಲ್ಯದ ಬಗ್ಗೆ ನಿಮಗೇ ಸರಿಯಾದ ಕಲ್ಪನೆಯಿಲ್ಲ ಎನ್ನುವದೂ ನಮಗೆ ಗೊತ್ತಿದೆ... and he who is ignorant of his past is confused in his thoughts and actions because his ignorance is a mask for a hidden fear... ಹೀಗಾದಾಗ ನಮ್ಮನ್ನು ಹೆದರಿಸುವದು ಯಾರಿಗೂ ಸುಲಭವಾಗುತ್ತದೆ...ಯಾರು ಯಾರು ನಿಮ್ಮ ಬಗ್ಗೆ ಮಾಹಿತಿ ಒದಗಿಸುವುದರಲ್ಲಿ ಒಂದೆಡೆ ಬಂದಿದ್ದಾರೆ ಎಂದು ತಿಳಿದರೆ ಆಶ್ಚರ್ಯದ ಧಕ್ಕೆ ತಗಲೀತು. ಇವರೆಲ್ಲ ನಿಮ್ಮ ಬಗ್ಗೆ ದ್ವೇಷವಿದ್ದವರೆಂದು ತಿಳಿಯಬೇಡಿ. ಹೇಳಿದೆನಲ್ಲ: ವೈಯಕ್ತಿಕವಾಗಿ ಇವರೆಲ್ಲ ನಮ್ಮ ಕೆಲಿಡೋಸ್ಕೋಪಿನೊಳಗಿನ ಗಾಜಿನ ತುಂಡುಗಳು — ತಮ್ಮಷ್ಟಕ್ಕೇ ಯಾವ ಮಹತ್ವವೂ ಇಲ್ಲದವರು — ನಿಮ್ಮ ಗೆಳೆಯ ಶ್ರೀನಿವಾಸರಾವನನ್ನು ಒಳಗೊಂಡು. ಏತಕ್ಕೂ ಹೇಸದ ಮಹಾಘಟಿಂಗನೀತ—ಶ್ರೀನಿವಾಸರಾವ್! ಅವನು ಒದಗಿಸಿದ ಮಾಹಿತಿಯಲ್ಲಿ ಬಹಳಷ್ಟು ಖೋಟಾ ಎಂದು ನಾವೂ ಬಲ್ಲೆವು. ಆದರೂ ಅದನ್ನು ಬೇಕಾದಲ್ಲಿ ಬೇಕಾದಷ್ಟೇ ಉಪಯೋಗಿಸಿಕೊಂಡಿಸಿದ್ದೇವೆ... ನಿಮ್ಮ ಫ್ಯಾಮ್ಯುರ್ಲೇಶನ್‌ದ ಮೂಲ ಕಲ್ಪನೆಯ ಅಂತಃಪ್ರೇರಣೆ ಏನೇ ಇರಲಿ, ಅದು ಕೊನೆಗೊಮ್ಮೆ ಸಿದ್ಧವಾದ ಮೇಲೆ ನೀವು ಮುಂಬಯಿಗೆ ಹೋದ ನಂತರವೇ—ಹೋದ ಕೆಲವೇ ವಾರಗಳಲ್ಲೇ—ಉತ್ಪಾದನೆಗೆ ಹೋದದ್ದು ಆಕಸ್ಮಿಕವಾದದ್ದಲ್ಲ— ಹೇತುಪೂರ್ವಕವಾದದ್ದು, ಪೂರ್ವಯೋಜಿತವಾದದ್ದು. ನಿಮ್ಮ ಕೃತ್ಯಕ್ಕೆ ಕಾಯದೆಯ ಸ್ವರೂಪ ಬರುವದು ಇಲ್ಲಿಯೇ. ಹಾಗೆ ಹೆದರಬೇಡಿ ಮಿಸ್ಟರ್ ನಾಗನಾಥ್. ಇದನ್ನು ಪೋಲಿಸ್ ಕೇಸು ಮಾಡುವ ಮನಸ್ಸು ನಮಗೇನೂ ಇಲ್ಲ. ಕಾಯದೆ, ಪೋಲೀಸು ಎಂದ ಕೂಡಲೇ ನೀವು ಇಷ್ಟೊಂದು ಯಾಕೆ ನಡುಗುತ್ತೀರಿ ಎನ್ನುವುದರ ಕಾರಣ ನಿಮಗಿಂತ ಹೆಚ್ಚಾಗಿ ನನಗೆ ಗೊತ್ತಿದೆ. ಆ ಟಿಪ್ಪಣೆಯಲ್ಲಿಯ ನಿಮ್ಮ ಅಣ್ಣನ ಬಗೆಗಿನ ವಿಶ್ಲೇಷಣೆ ನೋಡಿ, ನನ್ನ ಮಾತಿನ ಅರ್ಥವಾದೀತು...ಕಾಯದೆಯ ಉಲ್ಲೇಖ ಯಾಕೆ ಮಾಡಿದೆನೆಂದರೆ 'ಕ್ರಿಮಿನಲ್ ಲಾ'ದ ದೃಷ್ಟಿಯಲ್ಲಿ ಕೃತಿಯ ಹಿಂದಿನ ಪ್ರೇರಣೆಗೆ ಮಹತ್ವವಿಲ್ಲ; ಅದರ

ಹೇತುವಿಗಿದೆ. Its prime concern is the intention of the act and not its motive. ಸರ್ವಸಾಧಾರಣವಾಗಿ ಹೊಸ ಫಾರ್ಮ್ಯುಲೇಶನ್ ಒಂದು ಸಿದ್ಧವಾದಾಗ ಅದರ ಉತ್ಪಾದನೆ ಹಾಗೂ ಉಪಯೋಗ ಎರಡೂ ಎಲ್ಲ ರೀತಿಯಿಂದಲೂ ನಿರಪಾಯಕಾರಿಯಾದವುಗಳು ಎಂಬುದನ್ನು ನಿರ್ಧರಿಸಿದ ಮೇಲೆ ಅದನ್ನು ಉತ್ಪಾದನಾ ವಿಭಾಗಕ್ಕೆ ಕಳಿಸುವುದಿರುತ್ತದೆ. ಆದರೆ ಇಂತಹ ಮುನ್ನೆಚ್ಚರದ ಸೂಚನೆ ಕೊಡುವ ಯಾವ ಒಂದು ಪ್ರಯೋಗದ ದಾಖಲೆಯೂ ನಿಮ್ಮ ಲ್ಯಾಬೊರೇಟರಿಯ ಲಾಗ್-ಬುಕ್‌ನಲ್ಲಿ ನೋಡಲು ಸಿಗುವದಿಲ್ಲ. ಇಷ್ಟಾಗಿಯೂ ಈ ಫಾರ್ಮ್ಯುಲೇಶನ್ ಉತ್ಪಾದನೆಗೆ ಯೋಗ್ಯವಾಗಿದೆ ಎಂದು ಶಿಫಾರಸ್ಸು ಮಾಡುವ ಷರಾ ನಿಮ್ಮ ನೋಟ್‌ಬುಕ್ಕಿನಲ್ಲಿ ಓದಲು...please don't protest so vehemently that it is not true; you know my definition of truth...ನನ್ನ ಮಾತನ್ನು ದಯಮಾಡಿ ಪೂರ್ತಿಯಾಗಿ ಕೇಳಿಕೊಳ್ಳಿ... ಇದು ನಿರಪಾಯಕಾರಿಯಾದದ್ದೆಂದು ಪ್ರಯೋಗ ಮಾಡದೇನೇ ನಿರ್ಧರಿಸುವದು ನಿಮ್ಮಂತಹ ಬುದ್ಧಿವಂತ ನಿಷ್ಣಾತ ತಜ್ಞರಿಗೇನು ಕಠಿಣವಲ್ಲ ಬಿಡಿ. ಮೇಲ್ನೋರಿಕೆಗೆ ಈ ಷರಾದ ಅರ್ಥ ಹೀಗಾಗ ಬಹುದಾದರೂ ನಮ್ಮ ಪ್ರಕಾರ ಇದು ಮೇಲೆ ತೋರುವಷ್ಟು ನಿಷ್ಪಾಪವಾದ ಕೃತಿಯಲ್ಲ: ಪೂರ್ವಯೋಜಿತ ಮಸಲತ್ತಿನದೇ ಅಂಗವಾಗಿತ್ತೆಂಬುದು ನಮ್ಮ ಅನ್ನಿಸಿಕೆ. ನಿಮ್ಮ ಕರ್‍ರಿಯರಿನಲ್ಲಿ ಹೇಳದೇ ಕೇಳದೇ ಎನ್ನುವಂತೆ ಬಂದೆರಗಿದ ಒಂದು ಬಿಕ್ಕಟ್ಟಿಗೆ ನೀವು ಕಂಡುಕೊಂಡ ಪರಿಹಾರ: ಈ ಬಿಕ್ಕಟ್ಟಿಗೆ — ನಿಮ್ಮ ಕಲ್ಪನೆಯ ಪ್ರಕಾರ — ಕಾರಣನಾದ ಜಲಾಲನನ್ನು ಈ ಹೊಲಸು ಕೆಲಸದಲ್ಲಿ ಸಿಕ್ಕಿಸುವದು ಹಾಗೂ ನಿಮಗೆ ಮೊದಲಿನಿಂದಲೂ ಆಗದ ಫಿರೋಜನ ಮೇಲೆ ಸೇಡು ತೀರಿಸಿಕೊಳ್ಳುವದು—ನಿಮ್ಮ ಬೇತಿನ ಒಳ ಮರ್ಮ. ವಿಸ್ಮಯದ ಸಂಗತಿಯೆಂದರೆ—ಅತ್ಯಂತ ಘಾತುಕವಾದ ರೀತಿಯಲ್ಲೇ ಆಗಲೊಲ್ಲದೇಕೆ—ನಿಮ್ಮ ಬೇತು ತನ್ನ ಮೂಲ ಉದ್ದೇಶದಲ್ಲಿ ನಿರೀಕ್ಷೆಗೆ ಮೀರಿ ಸಫಲವಾದದ್ದು: ಜಲಾಲ ನಿಮ್ಮ ಸ್ಥಾನಕ್ಕೆ ಬರಲು ಎಳ್ಳಷ್ಟೂ ಯೋಗ್ಯನಲ್ಲ ಎಂದು ತೋರಿಸಿಕೊಡುವುದರಲ್ಲಿ ನೀವು ಗೆದ್ದದ್ದು... Please don't shout... ನಾವೀಗ ಇದ್ದದ್ದು ತಾಜಮಹಲಿನಂತಹ ಹೊಟೆಲಿನಲ್ಲಿ ಎನ್ನುವುದನ್ನು ಮರೆಯಬೇಡಿ... ಏಕಾಏಕಿ ನಿಮಗೆ ಮುಂಬಯಿಗೆ ವರ್ಗವಾದದ್ದಕ್ಕೆ, ನೀವು ಅಮೆರಿಕೆಗೆ ಹೋಗುವ ಯೋಜನೆ ಅನಿರ್ದಿಷ್ಟ ಕಾಲ ಮುಂದೆ ಬಿದ್ದದ್ದಕ್ಕೆಲ್ಲ ಜಲಾಲನೇ ಕಾರಣನೆಂದೂ

ನಿಮ್ಮನ್ನು ಕೆಳಕ್ಕೆ ನೂಕಿ ಜಲಾಲನನ್ನು ಮೇಲಕ್ಕೆ ದೂಡುವದು ಫಿರೋಜನ ಹುನ್ನಾರೆಂದೂ ನಿಮಗೆ ಗುಮಾನಿ ಇದ್ದದ್ದು ನಮಗೆ ಗೊತ್ತಿದೆ. ನೀವು ಮುಂಬಯಿಗೆ ವರ್ಗವಾಗಿ ಹೋದ ಮೇಲೇ ನಿಮ್ಮ ಸ್ಥಾನದಲ್ಲಿ ಬಂದ ಜಲಾಲನ ಕೈಯಿಂದ ಈ ಹೊಸ ಫಾರ್ಮ್ಯುಲೇಶನ್ ಉತ್ಪಾದನೆಗೆ ಹೋಗಬೇಕು ಎನ್ನುವದು... Please have patience... ನಮ್ಮ ಕೆಲಿಡೋಸ್ಕೋಪಿನಲ್ಲಿ ನಾವು ಕಂಡುಕೊಂಡ ಚಿತ್ರ—ನಿಮ್ಮ ಪರಿಭಾಷೆಯಲ್ಲಿ ಸತ್ಯ—ಏನೆಂಬುದನ್ನು ಮೊದಲು ತಿಳಿದುಕೊಳ್ಳಿರಿ. ಆಮೇಲೆ ನಿಮಗೆ ಮಾತನಾಡಲು ಅವಕಾಶ ಸಿಕ್ಕೇಸಿಗುತ್ತದೆ... ಆದದ್ದೊ ಹಾಗೆಯೇ: ಜಲಾಲನೇ ಈ ಫಾರ್ಮುಲೇಶನ್ ಉತ್ಪಾದನೆಗೆ ಕಳಿಸಿದ್ದು ಈಗ ನಮಗೆ ತಿಳಿದುಬಂದಿದೆ. He was in dirty haste to claim credit for a new formulation which he did not develop and he paid the price... ಜಲಾಲ, ಈ ತನ್ನ ದುಡುಕಿನ ಕೃತಿಯಿಂದ ಇಂಥ ದೊಡ್ಡ ಜವಾಬ್ದಾರಿಯ ಹುದ್ದೆಗೆ ಯೋಗ್ಯನಲ್ಲ ಎಂಬುದನ್ನೇ ಸಿದ್ಧಮಾಡಿದ ಎಂದು ಫಿರೋಜನೂ ಈಗ ಒಪ್ಪುತ್ತಾನೆಂದರೆ ನಿಮಗೆ ಸಮಾಧಾನವಾದೀತೇನೋ... ತನಗೆ ಸಂಪೂರ್ಣ ಪರಿಚಯವಿಲ್ಲದ ಒಂದು ಹೊಸ ಉತ್ಪಾದನಾ-ಸೂತ್ರವನ್ನು ಆಚರಣೆಗೆ ತರುವ ಮೊದಲು ನೀವು ಮಾಡದೇ ಬಿಟ್ಟಪ್ರಯೋಗಗಳನ್ನು ಮಾಡುವ ಅವಶ್ಯಕತೆ ತೋರದಿರುವಾಗಲೂ ಕನಿಷ್ಠ ಪೂರ್ತಿ ಪ್ರಮಾಣದ ಉತ್ಪಾದನೆಗೆ ಕಳಿಸದೇ pilot-scale-production ಮುಖಾಂತರ ಅದನ್ನು ಅವನು ಪರೀಕ್ಷಿಸಬೇಕಾಗಿತ್ತು ಎನ್ನುವದೂ ಫಿರೋಜನ ಅಭಿಪ್ರಾಯ—that is the normal practice too, I understand. But poor Jalal relied completely upon the genius of an experienced and a senior colleague... ನಿಮ್ಮ ಎಣಿಕೆಯೂ ಅದೇ ಆಗಿತ್ತು, ಮಿಸ್ಟರ್ ನಾಗನಾಥ್. ಬಹಳ ಜಾಣತನದ ಲೆಕ್ಕಾಚಾರವಿದು. ಅಲ್ಲ ಎನ್ನುತ್ತೀರಾ? ಮುಂಬಯಿಗೆ ಹೋದ ಮೇಲೆ ನಿಮ್ಮ ಹುದ್ದೆಯ ಅಂತಸ್ತಿಗೆ ಶೋಭಿಸುವ ಮನೆ ಹುಡುಕುವ ಪ್ರಯತ್ನವನ್ನೇ ಮಾಡದೇ ಖೇತವಾಡಿಯ ಹಳೇ ಕೋಣೆಗಳಲ್ಲೇ ಇರಲು ಯೋಚಿಸದ್ದು ನಿಮ್ಮ ಧೂರ್ತ ಲೆಕ್ಕಾಚಾರದ ಭಾಗವಾಗಿತ್ತೆನ್ನುವುದನ್ನೂ ಅಲ್ಲಗಳೆಯುತ್ತೀರಾ? 'ಆರ್ ಎಂಡ್ ಡೀ ಕೆಲಸಕ್ಕೆ ನನ್ನನ್ನು ವಾಪಸು ಕರೆಯದಿರುವದು ಶಕ್ಯವೇ ಇಲ್ಲವೆಂದ ಮೇಲೆ ಮುಂಬಯಿಯ ಮೊಕ್ಕಾಮು ಬಹಳ ದಿನ ಸಾಗುವಂತಹದಲ್ಲ,' ಎಂಬುದೇ ನಿಮ್ಮ ಅಹಂಕಾರದ

ಭಾವನೆಯಾಗಿತ್ತು. ಇಷ್ಟರೊಳಗೇ ಧೈರ್ಯ ಬಿಟ್ಟು ಕೊಡಬೇಡಿ ಮಿಸ್ಟರ್ ನಾಗನಾಥ್. ನಾನು ಈವರೆಗೆ ಆಡಿದ್ದು ಸತ್ಯವಲ್ಲ ಎಂದು ತೋರಿಸುವ ಒಂದೇ ಒಂದು ಬಗೆಯೆಂದರೆ ಅದರೊಳಗಿನ ಬಿರುಕುಗಳನ್ನು ತೋರಿಸಿಕೊಡುವದು. ಆ ಅವಕಾಶ ನಿಮಗೆ ಸಿಕ್ಕೇ ಸಿಗುತ್ತದೆ. ಸದ್ಯ ಇನ್ನೊಂದು ಪ್ರಶ್ನೆ ಕೇಳುತ್ತೇನೆ: ನಾವು ರಜೆ ಪಡೆಯಿರಿ ಎಂದದ್ದೇ, ರಜೆ ಪಡೆದು ಮನೆಯಲ್ಲಿ ಕೂತದ್ದು; ಹೈದ್ರಾಬಾದಿಗೆ ಹೋಗಿ ಎಂದದ್ದೇ, ಹೋದದ್ದು; ಬನ್ನಿ ಎಂದದ್ದೇ ಬಂದದ್ದು—ಇದಕ್ಕೆಲ್ಲ ಏನೂ ಅರ್ಥವಿಲ್ಲ ಎಂದು ತಿಳಿಯಬೇಕೆ? Do you really want us to believe that this could be the behaviour of an innocent person? ಇಷ್ಟಾಗಿಯೂ—ನೀವು ಬೋರ್ಡ್ ಸದಸ್ಯರಿಗೆ ಮೂಕರ್ಜಿಯ ಪ್ರತಿಗಳನ್ನು ತಿಳಿಸುವ ಧಡ್ಡತನ ಮಾಡದೇ ಇದ್ದಿದ್ದರೆ—ಇಷ್ಟರ ಒಳಗೇ ನೀವು ನಿಮ್ಮ ಮೊದಲಿನ ಸ್ಥಾನದ ಮೇಲೆ ಹೈದ್ರಾಬಾದಿನಲ್ಲಿರುತ್ತಿದ್ದಿರಿ ಎಂದು ಹೇಳಿದರೆ ನಂಬುತ್ತೀರೋ ಇಲ್ಲವೋ. ಆ ಮೂಕರ್ಜಿಯ ಹಿಂದಿನ ಮೆದಳು ನಿಮ್ಮದೇ ಎಂಬುದರಲ್ಲಿ ನಮಗೆ ಎಳ್ಳಷ್ಟೂ ಸಂಶಯವಿಲ್ಲ. ಯಾಕಂದರೆ ಅದರೊಳಗಿದ್ದ ಮಾಹಿತಿಯ ಕೆಲವು ವಿವರಗಳು ನಿಮ್ಮನ್ನು ಬಿಟ್ಟು ಇನ್ನಾರಿಗೂ ಗೊತ್ತಿರುವದು ಶಕ್ಯವೇ ಇಲ್ಲ. ಫ್ಯಾಕ್ಟರಿಯ ಕೆಲವರ ಕೈಗೆ ಮಾಹಿತಿ ಸಿಕ್ಕದ್ದು ಮುಂಬಯಿಯಿಂದ ಬಂದ ಟಪಾಲಿನ ಮೂಲಕವೆ ಎನ್ನುವುದಕ್ಕೆ ಪುರಾವೆ ಇದು. ಅದನ್ನು ಒದಗಿಸಿದವರು ನೀವು ಎನ್ನುವದು ಇವರಾರಿಗೂ ಗೊತ್ತಿರಲಿಕ್ಕಿಲ್ಲ, ಆ ಮಾತು ಬೇರೆ. ನಿಮ್ಮನ್ನು ಹೈದ್ರಾಬಾದ್ ವಿಮಾನ—ನಿಲ್ದಾಣದಲ್ಲಿ ಭೇಟಿಯಾಗಿ—ಆಶ್ಚರ್ಯಪಡುವುದರಲ್ಲಿ ಕೂಡ ಹಾಗೆ ಉತಾವಳಿ ಮಾಡಬೇಡಿ — ನೀವು ನಿಜಕ್ಕೂ ಬೆರಗುಗೊಳ್ಳಬೇಕಾದ ಕ್ಷಣ—ಈ ಭೇಟಿಯ ಮಾಹಿತಿ ನಮಗೆ ಹೇಗೆ ಸಿಕ್ಕಿತು ಎಂದ ಗೊತ್ತಾಗುವ ಕ್ಷಣ—ಇನ್ನೂ ಮುಂದಿದೆ! ನಿಮ್ಮನ್ನು ಭೇಟಿಯಾದವನು ಯಾರು ಎನ್ನುವದು ನಮಗೆ ಖಚಿತವಾಗಿ ಗೊತ್ತಿಲ್ಲ. ಅದೇ ರೆಸ್ಟೋರೆಂಟಿನಲ್ಲಿ ಕೂತು ಚಹ ಕುಡಿಯುತ್ತಿದ್ದ ನಮ್ಮ ಮಾಹಿತಿದಾರರಿಗೆ ಅವನ ಪರಿಚಯವಿಲ್ಲ. ಆದರೂ ಊಹಿಸಬಲ್ಲೆವು: ನಮ್ಮ ಬಳಿ ಇದ್ದ ಅವನ ಫೋಟೋ ಆಮೇಲೆ ನೋಡುವಿರಂತೆ. ಆದರೆ ಈ ಅಪರಿಚಿತನ ನಮ್ಮ ಕೈಗೆ ಕೊಟ್ಟ ಪತ್ರ ಆ ಮೂಕರ್ಜಿಯ ಪ್ರತಿಯಾಗಿತ್ತು ಎನ್ನುವದು ನಮಗೀಗ ತಿಳಿದಿದೆ. ಇದು ನೋಡಿ ನಾನು ಹೇಳುತ್ತಿದ್ದುದಕ್ಕೆ ಸಿಕ್ಕ ಪುರಾವೆ."

ಪ್ರಚಂಡವಾದ ವಿಜಯ ಗಳಿಸಿದ್ದೇನೆ ಎನ್ನುವಂತಹ ಗರ್ವದ ಭಾವನೆಯಿಂದ ಉಬ್ಬುತ್ತ ದಸ್ತೂರ್ ಫೈಲಿನೊಳಗಿಂದ ಒಂದು ಉದ್ದನ್ನ ಲಕ್ಕೋಟೆಯನ್ನು ಹೊರತೆಗೆದು ತುಂಬ ಜಾಗ್ರತೆಯಿಂದ ಅದರ ಬಾಯಿ ತೆರೆದು ಒಳಗಿದ್ದದ್ದು ಮುತ್ತು-ರತುನಗಳೋ ಎಂಬ ಬಿಂಕವನ್ನು ಪ್ರಕಟಿಸುತ್ತ ಮುಂದಿನ ಟೀಪಾಯಿಯ ಮೇಲೆ ಅದನ್ನು ಖಾಲಿ ಮಾಡಿದ್ದೇ ತಡ, ಆಗಲೇ ಬೆವರಿನ ಮುದ್ದೆಯಾದ ನಾಗಪ್ಪನ ಬಾಯಿಂದ—'ಓ ನೋ'...ಎಂಬ ಉದ್ಗಾರ ಸಭ್ಯತೆಯ ಸಂಯಮವನ್ನೂ ಗಾಳಿಗೆ ತೂರಿ ಹೊರಗೆ ಬಂದಿತು. ಇಂದ್ರಜಾಲದ ಅಪರೂಪ ಚಮತ್ಕಾರವನ್ನು ನೋಡುವವರ ಹಾಗೆ ನಾಗಪ್ಪನ ಜೊತೆಗೆ ಫಿರೋಜ್, ಪಟೇಲರು ಕೂಡ ಕಣ್ಣುಬಿಟ್ಟು ಟೀಪಾಯಿಯ ಮೇಲೆ ಹರಡಿ ಬಿದ್ದ ಕಾಗದದ ಚೂರುಗಳನ್ನು ನೋಡಹತ್ತಿದರು: ಹೈದ್ರಾಬಾದ್ ಏರ್-ಪೋರ್ಟಿನಲ್ಲಿ ರೆಡ್ಡಿ ಕೊಟ್ಟ—ಓದುವ ಮೊದಲೇ ಲಕ್ಕೋಟೆಯ ಸಮೇತ ಹರಿದೊಗೆದು ವಿಮಾನದ ಸೀಟಿನ ಕಿಸೆಯಲ್ಲಿ ತೂರಿದ—ಪತ್ರದ, ನೀಲಿಬಣ್ಣದ ಲಕ್ಕೋಟೆಯ ಚೂರುಗಳು...! "ಓ ಥ್ರೀಟೀ | ಹೀಗೇಕೆ ಮಾಡಿದೆ?" ನಾಗಪ್ಪನ ಬಾಯಿಂದ ಉದ್ಗಾರ ಹೊರಟಿತು.

"ಅವಳಿದನ್ನು ಮಾಡಿದ್ದು just out of curiosity—ಆದರೆ ಇದು ನಮ್ಮ ಕಣ್ಣಮುಂದಿನ ಚಿತ್ರದಲ್ಲಿ ಹೇಗೆ ಹೊಂದಿಕೊಳ್ಳುತ್ತದೆ ನೋಡಿ: ಪತ್ರೆದಲ್ಲಿಯ ಮಜಕೂರಿನ ಪ್ರತಿ ವಿವರವೂ ನಿಮಗೆ ಗೊತ್ತಿದೆ ಎನ್ನುವುದರ ಕಲ್ಪನೆ ಆ ಪತ್ರವನ್ನು ನಿಮಗೆ ಕೊಟ್ಟವನಿಗಿಲ್ಲ. ನಿಮಗಿತ್ತು. ಅಂತೆಯೇ ಓದುವ ಮೊದಲೇ..."

ಮುಂದಿನ ಮಾತುಗಳನ್ನು ಕೇಳುವ ಸ್ಥಿತಿಯಲ್ಲೇ ಇರಲಿಲ್ಲ, ನಾಗಪ್ಪ. ಥ್ರೀಟೀ ಮೂಡಿದ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತಿದ್ದ ಭಯವಾಗಿ ಕೂತಲ್ಲಿಂದ ಭಡಕ್ಕನೆ ಎದ್ದು ಕ್ಲೋಕ್-ರೂಮಿನ ಕಡೆಗೆ ಧಾವಿಸಿದ. ರೂಮು ಸೇರಿ ಕದ ಹಾಕಿಕೊಂಡ; ವಾಶ್-ಬೇಸಿನ್ ಇದಿರು ನಿಂತು ಗಂಟಲಲ್ಲಿ ಕೈಹಾಕಿ ಬಕ ಬಕ ಕಾರಿಕೊಂಡ!

## ಅಧ್ಯಾಯ ಒಂದು

ತಾಜಮಹಲ್ ಹೊಟೆಲ್ಲಿನಿಂದ ಹೊರಬಿದ್ದ ನಾಗಪ್ಪನಿಗೆ ಮೈಮೇಲೆ ಮುಳ್ಳು ನಿಲ್ಲಿಸುವಂತಹ ಒಂದು ವಿಲಕ್ಷಣ ಅನ್ನಿಸಿಕೆ: ಹೊಟೆಲ್ ಇದಿರಿನ ರಸ್ತೆ ದಾಟಿ ಸಮುದ್ರದ ದಂಡೆಗುಂಟ ಹರಿದ ಫೂಟ್‌ಪಾಥಿನ ಮೇಲೆ ನಡೆಯ ಹತ್ತಿದವನು ತಾನು ಅಲ್ಲವೇ ಅಲ್ಲ; ತನ್ನ ದೇಹವನ್ನೇ ಕಂಬಳೀ ಕೊಪ್ಪೆಯ ಹಾಗೆ ಹಾಕಿಕೊಂಡು ಗೊತ್ತು ಗುರಿಯಿಲ್ಲದೇ ನಡೆಯ ಹತ್ತಿದ ಯಾರೋ ಬೇರೆಯವನೇ ಇರಬೇಕು! ಕೆಲ ಹೊತ್ತಿನ ಮೇಲಂತೂ ಹಾಗೆ ನಡೆಯ ಹತ್ತಿದವನು ಮನುಷ್ಯನೇ ಅಲ್ಲ ಎನ್ನುವಂತಹ ಭಾವನೆ! ಕಂಪನಿಯ ಕೆಲಸಕ್ಕೆ ರಾಜೀನಾಮೆಯನ್ನು ಕೊಡುವುದನ್ನು ಅವನು ಎಂದೋ ನಿರ್ಧರಿಸಿದ್ದ. ಆದರೆ ಮನುಷ್ಯನಾಗಿ, ಗಂಡಸಾಗಿ. ಇಲ್ಲದ ಲಫಡಾದಲ್ಲಿ ತನ್ನನ್ನು ಸಿಲುಕಿಸಲು ನಡೆಸಿದ ಪಿತೂರಿಯನ್ನು ಬಯಲಿಗೆ ಎಳೆದ ನಂತರವೇ. ತನ್ನ ಹೆಸರಿಗೆ ಹತ್ತಿರಬಹುದಾದ ಕಲಂಕವನ್ನು ಅಳಿಸಿದ ನಂತರವೇ. ಈಗ ರಾಜೀನಾಮೆಯನ್ನೇನೋ ಕೊಟ್ಟಿದ್ದ. ನೀರಿದ್ದ ಗಂಡಸಿನ ಹಾಗೆಂದು ಮಾತ್ರ ಅನ್ನಿಸಲಿಲ್ಲ. ಮನುಷ್ಯ ನ ಹಾಗೆಂದೂ ಅನ್ನಿಸಲಿಲ್ಲ. ಕೋಳೀ ಗಿರಿಯಣ್ಣನ ಅಂಗಳದಲ್ಲಿಯ ಹುಲ್ಲು-ಬಣವೆಯ ಅಡಿಯಲ್ಲಿ ಬಿಲ ತೋಡಿ ತಲೆಮರೆಸಿ ಬದುಕುತ್ತಿದ್ದ ದೊಡ್ಡ ಹೆಗ್ಗಣ ತಾನು ಎಂಬಂತಹ ಅನ್ನಿಸಿಕೆಯಿಂದ ಜಿಗುಪ್ಸೆ ಹುಟ್ಟುವ ಸ್ಥಿತಿಯಲ್ಲಿ ಕೂಡ ಇರಲಿಲ್ಲ, ನಾಗಪ್ಪ. ಸ್ಕಾಯ್-ಸ್ಕ್ರೇಪರ್ ಜಗತ್ತು ಕೋಳೀಗಿರಿಯಣ್ಣನಕೇರಿಯನ್ನು ಊರ್ಧ್ವಸ್ತಗೊಳಿಸಿದ ರೀತಿಗೆ ಭಾವನೆಗಳೆಲ್ಲ ಆಸ್ತವ್ಯಸ್ತವಾಗಿದ್ದುವು. ಹಿಂದೆ, ಅನೇಕ ಸಂದರ್ಭಗಳಲ್ಲಿ, ಮನಸ್ಸನ್ನು ಅರೆಕ್ಷಣದ ಮಟ್ಟಿಗಾದರೂ ತಟ್ಟಿಹೋದ ಆತ್ಮಘಾತದ ವಿಚಾರ ಈಗ ತಪ್ಪಿ ಕೂಡ ಮನಸ್ಸನ್ನು ಹಾಯಲಿಲ್ಲ. ಅನೇಕ ಆಸೆ-ಅಪೇಕ್ಷೆಗಳಿಗೆ ಕಾರಣವಾದ ವ್ಯಾವಸಾಯಿಕ ಕ್ಷೇತ್ರದೊಡನೆಯ ದೀರ್ಘಕಾಲದ ಸಂಬಂಧವನ್ನು ಕಡಿದುಕೊಳ್ಳುವದು ಈಗ ಬರಿಯೆ ಒಂದು ಸಾಧ್ಯತೆಯಾಗಿ ಇಲ್ಲ ಸಂಕಲ್ಪವಾಗಿ ಉಳಿದಿರಲಿ; ಪ್ರತ್ಯಕ್ಷವಾಗಿ ನಡೆದುಹೋದ. ಮುಟ್ಟಿನೋಡುವಷ್ಟರ ಮಟ್ಟಿಗೆ ಉರುಟುರುಟಾಗಿ ಗಟ್ಟಿಮುಟ್ಟಾದ ಘಟನೆಯಾಗಿತ್ತು. ಇದೀಗಿನ ಕ್ಷಣದಿಂದ ತಾನು ನೌಕರಿ ಇಲ್ಲದವನು: ಬಿಟ್ಟುಕೊಟ್ಟವನೋ ಕಳಕೊಂಡವನೋ ಎನ್ನುವದು ತನ್ನ ಆತ್ಮಪ್ರತಿಷ್ಠೆಯ ಅಹಂಕಾರದ ಮೂಡನ್ನು ಅವಲಂಬಿಸಿದ್ದು: ಅದನ್ನು

ಕಾಯ್ದುಕೊಳ್ಳುವ ಅವಶ್ಯಕತೆಯನ್ನು ಅವಲಂಬಿಸಿದ್ದು. ಇದ್ದುದರಲ್ಲೇ ಸಮಾಧಾನ ಕೊಟ್ಟ ಸಂಗತಿಯೆಂದರೆ ತಾನು ಕೊನೆಗೂ ತನಿಖೆಯವರು ಸೂಚಿಸಿದ ರಿಪೋರ್ಟಿನ ಮೇಲೆ ಸಹಿ ಮಾಡದೇ ಇದ್ದದ್ದು. ಯಾರು ಬಲ್ಲರು ಹೀಗೆ ನಿಂತ ಕಾಲ ಮೇಲೆ ತನ್ನಿಂದ ರಾಜೀನಾಮೆಯನ್ನು ಪಡೆಯುವದೇ ಈ ಎಲ್ಲ ನಾಟಕದ ಉದ್ದೇಶವಾಗಿರಲಿಕ್ಕಿಲ್ಲ ತಾನೇ? ಎಂಬ ಗುಮಾನಿ ರಾಜೀನಾಮೆಯನ್ನು ಬರೆದುಕೊಡಕೊಡುತ್ತಿರುವಾಗಲೇ ಹುಟ್ಟಿಬಂದು ಈ ಅಲ್ಪ ಸಮಾಧಾನವನ್ನು ಕೂಡ ನಿರರ್ಥಕಗೊಳಿಸಿತ್ತು...

ಅರಿವಾಗುವ ಮೊದಲೇ ಗೇಟ್-ವೇ ದಾಟಿ ರೀಗಲ್ ಸಿನೇಮಾದ ಕಡೆಗೆ ಹೋಗುವ ರಸ್ತೆಗೆ ಹೊರಳುತ್ತಿರುವಾಗ ಕುದುರೆ-ಟಾಂಗಾದವನೊಬ್ಬ, 'ಆಯಿಯೇ ಸಾಬ್.' ಎಂದಾಗ ನಾಗಪ್ಪ ತನಗೆ ಹತ್ತಿದ ಗುಂಗಿನಿಂದ ಹೊರಗೆ ಬಂದಿದ್ದ. ಮುಂಬಯಿಯಲ್ಲಿ ಟಾಂಗಾ ಈಗ ಅಪರೂಪವಾದ ವಸ್ತು. ನಗರದ ಈ ಭಾಗದಲ್ಲಿ ಹಾಗೂ ಗಿರ್ಗಾಂವ್, ಕಾಲ್ಬಾದೇವಿಗಳಲ್ಲಷ್ಟೇ ಕೆಲವು ಉಳಿದಿದ್ದುವು. ಇನ್ನುಮುಂದೆ ಟ್ಯಾಕ್ಸೀ ವರ್ಜವೇನೋ. ಟಾಂಗಾ ಹತ್ತಿ ಹೋಗಬಹುದಿತ್ತು. ಆದರೆ ಎಲ್ಲಿಗೆ ಎಂಬುದೇ ಗೊತ್ತಿರಲಿಲ್ಲ. ಖೇತವಾಡಿಗಂತೂ ಅಲ್ಲವೇ ಅಲ್ಲ. ಆದಷ್ಟು ಬೇಗ ಆ ನರಕದಿಂದ ಹೊರಗೆ ಬೀಳಬೇಕು ಎಂಬ ಅಸ್ಪಷ್ಟ ವಿಚಾರವೊಂದು ಮನಸ್ಸಿನಲ್ಲಿ ಸುಳಿದುಹೋಯಿತು: ತನ್ನ ಇಷ್ಟು ವರ್ಷಗಳ ಯಾತನೆಗೆ ಸ್ಮಾರಕಗಳು ಎದ್ದು ನಿಂತ ಎಲ್ಲ ಊರುಗಳಿಂದ ದೂರವಾದ ಯಾವುದಾದರೂ ಹೊಸ ಪ್ರದೇಶಕ್ಕೆ ಹೊರಟುಹೋಗಬೇಕು...ಟಾಂಗಾವಾಲಾ ನಿರಾಶನಾಗದೇ ಇನ್ನೊಮ್ಮೆ— "ಚಲಿಯೇ ಸಾಬ್," ಎಂದ: ಕಳೆದ ಕೆಲವು ನಿಮಿಷಗಳಿಂದ ತಾನು ಹಾಗೇ ಟಾಂಗಾದ ಇದಿರಿಗೆ ನಿಂತುಬಿಟ್ಟಿದ್ದೇನೆ ಎನ್ನುವದು ಆಗ ಲಕ್ಷ್ಯಕ್ಕೆ ಬಂತು. ವಿಚಾರಮಾಡುವ ಮೊದಲೇ ಟಾಂಗಾ ಹತ್ತಿ ಕೂತ. ಟಾಂಗಾವಾಲಾ ಎಲ್ಲಿಗೆ ಹೋಗುವದು ಎಂದು ಕೇಳಿದಾಗ -ವೀಟೀ, ಟೈಮ್ಸ್-ಆಫ್-ಇಂಡಿಯಾ–ಎಂದ. ಆಶ್ಚರ್ಯ! ಹಾಗೆ ಹೇಳಿದ ನಂತರವೇ ನೆನಪು ಬಂತು: ಸೀತಾರಾಮನಿಗೆ ಮಂಗಳವಾರ ನಿನ್ನನ್ನು ನಿನ್ನ ಆಫೀಸಿನಲ್ಲಿ ಕಾಣುತ್ತೇನೆ ಎಂದು ಚೀಟಿ ಇರಿಸಿ ಬಂದದ್ದು. ಕೈಗಡಿಯಾರ ನೋಡಿಕೊಂಡ - ಒಂದೂವರೆ ಗಂಟೆ. ತಾನು ತಲುಪುವುದರಲ್ಲಿ ಊಟ ಮುಗಿಸಿ ಬಂದಿರುತ್ತಾನೆ. ಊಟದ ವಿಚಾರ ಬಂದದ್ದೇ, ತಾನಿನ್ನೂ ಊಟ ಮಾಡಿಲ್ಲ ಎನ್ನುವದು ಲಕ್ಷ್ಯಕ್ಕೆ ಬಂತು. ಅಷ್ಟೆಲ್ಲ ಬಿಯರ್

ಕುಡಿಸಿದ್ದರು, ಸ್ನ್ಯಾಕ್ ತಿನ್ನಿಸಿದ್ದರು ಬೋಳೀಮಕ್ಕಳು. ಕಾರಿಕೊಂಡದ್ದು ಒಳ್ಳೆಯದೇ ಆಯಿತು. ಈಗ ಮತ್ತೆ ಊಟ ಬೇಡ. ಸೀತಾರಾಮನ ಆಫೀಸ್-ಕ್ಯಾಂಟೀನಿನಿಂದ ಚಹದ ಜೊತೆಗೆ ಏನಾದರೂ ತರಿಸಿದರಾಯಿತು ಎಂದುಕೊಂಡ. ಟಾಂಗಾ ಪರಿಚಿತ ರಸ್ತೆಯ ಮೇಲೆ ಓಡುತ್ತಿತ್ತು. ಅಂತೂ ಕೊನೆಗೊಮ್ಮೆ ಮುಗಿದು ಹೋದದ್ದರ ವಾಸ್ತವತೆಗೆ ಕ್ರಮೇಣ ಒಗ್ಗಿಕೊಳ್ಳುತ್ತಿದ್ದ ಮನಸ್ಸು ಉದ್ವೇಗವನ್ನು ತೊರೆದು ತನಗೇ ಆಶ್ಚರ್ಯವನ್ನುಂಟು ಮಾಡುವಷ್ಟರ ಮಟ್ಟಿಗೆ ನಿಶ್ಚಿಂತವಾಗತೊಡಗಿತ್ತು, ಶಾಂತವಾಗತೊಡಗಿತ್ತು. ಟಾಂಗಾ ಟೈಮ್ಸ್-ಆಫ್-ಇಂಡಿಯಾ-ಆಫೀಸು ತಲುಪಿದ ಕೂಡಲೇ ಟಾಂಗಾವಾಲಾ ಬೇಡಿದ ಬಾಡಿಗೆಯ ಹಣ ಕೊಟ್ಟು ಸೀತಾರಾಮನ ಆಫೀಸು ಹೊಕ್ಕ.

ಸೀತಾರಾಮ ಆಫೀಸಿನಲ್ಲಿದ್ದ. ಅದೇ ಊಟ ಮಾಡಿ ಬಂದು ಸಿಗರೇಟನ್ನು ಹಚ್ಚಿ, ಎರಡೂ ಕಾಲುಗಳನ್ನು ಟೇಬಲ್ ಮೇಲೆ ನಿಡಿದಾಗಿ ಚಾಚಿ, ಗಾಳಿಯಲ್ಲಿ ಹೊಗೆಯ ವರ್ತುಲಗಳನ್ನು ಎಬ್ಬಿಸುವುದರಲ್ಲಿ ಗರ್ಕನಾಗಿದ್ದ. ಅವನ ಈ ಬೇಫಿಕೀರತೆಯೇ ನಾಗಪ್ಪನ ಅಸೂಯೆಗೆ ಕಾರಣವಾಯಿತು: ಐಷಾರಾಮಿನ ಬದುಕು ಒಂದೂ ಮಗನದೂ ಅನ್ನಿಸಿತು. "Oh! the boss is relaxing?" ಎಂದು ಕೇಳಿದ ಇವನ ದನಿಗೆ, ಧೂಮ್ರ-ವರ್ತುಲಗಳ ಜಾಲದಲ್ಲಿ ಸಿಕ್ಕಿಬಿದ್ದ ಸೀತಾರಾಮ ದಡಬಡಿಸಿದ. ಮೇಜಿನ ಮೇಲಿನ ಕಾಲುಗಳನ್ನು ಕೆಳಗಿಳಿಸಿ ಕುರ್ಚಿಯಲ್ಲಿ ಸರಿಯಾಗಿ ಕೂಡ್ರುವ ಪ್ರಯತ್ನಮಾಡುತ್ತ ಕಣ್ಣಮುಂದೆ ನಿಂತವನ ರೂಪ ಅರಿವಿನಲ್ಲಿ ಮೂಡಿದ್ದೇ, "ಅರೆ ನಾಗಪ್ಪ ! My God! what a telepathy,— ಮೂರು ದಿನಗಳಿಂದ ನಿನ್ನ ನೆನಪು ಮಾಡಿದ್ದೇ ಮಾಡಿದ್ದು," ಎಂದ. ಗೆಳೆಯ ತನ್ನನ್ನು ತನ್ನ ಮೂಲದ ಹೆಸರಿನಿಂದ ಕರೆದ ಸಣ್ಣ ಸಂಗತಿಯಿಂದಲೇ ಪುಲಕಿತನಾಗಿ—"ಯಾಕೆ? ಮೊನ್ನೆ ನಿನ್ನ ಕೋಣೆಯ ಬೀಗಕ್ಕೆ ಸಿಕ್ಕಿಸಿದ ಚೀಟಿ ಸಿಗಲಿಲ್ಲವೆ?" ಎಂದು ಕೇಳುತ್ತ ಕುರ್ಚಿಯೊಂದರಲ್ಲಿ ಕುಳಿತುಕೊಂಡ.

"Don't tell me you came to my room"

"Ofcourse I came and I needed you so badly to save myself from..."

ಅನಿರೀಕ್ಷಿತವಾಗಿಯೆಂಬಂತೆ ತನ್ನ ಬಾಯಲ್ಲಿ ಹುಟ್ಟಿದ ಈ ವಾಕ್ಯವನ್ನು ಪೂರ್ತಿಗೊಳಿಸುವದು ನಾಗಪ್ಪನಿಗೆ ಸಾಧ್ಯವಾಗಲಿಲ್ಲ... 'from a possible suicide' ಎಂದು ಪೂರ್ತಿಯಾಗಬೇಕಾದ ವಾಕ್ಯ ಅರ್ಧಕ್ಕೇ ಉಳಿದುಬಿಟ್ಟಿತು. ಆದರೆ ಗೆಳೆಯನ ಮೋರೆಯ ಮೇಲೆ ತನ್ನ ಬಗೆಗೆ ಆತಂಕ ಮೂಡಿದನ್ನು ನೋಡಿ ಸುಳ್ಳೇ ನಾಟಕವೇಕೆ, ಎಂದುಕೊಂಡು—"I resigned from my job," ಎಂದ. ಮಾತಿನಲ್ಲಿ ಅಸಾಧಾರಣ ಸಹಜತೆ, ಸರಳತೆ ಇವುಗಳೇ ದಂಗುಬಡಿಸುವ ಸಂಗತಿಗಳಾಗಿದ್ದುವು ಎಂಬಂತೆ ಸೀತಾರಾಮ—" Don't tell me," ಎಂದ. ಮರುಗಳಿಗೆ ನಾಗಪ್ಪನ ದನಿಯಲ್ಲಿಯ ಸರಳತೆಗೆ ವ್ಯತಿರಿಕ್ತವಾದ ನೋವಿನ ಕಳೆ ಅವನ ಮೋರೆಯ ಮೇಲೆ ಮೂಡುತ್ತಿದ್ದುದನ್ನು ನೋಡಿ—"ಚಹ ತರಿಸಲೇ?" ಎಂದು ಕೇಳಿದ. ನಾಗಪ್ಪ ಭಿಡೆ ಬಿಟ್ಟುಕೊಟ್ಟು "ನನ್ನದಿನ್ನೂ ಊಟವಾಗಿಲ್ಲ. ಆದರೆ ಹೊಟ್ಟೆಗೆ ಹಸಿವೂ ಇಲ್ಲ. ಚಹದ ಜೊತೆ..." ನಾಗಪ್ಪನ ವಾಕ್ಯ ಪೂರ್ತಿಯಾಗುವ ಮೊದಲೇ ಸೀತಾರಾಮ ಕೈಯಲ್ಲಿದ್ದ ಸಿಗರೇಟನ್ನು ಆಷ್-ಟ್ರೇದಲ್ಲಿ ಮುರುಟಿ ಚೆಲ್ಲುತ್ತ—"ಕಮ್ ಆನ್— ಕ್ಯಾಂಟಿನ್ನಿಗೇ ಹೋಗೋಣ. ಏನಾದರೂ ತಿನ್ನುವಿಯಂತೆ. ಅಲ್ಲೇ ಕೂತು ಮಾತಾಡೋಣ," ಎನ್ನುತ್ತ ನಾಗಪ್ಪನನ್ನು ಕುಳಿತಲ್ಲಿಂದ ಎಬ್ಬಿಸಿದ.

ಗೆಳೆಯರಿಬ್ಬರೂ ಎದ್ದು ಮೊದಲನೇ ಮಜಲೆಯ ಮೇಲಿದ್ದ ಕ್ಯಾಂಟಿನ್ನಿಗೆ ಹೊರಡಲನುವಾಗುವಷ್ಟರಲ್ಲಿ ಕ್ಯಾಬಿನ್ನಿನ ಕದ ದೂಡಿ ಸೀತಾರಾಮನ ಸಹೋದ್ಯೋಗಿಯಾದ ರಂಜನಾ ಭೂಪೇಟ್ಕರ್ ಕೆಲವು ಕಾಗದ-ಪತ್ರಗಳೊಂದಿಗೆ ಒಳಗೆ ಬಂದಳು. ನಾಗಪ್ಪನನ್ನು ನೋಡಿದವಳೇ, "ಓಹೋಹೊ... ಪ್ರಾಫೆಸರರ ಸವಾರಿ ಅನೇಕ ವಾರಗಳ ನಂತರ," ಎಂದು ಸುಖವಾಗಿ ನಗುತ್ತ, "By the way my hearty congratulations. ಅಮೇರಿಕೆಗೆ ಹೋಗುತ್ತೀರಂತೆ... ಸೀತಾರಾಮನೇ ತಿಳಿಸಿದ..." ಎಂದು ಕೈ ಮುಂದೆ ಚಾಚಿದಳು. ನಾಗಪ್ಪ ಕೈ ಕುಲುಕಲಿಲ್ಲ. ಆದರೂ ಶಾಂಶಚಿತ್ತನಾಗಿಯೇ ಹೇಳಿದ: "Not so lucky Ranjana. Thank you all the same... ಸೀತಾರಾಮನೇ ವಿವರಿಸುತ್ತಾನೆ ನಿನಗೆ, ಆಮೇಲೆ..." ಸೀತಾರಾಮನೂ ಆಮೇಲೆ ಹೇಳುತ್ತೇನೆ ಎನ್ನುವಂತೆ ಕಣು ಮಿಟುಕಿಸಿ—"ನಾವೀಗ ಕ್ಯಾಂಟಿನ್ನಿಗೆ ಹೊರಟಿದ್ದೇವೆ, will be back soon,"

ಎಂದ. ರಂಜನಾ ತಬ್ಬಿಬ್ಬಾಗಿ ತಮ್ಮಿಬ್ಬರನ್ನು ನೋಡುತ್ತಿರುವಾಗಲೇ ಇಬ್ಬರೂ ಕ್ಯಾಬಿನ್ನಿನ ಹೊರಬಿದ್ದು ಕ್ಯಾಂಟನ್ನಿನ ಕಡೆಗೆ ನಡೆಯಹತ್ತಿದರು...

ಕಳೆದ ಎರಡು ವಾರಗಳಲ್ಲಿ ತಾನು ಪಟ್ಟ ಮಾನಸಿಕ ಪಾಡೆಲ್ಲ ಈಗ ಕೆಲವೇ ನಿಮಿಷಗಳಲ್ಲಿ ಗೆಳೆಯನಿಗೆ ಹೇಳಿ ಮುಗಿಸುವದು ಅಸಾಧ್ಯವಾಗಿ ತೋರಿದರೂ ಅವನ ಜತೆಯಲ್ಲಿ ಹೀಗೆ ನಡೆಯುವದೇ ನಾಗಪ್ಪನಿಗೆ ಎಷ್ಟೊಂದು ಸುಖದಾಯಕವಾಗಿ ಕಂಡಿತೆಂದರೆ ತಾನು ಈ ಎರಡು ವಾರಗಳಲ್ಲಿ ಒಮ್ಮೆಯಾದರೂ ಹೇಗೆ ಅವನನ್ನು ಕಾಣಲು ಬರಲಿಲ್ಲ ಎನ್ನುವುದರ ಬಗೆಗೇ ಆಶ್ಚರ್ಯವೆನ್ನಿಸಿತು. ಮೊನ್ನೆಯೇನೊ ಒಮ್ಮೆ ಹೋಗಿದ್ದ, ಸೀತಾರಾಮ ಕೋಣೆಯಲ್ಲಿಲ್ಲದ ವೇಳೇಯಲ್ಲಿ. ಆದರೆ ಹಾಗೆ ಹೋದುದರಲ್ಲಿ ಅವನನ್ನು ಆಗಿಂದಾಗ ಕಾಣಲೇ ಬೇಕೆನ್ನುವಂತಹ ತರಾತುರಿಯೇನಿರಲಿಲ್ಲ. ನಾಗಪ್ಪ ಮೌನಿಯಾಗಿದ್ದ.

ಇತ್ತ, ಸೀತಾರಾಮನೂ ತುಟಿ ಎರಡು ಮಾಡಲಿಲ್ಲ. ಇಂದೋ ನಾಳೆಯೋ ಅಮೇರಿಕೆಗೆ ಹೊರಡಲಿದ್ದ ಗೆಳೆಯ ಹೀಗೆ, ಇದ್ದಕ್ಕಿದ್ದ ಹಾಗೆ, ನೌಕರಿಯನ್ನೇ ಬಿಟ್ಟುಕೊಡಬೇಕಾದ ಪ್ರಸಂಗ: ಬದುಕಿನ ಬಿಸಿ ಇನ್ನೂ ತಾಕಿರದ — ಹುಂಬ ಗುತ್ತಿಗೆ ಎನ್ನುವಷ್ಟರ ಮಟ್ಟಿಗಿನ ಉತ್ಸಾಹ ತುಂಬಿದ — ಅವನ ಮನಸ್ಸು ಈ ಕ್ರಾಂತಿಕಾರಕ ಘಟನೆಯ ಅರ್ಥವನ್ನು ಗ್ರಹಿಸುವ ಸ್ಥಿತಿಯಲ್ಲೇ ಇರಲಿಲ್ಲ. ಆದರೆ ಇಂತಹದೇನೋ ನಡೆದಿದೆ ಎನ್ನುವದನ್ನು ಮಾತ್ರ ಗೆಳೆಯನ ಮೋರೆಯೇ ಸ್ಪಷ್ಟವಾಗಿ ಸಾರುತ್ತಿತ್ತು. ತಾನು ಒಳಗೆ ಅನುಭವಿಸುತ್ತಿದ್ದ ನೋವನ್ನು ಮರೆಮಾಚುವದು ಆ ಮೋರೆಗೆ ಸಾಧ್ಯವಾಗಿಲ್ಲ ಎನ್ನುವದು ಮಾತ್ರ ಸ್ವತಃ ಆ ಮೋರೆಯನ್ನು ಹೊತ್ತವನಿಗೇ ಗೊತ್ತಿರಲಿಲ್ಲ: ಎಷ್ಟೆಲ್ಲ ಮಾತಾಡುವದಿದ್ದರೂ ಏನೂ ಮಾತನಾಡದೇ ಇಬ್ಬರೂ ಕ್ಯಾಂಟೀನಿಗೆ ಬಂದು ತಲುಪಿದ್ದರು.

ನೌಕರಿಯ ಮಾತು ಆಮೇಲೆ. ನಾವು ಸದ್ಯ ಇಲ್ಲಿ ಬಂದದ್ದು ಗೆಳೆಯನಿಗೆ ಹಸಿವೆಯಾಗಿದೆ ಎನ್ನುವ ಕಾರಣಕ್ಕಾಗಿ ಎಂಬುದರ ಅರಿವು ಇದ್ದವನ ಹಾಗೆ, ಸೀತಾರಾಮ, ಮಾಣಿಯೊಬ್ಬನನ್ನು “ಗಜಾನನ” ಎಂದು ಅವನ ಹೆಸರು ಹಿಡಿದು ಕರೆದ. ಗಜಾನನ ಓಡೋಡಿ ಬಂದ. ಅವನೂ ನಾಗಪ್ಪನ ಪರಿಚಯದವನೇ. ಹಲ್ಲು ತೋರಿಸಿ ನಕ್ಕು ನಮಸ್ಕಾರ ಮಾಡಿದ. ಮರಾಠಿಯಲ್ಲಿ—"ಬಹಳ ದಿನಗಳಾದುವು

ಸಾಹೇಬರನ್ನು ಕಾಣದೇ," ಎಂದ. ಗಜಾನನನ ಆತಂಕ ಕಂಡಿರದ ನಗು ನಾಗಪ್ಪನಿಗೆ ಸುಖ ಕೊಟ್ಟಿತು. ಆದರೆ ತನ್ನ ಹತೋಟಿ ಮೀರಿ ಒಳಗೆಲ್ಲೋ ಒಂದು ಬಿಕ್ಕಳಿಕೆ ಹೊರಟಂತಹ ಅನುಭವದಿಂದ ಕ್ಷಣಕಾಲ ತಬ್ಬಿಬ್ಬಾದ. ತನ್ನನ್ನು ಕೂಡಲೇ ಸಾವರಿಸಿಕೊಳ್ಳುತ್ತ ಗಜಾನನನಿಗೆ ಉತ್ತರರೂಪವಾಗಿ ತಾನೂ ನಗಲು ಪ್ರಯತ್ನಿಸಿದ. ಸಾಹೇಬರದಿನ್ನೂ ಊಟವಾಗಿಲ್ಲವೆಂದು ತಿಳಿದೊಡನೆ, ತುಂಬ ಕೆಡಕೆನಿಸಿ—"ಎಲ್ಲ ಮುಗಿದಿದೆ ಸರ್. ಆದರೆ ಫರ್ಸ್ಟ್ ಕ್ಲಾಸ್ ಮಸಾಲಾ ಆಮ್ಲೆಟ್?" ಎಂದು ಕೇಳಿದ ನಾಗಪ್ಪ ಸೈ ಎಂದ. "ಎರಡು ಸ್ಲ್ಯಾಸ್ ಬ್ರೆಡ್ ಹಾಗೂ ಎರಡು ಕಪ್ಪು ಚಹ," ಎನ್ನುತ್ತ ಸೀತಾರಾಮನ ಮೋರೆ ನೋಡಿದ. ಸೀತಾರಾಮ ಮುಗುಳುನಗುತ್ತ, "Ok. I will join you for tea," ಎಂದ.

ಎಲ್ಲಿಂದ ಮಾತು ಆರಂಭಿಸುವದು ಎನ್ನುವದು ತಿಳಿಯದವನ ಹಾಗೆ ಸಿಗರೇಟೊಂದನ್ನು ಹೊತ್ತಿಸುತ್ತ, "you won't believe, but you must," ಎಂದು ಆರಂಭಿಸಿ ಸೀತಾರಾಮ ಅರ್ಧಕ್ಕೇ ತಡೆದ ಮಾತುಮಾತಿಗೆ ಆಣೆ-ಭಾಷೆ ಮಾಡುವ ಸೀತಾರಾಮನ ದುಷ್ಟ ಚಟದ ನೆನಪಾಗಿ, ನಾಗಪ್ಪ, "I believe. You need not swear by your dead ancestors," ಎಂದ. ಸೀತಾರಾಮನಿಗೆ ನಗು ಬಂತು. ಆದರೆ ಹೇಳ ಹೊರಟ ಮಾತಿಗೆ ಆ ನಗು ಶೋಭಿಸುವಂತಹದಲ್ಲವಾಗಿತ್ತೇನೋ. ತುಸು ಹೊತ್ತು ತಡೆದ. ಸಿಗರೇಟಿನ ಎರಡು ಜುರುಕೆಗಳ ನಂತರ ಬಾಯಿ ತೆರೆದ — ಕಳೆದ ಎರಡು ತಿಂಗಳಿಂದ ನೀನು ಅಮೇರಿಕೆಗೆ ಹೋಗುವ ಸಂಗತಿಯನ್ನು ನಮ್ಮ ಲೀಗ್ ಸದಸ್ಯರಲ್ಲೇನಕರಿಗೆ ಮುಖತಃ ಹೇಳಿದ್ದೆ. ಹೊರಡುವ ಮೊದಲು ಒಂದು ಸತ್ಕಾರ-ಸಮಾರಂಭವನ್ನು ಕೂಡ..." ಇದನ್ನು ಕೇಳುತ್ತಿದ್ದ ನಾಗಪ್ಪನ ಕಣ್ಣುಗಳು ದೊಡ್ಡವಾಗುತ್ತಿದ್ದುದನ್ನು ನೋಡಿ ಏನೋ ಹೇಳ ಹೊರಡುವಷ್ಟರಲ್ಲಿ ಗಜಾನನ ಆಮ್ಲೆಟ್ ಹಾಗೂ ಬ್ರೆಡ್ ಮತ್ತು ಬೆಣ್ಣೆಗಳನ್ನು ತಂದ. ತಂದದ್ದನ್ನು ಟೇಬಲ್ ಮೇಲೆ ಸರಿಯಾಗಿ ಹಚ್ಚಿ ಇಡುತ್ತ, "ಚಹ ಈಗಲೇ ತರಲೇ. ಸರ್?" ಎಂದು ಕೇಳಿದಾಗ ನಾಗಪ್ಪನೆ "ಹೌದು" ಎಂದ. ಆಮ್ಲೆಟ್ ನೋಡಿದೊಡನೆ ಹೊಟ್ಟೆ ಚೆನ್ನಾಗಿ ಹಸಿದಿದೆ ಎಂಬುದರ ಅರಿವು ಆದವನ ಹಾಗೆ,'ನೀನು ನಿಲ್ಲಿಸಬೇಡ. ನನಗೀಗ ಯಾವ ಸಂಗತಿಯೂ ಉದ್ರೇಕಕ್ಕೆ ಕಾರಣವಾಗಲಾರದು.' ಎನ್ನುವ ಭಾವದಿಂದ ಸೀತಾರಾಮನತ್ತ ನೋಡುತ್ತ ಆಮ್ಲೆಟ್ ಮೇಲೆ ದಾಳಿ ಮಾಡಿದ.

ಗೆಳೆಯನ ರಾಜೀನಾಮೆಯ ಪ್ರಸಂಗಕ್ಕೆ ನೇರವಾಗಿ ಕೈ ಹಾಕುವ ಧೈರ್ಯವಾಗದೇ ಶ್ರೀನಿವಾಸನ ಕರಾಮತಿಗಳ ಬಗ್ಗೆ ತಾನು ವ್ಯಕ್ತಪಡಿಸುತ್ತ ಬಂದ ನಿಷೇಧವನ್ನು ಕುರಿತು ಮಾತನಾಡುವದೇ ಒಳ್ಳೆಯದೆಂದು ನಿಶ್ಚಯಿಸಿಕೊಂಡವನ ಹಾಗೆ, ಸೀತಾರಾಮ, ತಾನು ಅರ್ಧಕ್ಕೇ ಬಿಟ್ಟ ಮಾತಿಗೆ ಹಿಂತಿರುಗಿದ: "I knew you would protest…ಬರೇ ವಾಮಮಾರ್ಗದಿಂದ ಹಣ ಮಾಡಿಕೊಂಡು ಮದುವೆ ಮುಂಜಿವೆ ಸಮಾರಂಭಗಳ ಕಾಲದಲ್ಲಿ ತಮ್ಮ ಹೆಂಡಂದಿರ ಮೈಮೇಲೆ ಮೆರೆಯುವ ಮಣ ಭಾರದ ದಾಗಿನೆಗಳ ಕಣ್ಣು ಕುಕ್ಕಿಸುವ ಹೊಳಪಿನಿಂದಲೇ ಸಮಾಜದಲ್ಲಿ ತಾವು ಒಂದು ಪ್ರತಿಷ್ಠೆಯ ಸ್ಥಾನವನ್ನು ಗಳಿಸಿಕೊಂಡಿದ್ದೇವೆ ಎನ್ನುವ ಸುಳ್ಳು-ಅಭಿಮಾನದ ಬೋಳೀಮಕ್ಕಳೇ ಈ ಲೀಗಿನಲ್ಲಿ ತುಂಬಿದ್ದಾರೆ: ಪ್ರಿಂಟಿಂಗ್ ಪ್ರೆಸ್ಸಿನ ಶ್ರೀನಿವಾಸಾ; ಉಡುಪೀ ಹಾಟೆಲ್ಲಿನ ನಾಯಕಾ; ಬಿಲ್ಡಿಂಗ್ ಕಾಂಟ್ರೆಕ್ಟರ್ ಕಾಮತಾ; ಪೌರೋಹಿತ್ಯವನ್ನು ಬಿಟ್ಟು ಲಗ್ನ-ಮುಂಜಿವಿಗಳ ಕಂತ್ರಾಟುದಾರನಾದ ಪಾಂಡ್ರಂಗಭಟ್ಟಾ—ಎಲ್ಲ ಎಲ್ಲ ಇಂಥವರೇ…! ನಿನ್ನ ಸತ್ಕಾರದ ಮಾತು ಎತ್ತಿದಾಗ ಅಸಡ್ಡೆ ತೋರಿಸಿದವನು ಶ್ರೀನಿವಾಸ ಎಂಬುದನ್ನು ನಂಬುತ್ತೀಯಾ? ಯಾಕೆಂದು ಗೊತ್ತಿದೆಯೆ? ಊಹಿಸಬಲ್ಲೆಯಾ?—a wild guess?—ನಿನ್ನ ಕಾದಂಬರಿ! ನೀನು ಕೊನೆಗೂ ಬರೆಯದೇ ಇದ್ದದ್ದು! It all started as a Practical joke— ಅಮ್ಮನ ಆಣೆಗೂ—ನೀನಿದನ್ನು ನಂಬಬೇಕು. ಹಿಂದೆ ಎಂದೋ ಒಮ್ಮೆ ನೇತ್ರಾವತಿಯ ಬಗ್ಗೆ ಒಂದು ಕಾದಂಬರಿ ಬರೆಯಬೇಕು ಅಂದಿದೆ. ನಿನಗೇ ನೆನಪಿದೆಯೋ ಇಲ್ಲವೋ. ಇದನ್ನೇ ನಾನೊಮ್ಮೆ ಶ್ರೀನಿವಾಸನಿಗೆ ಹೇಳಿರಬೇಕು. ಯಾಕೆ ಹೇಳಿದೆನೋ ಅರಿಯೆ—may be just for the fun of scaring him…ಆದರೆ ಬೋಳೀಮಗ ನಿಜಕ್ಕೂ ಹೆದರಿಕೊಂಡಿದ್ದ ಎನ್ನುವದು ಆಗ ಗೊತ್ತಾಗಲೇ ಇಲ್ಲ ನೋಡು. ಮುಂದೆ ನೀನು ಮುಂಬಯಿಗೆ ವರ್ಗವಾಗಿ ಬಂದ ಮೇಲೆ ಹೀಗೇ ಒಮ್ಮೆ ನಿನ್ನ ಬಗ್ಗೆ ಮಾತು ಬಂದಾಗ ಶ್ರೀನಿವಾಸ, "ಏಕಾಏಕೀ ಮುಂಬಯಿಗೆ ಬರಲು ಕಾರಣವೇನಂತೆ?" ಎಂದು ಕೇಳಿದ. ನನಗದೇನು ಹುಕ್ಕಿ ಬಂತೋ : the vulgar curiosity in his tone must have provoked me: ನೀನಾಗಿ ಮುಂಬಯಿಗೆ ವರ್ಗಮಾಡಿಸಿಕೊಂಡು ಬಂದದ್ದು ಕಾದಂಬರಿ ಬರೆಯಲಿಕ್ಕೆ ಎಂದೆ… ಖೇತವಾಡಿಯಲ್ಲಿ ನಡೆದ ದುರ್ಘಟನೆ ಕಾದಂಬರಿಯ ವಸ್ತುವಾಗಿದ್ದರಿಂದ ಅಲ್ಲೇ ಉಳಿದು ಬರೆಯುವ ಯೋಜನೆ ಎಂದೆ…ಅಮೇರಿಕೆಗೆ ಹೋಗುವ ಮೊದಲೇ

ಮುಗಿಸುವ ಮನಸ್ಸಿದೆ ಎಂದು ಹೇಳಿದೆ...ಎಲ್ಲ ಸರಿಹೋದರೆ ಕೆಲವು ಭಾಗಗಳನ್ನಾದರೂ ಇಂಗ್ಲೀಷಿಗೆ ಭಾಷಾಂತರಿಸಿ ನಮ್ಮ ಇಲ್ಲಸ್ಟ್ರೇಟೆಡ್‌ವೀಕ್ಲೀಯಲ್ಲಿ ಪ್ರಕಟಿಸುವ ಭರವಸೆಯನ್ನು ನಾನೇ ಕೊಟ್ಟಿದ್ದೇನೆ ಎಂದೆ. ನಂಬಿದನೇ ಬೋಳೀಮಗ! ಅಪ್ಪನಾಣೆ- ನಂಬಿದ ಅಷ್ಟೇ ಅಲ್ಲ. ತನ್ನ ಧೈರ್ಯಕ್ಕೆ ಇನ್ನೂ ಕೆಲವರನ್ನು ಸೇರಿಸಿಕೊಂಡ: ಲೀಗಿನ ಕೆಲವು ಸದಸ್ಯರನ್ನು ಕುರಿತು ನೀನು ಕಾದಂಬರಿ ಬರೆಯಲು ಶುರುಮಾಡಿದ್ದೀ ಎನ್ನುವ ಸುದ್ದಿಯನ್ನು ತಾನೇ ಹರಡಿದ..."

ನಾಗಪ್ಪನ ಕಿವಿಗಳೇನೋ ಸೀತಾರಾಮನ ಮಾತುಗಳತ್ತವೇ ಇದ್ದುವು. ಕಣ್ಣುಗಳು ಕೂಡ ಕೇಳುತ್ತಿದ್ದೇನೆ ಎನ್ನುವಂತಹ ನಂಬಿಕೆಯನ್ನೇ ಹುಟ್ಟಿಸುತ್ತಿದ್ದುವು. ಆದರೆ ಇದೆಲ್ಲವನ್ನೂ ಹೇಳಬೇಕೆನ್ನುವುದರಲ್ಲಿ ತನಗಿದ್ದ ಆಸ್ಥೆಗೆ ಪ್ರೇರಣೆಯಾದ ಜಗತ್ತಿನಿಂದ ನಾಗಪ್ಪ ಈಗ ಬಹಳ ದೂರ ನಡೆದಿದ್ದಾನೆ ಎನ್ನುವುದರ ಕಲ್ಪನೆ ಮಾತ್ರ ಸೀತಾರಾಮನಿಗಿರುವದು ಶಕ್ಯವೇ ಇರಲಿಲ್ಲ. ಮನುಷ್ಯಸಹಜವಾದ ಒಂದು ಕುತೂಹಲದಿಂದ, ಯಾವ ಆಸೆ ಅಪೇಕ್ಷೆಗಳಿಗೂ ಕಟ್ಟಿಬಿದ್ದಿರದ, ಪರಿಶುದ್ಧವಾದ, ಉತ್ಸುಕತೆಯಿಂದ ಸೀತಾರಾಮನ ಮಾತುಗಳನ್ನು ಕೇಳಕೇಳುತ್ತಿರುವಾಗ ಆ ಪಾರ್ಸೀ ಸಾಲಾ ದಸ್ತೂರನ ಮಾತುಗಳು ಸೀತಾರಾಮ ಈಗ ಹೇಳುತ್ತಿದ್ದುದಕ್ಕೆ ಫಿಲ್ಟರ್ ರೀತಿ ಕೆಲಸಮಾಡಹತ್ತಿದುವು: 'ನೀನು ನಿನ್ನದೇ ಆದ ಜಗತ್ತಿನಲ್ಲಿ ನಿಂತು ಪ್ರೇರೇಪಿಸಿದ ಕೃತಿಗಳು ಇನ್ನೊಂದು ಜಗತ್ತಿನಲ್ಲಿಯ ಹಿತಾಸಕ್ತಿಗಳಿಗೆ ಧಕ್ಕೆ ತಂದವು...' ಸೀತಾರಾಮನಿಗೆ, ಬರಿಯೆ ಒಂದು 'ಆಟ'ವಾಗಿ ತೋರಿದ್ದು ಈ ಆತ್ಮ-ಪ್ರತಿಷ್ಠೆಯ, ಪ್ರಪಂಚದ ಜನಕ್ಕೆ ತಮ್ಮ ಆಸಕ್ತಿಗಳಿಗೆ ಧಕ್ಕೆ ತರುವ ಹಲ್ಲೆಯಾಗಿ ತೋರಿರಬೇಕು. ಅಂತೂ ಶ್ರೀನಿವಾಸನಿಗೆ ತನ್ನ ಬಗ್ಗೆ ಮೊದಲಿನಿಂದಲೂ ಇದ್ದ ಹಗೆ ಈಗ ಮತ್ತೆ ಹೆಡೆ ಬಿಚ್ಚುವಂತೆ ಮಾಡಿದ್ದು, ಈ ಸೀತಾರಾಮನ  ಬೇಫಿಕೀರತೆಯೇ ಹಾಗಾದರೆ ಎಂಬ ಗುಮಾನಿ ಅರೆಕ್ಷಣದ ಮಟ್ಟಿಗಾದರೂ ಹುಬ್ಬೇರಿಸುವಂತೆ ಮಾಡಿತು.

ಸೀತಾರಾಮ ಮಾತನಾಡುವ ಭರದಲ್ಲಿ ಗೆಳೆಯನು ಸದ್ಯ ಇಲ್ಲಿಗೆ ಬರಲು ಕಾರಣವಾದ ಸಂದರ್ಭವನ್ನೇ ಮರೆತ ಹಾಗಿತ್ತು. ಹುರುಪಿನಿಂದ, ಒಂದು ಬಗೆಯ ರೊಚ್ಚಿನಿಂದ ಶ್ರೀನಿವಾಸನ ಬಗ್ಗೆ, ಲೀಗಿನ ಇತರ ಸದಸ್ಯರ ಬಗ್ಗೆ ಮಾತನಾಡಿಯೇ ಆಡಿದ: ಆಮ್ಲೆಟ್-ಬ್ರೆಡ್ ಮುಗಿಸಿ ಚಹ ಕುಡಿಯುವ ಹೊತ್ತಿಗೆ, ಶ್ರೀನಿವಾಸನನ್ನು ಕುರಿತು ತಾನು ಹಿಂದೆಂದೂ ಹೇಳಿರದ ಹೊಸ ಸಂಗತಿಗಳಿಗೆ ನಾಗಪ್ಪನಿಂದ ಈಗ

ದೊಡ್ಡ ಪ್ರತಿಕ್ರಿಯೆಯನ್ನು ಸೀತಾರಾಮ ಅಪೇಕ್ಷಿಸಿರಬೇಕು. ಅಂತಹದೇನೂ ಆಗದೇ ಇದ್ದುದಕ್ಕೆ ವಿವರಣೆಯೆಂಬಂತೆ ನಾಗಪ್ಪನೇ ತುಂಬ ಸಂತವಾಗಿ ಹೇಳಿದ: "ಬೋಳಿ ಮಕ್ಕಳು ತನಿಖೆಯ ಹೊತ್ತಿಗೆ ಕಂಡಾಪಟಿ ಬಿಯರು ಕುಡಿಸಿಬಿಟ್ಟರು...ಹೌದು. ಈ ಹೊತ್ತು ನನ್ನ ಬಗ್ಗೆ ಒಂದು ತನಿಖೆಯಿದ್ದದ್ದು ನಿನಗೆ ಗೊತ್ತಿದ್ದಂತಿಲ್ಲ. ಶ್ರೀನಿವಾಸ ನಿನಗೆ ಹೇಗೆ ತಿಳಿಸಲಿಲ್ಲವೋ—ಆಶ್ಚರ್ಯ ಎನ್ನಿಸುತ್ತದೆ: He has played a big part in it..." ಈ ಮಾತಿನಿಂದ ಒಮ್ಮೆಲೇ ಉತ್ತೇಜಿತನಾದ ಸೀತಾರಾಮ ತೊಡೆಗಳ ಮೇಲೆ ಬಲವಾಗಿ ಬಡೆದುಕೊಂಡು— "That rascal...! ಈಗ ಅರ್ಥವಾಗುತ್ತದೆ... 'ನಿನ್ನ ಗೆಳೆಯನಿಗೆ ಕಾದಿರುವ ದೊಡ್ಡ ಸತ್ಕಾರ ನೋಡುವಿಯಂತೆ' ಅಂದಿದ್ದ ಎಂಟು ದಿನಗಳ ಹಿಂದೆ...Oh my God...we will fight him... fight him to the finish...", ಎಂದ.

ನಾಗಪ್ಪನ ಮೇಲೆ ಇದಾವುದರ ಪರಿಣಾಮವೇ ಆಗುತ್ತಿದ್ದಂತಿರಲಿಲ್ಲ. ಹಸಿದ ಹೊಟ್ಟೆಗೆ ಆಮ್ಲೆಟ್-ಚಹ ನೆಮ್ಮದಿ ತರಿಸಿದ ಮೇಲೆ ಬಿಯರಿನ ಅಮಲು ಸಂಪೂರ್ಣ ಇಳಿದಿರದ ಕಣ್ಣುಗಳು ನಿದ್ದೆಯಿಂದ ಬಾಡಹತ್ತಿದುವು: "ಈಗ ಬೇಡ ಸೀತಾರಾಮ. ಇದೆಲ್ಲದರ ಬಗ್ಗೆ ನಿನ್ನ ಜತೆಗೆ ಬಹಳ ಮಾತನಾಡುವದಿದೆ. ಸಂಜೆ ಮತ್ತೆ ಭೆಟ್ಟಿಯಾಗೋಣ. ಈಗ ಮನೆಗೆ ಹೋಗಿ ಗಡದ್ದಾಗಿ ಒಂದು ನಿದ್ದೆ ಮಾಡಬೇಕು. ಅಲ್ಲಿಯ ತನಕ ಇದನ್ನಿಷ್ಟು ಓದಿ ನೋಡು: ನನ್ನ ಬಗ್ಗೆ ತನಿಖೆಯವರು ಸಿದ್ಧಪಡಿಸಿದ confidential report. ಓದಿ ಸಿಟ್ಟಿನಿಂದ ತಲೆ ಕೆಡಿಸಿಕೊಳ್ಳಬೇಡ ಮತ್ತೆ. ಅದರಲ್ಲಿ ವರದಿಯಾದ ಕೆಲವು ಸಂಗತಿಗಳು ಪ್ರತ್ಯೇಕವಾಗಿ ನಿಜವಾದವುಗಳು. ಉಳಿದವುಗಳು ನನಗೇ ಗೊತ್ತಿಲ್ಲದವು. ಬಿಡಿಸಿದ ಒಟ್ಟೂ ಚಿತ್ರ ಮಾತ್ರ ಸುಳ್ಳಿನ ಬೊಂತೆ! ಈ ವರದಿಯನ್ನು ಬರೆದವನು ಸಾಮಾನ್ಯನೆಂದು ತಿಳಿಯಬೇಡ: ಇಂಥ ಸುಳ್ಳುಗಳ ಬೊಂಡೆಯನ್ನೇ ಅಪ್ಪಟ ಸತ್ಯವೆಂದು ಮೆರೆಯಿಸುವ ಸಾಮರ್ಥ್ಯದ ಬಗ್ಗೆ, ಕಟ್ಟುವ ದೃಷ್ಟಿಕೋನದ ಬಗ್ಗೆ ದೊಡ್ಡ ಸಿದ್ಧಾಂತವೇ ಇದೆ ಅವನ ಬಳಿ. ತನಿಖೆಯ ಆದ್ಯಂತವೂ ಅದನ್ನು ಕುರಿತು ಕೊರೆದದ್ದೇ ಕೊರೆದದ್ದು! ಓದಿ ನೋಡು. ಸಂಜೆ ಭೇಟಿಯಾದಾಗ ಚರ್ಚಿಸುವಾ...and you will know what I have resigned from..." ಎನ್ನುತ್ತ ದಸ್ತೂರ್ ಕೊಟ್ಟ ರಿಪೋರ್ಟಿನ ಪ್ರತಿಯನ್ನು ಸೀತಾರಾಮನ ಕೈಯಲ್ಲಿ ಇರಿಸಿದ: "ಜೋಪಾನವಾಗಿ ಇಟ್ಟುಕೋ. ಬೇರೆ ಪ್ರತಿಯಿಲ್ಲ. ಊಟಕ್ಕೆ ಹೊರಗೇ

ಹೋಗೋಣ. ’ಫ್ಲೋರಾ’ಗೆ? You will be my guest…thanks for the lunch.” ಕೈ ಕುಲುಕಿ ಬೀಳ್ಕೊಳ್ಳುವಾಗ ಸೀತಾರಾಮನ ಮೋರೆಯ ಮೇಲೆ ಮೂಡಿದ ಏನೋ ನಾಗಪ್ಪನನ್ನು ಬಲವಾಗಿ ತಟ್ಟಿತು.

## ಅಧ್ಯಾಯ ಎರಡು

ಕಳೆದ ಹದಿನಾಲ್ಕು ದಿನಗಳಲ್ಲಿ ತಾನು ಪಟ್ಟ ಯಾತನೆ ಕೊನೆಗೊಂಡ ರೀತಿಯ ನಿಜವಾದ ಒಂದು ಆಘಾತದ ಬಲದ ನಾಗಪ್ಪನಿಗೆ ಹೊಳೆದದ್ದು ನಿದ್ದೆಯಿಂದ ಎಚ್ಚರಗೊಂಡು ಹಾಸಿಗೆಯಲ್ಲಿ ಎದ್ದು ಕುಳಿತಾಗಲೇ.

ಕೈಗಡಿಯಾರ ನೋಡಿಕೊಂಡ: ಆರು ಹೊಡೆಯಲು ಬಂದಿತ್ತು. ಆಗಿನಿಂದಲೂ ಒಂದು ಬಗೆಯ ಹುಂಬ ಧೈರ್ಯ ತುಂಬಿದಂತಿದ್ದ ಬಿಯರಿನ ಅಮಲು ಈಗ ಸಂಪೂರ್ಣವಾಗಿ ಇಳಿದಿತ್ತು. ಬದಿಯ ಬೋಳು ಕಿಡಕಿಯಿಂದ ಕಾಣುತ್ತಿದ್ದ ಇದಿರಿನ ಚಾಳು, ಅಸ್ತಕ್ಕೆ ಹೊರಟ ಸೂರ್ಯನ ಹಳದೀ ಬಣ್ಣದ ಬಿಸಿಲಲ್ಲಿ, ಎಲ್ಲ ಆತ್ಮೀಯತೆಯ ಬಿಸಿಯನ್ನೂ ಕಳಕೊಂಡ ನಿರ್ಜೀವ ಗೆಳೆತನದ ಮುಸುಕೆಳೆದು ನಿಂತಂತೆ ನಿಂತಿತ್ತು. ತಾನು ಸಿಲುಕಿಕೊಂಡ ಸನ್ನಿವೇಶದ ಸರಿಯಾದ ಪರಿಚಯ ಈಗ ಆಯಿತೆನ್ನುವಂತೆ ಬದಕಿನಲ್ಲಿ ಈ ವರೆಗೂ ಅನುಭವಿಸಿರದ ತೀವ್ರತೆಯಿಂದ ಅರಿವಿಗೆ ಒಂದ ತನ್ನ ಏಕಾಕಿತನ ಚೀರಿಕೊಳ್ಳುವಷ್ಟರ ಮಟ್ಟಿಗೆ ಹೆದರಿಸಿ ನಡುಗಲು ಹಚ್ಚಿತು: ಅತ್ತುಬಿಡಬೇಕು ಎನ್ನುವಷ್ಟು ಮನಸ್ಸು ಭಾವಾವಿಷ್ಟವಾಗಿತ್ತು. ಮುಂದಿನ ಚಾಳಿನ ಮೇಲೆ ಬಿದ್ದ ಅರಿಸಿಣ ಬಣ್ಣದ ಬಿಸಿಲೇ ಈ ಭಾವುಕತೆಗೆ ಕಾರಣವಾಗಿತ್ತು ಎಂಬ ಅನ್ನಿಸಿಕೆಯಿಂದೆಂಬಂತೆ ಹಾಸಿಗೆಯಿಂದ ಎದ್ದು ಕಿಡಕಿಯ ಕದ ಮುಚ್ಚಿ ದೀಪ ಹಾಕಿದ. ನೆಮ್ಮದಿಯೆನ್ನಿಸುವ ಬದಲು ಜೀವಕ್ಕೆ ಹತ್ತಿದ ಹೆದರಿಕೆ ಹೆಚ್ಚೇ ಆಯಿತು. ಇಲ್ಲ, ಹೀಗೆ ಒಬ್ಬನೆ ರೂಮಿನಲ್ಲಿ ಕೂತುಬಿಟ್ಟರೆ ಹುಚ್ಚೇ ಹಿಡಿದೀತು. ಥಟ್ಟನೆ ಹೊಳೆದ ಒಂದು ಕಲ್ಪನೆಯಿಂದ ಚುರುಕುಗೊಂಡವನ ಹಾಗೆ ಕಿಡಕಿಯ ಕದ ತೆರೆದು ಹೊರಗೆ ಹೋಗುವ ತಯಾರಿ ಮಾಡಹತ್ತಿದ: ಮೋರಿಗೆ ಹೋಗಿ ಮೋರೆ ತೊಳೆದುಕೊಂಡ. ಕೈಗೆ ಸಿಕ್ಕ ಶರ್ಟು ಪ್ಯಾಂಟು ಧರಿಸಿದ. ಹಳೆಯ ಬೂಟು ಹಾಕಿಕೊಳ್ಳುವ ಮನಸ್ಸಾಗದೇನೇ ಚಪ್ಪಲಿ ಮೆಟ್ಟಿಕೊಂಡ. ಬೆಳಿಗ್ಗೆ ಹಾಕಿಕೊಂಡ ಪ್ಯಾಂಟಿನ ಕಿಸೆಯೊಳಗಿಂದ ಹಣದ ಪಾಕೀಟು ತೆಗೆದುಕೊಂಡ. ಕದಕ್ಕೆ ಬೀಗ ಹಾಕಿ ಜಿನ್ನೆಯ ಕಡೆಗೆ ನಡೆಯುವಾಗ ಚಾಳಿನಲ್ಲಿಯ ಒಬ್ಬರ ಪರಿಚಯವೂ ತನಗಿಲ್ಲ ಎನ್ನುವ ರೀತಿ, ಅತ್ತಿತ್ತ ಕಣ್ಣು ಹಾಯಿಸದೇ, ಮೂಗಿನ ನೇರಕ್ಕೆ ಹೆಜ್ಜೆ ಹಾಕಹತ್ತಿದ. ಮನಸ್ಸು ಒಂದನ್ನೇ ಕುರಿತು ಧೇನಿಸುತ್ತಿದ್ದವನ ಹಾಗೆ ಭಡಭಡ ಜಿನ್ನೆ ಇಳಿದು ಕೆಳಗಿನ ರೆಸ್ಟೋರೆಂಟಿಗೆ ಹೋದ. ಟೆಲಿಫೋನ್ ಕೆಟ್ಟಿದೆ ಎಂಬ ಸುದ್ದಿ

ಸಿಕ್ಕಾಗ ತುಸು ನಿರಾಶನಾದ. ಇನ್ನೊಂದು ಫೋನು ಆರನೇ ಗಲ್ಲಿಯ ಕೊನೆಯಲ್ಲಿತ್ತು. ಅಲ್ಲಿಗೇ ಹೋದ. ಹಿಂದೊಮ್ಮೆ, ರೆಸ್ಟೋರೆಂಟಿಗೆ ಫೋನ್ ಮಾಡಲು ಬಂದಾಗ ಭೇಟಿಯಾದ ಹುಡುಗಿಯೇ ಮಾತನಾಡುತ್ತಿದ್ದದ್ದು ಕಂಡಿತು. ಇವನ ಗುರುತು ಹಿಡಿದ ಹುಡುಗಿ ಮೋಹಕವಾಗಿ ನಕ್ಕಳು—ಇದೀಗ ಮುಗಿಸುತ್ತೇ ಎನ್ನುವ ಸನ್ನೆಯನ್ನು ಕಣ್ಣಿನಿಂದಲೇ ಮಾಡುತ್ತ. ಅವಳ ನಗು ಒಳಗೆ ಗೆಲುವು ಚಿಗುರಲು ಕಾರಣವಾಯಿತು. ರಾಣಿ ನೆನಪಿಗೆ ಬಂದಳು. ಈ ಹೊತ್ತು ಅವಳು ಬೇಕೇ ಬೇಕು ಅನ್ನಿಸಿತು. ಆದರೆ ಸದ್ಯ ಮಾಡಬೇಕಾದ ಜರೂರಿಯ ಕೆಲಸ ಸೀತಾರಾಮನಿಗೆ ಫೋನ್‌ಮಾಡುವುದಾಗಿತ್ತು. ಭರವಸೆ ಕೊಟ್ಟ ಹಾಗೇ ಹುಡುಗಿ ಫೋನ್ ಬಿಟ್ಟುಕೊಟ್ಟಿದ್ದಳು. ಚಂದವಾಗಿ ಇನ್ನೊಮ್ಮೆ ನಕ್ಕು—"It is all yours, Sir," ಎಂದಳು. 'ಥ್ಯಾಂಕ್ಸ್' ಎನ್ನುವಾಗ, ತುಂಬ ದಿಟ್ಟ ಹುಡುಗಿ ಎಂದುಕೊಂಡು, ತನ್ನಷ್ಟಕ್ಕೇ ನಕ್ಕ.

ಸೀತಾರಾಮನ ಫೋನ್ ನಂಬರ್ ಡಾಯಲ್ ಮಾಡಿದ. ಆಪರೇಟರ್ ಲೈನ್ ಮೇಲೆ ಬಂದು, 'ಪ್ಲೀಜ್ ಹೋಲ್ಡಾನ್,' ಎಂದಾಗ ಒಂದೂ ಮಗ ಇದ್ದರೆ ಸಾಕು; ಇಷ್ಟರೊಳಗೇ ಹೋಗಿರದಿದ್ದರೆ ಸಾಕು ಎನ್ನುವ ಕಾತರದಿಂದ ಸೀತಾರಾ ಫೋನ್ ಮೇಲೆ ಬರುವುದನ್ನು ಕಾಯಹತ್ತಿದ. ಅವನು ಫೋನ್ ಮೇಲೆ ಬಂದು, ಮಾತನಾಡಿಸುತ್ತಿದ್ದವನು ನಾಗಪ್ಪನೆಂದು ತಿಳಿದದ್ದೇ ತಡ— "My God! I have really started believing in telepathy... ನೀನು ನಂಬಬೇಕು ನಾಗಪ್ಪಾ! ಒಂದೇ ಒಂದು ಕ್ಷಣದ ಮೊದಲಷ್ಟೇ ನಿನ್ನನ್ನು ನೆನೆದಿದ್ದೆ." ಎಂದ. ಏಕೋ ಸೀತಾರಾಮನ ಮಾತಿನ ಧಾಟಿ ಎಂದಿನದಾಗಿ ತೋರಲಿಲ್ಲ. ಅದರಲ್ಲಿ ಏನೋ ಏನೋ ಕಡಿಮೆಯಾಗಿತ್ತು. ಏನೆನ್ನುವದು ನಾಗಪ್ಪನಿಗೆ ಸ್ಪಷ್ಟವಾಗಲಿಲ್ಲ. ತಾನು ಫೋನ್ ಮಾಡಲು ಬಂದ ಉದ್ದೇಶ ತಿಳಿಸುವ ಮನಸ್ಸಾಗಲಿಲ್ಲ. 'ಏಕೋ ಮಧ್ಯಾಹ್ನದ ನಿದ್ದೆಯಿಂದ ಎಚ್ಚರವಾದದ್ದೇ, ಆss ಎನ್ನುತ್ತ ಎದ್ದು ಬಂದ ಏಕಾಕಿತನ ಇಷ್ಟೊಂದು ಹೆದರಿಸಿಬಿಟ್ಟಿತೆಂದರೆ ಈಗಲೇ ನಿನ್ನ ಆಫೀಸಿಗೇ ಬಂದುಬಿಡುತ್ತೇನೆ ಟ್ಯಾಕ್ಸಿಯಿಂದ. ನಿನ್ನ ಹತ್ತರ ಮಾತನಾಡುವದು, ಬಹಳವಿದೆ. ಎಂದು ತಿಳಿಸಲು ಈಗ ಫೋನ್ ಮಾಡುತ್ತಿದ್ದೇನೆ' ಎನ್ನುವದಿತ್ತು. ಸೀತಾರಾಮನ ದನಿ ಕೇಳಿಸಿದ ಮೇಲೆ ಹಾಗೆ ಅನ್ನ ಬೇಕೆಂದು ತೋರಲಿಲ್ಲ. ನೋವಿನ ಸಂಗತಿಯೆಂದರೆ, ಸೀತಾರಾಮ ಆ ಸಂಧಿಯನ್ನೇ ಅವನಿಗೆ ಕೊಡಲಿಲ್ಲ; ಒಂದೇ ಕ್ಷಣದ ಮೊದಲು

ತನಗೆ ನಾಗಪ್ಪನ ನೆನಪಾದದ್ದರಿಂದಲೇ ಅವನೀಗ ಫೋನ್ ಮಾಡುತ್ತಿದ್ದಾನೆ ಎನ್ನುವುದನ್ನು ಗ್ರಹೀತ ಹಿಡಿದೇ ಮಾತನಾಡುವವನ ಹಾಗೆ–"I just can't believe it" ಎಂದ.

"What is it that you can't believe?-ನಾಗಪ್ಪನ ಗುಮಾನಿ ಗಟ್ಟಿಯಾಗಹತ್ತಿತ್ತು: ಇವನು ನಾಲ್ಕೇ ನಾಲ್ಕು ತಾಸುಗಳ ಹಿಂದೆ ಭೇಟಿಯಾದ ಸೀತಾರಾಮನೇ ಅಲ್ಲ ಅನ್ನಿಸಿತು.

ಸೀತಾರಾಮನೇ ಮಾತನಾಡಿಸಿದ: "ನೀನು ಆಗ ಕೊಟ್ಟ ರಿಪೋರ್ಟನ್ನು ಓದಿದೆ." ಎಂದು, ತಾನು ನಂಬಲಾರೆನೆಂದದ್ದು ಆ ರಿಪೋರ್ಟ್ ಎನ್ನುವುದನ್ನು ಸ್ಪಷ್ಟಪಡಿಸಿದ.

"ನಂಬಬೇಡ ಸೀತಾರಾಮ್. ಅದು ಚಿತ್ರಿಸಿದ ವ್ಯಕ್ತಿತ್ವ ನನ್ನದೆಂದು ನಂಬುತ್ತೀಯಾ? ಅದಕ್ಕೇ ಬರುವವನಿದ್ದೆ ನಿನ್ನ ಜೊತೆಗೆ ಮಾತನಾಡಲು: ಮಾನವ-ಜೀವಿಗಳನ್ನು ಬೇರೆಯೇ ಒಂದು ದೃಷ್ಟಿಕೋನದಿಂದ ನೋಡುವ ವಿಲಕ್ಷಣ ಲೋಕವೊಂದು ಇದೇ ಮಹಾನಗರದಲ್ಲಿ ಹೇಗೆ ಬೇರೂರಿದೆ ಎಂಬುದರ ಬಗ್ಗೆ..."

ಸೀತಾರಾಮ ಒಮ್ಮೆಲೇ ತಾಳ್ಮೆಗೆಟ್ಟವನ ಹಾಗೆ: "Come on Nagappa. A point of view can interpret facts; it cannot create them...ನಿನ್ನ, ಅಪ್ಪ-ಅಮ್ಮ ಬ್ರಾಹ್ಮಣರಾಗಿರಲಿಲ್ಲ ಎನ್ನುವದೂ ಸುಳ್ಳೇ? ಸುಳ್ಳಲ್ಲವೆಂದು ಗೊತ್ತಿದ್ದೂ ನೀನು..."

"ಇದು ನಿಜವಲ್ಲ ಸೀತಾರಾಮ. ನನ್ನ ಅಪ್ಪ-ಅಮ್ಮರ ಬಗ್ಗೆ ಖಚಿತವಾಗಿ ನಾನೇನೂ ಅರಿಯೆ. ಇಷ್ಟೆ, I care a damn if they were not Brahmins..."

"ಹೌssದೆ? ಬಹಳ ದೊಡ್ಡ ಕ್ರಾಂತಿಕಾರಿ ನೀನು ಎಂದು ತೋರಿಸಿಕೊಳ್ಳಬೇಡ. ನಿನ್ನ ತಾಯಿಯಾಗಲೀ ಅಪ್ಪನಾಗಲೀ ಬ್ರಾಹ್ಮಣರಾಗಿರಲಿಲ್ಲ ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ, ಶ್ರೀನಿವಾಸನ ಹತ್ತಿರ. ಅವನು ಒದಗಿಸಿದ ಮಾಹಿತಿಯೇ ಈ ರಿಪೋರ್ಟಿಗೆ ಆಧಾರವಾಗಿದೆ... ಅರ್ಧಗಂಟೆಯ ಮೊದಲಷ್ಟೇ ಶ್ರೀನಿವಾಸ ಇಲ್ಲಿ ಬಂದಿದ್ದ. ನಿನ್ನ ಫೋನ್ ಬರುವ ಎರಡೇ ಎರಡು ಮಿನಿಟುಗಳ

ಮೊದಲು ಹೊರಟುಹೋದ. ಅವನು ಬಂದದ್ದರಿಂದಲೇ ಆಫೀಸಿನಲ್ಲಿ ಇಷ್ಟು ಹೊತ್ತು ಕೂಡ್ರುವುದಾಯಿತು. ಇಂದು ಸಂಜೆ ಏಳು ಗಂಟೆಗೆ ಸ್ಕಾಲರ್‌ಶಿಪ್ ಲೀಗಿನ ವರ್ಕಿಂಗ್ ಕಮಿಟಿಯ ಒಂದು ಎಮರ್ಜನ್ಸೀ ಮೀಟಿಂಗ್ ಕರೆಯಲಾಗಿದೆ..."

"ಅದಕ್ಕೂ ನನಗೂ ಏನು ಸಂಬಂಧ?"

"ನೀನು ಮಾಡಿದಂಥ ಮೋಸ ಮತ್ತೆ ಆಗದಿರಲು ನಾವು ಕೈಕೊಳ್ಳಬೇಕಾದ ಉಪಕ್ರಮಗಳ ಚರ್ಚೆ..."

ನಾಗಪ್ಪನ ಸಿಟ್ಟು ಮಸ್ತಕಕ್ಕೇರಹತ್ತಿತು. ಇವನು ಟೆಲಿಫೋನ್ ಮೇಲೆ ತೆಗೆದುಕೊಳ್ಳುತ್ತಿದ್ದ ವೇಳೆಗೆ ಬೇಸರಪಟ್ಟು ಅದೇ ಬೂಥಿಗೆ ಬಂದ ಇನ್ನಿಬ್ಬರು ಹಾಗೇ ಹೊರಟುಹೋದರು:

"ಇದರಲ್ಲೆಂಥ ಮೋಸ? ಇದೆಲ್ಲ ಶ್ರೀನಿವಾಸನ ಕಿತಾಪತಿ. ಇವನಿಗೆ ನನ್ನ ಬಗ್ಗೆ ಇಷ್ಟೊಂದು ಹಗೆ ಯಾಕೊ?—ಇನ್ನೂ ಅರ್ಥವಾಗುವುದಿಲ್ಲ."

"ನಿನ್ನ ಅಪ್ಪ-ಅಮ್ಮ ಬ್ರಾಹ್ಮಣರಲ್ಲ ಎನ್ನುವುದನ್ನು ಈಗ ತನಿಖೆಯ ಆಯೋಗದ ಇದಿರು ನೀನೂ ಒಪ್ಪಿಕೊಂಡಿದ್ದೀಯಂತಲ್ಲ. ನೀನು ಹದಿನೆಂಟು ವರ್ಷದವನಿದ್ದಾಗಲೇ ಈ ಸಂಗತಿ ನಿನಗೆ ತಿಳಿದಿತ್ತೆಂದು ಕೂಡ...ನನಗಿದೆಲ್ಲ ಹೇಗೆ ಗೊತ್ತಾಯಿತೆಂದು ಆಶ್ಚರ್ಯವಾಗುತ್ತಿರಬೇಕು ಅಲ್ಲವೆ? ಶ್ರೀನಿವಾಸನೇ ಹೇಳಿದ: ತನಿಖೆ ಮುಗಿದ ನಂತರ ಆ ಆಯೋಗದ ಮಂದಿಯ ಜೊತೆಗೇ ತಾಜಮಹಲಿನಲ್ಲೇ ಊಟ ಮಾಡಿದ..."

ನಾಗಪ್ಪನಿಂದ ನಂಬುವುದಾಗಲಿಲ್ಲ...ಕ್ಲೋಕ್-ರೂಮಿನಿಂದ ಹೊರಗೆ ಬಂದಮೇಲೆ ರಾಜೀನಾಮೆ ಕೊಡುವ ತನ್ನ ನಿರ್ಧಾರವನ್ನು ದಸ್ತೂರನಿಗೆ ತಿಳಿಸುವ ಕೆಲವೇ ಕ್ಷಣಗಳ ಮೊದಲಷ್ಟೇ-ಈವರೆಗಿನ ಮಾತುಕತೆಗೆ ಯಾವ ಪೂರ್ವಾಪರ ಸಂಬಂಧವೂ ಇಲ್ಲದ ಅಪ್ಪ-ಅಮ್ಮರ ಜಾತಿಯ ಪ್ರಶ್ನೆಯಿಂದ ಅವನು ತನ್ನನ್ನು ಕೆಣಕಿದಾಗ ಸಿಟ್ಟಿನಿಂದ ಕೊಟ್ಟ ಒಂದು ನಾಟಕೀಯವಾದ ಉತ್ತರ ಕೂಡ ಶ್ರೀನಿವಾಸನ ಕಿವಿಯನ್ನು ಇಷ್ಟು ಬೇಗ ಮುಟ್ಟಬೇಕಾದರೆ...! ಶ್ರೀನಿವಾಸನ ಸಮಾಧಾನಕ್ಕಾಗಿಯೇ ದಸ್ತೂರ್ ಆ ಪ್ರಶ್ನೆಯನ್ನು ಆ ಗಳಿಗೆಯಲ್ಲಿ ಕೇಳಿರಬೇಕು...ಸೀತಾರಾಮನಿಗೀಗ ಏನೂ ಹೇಳಿ ಏನೂ ಉಪಯೋಗವಿಲ್ಲ

ಎಂದು ತೋರಿದವನ ಮನಸ್ಸು ಹೊಸ ನಿರ್ಧಾರಕ್ಕೆ ಗಟ್ಟಿಯಾಗುತ್ತಿತ್ತು... ಇವನ ಮೌನವನ್ನು ತಪ್ಪಾಗಿ ತಿಳಿದ ಸೀತಾರಾಮನೇ ಮುಂದುವರಿದ:

"ಇದರರ್ಥ: ಸಾರಸ್ವತ ಬ್ರಾಹ್ಮಣ ವಿದ್ಯಾರ್ಥಿಗಳಿಗೇ ಮೀಸಲಾಗಿಟ್ಟ ಈ ಸ್ಕಾಲರ್‌ಶಿಪ್ ಸಲುವಾಗಿ ಅರ್ಜಿ ಮಾಡುವಾಗ, ಮುಂದಿನ ಎಂಟು ವರ್ಷಗಳವರೆಗೆ ಅದನ್ನು ಪಡೆಯುವಾಗ ನೀನು ಬ್ರಾಹ್ಮಣನಲ್ಲ ಎನ್ನುವದು ನಿನಗೆ ಗೊತ್ತಿತ್ತು ..."

"ಈಗಲೂ ಗೊತ್ತಿಲ್ಲ. ಮೇಲಾಗಿ ಸ್ಕಾಲರ್‌ಶಿಪ್ ಸಲುವಾಗಿ ಅರ್ಜಿ ಮಾಡಿದಾಗ ನನಗೆ ಬರೇ ಹನ್ನೆರಡು ವರ್ಷ ಪ್ರಾಯ. ಅದೂ ಒಂದು ಲೋನ್ ಸ್ಕಾಲರ್‌ಶಿಪ್ ಸಲುವಾಗಿ. ಪೈ ಬಿಡದೇ ಹಿಂತಿರುಗಿಸಿದ್ದೇನೆ..."

"ಮುಖ್ಯ ಮುದ್ದೆ ಅದು ಅಲ್ಲವೇ ಅಲ್ಲ...the point is— you and your father were capable of misrepresenting facts if it..."

"ಸೀತಾರಾಮ್ ಜೋಕೆ!...I know you and your dirty tribe. ಬಾಯಿ ಬಿಗಿ ಹಿಡಿದು ಮಾತನಾಡು. ನೀನು ಯಾವ ಜಾತಿಯವನು ಎನ್ನುವದು ನಿನ್ನ ಈಗಿನ ವರ್ತನೆಯಿಂದ ಗೊತ್ತಾಗುತ್ತದೆ. ಲಫಂಗರೆಲ್ಲ ಒಂದೆಡೆ ಕೂಡಿ ನನ್ನನ್ನು ಮುರಿಯಲು ಹೂಡಿದ ಸಂಜಿನ ಅಂಗವಾಗಿ ಸಿದ್ಧಪಡಿಸಿದ ಒಂದು ಹೊಲಸು ರಿಪೋರ್ಟನ್ನು ಓದಿದ ಕ್ಷಣಾರ್ಧದಲ್ಲಿ ನಮ್ಮ ಗೆಳೆತನವನ್ನು ಕೂಡ ಮರೆತುಬಿಡುವಷ್ಟು ಹೀನ ಮಟ್ಟಕ್ಕೆ ನೀನು ಇಳಿಯಬಹುದೆಂದು ನಾನು ಬಗೆದಿರಲಿಲ್ಲ. ನಮ್ಮ ಇಷ್ಟು ದಿನದ ಗೆಳೆತನದ ಹಿನ್ನೆಲೆಯಲ್ಲಿ ನೀನದರ ಅರ್ಥ ಮಾಡುತ್ತೀ ಎಂಬ ಧೈರ್ಯದ ಮೇಲೇ ನಿನ್ನ ಕೈಯಲ್ಲಿ ಆ ರಿಪೋರ್ಟನ್ನು ನಾನಾಗಿಯೇ ಕೊಟ್ಟಿದ್ದೆ..."

"ಬೆದರಿಕೆ ಹಾಕುತ್ತೀಯೇನೋ? ಅಪ್ಪ-ಅಮ್ಮರ ಬಗ್ಗೇ ಸರಿಯಾಗಿ ಗೊತ್ತಿಲ್ಲ ಎನ್ನುವ ನೀನು ಎಂಥವನೆಂಬುದು ಗೊತ್ತಾಗುವದಿಲ್ಲವೇನೋ? ನೀನು ರಾಜೀನಾಮೆ ಕೊಟ್ಟ ಪರಾಕ್ರಮದ ಹಿಂದಿನ ಗುಟ್ಟು ನನಗೆ ಗೊತ್ತಿಲ್ಲವೆಂದು ತಿಳಿಯಬೇಡ: ರಾಜೀನಾಮೆ ನೀನು ಕೊಟ್ಟದ್ದಲ್ಲ; ನಿನ್ನಿಂದ ಕೊಡಿಸಿದ್ದು. ಪ್ರಕರಣವನ್ನು ಅಷ್ಟಕ್ಕೇ ಮುಗಿಸಿ ನಿನ್ನ ಬಿಡುಗಡೆಮಾಡಿದರೆನ್ನುವುದು

ಪೂರ್ವಜನ್ಮದ ಪುಣ್ಯವೆಂದು ತಿಳಿ. ನಮ್ಮ ಗೆಳೆತನವನ್ನು ನಂಬಿ ಆ ಕಾನ್ಫಿಡೆನ್ಶಿಯಲ್ ರಿಪೋರ್ಟಿನ ಕಾಪಿ ನನ್ನ ಕೈಗೆ ಕೊಟ್ಟೆಯಲ್ಲವೆ! ಸೀತಾರಾಮನೆಂಬ ಗೆಳೆಯನಿದ್ದುದರ ನೆನಪು ಈಗ ಆಯಿತಲ್ಲವೆ? ಆದರೆ ಸಸ್ಪೆಂಡ್ ಮಾಡಿದಾಗ ಮಾತ್ರ ಶ್ರೀನಿವಾಸನೇ ಬೇಕಾದ: ಹೋಗಿದ್ದೆಯಂತಲ್ಲ ಅವನ ಕಾಲು ಹಿಡಿಯಲು. ಕಾಲಿಗೆ ಬೂಟು ಹಾಕುವ ಪುರಸತ್ತೂ ಇಲ್ಲದವನ ಹಾಗೆ ಅವನ ಮನೆ ಬಿಟ್ಟು ಓಡಿಬಂದೆಯಂತಲ್ಲ: ಕಂಡ ನೆರೆಹೊರೆಯವರೆಲ್ಲ ಆಡಿಕೊಳ್ಳುತ್ತಿದ್ದಾರಂತೆ! ಶ್ರೀನಿವಾಸ ನಿನ್ನ ಈ ಪ್ರಕರಣದ ಬಗ್ಗೆ ತಾನಾಗಿಯೇ ಬಾಯಿ ಬಿಟ್ಟು ಏನೂ ಹೇಳಲಿಲ್ಲ. ಬಾಯಿ ಬಿಟ್ಟು ಹೇಳುವ ವಿಷಯವೇ ಅಲ್ಲವಾದರೆ ಅವನಾದರೂ ಏನು ಮಾಡಿಯಾನು ಪಾಪ. ಆದರೂ ನಿನ್ನನ್ನು ಬಲ್ಲ ನಾನು ನಡೆದಿರಬಹುದಾದ್ದನ್ನು ಸಹಜವಾಗಿ ಊಹಿಸಬಲ್ಲೆ... ರಿಪೋರ್ಟು ನೀನು ಕೊಡದಿದ್ದರೂ ನನಗೇ ಸಿಕ್ಕೇ ಸಿಗುತ್ತಿತ್ತು. ಶ್ರೀನಿವಾಸನೇ ಅದರ ಪ್ರತಿಯೊಂದನ್ನು ಕೊಟ್ಟು ಹೋಗಿದ್ದಾನೆ. ಅದರಲ್ಲಿ ಈ ರಿಪೋರ್ಟು ಯಾರ ಬಗ್ಗೆ ಇದೆ ಎನ್ನುವದು ತಿಳಿಯದ ಹಾಗೆ ನೀನು ಕೊಟ್ಟ ಪ್ರತಿಯಲ್ಲಿಯಂತೆ ನಿನ್ನ ಹೆಸರನ್ನು ಕಾಟು ಹಾಕಿಲ್ಲ. ಝುಳಝುಳವಾಗಿ ಎಲ್ಲ ಕ್ಯಾಪಿಟಲ್ ಅಕ್ಷರಗಳಲ್ಲೇ ಬರೆದಿದ್ದಾರೆ: ನಾಗನಾಥ ಎಲಿಯಾಸ್ ನಾಗಪ್ಪಾ ಸಾಂತಯ್ಯಾ ಮಾಪ್ಸೇಕರ್! ಮಾಪ್ಸೇಕರ್: ಈಗ ಚಕ್ಕನೆ ಬೆಳಕು ಬೀಳುತ್ತದೆ. ನೋಡು-ಸ್ವಚ್ಛವಾಗಿ ಕಣ್ಣುತೆರೆಯಿಸುವ ಹಾಗೆ... ಥತ್ ಸೂssಳೇಮಗನೇ... ನಿನ್ನ ಅಣ್ಣ—ಅವನು ಇನ್ನೊಬ್ಬ..."

"ಸೀತಾರಾಮ್ ಕೇಳಿಲ್ಲಿ. ಕಿವಿಗೊಟ್ಟು ಕೇಳು. ಹೀಗೆ ಮಾತನಾಡುವ ಧೈರ್ಯ ನಿನ್ನಂತಹ ನೀರಿಲ್ಲದ ಹೇಡಿಗೆ ಬಂದದ್ದು ಈ ಮಾತುಕತೆ ನಡೆದದ್ದು ಟೆಲಿಫೋನ್ ಮೇಲೆ ಎಂಬ ಕಾರಣಕ್ಕೇ. ಇದಿರಿಗೆ ಸಿಕ್ಕರೆ ಹಲ್ಲುಗಳನ್ನೆಲ್ಲ ಉದುರಿಸಿ ಹೊಟ್ಟೆಯಲ್ಲಿರಿಸುತ್ತಿದ್ದೆ...ನನ್ನ ಆಫೀಸಿನ ಜನ ನನ್ನ ಬಗ್ಗೆ ನಡೆಸಿದ ಪಿತೂರಿಯ ಅರ್ಥ ನಾನು ಮಾಡಿಕೊಳ್ಳಬಲ್ಲೆ. ಕೇವಲ ಆತ್ಮರಕ್ಷಣೆಯೇ, ತಮ್ಮ ತಮ್ಮ ಹಿತಾಸಕ್ತಿಗಳಿಗೆ ಧಕ್ಕೆ ಬರದ ಹಾಗೆ ನೋಡಿಕೊಳ್ಳುವದೇ, ಅದರ ಹಿಂದಿನ ಪ್ರೇರಣೆಯೆಂದು ತಿಳಿದಿದ್ದೇನೆ. ಶ್ರೀನಿವಾಸನಿಗೆ ನನ್ನ ಬಗ್ಗೆ ಇದ್ದ ದ್ವೇಷದ ಅರ್ಥವಾಗಿರದಿದ್ದರೂ ಕಾಲಕಾಲಕ್ಕೆ ಅದಕ್ಕೆ ಪ್ರೋತ್ಸಾಹವಿತ್ತ ಸಂಗತಿಗಳ ಅರ್ಥವಾದರೂ ಆಗುತ್ತದೆ. ಆದರೆ ಯಾವ ಕಾರಣವೂ ಇಲ್ಲದೇನೇ, ಇಷ್ಟು ದಿವಸ ಶ್ರೀನಿವಾಸನನ್ನು, ಈಗ ಒಮ್ಮೆಲೇ ನನ್ನನ್ನು ದ್ವೇಷಿಸುವ ನೀನು ಅರ್ಥವಾಗುತ್ತಿಲ್ಲ.

ಜರ್ನೆಲಿಸ್ಟ್ ಅನ್ನಿಸಿಕೊಳ್ಳುತ್ತೀಯಾ, ಮೇಲಾಗಿ. ಯಾವುದೇ ಕಮ್ಮಿಟ್‌ಮೆಂಟ್ ಇಲ್ಲದ ಎಡಬಿಡಂಗಿ ನೀನು—an uncommitted cancer cell which multiplies and kills without purpose... ಇಲ್ಲಿ ಟೆಲಿಫೋನಿಗೆ ಕ್ಯೂ ಬೆಳೆಯುತ್ತಿದೆ. ನಿನ್ನೊಡನೆ ಮಾತನಾಡುತ್ತಿರುವಾಗಲೇ ಒಂದು ನಿರ್ಧಾರಕ್ಕೆ ಬಂದೆ ನೋಡು: ಕೆಲಸಕ್ಕೆ ರಾಜೀನಾಮೆ ಕೊಟ್ಟ ಮೇಲೆ ಏನು ಮಾಡಲಿ ಎಂದು ಇನ್ನೂ ನಿಶ್ಚಯಿಸಿರಲಿಲ್ಲ. ಈಗ ಸರಕ್ಕನೆಂಬಂತೆ ಮನಸ್ಸು. ಗಟ್ಟಿಯಾಯಿತು: ಈ ಶ್ರೀನಿವಾಸರನ್ನು, ಸೀತಾರಾಮರನ್ನು, ಬಂದೂಕವಾಲಾ-ದಸ್ತೂರರನ್ನು ನಾನು ವೈಯಕ್ತಿವಾಗಿ ದ್ವೇಷಿಸಿ ಉಪಯೋಗವಿಲ್ಲ. ಅವರು ವ್ಯವಹರಿಸುತ್ತ ಭದ್ರಗೊಳಿಸುತ್ತಿರುವ ನೆಲದಡಿಯ ಈ ಹೊಸ ಜಗತ್ತನ್ನೇ ನಾನು ಬಯಲಿಗೆಳೆಯಬೇಕಾಗಿದೆ. ಜೊತೆಗೆ ಅವರ ಕಪ್ಪುಕರಾಮತಿಗಳಿಗೆ ಸುಣ್ಣಬಳೆಯುವ ನಿನ್ನ ಲೀಗಿನಂಥ ಅನೇಕ ಸಂಘ-ಸಂಸ್ಥೆಗಳನ್ನೂ. ನನ್ನ ಉಳಿದ ಆಯುಷ್ಯವನ್ನೀಗ ಇದಕ್ಕೇ ಮೀಸಲಿರಿಸುತ್ತೇನೆ: ನೀನು ತಿಳಕೊಂಡ ಹಾಗೆ ಕತೆ-ಕಾದಂಬರಿಗಳನ್ನು ಬರೆಯುವದಕ್ಕಲ್ಲ—ನಿಮ್ಮಂತಹರ ನಿಜವಾದ ಬಣ್ಣತೋರಿಸಿಕೊಡಲು ಅನುವು ಮಾಡಿಕೊಡಬಹುದಾದಂತಹ ಜರ್ನೆಲಿಸಮ್..."

ಟೆಲಿಫೋನ್ ಕೆಳಗಿರಿಸಿದ್ದೇ, ಬೂಥಿನಲ್ಲೇ ಮುಗ್ಗರಿಸಿ ಬೀಳುವಂತೆ ಆದದ್ದಕ್ಕೆ ಕಾರಣ ತನಗೆ ಬಂದ ಮೂರ್ಛೆ ಎಂಬುದು ತಿಳಿಯಲು ಕೂಡ ನಾಗಪ್ಪನಿಗೆ ಕೆಲ ಹೊತ್ತು ಹಿಡಿಯಿತು. ಮೂರ್ಛೆಯಿಂದ ತಿಳಿದೆದ್ದು ಕಣ್ತೆರೆದಾಗ ತಾನಿನ್ನೂ ಟೆಲಿಫೋನ್ ಬೂಥ್ ಇದ್ದ ಫೂಟ್‌ಪಾಥಿನ ಮೇಲೇ ಕುಕ್ಕುರುಗಾಲಲ್ಲಿ ಕೂತಿದ್ದೇನೆ, ಐದಾರು ಜನ ತನ್ನನ್ನು ಸುತ್ತುವರಿದು ನಿಂತಿದ್ದಾರೆ ಎನ್ನುವದು ಲಕ್ಷ್ಯಕ್ಕೆ ಬಂದದ್ದೇ ತಡ, ತುಂಬ ಮುಜಗರಪಟ್ಟವನ ಹಾಗೆ ಸರಕ್ಕನೆ ಎದ್ದು ನಿಂತು, I am sorry ಎಂದ. ಸುತ್ತವರಿದು ನಿಂತವರಲ್ಲಿಯ — ಸಪೂರಾದ ಬಿಳಿಯ ಪ್ಯಾಂಟಿನ ಮೇಲೆ ಮೊಣಕಾಲು ಮುಚ್ಚುವಷ್ಟು ಉದ್ದವಾದ ಕಪ್ಪುಬಣ್ಣದ ಕೋಟು; ತಲೆಗೆ ಅದೇ ಬಣ್ಣದ ಗೋಲಾಕಾರದ ಟೋಪಿ; ದೊಡ್ಡ ಮೂಗಿನ ಮೇಲೆ ಕಾಯಂ ಆಗಿ ತಳವೂರಿದಂತಿದ್ದ— ಬೆಳ್ಳಿಯಂಥ ಲೋಹದ ಫ್ರೇಮ್ ಇದ್ದ—ಕನ್ನಡಕ ಧರಿಸಿದ ಮುದುಕನೊಬ್ಬ ತುಂಬಿದ ಸಹಾನುಭೂತಿಯಿಂದ ಹೆಗಲ ಮೇಲೆ ಕೈಯಿಟ್ಟು— "ನಿಮ್ಮ ಮನೆ ಇಲ್ಲಿಂದ ಬಹಳ ದೂರವಿದೆಯೆ?" ಎಂದು ಕೇಳಿದ. ಮುದುಕ ಪಾರ್ಸಿ

ಎಂದು ಅವನ ವೇಷಭೂಷಣಗಳೇ ಸಾರುತ್ತಿದ್ದುವು. ಅನುನಾಸಿಕಪ್ರಧಾನವಾದ ಇಂಗ್ಲೀಷು ಅದನ್ನು ಇನ್ನಷ್ಟು ಸ್ಪಷ್ಟಪಡಿಸಿತು. ಮುದುಕನ ಕೈಯ ಸ್ಪರ್ಶಕ್ಕೆ ಮೆತ್ತಗಾದ ನಾಗಪ್ಪ, "ಗಲ್ಲಿಯ ಕೊನೆಯಲ್ಲೇ ಇದೆ ಮನೆ. ನಾನೀಗ ಆರಾಮವಾಗಿದ್ದೇನೆ." ಎಂದು ಹೊರಡಲುನುವಾದಾಗ, ಮುದುಕ "ofcourse! ofcourse you are allright..." ಎಂದು, ಮಗುವನ್ನು ಪುಸಲಾಯಿಸುವ ಧಾಟಿಯಲ್ಲಿ ಅನ್ನುತ್ತ ಅವನ ಜತೆಯಾಗಿಯೇ ನಡೆದು, ಖೇಮರಾಜಭವನದ ಹೆಬ್ಬಾಗಿಲವರೆಗೆ ಬಂದು ಬಿಟ್ಟ, ಈ ಮೊದಲು ಸುತ್ತುಗಟ್ಟಿ ನಿಂತವರೆಲ್ಲ ಒಬ್ಬೊಬ್ಬರೇ ಚೆದರಿದ್ದರು. ಮುದುಕ ಇನ್ನೊಮ್ಮೆ ನಾಗಪ್ಪನ ಬೆನ್ನು ಸವರುತ್ತ— "ಯಾಕೆ ಹೇಳುತ್ತಿದ್ದೇನೋ ಗೊತ್ತಿಲ್ಲ. ಆದರೆ ಹೇಳಬೇಕೂ ಅನ್ನಿಸುತ್ತದೆ... I was watching you when you were talking on the phone... ಯಾರೋ ನಿಮ್ಮ ಸಿಟ್ಟಿಗೆ ಕಾರಣವಾಗಿರಬೇಕು. ಆದರೆ ಇಷ್ಟೊಂದು ಸಿಟ್ಟು ಆರೋಗ್ಯಕ್ಕೆ ಒಳ್ಳೆಯದಲ್ಲ. ನೀವು ನಡುಗುತ್ತಿದ್ದ ರೀತಿಯಿಂದ, ಕೈ ಎತ್ತೆತ್ತಿ ಮಾತನಾಡುವ ಬಗೆಯಿಂದ ಹೊರಗೆ ನಿಂತ ನಮಗೆಲ್ಲ ನೀವೆಲ್ಲಿ ಬೂಥಿನ ಗ್ಲಾಸು ಒಡೆಯುತ್ತೀರೋ ಎಂಬ ಭಯವಾಯಿತು. ನಿಮಗೆ ಬಂದೆ ಸಿಟ್ಟನ್ನು ನೋಡಿದರೆ ನೀವು ಯಾರೊಡನೆ ಮಾತನಾಡುತ್ತಿದ್ದಿರೋ, ಅವರೊಬ್ಬರೇ ಅದಕ್ಕೆ ಕಾರಣವಾಗಿರಲಿಕ್ಕಿಲ್ಲ, ಅನ್ನಿಸುತ್ತದೆ. ವಿಚಾರಮಾಡಿ ನೋಡಿ. ಮೊದಲು ಎಲ್ಲವನ್ನೂ ಮರೆತು ಸ್ವಸ್ಥ ನಿದ್ದೆ ಮಾಡಿರಿ; ಇಲ್ಲ, ನಿಮಗೆ ನಂಬಿಕೆ ಇದ್ದರೆ ಕೈಮುಗಿದು ಕುಳಿತು ಪ್ರಾರ್ಥನೆಮಾಡಿರಿ," ಎಂದವನೇ ಅಲ್ಲಿ ಹೆಚ್ಚುಹೊತ್ತು ನಿಲ್ಲದೇ, ಬಿಟ್ಟು ಬಂದ ಟೆಲಿಫೋನ್ ಬೂಥಿನ ಕಡೆಗೆ ಹಿಂತಿರುಗಿ ಹೊರಟೇಬಿಟ್ಟ.

ಅಚಾನಕವಾಗಿ ಭೇಟಿಯಾದ ಈ ಮುದುಕನ ವರ್ತನೆಯಿಂದ ನಾಗಪ್ಪ ಥಕ್ಕಾಗಿ ನಿಂತೇ ಬಿಟ್ಟ. ಮನಸ್ಸು ತುಂಬ ತುಂಬ ಆರ್ದ್ರವಾಗಿತ್ತು. ಮುದುಕ ತನ್ನತ್ತ ತಿರುಗಿದ್ದನ್ನೊಮ್ಮೆ ನೋಡಿ ಹೋಗಬೇಕೆನಿಸಿತು. ಆದರೆ ಮುದುಕ ಹಿಂತಿರುಗಿ ನೋಡಲಿಲ್ಲ. ಯಾವುದೇ ರೀತಿಯ ಭಾವುಕತೆಗೆ ಎಡೆಕೊಡಬಾರದೆಂದು ನಿರ್ಧರಿಸಿಯೂ ಮನಸ್ಸಿನಲ್ಲೇ ಮುದಸನನ್ನು ವಂದಿಸಿದ. ಮರುಕ್ಷಣ ಕೂಡಲೇ ಕೋಣೆಯನ್ನು ತಲುಪಲು ಕಾತರಗೊಂಡವನ ಹಾಗೆ ಓಡೋಡಿ ಮೆಟ್ಟಲು ಹತ್ತಿ ಕೊನೆಯ ಮಜಲೆಗೆ ಬಂದವನೇ ಆದೇ ಅವಸರದಿಂದ ಕೋಣೆಯ ಕಡೆಗೆ ನಡೆದ. ಅರ್ಜುನ್‌ರಾವರ ಮನೆಯ ಕದ ಮುಚ್ಚಿತ್ತು. ಶಿಂಪಿಯವರ ಮನೆಗೂ ಇನ್ನೂ

ಬೀಗವಿತ್ತು. ಕೋಣೆಗೆ ಬಂದಾಗ ಕದದ ಇದಿರಿಗೇ ತಾನು ಶ್ರೀನಿವಾಸನ ಮನೆಯಲ್ಲಿ ಬಿಟ್ಟುಬಂದ ಬೂಟಿನ ಜೋಡಿ! ಶ್ರೀನಿವಾಸನ ಮನೆಯಿಂದ ಯಾರೋ ಬಂದು ಇಟ್ಟು ಹೋಗಿರಬೇಕು. ಕದ ತೆರೆದು ಒಳಗೆ ಹೋದರೆ ಎರಡು ಪತ್ರಗಳು: ಒಂದು ಪತ್ರ ಹುಬ್ಬಳ್ಳಿಯಿಂದ ಬಂದದ್ದು—ಸಂಪಾದಕ ಮಿಶ್ರನದು! ದಪ್ಪವಾಗಿತ್ತು. ಇದೇನು. ನನಗೆ ಪತ್ರ ಬರೆಯುವ ಹುಕ್ಕಿ ಬಂತಪ್ಪ ಇದ್ದಕ್ಕಿದ್ದ ಹಾಗೆ ನಮ್ಮ ಈ ಕ್ರಾಂತಿಕಾರೀ ಸಂಪಾದಕನಿಗೆ? ಎಂದು ಕೂತೂಹಲವಾಯಿತು. ಇನ್ನೊಂದು ಹ್ಯಾಂಡ್-ಡೆಲಿವರಿಯಿಂದ ಬಂದ ದಪ್ಪ ಲಕ್ಕೋಟೆಯಾಗಿತ್ತು: ಟೈಮ್ಸ್‌ಪತ್ರಿಕೆಯ ಅಂಕಿತವಿದ್ದದ್ದು. ಬಹುಶಃ ಸೀತಾರಾಮ ತಾನು ಕೊಟ್ಟ ರಿಪೋರ್ಟಿನ ಪ್ರತಿಯನ್ನು ಹಿಂತಿರುಗಿಸಿರಬೇಕು: ಖುದ್ದಾಗಿ ಬಂದವನು ಶ್ರೀನಿವಾಸನ ಪೆಸ್ಸಿನ ಆಳಿರಬೇಕು—ಬೂಟು ತಂದವನೇ ಇದನ್ನೂ ತಂದಿರಬಹುದು. ಅದನ್ನೇ ಮೊದಲು ತೆರೆದು ನೋಡಿದ. ಈ ಮೊದಲು ಬಂದ ಸಂಶಯವೇ ನಿಜವಾಗಿತ್ತು: 'ನೀನು ಕೊಟ್ಟು ಹೋದ ರಿಪೋರ್ಟಿನ ಪ್ರತಿಯನ್ನು ಹಿಂತಿರುಗಿಸುತ್ತಿದ್ದೇನೆ. ಶ್ರೀನಿವಾಸನಿಂದ ಇನ್ನೊಂದು ಕಾಪಿ ಸಿಕ್ಕಿದೆ. ಖುದ್ದು ಬಂದು ಕೊಟ್ಟುಹೋದ. ಆದ ಆಘಾತದಿಂದ ಚೇತರಿಸಿಕೊಳ್ಳಲು, ಇನ್ನೂ ಕೆಲ ಸಮಯ ಬೇಕಾದೀತು. ಸಂಜೆ ಊಟಕ್ಕೆ ಬರಲಾಗುವದಿಲ್ಲ—ಸೀ.' ಇಂಗ್ಲೀಷಿನಲ್ಲಿ ಬರೆದ ಚೀಟಿಯಲ್ಲಿ 'ಮಾಯ್ ಡಿಯರ್' ವಗೈರೇ ಯಾವುದೇ ರೀತಿಯ ಒಂದು ಔಪಚಾರಿಕ ಆರಂಭವಿರಲಿಲ್ಲ. ಯಾರಿಗೆ ಬರೆದದ್ದೆಂದು ಕೂಡ ತಿಳಿಯುತ್ತಿರಲಿಲ್ಲ.

ಸದ್ಯ, ಚೀಟಿ ರಿಪೋರ್ಟುಗಳನ್ನು ಬದಿಗಿರಿಸಿ, ಹುಬ್ಬಳ್ಳಿಯ ಪತ್ರವನ್ನು ಉಸಿರು ಬಿಗಿಹಿಡಿದ ಕುತೂಹಲದಿಂದ ತೆರೆದ: ನಾಲ್ಕೇ ನಾಲ್ಕು ಸಾಲುಗಳಿದ್ದ ಚೀಟಿಯ ಜತೆಗೆ ಕನ್ನಡ ಸರಿಯಾಗಿ ಬಾರದ ಯಾರೋ ದಪ್ಪ ದಪ್ಪ ಅಕ್ಷರಗಳಲ್ಲಿ ಬರೆದಂಥ ಲಂಬಾಚೌಡಾ ಪತ್ರ! ಸಂಪಾದಕನ (ಅವನ ಹೆಸರೇ ನೆನಪಿಗೆ ಬರದಾಯಿತು)! ಪತ್ರವನ್ನು ಓದುತ್ತಿದ್ದ ಹಾಗೆ ಮತ್ತೆ ಸಿಟ್ಟು ಮಸ್ತಕಕ್ಕೇರ ಹತ್ತಿ ಮೂಗಿನ ಹೊರಳೆಗಳು ಅರಳಿದುವು: "ಜತೆಗಿರಿಸಿದ ಪತ್ರ. ನಿಮ್ಮ ವೈರಿಗಳೊಬ್ಬರು ಬರೆದಂತೆ ಕುಣುತ್ತಿದ್ದರೂ ಅದು ನೀವೇ ಬರೆಯಿಸಿದ್ದು ಎಂಬುದು ತಿಳಿಯದಷ್ಟು ಧಡ್ಡನಲ್ಲ ನಾನು. ಯಾಕೆಂದರೆ ಎಲ್ಲರನ್ನು ಬಿಟ್ಟು ಖಟ್ಟಾ ಬ್ರಾಹ್ಮಣದ್ವೇಷಿಯಾದ ನನಗೇ, ನೀವು ಬ್ರಾಹ್ಮಣರಲ್ಲ ಎನ್ನುವುದಕ್ಕೆ ಪುರಾವೆ ಒದಗಿಸಿ, ಪತ್ರ ಬರೆಯುವಷ್ಟರ ಮಟ್ಟಿಗಿನ ಮೂರ್ಖಬ್ರಾಹ್ಮಣನಿರಬಹುದೆಂಬುದನ್ನು ನಾನು

ನಂಬಲಾರೆ, ಯಾಕಂದರೆ, ಬ್ರಾಹ್ಮಣರ ಮುಖ್ಯ ಲಕ್ಷಣವೇ ಅವರ ಜಾಣತನ, ಹಾಗೂ ಈ ಜಾಣತನವನ್ನು ಅತ್ಯಂತ subtle ಆದ— ಕೇವಲ ಬ್ರಾಹ್ಮಣರಿಗಷ್ಟೇ ಸಾಧ್ಯವಾದ—ರೀತಿಯಲ್ಲಿ ಪ್ರಕಟಿಸಿದ್ದರ ಶ್ರೇಷ್ಠ ಉದಾಹರಣೆ ನೀವು ಬರೆಯಸಿದ ಪತ್ರ! ಇದು ನೀವು ಬರೆದದ್ದೆಂದು ತಿಳಿಯಬಾರದೆಂದೇ ಕನ್ನಡದ ಕಾಗುಣಿತ ಕಲಿಯುತ್ತಿರುವಂತಹನ ಕೈಯಿಂದ ಇಂತಹ ದರಿದ್ರ ಕನ್ನಡದಲ್ಲಿ ನಿಮಗೆ ತಿಳಿಸಬೇಕಾಗಿದ್ದ ಮಜಕೂರನ್ನು ತಿಳಿಸಿದ್ದು. ನನ್ನ ಹಾರ್ದಿಕ ಅಭಿನಂದನೆಗಳು. ಪತ್ರವನ್ನು ತಿರುಗಿ ಕಳಿಸುತ್ತಿದ್ದೇನೆ. ಯಾಕಂದರೆ ನನ್ನ ಕಡ್ಡಿ ಪೆಟ್ಟಿಗೆಯೊಳಗಿನ ಕಡ್ಡಿಯ ಬೆಂಕಿಯಲ್ಲಿ ಸುಡುವ ಯೋಗ್ಯತೆ ಕೂಡ ಅದಕ್ಕೆ ಇಲ್ಲದ್ದು."

ಈ ಚೀಟಿಯ ಜತೆಗಿದ್ದ ಸಹಿ ಇಲ್ಲದ ಪತ್ರದ ಹಿಂದಿನ ತಲೆ ಶ್ರೀನಿವಾಸನದೆಂದು ತಿಳಿಯಲು ನಾಗಪ್ಪನಿಗೆ ಹೊತ್ತು ಹಿಡಿಯಲಿಲ್ಲ. ಅವನ ಧಡ್ಡತನಕ್ಕೆ ನಗು ಬಂತು: ಒಂದೂ ಮಗನಿಗೆ ಈ ಪತ್ರಿಕೆಯ ಹೊರತು ಕನ್ನಡದಲ್ಲಿ ಬೇರೆ ಪತ್ರಿಕೆಗಳಿವೆ ಎನ್ನುವದು ಮೊದಲು ಗೊತ್ತಿರಬೇಕಲ್ಲ! ಅವನ ಅಮ್ಮನ ಬಗ್ಗೆ ನಾನು ಬರೆದ ಕತೆ ಪ್ರಕಟವಾದದ್ದೇ ಈ ಪತ್ರಿಕೆಯಲ್ಲಿ. ನನ್ನ ಕತೆಗಳು ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತವೆ ಎಂದು ತಿಳಿದದ್ದೇ, ಅದಕ್ಕೆ ಚಂದಾದಾರನಾದನೇ! ಅದರೆ ಸದ್ಯ—ಅವನ ಪತ್ರಕ್ಕೆ ಸ್ಫೂರ್ತಿಯಾದದ್ದಕ್ಕೆ ತೀರ ವಿರುದ್ಧವಾದ ಕಾರಣಕ್ಕಾಗಿ ಈ ಪತ್ರಿಕೆ ನನ್ನ ಕತೆಗಳನ್ನು ಪ್ರಕಟಿಸುವುದನ್ನು ನಿಲ್ಲಿಸಿದೆ ಎಂಬುದು ಮಾತ್ರ ಗೊತ್ತಿದ್ದಂತಿಲ್ಲ. ಸನ್ನಿವೇಶದಲ್ಲಿಯ ವಿಡಂಬನೆ ಲಕ್ಷ್ಯಕ್ಕೆ ಬರುತ್ತಲೇ, ನಗು ಬರದಿರಲಿಲ್ಲ. ಎರಡೂ ಪತ್ರಗಳನ್ನು ಹರಿದೊಗೆಯುವವ: ನಡುವೆಯೇ ತಡೆದ, ಏನೋ ಥಟ್ಟನೆ ಹೊಳೆದವನ ಹಾಗೆ ಕೂತಲ್ಲಿಂದ ಎದ್ದು ಒಳಗೆ ಹೋಗಿ ಕಡ್ಡಿಪೆಟ್ಟಿಗೆಯನ್ನು ತಂದು ಕಡ್ಡಿಗೀರಿ ಎರಡೂ ಪತ್ರಗಳನ್ನು ಸುಟ್ಟುಹಾಕಿದ: ಹತ್ತೊ ಮಗ ದಸ್ತೂರ್ ಈ ಬೆಂಕಿಯನ್ನು ನೋಡಿದ್ದರೆ ಅದಕ್ಕೆ ಯಾವ ಅರ್ಥ ಹಚ್ಚುತ್ತಿದ್ದನೋ! ತನ್ನ ಮಟ್ಟಿಗಂತೂ ಇದು ಅರ್ಥಪೂರ್ಣವಾದದ್ದು: ನೆಲದ ಸತ್ವವನ್ನೇ ಹೀರಿಬಿಡುವ ಇಂತಹ ಕಳೆಯನ್ನೆಲ್ಲ ಕಿತ್ತು ಸುಟ್ಟು ಹಾಕಿದಾಗಲೇ ಬೆಳೆ ಕೊಡುವ ಹಸಿರು ಹುಲುಸಾಗಿ ಲವಲವಿಕೆಯಿಂದ ಚಿಗುರಿಕೊಂಡೀತು... ಪತ್ರಗಳು ಉರಿದು ಕಪ್ಪುಕಾರ್ಬನ್ ಆದೊಡನೆ, ಪುಡಿಪುಡಿ ಮಾಡಿ, ಮೂಲೆಯೊಂದರಲ್ಲಿ ಚೆಲ್ಲಿ ಮೋರಿಗೆ ಹೋಗಿ ಕೈ ತೊಳೆದುಕೊಂಡು ಬಂದ.

ತೊಳೆದ ಕೈಗಳನ್ನು ಟವೆಲ್ಲಿನಿಂದ ಒರಿಸಿಕೊಳ್ಳುತ್ತಿದಂತೆ ಮೂರು ದಿನಗಳಿಂದ ಕೆಲಸದ ಮುದುಕಿಯನ್ನೇ ನೋಡಿಲ್ಲ ಎನ್ನುವದು ಅರಿವಿಗೆ ಬಂತು: ಮನೆಯೊಳಗಿನ ಕಸ ಗುಡಿಸಿರಲಿಲ್ಲ; ಮೋರಿಯಲ್ಲಿ ಒಟ್ಟಾಗಿ ಬಿದ್ದ ಸ್ನಾನದ ಅರಿವೆಗಳನ್ನಿನ್ನೂ ಒಗೆದಿರಲಿಲ್ಲ. ಹಾಲಿನವನೂ ಮೂರು ದಿನಗಳಿಂದ ಬಂದಿರಲೇ ಇಲ್ಲ: ನಡುವೆಯೇ ಶಿಂಪಿಯವರ ನೆನಪು ಬಂದು—ಅರೆ ! ಇದೇಕೆ ಇವರ ಮನೆಗೆ ಇನ್ನೂ ಬೀಗವಿದೆ, ಎಂದುಕೊಂಡ. ಇವೆಲ್ಲ ಒಂದಕ್ಕೊಂದು ಸಂಬಂಧ ಇದ್ದವುಗಳು ಎಂದು ಅನ್ನಿಸಿ ಇದಕ್ಕೆ ಉತ್ತರ ಅರ್ಜುನ್‌ರಾವರ ಮನೆಯಲ್ಲಿದೆ ಎಂಬಂತೆ ಅಲ್ಲಿ ಹೋಗುವದನ್ನು ನಿಶ್ಚಯಿಸಿ ಚಪ್ಪಲಿ ಮೆಟ್ಟಿದ ಮೇಲೆಯೇ ಹೊಳೆಯಿತು; ಅರ್ಜುನ್‌ರಾವ್ ಇನ್ನೂ ಮನೆಗೆ ಬಂದಿರಲಿಕ್ಕಿಲ್ಲ. ತುಸು ಹೊತ್ತು ಕಾದು ನೋಡೋಣ ಎಂದುಕೊಂಡು ಕುರ್ಚಿಯಲ್ಲಿ ಕೂಡ್ರಬೇಕು ಎನ್ನುವಷ್ಟರಲ್ಲಿ ಕದದ ಮೇಲೆ ಬಡೆದ ಸದ್ದು ಕೇಳಿಸಿತು. ಜಾನಕಿ ಇರಬಹುದೇ? ಎಂಬ ಸಂಶಯದಿಂದಲೇ ಎದೆ ಡವಡವಿಸುತ್ತಿರುವಾಗ ಕದ ತೆರೆದು ನೋಡಿದರೆ ಅರ್ಜುನ್‌ರಾವರ ಹೆಂಡತಿ: "ನಿಮಗೆ ಫೋನ್ ಇದೆ ನಮ್ಮ ಮನೆಯಲ್ಲಿ. ತುಂಬ ಅರ್ಜೆಂಟ್ ಅಂತೆ," ಎಂದಳು. ಯಾರದಿರಬಹುದೆಂದು ಅನುಮಾನಿಸುತ್ತಲೇ ಅವರ ಮನೆಗೆ ಹೋಗಿ ಟೆಲಿಫೋನ್ ಎತ್ತಿಕೊಂಡು, "Hello," ಎಂದ.

"Hello Nag, this is Mary," ಎಂದು ಸಾರಿದ ಮೇರಿಯ ದನಿ ಕೇಳಿಸಿದ್ದೇ ಆದ ಆಶ್ಚರ್ಯ, ಅದರ ಹಿಂದೆಯೇ ಬಂದ ಸಿಟ್ಟುಗಳಿಂದಾಗಿ ನಾಗಪ್ಪನಿಂದ ಮಾತೇ ಹೊರಡದಾಯಿತು. ಮಾತನಾಡದೇ ಸುಮ್ಮನೆ ರಿಸೀವರ್ ಕಿವಿಗೆ ಹಿಡಿದು ನಿಂತ. ಮೇರಿಯೇ ಮುಂದುವರಿದು. "I am Mary here, Nag. How are you?" ಎಂದಳು.

ನಾಗಪ್ಪ "To hell with you and all that put-up sweetness..." ಎನ್ನುವವ. ಆದರೆ ಏಕೋ ಅವನ ಕೊರಳು ತನ್ನಿಂದ ತಾನೇ ಬಿಗಿದುಕೊಳ್ಳುತ್ತಿತ್ತು. ತನ್ನ ನಿರ್ಧಾರದ ವಿರುದ್ಧ ಕಣ್ಣುಗಳು ತೇವಗೊಳ್ಳುತ್ತಿದ್ದುವು. ಮಾತನಾಡದೇ ರಿಸೀವರನ್ನು ಹಾಗೇ ತೆಪ್ಪಗೆ ಕೆಳಗಿಡುವವನು. ಮೇರಿಯ ಸುದೈವ: ಅವಳಿಗೂ ಅದೇ ಸಂಶಯ ಬಂದಿರಬೇಕು; ಚಟ್ಟನೆ—"Please speak here to Dr. Patel." ಎಂದಳು. ನಾಗಪ್ಪನಿಂದ ತಂತಾನೆ 'ಓss' ಎಂಬ ಉದ್ಗಾರ ಹೊರಟಿತು.

ಮಾತನಾಡಲಿರುವವರು ಪಟೇಲರೆಂದು ತಿಳಿದದ್ದೇ ತಡ, ಹೊಸ ಉತ್ಸಾಹ ತುಂಬಿದವನ ಹಾಗೆ, ಸಮೀಪದ ಕುರ್ಚಿಯೊಂದನ್ನೆಳೆದು ಕುಳಿತುಕೊಂಡ. ಮನೆಯಲ್ಲಿ ಅರ್ಜುನ್‌ರಾವರ ಹೆಂಡತಿಯೊಬ್ಬಳೇ ಇದ್ದಂತೆ ತೋರಿತು. ಪಟೇಲರು ಗಂಟಲು ಸರಿಪಡಿಸಿಕೊಳ್ಳುತ್ತ. "ಹೆಲ್ಲೋ ನಾಗ್," ಎಂದರು.

ನಾಗಪ್ಪ ಎಂದಿನಂತೆ ಅವರನ್ನು ಅವರ ಮೊದಲ ಹೆಸರಿನಿಂದ ಕರೆಯುತ್ತ "ಹೆಲ್ಲೋ ಜೀಥೂ ಯಾವಾಗ ಬಂದೆ?" ಎಂದು ಕೇಳಿದ.

"ನಿನ್ನೆ ರಾತ್ರೆ..."

"Oh! well timed—isn't it ?"

"Timed for what ?"

"ಕಮ್ ಓನ್ ಜೀಥೂ—ನಾವೇನು ಬೆರಳು ಚೀಪುವ ಕೂಸುಗಳಲ್ಲ—ಅಲ್ಲವೆ?"

"Nag, I want you to withdraw your resignation..."

"ಅಂದರೆ ನಿನಗೆ ಈಗಾಗಲೇ ಗೊತ್ತಾಗಿದೆ ಹಾಗಾದರೆ?..."

"Listen Nag, let us not discuss on the phone. Why don't you join me for dinner tonight ?"

ಸೀತಾರಾಮನ ಜೊತೆಗೆ ಊಟಮಾಡುವ ಸಂಧಿ ತಪ್ಪಿಹೋದ ಬಗ್ಗೆ ನೆನಪಿಗೆ ಬಂದು ನಗು ಬಂತು. ಆ ನಗುವಿನಲ್ಲಿ ಖಿನ್ನತೆಯ ಅಂಶವೇ ದೊಡ್ಡದಾಗಿತ್ತು. ಇಷ್ಟೊಂದು ತರಾತುರಿಯ ಕೆಲಸ ಈಗ ಏನಿರಬಹುದು—ಎಲ್ಲ ಮುಗಿದುಹೋದ ಮೇಲೆ? ಅಷ್ಟೆಲ್ಲ ಯಾತನೆಯ ಕೊನೆಯಲ್ಲಿ ಕೊಟ್ಟ ರಾಜೀನಾಮೆಯನ್ನು ಯಾಕೆ ನಾನು ಹಿಂತೆಗೆದುಕೊಳ್ಳಬೇಕು? ಸರಿಯಾಗಿ ಗಂಟು ಕಟ್ಟಿ ಅಟ್ಟದ ಮೇಲೆ ಇಟ್ಟುಬಿಟ್ಟದ್ದನ್ನು ಈಗ ಪುನಃ ಯಾಕೆ ಬಿಚ್ಚಲು ನಾನು ಹೋಗಬೇಕು? ಬೇಡ: ತಿರುಗಿ ಹೊಸತೇ ಒಂದು ಆಸಕ್ತಿಯ ಜಗತ್ತು ತೆರೆಯುವ ಆಮಿಷಗಳ ಜಾಲದಲ್ಲಿ ಸಿಕ್ಕಿಸಿಕೊಳ್ಳುವ ಧೈರ್ಯವಾಗಲಿಲ್ಲ. ಆ ತಾಕತ್ತೂ ತನಗೀಗ

ಉಳಿದಿದೆಯೆಂದೂ ತೋರಲಿಲ್ಲ; “Sorry Jithu, I won't be able to make it. Thank you all the same…” ಉತ್ತರರೂಪವಾಗಿ ಆ ಬದಿಯಿಂದ ಬಂದ ಹೆಣ್ಣು-ದನಿಯನ್ನು ಕೇಳಿ ನಾಗಪ್ಪ ಚಕಿತನಾದ: ಮಾತನಾಡುತ್ತಿದ್ದವಳು ಮತ್ತೆ ಮೇರಿಯಾಗಿದ್ದಳು! “Listen Nag, please listen—for my sake… ಡಾ. ಪಟೇಲರು ಬಂದೂಕವಾಲಾರ ಜೊತೆಗೆ ಮಗ್ಗಲು ಕೋಣೆಗೆ ಹೋಗಿದ್ದಾರೆ. ತಾನು ಮಾತನಾಡುತ್ತಿದ್ದದ್ದು ನಿನ್ನೊಡನೆ ಎಂಬುದನ್ನು ತೋರಿಸಿಕೊಳ್ಳುವದು ಬೇಡವಾಗಿತ್ತವರಿಗೆ. ರಾತ್ರೆ ಬಾ. ನಾನೂ ಇರುತ್ತೇನೆ ಅಲ್ಲಿ. ಹಾಗೂ ಇನ್ನೊ ಕೆಲವು ಗೆಳೆಯರು. MD has fabulous plans for you. He is so upset—believe me, so very upset by what has happened… ಊಟ ಎಮ್ ಡೀ ಅವರ ಮನೆಯಲ್ಲೇ ಇದೆ. It is a small group. There will be a car to drop both of us home after dinner..."

ಮೇರಿಯ ದನಿ ಕೊನೆಯ ವಾಕ್ಯಕ್ಕೆ ಬಂದಾಗ ಏನೋ ಗುಟ್ಟಿನ ಮಾತನ್ನು ಹೇಳುವ ಹಾಗೆ ಅದು ಒಮ್ಮೆಲೇ ತಗ್ಗಿತ್ತು. ಥತ್ ದಿ ಬಿಚ್! ನನಗೆ ಮಾಟಾ ಮಾಡ್ತಾಳೆ. ಫಿರೋಜ್ ಈಗ ಅಲ್ಲಿಗೆ. ಬಂದದ್ದು ಸುಳ್ಳು, ಇದೆಲ್ಲ ಮೇರಿಯ ಮುಖಾಂತರ ನನ್ನ ಮೇಲೆ ಒತ್ತಡ. ತರುವ ಚತುರೋಪಾಯ: ನಾಗಪ್ಪ ಈಗ ಯಾವುದೇ ಬಗೆಯ ಉದ್ವೇಗಕ್ಕೆ ಒಳಗಾಗದೇ ಉತ್ತರ ಕೊಟ್ಟ: “Thank you Mary for the most tempting offer.. ಆದರೆ ನನಗೀಗ ಇದಾವುದರಲ್ಲೂ ಆಸೆಯೇ ಉಳಿದಿಲ್ಲ. ನನ್ನ ಮಾತಿನಲ್ಲಿ ಕಹಿಯಿದೆಯೆಂದು ತಿಳಿಯಬೇಡ ಮೇರಿ. ನನಗೆ ಸಿಟ್ಟೂ ಬಂದಿಲ್ಲ. ನಾನು ಬದಲಾಗಿಬಿಟ್ಟಿದ್ದೇನೆ ಎನ್ನುವದು ಮಾತ್ರ ನಿಜ. ನಾನು ರಾಜೀನಾಮೆಯನ್ನು ಕೊಟ್ಟದ್ದು ಬರೇ ಕಂಪನಿಯ ಕೆಲಸಕ್ಕಷ್ಟೇ ಅಲ್ಲ ಮೇರೀ: ವ್ಯಾವಸಾಯಿಕ ಜಗತ್ತು ಪ್ರತಿನಿಧಿಸುವ ಎಲ್ಲದಕ್ಕೂ! ನನ್ನ ನಿರ್ಧಾರವನ್ನೀಗ ಯಾರೂ ಬದಲಿಸಲಾರರು (not even the most tantalizing charms of the bitch called Mary!) If you don’t mind Mary, let us say good-bye to each other. ಡಾ. ಪಟೇಲರಿಗೆ ನನ್ನ ಧನ್ಯವಾದಗಳನ್ನು ತಿಳಿಸಲು ಮಾತ್ರ ಮರೆಯಬೇಡ…”

ಆ ಬದಿಯಿಂದ ಮೇರಿ ಆರ್ಜವ ತುಂಬಿದ ದನಿಯಲ್ಲಿ—"ಪ್ಲೀಜ್ ನಾಗ್, ತಡೆ, ನನ್ನ ಮಾತು ಕೇಳು," ಎಂದರೂ ಕೇಳದೆ ನಾಗಪ್ಪ ಟೆಲಿಫೋನ್ ಕೆಳಗಿಟ್ಟು ಬಿಟ್ಟು. ಇಟ್ಟದ್ದೇ ತಡ, ತಾನು ಎಲ್ಲಿ ಇದ್ದೇನೆ ಎನ್ನುವದು ಕೂಡ ನಾಗಪ್ಪನಿಗೆ ತಿಳಿಯಲಿಲ್ಲ. ಇದೆಲ್ಲ ಆಗುತ್ತಿದ್ದದ್ದು ತನಗೇ ಎಂಬುದರ ಮೇಲೆ ನಂಬಿಕೆಯಾಗುತ್ತಿರಲಿಲ್ಲ—ಎಲ್ಲರನ್ನು ಬಿಟ್ಟು ತನ್ನಂಥ ತನಗೆ! ಬದುಕಿನಿಂದ ಬಹಳಷ್ಟನ್ನು ಬೇಡಿರದ ಕೋಳೀಗಿರಿಯಣ್ಣನಕೇರಿಯ ಈ ನಾಗಪ್ಪನಿಗೆ! ಕುರ್ಚಿಯಲ್ಲಿ ಕೂತಲ್ಲೇ ನಾಗಪ್ಪನ ಕಣ್ಣುಗಳು ತುಂಬಿಬರಹತ್ತಿದುವು: ಏನಿರದಿದ್ದರೂ ಬದುಕಬಹುದೇನೋ. ಆದರೆ ಪ್ರೀತಿಯಿಲ್ಲದೆ? ಗೆಳೆತನವಿಲ್ಲದೆ? ಮಾನವೀಯ ಅಂತಃಕರಣವಿಲ್ಲದೆ? ಸಹಾನುಭೂತಿಯಿಲ್ಲದೆ? ತಾನು ಸ್ಪಷ್ಟವಾಗಿ ಒಪ್ಪಿಕೊಂಡಿರದಿದ್ದರೂ ಸೀತಾರಾಮನ ಗೆಳೆತನವನ್ನು ಕಳಕೊಂಡ ರೀತಿಗೆ ಮನಸ್ಸು ಇನ್ನೂ ಹೊಂದಿಕೊಂಡಿರಲಿಲ್ಲ: ಹದಿನಾಲ್ಕೇ ದಿನಗಳಲ್ಲಿ ಎಷ್ಟೊಂದನ್ನೆಲ್ಲ ಕಳಕೊಂಡವನಿಗೆ ಎಲ್ಲವೂ ವ್ಯರ್ಥ ಅನ್ನಿಸಹತ್ತಿದಾಗ ಕಣ್ಣಮುಂದೆ ನಿಂತು ತನ್ನನ್ನೇ ನೋಡುತ್ತಿದ್ದ ವ್ಯಕ್ತಿಯ ಗುರುತು ಹಿಡಿಯವದೂ ಕಠಿಣವಾಗುತ್ತಿದ್ದವನ ಹಾಗೆ: "It too much for anyone—for so much to happen in so short a time," ಎಂದ. ಕಣ್ಣುಗಳು ತೇವಗೊಂಡಿದ್ದರೂ ನೋಡುವ ದೃಷ್ಟಿ ಖಾಲಿಯಾಗಿತ್ತು. ಯಾರ ಇದಿರಿಗೋ ಆಡಿದ ಮಾತುಗಳಾದರೂ ಅವುಗಳಲ್ಲಿ ತನ್ನಷ್ಟಕ್ಕೇ ಆಡಿಕೊಂಡಂಥ ಧ್ವನಿ ಮೂಡಿತ್ತು. ಕಣ್ಣ ಮುಂದೆ ನಿಂತವರು ಅರ್ಜುನ್‌ರಾವ್ ಎಂದು ಗೊತ್ತಾದದ್ದು, ಅವರೇ ಹಿಂದೆ ಎಂದೂ ತೋರಿಸಿರದ ಸಹಾನುಭೂತಿಯಿಂದ ತನ್ನ ಹೆಗಲ ಮೋಲೆ ಕೈಯಿಟ್ಟು: "Take it easy my young friend. It is just a phase in our life. It will pass off..." ಎಂದಾಗ. ನಡುಬಾಗಿಲಲ್ಲಿ ಬಂದು ನಿಂತ ತಮ್ಮ ಹೆಂಡತಿಗೆ ಎರಡು ಕಪ್ಪು ಚಹ ಮಾಡಲು ಹೇಳಿ, "ಅಮ್ಮ, ಎಲ್ಲಿ?" ಎಂದು ಕೇಳಿದರು. "ಎರಡನೇ ಮಜಲೆಯ ತೋರಟೆಯವರ ಮನೆಗೆ ಹೋಗಿದ್ದಾರೆ. ಜಾನಕಿ ಬಂದಿದ್ದಾಳೆ ಅಲ್ಲಿ. ನಿಮಗೆ ಆಫೀಸಿನಿಂದ ಬಂದ ಕೂಡಲೇ..." ಅವಳು ಹೇಳ ಹೊರಟಿದ್ದರ ಅರ್ಥವಾಯಿತ್ತೆನ್ನುವಂತೆ, "ಮೊದಲು ಚಹ ಮಾಡು," ಎನ್ನುತ್ತ ಮುಂದಿನ ಬಾಗಿಲು ಹಾಕಿಕೊಂಡರು. ಹಾಗೂ, ನಾಗಪ್ಪನಿಗೆ "ಈ ಕುರ್ಚಿಯಲ್ಲಿ ಕೂತಕೊಳ್ಳಿ. ಮೆತ್ತಗಿದೆ ನೋಡಿ. ತುಸು ಹೊತ್ತು ಆರಾಮ ಮಾಡಿರಿ. ಚಹ

ಬರುವಷ್ಟರೊಳಗೆ ಡ್ರೆಸ್ ಬದಲಿಸಿ ಬರುತ್ತೇನೆ." ಎಂದು ಹೇಳಿ, ಕೈಯಲ್ಲಿ ಹಿಡಿದ ಆಫೀಸಿನ ಕಾಗದ-ಪತ್ರಗಳೊಂದಿಗೆ ಒಳಗೆ ನಡೆದರು.

ಅರ್ಜುನ್‌ರಾವ್ ಏಳಿ ಎಂದದ್ದೇ ಎದ್ದದ್ದು, ಈ ಕುರ್ಚಿಯಲ್ಲಿ ಕೂತುಕೊಳ್ಳಿ ಎಂದದ್ದೇ ಕೂತದ್ದು ಪೂರ್ಣ ಎಚ್ಚರದ ಸ್ಥಿತಿಯಲ್ಲಿ ನಡೆದ ಕ್ರಿಯೆಗಳು ಎಂದು ನಾಗಪ್ಪನಿಗೆ ಅನ್ನಿಸಲಿಲ್ಲ: ಯಾರೋ ತನ್ನ ಮೇಲೆ ಮಾಟಮಾಡಿದ್ದಾರೆ. ಇಲ್ಲಿಗೆ ಬರುವಾಗ ರೂಮಿನ ಕದ ಮುಚ್ಚಿದ್ದೆನೋ ಇಲ್ಲವೋ ಎನ್ನುವದು ಕೂಡ ನೆನಪಾಗಲಿಲ್ಲ. ಎದ್ದು ಹೋಗಿ ನೋಡಿಬರೋಣವೆಂದರೆ ಕೂತಲ್ಲಿಂದ ಏಳುವ ಮನಸ್ಸಾಗಲಿಲ್ಲ. ಯಾಕೆಂದರೆ ಯಾರೋ ಕೂತಕೊಳ್ಳಿ ಅಂದಿದ್ದರು. ಎಲ್ಲ ಮುಗಿಸಿ ಬಂದಿದ್ದೇನೆ. ಈಗ ಮುಂದಿನ ಹಾದಿ ಹುಡುಬೇಕಾಗಿದೆ ಎಂದು ಅನ್ನಿಸಿದ ಗಳಿಗೆಯಲ್ಲೇ ಶ್ರೀನಿವಾಸ-ಸೀತಾರಾಮ, ಇತ್ತ ಪಟೇಲ-ಮೇರಿ ಮತ್ತೆ ಹೊಸ ಸಾಧ್ಯತೆಗಳನ್ನು ತೆರೆಯುತ್ತಿದ್ದಾರೆ. ಬೇಡವೆಂದು ಬಿಟ್ಟು ಬಂದ ಜಗತ್ತಿಗೇ ಎಳೆಯುತ್ತಿದ್ದಾರೆ ನನ್ನನ್ನು. ಮೇರಿಯೊಡನೆ ವರ್ತಿಸಿದ್ದು ಉದ್ಧಟತನದ್ದಾಯಿತೆ? ಕ್ರೂರವಾಯಿತೆ? ಬಿಟ್ಟುಬಂದದ್ದರತ್ತ ಕಣ್ಣುತಿರುವಬಾರದಾದರೆ ಎಲ್ಲ ಸುಳ್ಳು-ಸಂಬಂಧಗಳನ್ನು ಕಡಿದು...

"ನಿದ್ದೆ ಹತ್ತಿತೆ?"

ಮುಂದೆ ನಿಂತವಳು ಅರ್ಜುನ್‌ರಾವರ ಹೆಂಡತಿ. ಚಹದ ಕಪ್ಪನ್ನು ಕೈಗೆ ಕೊಡುತ್ತ— "ಇವರು ಇದೀಗ ಬರುತ್ತಾರೆ. ನೀವು ತೆಗೆದುಕೊಳ್ಳಿ," ಎಂದಳು ಇವನು ಕಪ್ಪನ್ನು ಕೈಗೆ ತೆಗೆದುಕೊಳ್ಳುವ ಹೊತ್ತಿಗೆ ಅರ್ಜುನ್‌ರಾವ್ ಅವರೂ ಬಂದರು— ತಮ್ಮ ಚಹದ ಕಪ್ಪನ್ನು ಕೈಯಲ್ಲಿ ಹಿಡಿದುಕೊಂಡು. ಬಿಸಿಬಿಸಿ ಚಹದ ಗುಟುಕೊಂದನ್ನು ಸದ್ದುಮಾಡಿ ಸೀಪುತ್ತ—"In a way it is good that it is all over" ಎಂದರು. ಆ ವರೆಗೂ ಅರ್ಜುನ್‌ರಾವರ ಜಗತ್ತಿಗೆ ಬಂದಿರದ ನಾಗಪ್ಪನ ಕಿವಿಗಳು. ಒಮ್ಮೆಲೇ ನಿಗುರಿಕೊಂಡವು. ನಾಗಪ್ಪ ತನ್ನತ್ತ ನೋಡಿದ ರೀತಿಯನ್ನು ಅರ್ಥಮಾಡಿಕೊಂಡವನ ಹಾಗೆ—"ಶ್ರೀನಿವಾಸರಾವ್ ಬಂದಿದ್ದರು ನಮ್ಮ ಆಫೀಸಿಗೆ. ನೀವು ಕೆಲಸಕ್ಕೆ ರಾಜೀನಾಮೆ ಕೊಡಬೇಕಾಯಿತಂತೆ ಅಲ್ಲವೆ? ಕೇಳಿ ಬಹಳ ಕೆಡಕೆನಿಸಿತು ನೋಡಿ," ಎಂದರು: ಶಿಕಾರಿಯವರ ತಂಡ ದೊಡ್ಡದಾಗುತ್ತ ನಡೆದಿದೆ. ನಾಯಿಗಳ ಕೂಗು ಕಿವಿಗಳನ್ನು ಗಡಚಿಕ್ಕುವ ಹಲಗೆಗಳ ಸದ್ದು

ಸುತ್ತುವರಿಯುತ್ತಿವೆ. ರಾಜೀನಾಮೆ ಇದೆಲ್ಲದರ ಕೊನೆಯೆಂದು ತಿಳಿದಿದ್ದೆ. ಈಗ ಬರೀ ಹೊಸ ಆರಂಭವೆಂದು ತೋರುತ್ತದೆ. ಈ ಅರ್ಜುನ್‌ರಾವ್ ಹಿಂದಿನ ಎಷ್ಟೊಂದು ಹಗೆಗಳಿಗೆ ಹೆಡೆ ಬಿಚ್ಚುತಾನೋ: ಇದೀಗ ಮಾತನಾಡಿದಾಗಿನ ದನಿ ಸಹಜವಾದದ್ದೆಂದು ತೋರಲಿಲ್ಲ. ಇವನಿಂದ ಮತ್ತೆ ಸಂಗತಿಗಳನ್ನು ತಿಳಿಯುವ ಸಾಮರ್ಥ್ಯ ಮಾತ್ರ ತನಗೀಗ ಎಳ್ಳಷ್ಟೂ ಇರಲಿಲ್ಲ. ಸಹನಶಕ್ತಿಗೂ ಮಿತಿಯೆಂಬುದು ಇರಬೇಡವೆ: ದಮ್ಮಯ್ಯಾ ಮಾರಾಯ, ಬೆಳಗ್ಗಿನಿಂದ ಅನುಭವಿಸಿದ್ದೇ ಸಾಕಾಗಿಬಿಟ್ಟಿದೆ. ಕೂಡ್ರಲು ಮೆತ್ತಗಿನ ಕುರ್ಚಿಕೊಟ್ಟೆ—ಕೂತಿದ್ದೇನೆ. ಬಿಸಿ ಬಿಸಿ ಚಹ ಕೈಯಲ್ಲಿರಿಸಿದೆ—ಕುಡಿಯುತ್ತೇನೆ. ಆಮೇಲೆ ಕೋಣೆಗೆ ಹೋಗಿ ಸುಖವಾಗಿ ನಿದ್ದೆಮಾಡುತ್ತೇನೆ. ಆಗ ಒಬ್ಬ ಪಾರ್ಸೀಮುದುಕ ಭೆಟ್ಟಿಯಾಗಿದ್ದ; ಮನೆಗೆ ಹೋಗಿ ಪ್ರಾರ್ಥನೆ ಮಾಡು ಎಂದ. ನನ್ನಿಂದ ಸಾಧ್ಯ ಎನ್ನಿಸುವದಿಲ್ಲ. ಬಾನಾವಳಿಯಲ್ಲಿ ಹೋಗಿ ಬಾರ್ಬಿಚ್ಯುರೇಟ್ ಗುಳಿಗೆ ತರಲೆ? ಇದೇಕೆ ಈಗ ಇದ್ದಕ್ಕಿದ್ದಂತೆ ನಿದ್ದೆಯ ಗುಳಿಗೆಯೆಂದರೆ ನನಗೆ ಭಯವಾಗುತ್ತಿದೆ?

“ಅರೆ! ನಿಮ್ಮ ಚಹ ತಣ್ಣಗಾಗ್ತಾ ಇದೆ,” ಅರ್ಜುನ್‌ರಾವರ ಮಾತಿಗೆ ನಾಗಪ್ಪ ಬೆಚ್ಚಿಬಿದ್ದ. ನಡುಗಿದ ಕೈಯನ್ನು ಸ್ತಿಮಿತಕ್ಕೆ ತರುತ್ತ ಚಹ ಕುಡಿಯಹತ್ತಿದ. ಚಹ ರುಚಿ ಕಳೆದುಕೊಂಡಿತ್ತು. ತನ್ನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದ ಈ ಯಃಕಶ್ಚಿತ ಅರ್ಜುನ್‌ರಾವ್ ಕೂಡ ಭಯಕ್ಕೆ ಕಾರಣನಾಗಹತ್ತಿದ್ದ: ’ರಾಜೀನಾಮೆಯನ್ನು ಕೊಟ್ಟರಂತೆ’ ಅನ್ನಲಿಲ್ಲ ಬೋಳೀಮಗ, ’ಕೊಡಬೇಕಾಯಿತಂತೆ!’ ನೋಡ್ತಾನೆ ಎರಡೂ ಮಗ ತನ್ನ ಹೈನಾ ತರಹ ಕಣ್ಣುಬಿಡುತ್ತ. ಗುರುಗುಟ್ಟಿದನೆ? ಹಲ್ಲು ಕಿಸಿದನೆ..?

“ತನಿಖೆಯವರು ಸಿದ್ಧಪಡಿಸಿದ ಕಾನ್ಫಿಡೆನ್ಶಲ್ ರಿಪೋರ್ಟು ಶ್ರೀನಿವಾಸರಾವರ ಕೈಗೆ ಹೇಗೆ ಬಂತೋ. ನನ್ನ ಕೈಯಲ್ಲೂ ಒಂದು ಪ್ರತಿ...”

ನಾಗಪ್ಪ ನಂಬದಾದ. ಅವನ ಮೋರೆಯ ಮೇಲಿನ ಅಪನಂಬಿಕೆಯ ಛಾಯೆಯನ್ನು ಗಮನಿಸಿದ ಅರ್ಜುನ್‌ರಾವ್ ಚಹದ ಕಪ್ಪನ್ನು ಇಡುವ ನೆಪಮಾಡಿ ಒಳಗೆ ಹೋದರು. ಬರುವಾಗ ಕೈಯಲ್ಲೊಂದು ಲಕ್ಕೋಟೆ ಹಿಡಿದುಕೊಂಡು ಹೊರಗೆ ಬಂದು: “ಇದು ನೋಡಿ,” ಎನ್ನುತ್ತ ಲಕ್ಕೋಟೆಯನ್ನು ನಾಗಪ್ಪನ ಮುಂದೆ ಹಿಡಿದರು. ನಾಗಪ್ಪ ಅದಕ್ಕೆ ಕೈ ಹಚ್ಚಲಿಲ್ಲ. ಅರ್ಜುನ್‌ರಾವರನ್ನೇ ನೋಡುತ್ತ

ಕುಳಿತುಬಿಟ್ಟ, ನಾಗಪ್ಪ ಇಷ್ಟು ಮೆತ್ತಗಾದದ್ದನ್ನೂ ಅರ್ಜುನ್‌ರಾವ್ ನೋಡಿರಲಿಲ್ಲ: ಮೆತ್ತಗಾಗುವ ಮನುಷ್ಯನೆಂದು ತಿಳಿದೇ ಇರಲಿಲ್ಲ: "It is no use getting so sentimental. You must fight this Shrinivas Rao —fight him legally if necessary ... ನೀವು ಕಾದಂಬರಿ ಬರೆಯುತ್ತೀರಿ ಎನ್ನುವುದರ ಮೇಲೆ ಸೇಡು ತೀರಿಸಿಕೊಳ್ಳುತ್ತಿರುವಂತೆ ತೋರುತ್ತದೆ. ಮುಖ್ಯವಾಗಿ ತನ್ನ ಸಮಾಜದವರ ಕಣ್ಣಲ್ಲಿ ನೀವು ಅವರ ಬದನಾಮಿ ಮಾಡುವ ಮೊದಲೇ ನಿಮ್ಮ ಬದನಾಮಿ ಮಾಡುವ ಹುನ್ನಾರು...ನಿಮ್ಮ ತಂದೆ-ತಾಯಿಗಳ ಬಗ್ಗೆ ಏನೋನೋ ಮಾಹಿತಿ ಒಟ್ಟು ಮಾಡಿದಂತಿದೆ... ನಿಮ್ಮ ಅಣ್ಣನ ಬಗ್ಗೆಯೂ...ಈ ಹೊತ್ತು ಮಠದಲ್ಲಿ ನಿಮ್ಮ ಜಾತಿಯವರ..." ನಾಗಪ್ಪನ ಮೋರೆಯ ಮೇಲೆ ಮುಗುಳುನಗೆ ಮೂಡುತ್ತಿದ್ದುದನ್ನು ನೋಡಿ ಗೊಂದಲಕ್ಕೀಡಾದ ಅರ್ಜುನ್‌ರಾವರ ಮಾತು ಅರ್ಧಕ್ಕೇ ಉಳಿದಿತು. ಆದರೂ ಹಿಂದೆಗೆಯಲು ಒಪ್ಪದವರ ಹಾಗೆ — "Please don't mistake me... ನಾನು ಬಲ್ಲೆ, ನಿಮಗಿಂಥದ್ದರಲ್ಲಿ ಎಳ್ಳಷ್ಟೂ ವಿಶ್ವಾಸವಿಲ್ಲ ಎನ್ನುವುದನ್ನು. ನನಗೂ ಇಲ್ಲ. ಆದರೆ ಇದು ಬರಿಯೆ ಹುಟ್ಟಿನ ಬಗೆಗಿನ ವಿಶ್ವಾಸದ ಪ್ರಶ್ನೆಯಲ್ಲ; ನಮ್ಮ ಅಬರೂದ ಪ್ರಶ್ನೆ; ಮೋಸಮಾಡಿದ್ದೀರಿ ಎಂಬ ಆರೋಪದ ಪ್ರಶ್ನೆ...You must take interest in investigating your past and collect facts to refute those presented by Shrinivas Rao. If you want I will help you....ಸನ್ನಿವೇಶದಲ್ಲಿಯ ವ್ಯಂಗ್ಯವನ್ನು ನಾನು ಸುಲಭವಾಗಿ ಗ್ರಹಿಸಬಲ್ಲೆ: ಜಾತೀಯತೆಯಲ್ಲಿ ವಿಶ್ವಾಸ ಇಲ್ಲದವನೇ ತಾನು ಹುಟ್ಟಿನಿಂದ ಬ್ರಾಹ್ಮಣನೇ ಎಂದು ಸಿದ್ಧಪಡಿಸಿ ತೋರಿಸಬೇಕಾಗಿ ಬಂದ ಅವಶ್ಯಕತೆ..."

ಇಲ್ಲ, ಅರ್ಜುನ್‌ರಾವರ ಮಾತಿನ ಧಾಟಿಯನ್ನು ಗುರುತಿಸುವುದರಲ್ಲಿ ನಾಗಪ್ಪ ತಪ್ಪಲಿಲ್ಲ. ಗಾಳದ ಕೊಂಡಿಗೆ ಸಿಕ್ಕಿಸಿದ ಆಮಿಷ ಸ್ಪಷ್ಟವಾಗಿ ಏನೆಂಬುದು ಗೊತ್ತಾಗದಿದ್ದರೂ ಅದು 'ಇದೆ' ಎಂಬುದನ್ನು ಮರೆಮಾಚುವದು ಅವರಿಗೆ ಸಾಧ್ಯವಾಗಲಿಲ್ಲ. ತರ್ಕಶುದ್ಧವಾದ, ಒಂದಕ್ಕೊಂದು ಚೊಕ್ಕವಾಗಿ ಹೆಣೆದುಕೊಂಡ ಮಾತಿನ ಸರಣಿ—ಮಾತಿಗೆ ಮೂಲಪ್ರೇರಣೆಯಾದದ್ದನ್ನು ಅಡಗಿಸಲು ಹೆಣಗುತ್ತಿತ್ತು: ತನ್ನೊಬ್ಬನ ಸ್ವಾರ್ಥದ ಸೀಮಾ-ರೇಖೆಯ ಆಚೆ ದೃಷಿ ಚೆಲ್ಲಿ ಗೊತ್ತಿರದ

ಈ ಗೃಹಸ್ಥ ಒಮ್ಮೆಲೇ ತನ್ನ ಬಗೆಗಿನ ಸದ್ಭಾವನೆಯಿಂದ ಇಷ್ಟೊಂದು ಪುಳಕಿತನಾಗುವದು ಸಾಮಾನ್ಯ ವ್ಯಾಪಾರವಲ್ಲ. ಇದನ್ನು ಕೆದಕಿ ನೋಡಬೇಕೆಸಿತು:

"ಆ ರಿಪೋರ್ಟಿನಲ್ಲಿ ನನ್ನ ಜಾತಿಯ ಹೊರತು ಇನ್ನೂ ಅನೇಕ ಆಶ್ಚರ್ಯಕಾರಕ ಸಂಗತಿಗಳಿವೆ..."

"ಬಲ್ಲೆ. ಅವುಗಳಿಗೆ ನಾನು ವಿಶೇಷ ಮಹತ್ವ ಕೊಡಲಾರೆ. ಮೇಲಾಗಿ ಅವುಗಳಲ್ಲಿ ಬಹಳಷ್ಟು ನಿಮ್ಮ ಆಫೀಸಿಗೆ ಸಂಬಂಧಪಟ್ಟವುಗಳು. ಇಷ್ಟೇ: ನಿಮ್ಮ psychological make-up ನೋಡಿ ನಮ್ಮ ವ್ಯಕ್ತಿತ್ವದಲ್ಲಿಯ criminal tendencies ಗುರುತಿಸುವದು, ಅದಕ್ಕೆ ಪುರುವೆ ಎನ್ನುವಂತೆ ನಿಮ್ಮ ಅಣ್ಣ ಎಳೆವಯಸ್ಸಿನಲ್ಲೇ ಜೈಲು ಕಂಡ ಘಟನೆಯನ್ನು ಉಲ್ಲೇಖಿಸುವದು ನನಗಂತೂ ಬಹಳ ಧಾರ್ಷ್ಟ್ಯದ ಮಾತುಗಳಾಗಿ ತೋರುತ್ತವೆ. ಅದೆಲ್ಲ ನಿಮ್ಮ ಮೇಲೆ ಮಾನಸಿಕ ಒತ್ತಡ ತರುವ ದುಷ್ಟ ಉಪಾಯವೆಂದು ತಿಳಿಯುತ್ತೇನೆ. ಆದರೂ ಒಂದನ್ನು ಮಾತ ಒಪ್ಪಿಕೊಳ್ಳಲೇಬೇಕು: ರಿಪೋರ್ಟಿಗಾಗಿ ಮಾಹಿತಿ ಒಟ್ಟು ಮಾಡಿದವನ ತಲೆ ಮಾತ್ರ ಯಾರೂ ತಲೆದೂಗುವಂತಹದು. ಎಲ್ಲೆಲ್ಲಿಂದ ಒಟ್ಟುಮಾಡಿದರೋ!—ತುಂಬ ಪರಿಶ್ರಮಪಟ್ಟಂತಿದೆ. ಒಂದು ಸಂಗತಿಯನ್ನು ಇನ್ನೊಂದಕ್ಕೆ, ಇನ್ನೊಂದನ್ನು ಮತ್ತೊಂದಕ್ಕೆ ಪುರಾವೆಯಾಗಿಸುವ ಒಕ್ಕಣಿಕೆ ಯಾರನ್ನೂ ಮರುಳುಗೊಳಿಸುವಂತಹದು: ಇದನ್ನು ನಂಬದೇ ಇರುವದು ಶಕ್ಯವೇ ಇಲ್ಲವೆನ್ನುವ ಹಾಗಿದೆ..."

ನಾಗಪ್ಪನಿಗೆ ಸಂಶಯವೇ ಉಳಿಯಲಿಲ್ಲ. ಹೆಡೆ ಬಿಚ್ಚದೇ ಫೂತ್ಕರಿಸುತ್ತ ಹರಿದಾಡುವ ಈ ಜಂತು ಕಾಣುವಷ್ಟು ನಿರುಪದ್ರವಿಯಾದದ್ದಲ್ಲ. ಆ ದೃಷ್ಟಿಯಿಂದ ನಾಗಪ್ಪ ನೋಡಿರಬೇಕು: ಅರ್ಜುನ್‌ರಾವರ ಮಾತು ಅರ್ಧಕ್ಕೇ ನಿಂತಿತು. ಅದೇ ಹೊತ್ತಿಗೆ ನಡುಬಾಗಿಲಲ್ಲಿ ಬಂದು ನಿಂತ ಹೆಂಡತಿಯನ್ನು ನೋಡಿದ ಕೂಡಲೇ, ಈ ಮೊದಲೇ ಮಾತನಾಡಿಕೊಂಡ ಒಂದು ವಿಷಯ ನೆನಪಾದವರ ಹಾಗೆ- "ಹೌದು, ಇವಳು ಹೇಳುತ್ತಾಳೆ: ಈವತ್ತು ನೀವು ನಮ್ಮಲ್ಲೇ ಊಟಕ್ಕೆ ಇರಬೇಕೆಂದು..." ನಾಗಪ್ಪ ಆಗಬಹುದೆನ್ನುವವನ ಹಾಗೆ ಅರ್ಜುನ್‌ರಾವರ ಹೆಂಡತಿಯ ಕಡೆಗೆ ನೋಡಿ, "ಥ್ಯಾಂಕ್ಸ್" ಎಂದ.

ಆಗ, ಮುಂದಿನ ಬಾಗಿಲ ಮೇಲೆ ತುಂಬ ಜಾಗ್ರತೆಯಿಂದ ತಟ್ಟಿದ್ದು ಕೇಳಿಸಿ, ಅರ್ಜುನ್‌ರಾವ್, ಎದ್ದು ಹೋಗಿ ಕದ ತೆರೆದರೆ—ಮೇರಿ! “Excuse me. Is Mr. Nagnath..” ನಾಗಪ್ಪ ತನ್ನ ಕಣ್ಣುಗಳನ್ನು ನಂಬದಾದ. “Hello Mary,” ಎನ್ನುತ್ತ ಕುರ್ಚಿಯಿಂದ ಎದ್ದ. ಅರ್ಜುನ್‌ರಾವರಿಗೆ ಅವಳ ಪರಿಚಯಮಾಡಿಕೊಡುತ್ತ— “This is a colleague or rather an ex-colleague of mine,” ಎಂದ. ಹಾಗೂ, “ನಿಮ್ಮನ್ನು ಆಮೇಲೆ ಮತ್ತೆ ಬಂದು ಕಾಣುತ್ತೇನೆ.” ಎಂದು ಅರ್ಜುನ್‌ರಾವರಿಂದ ಬೀಳ್ಕೊಂಡು “Come on Mary, let me show you my palace” ಎಂದು ಅವಳ ಜತೆಗೆ ತನ್ನ ರೂಮಿನತ್ತ ನಡೆಯಹತ್ತಿದ.

## ಅಧ್ಯಾಯ ಮೂರು

ಅಚ್ಚನೀಲೀ ಬಣ್ಣದ ಜಾರ್ಜೆಟ್ ಸೀರೆ, ಅದೇ ಬಣ್ಣದ ತೋಳುಗಳಿಲ್ಲದ ಬ್ಲೌಜ್. ತಲೆಗೆ ಬೇರೆ ಕೊಂಡು ತಂದ ಡೋನಟ್ ಕೂದಲು. ಗೌರವರ್ಣದ ಮೈಯಿಂದ ತರಲವಾಗಿ ಸೂಸುತ್ತಿದ್ದ ಫ್ರೆಂಚ್ ಸುಗಂಧ (MD ಕೊಟ್ಟದ್ದಿರ ಬಹುದೆ?). ಮೊದಲೇ ಚೆನ್ನಾದ ಎತ್ತರವಿದ್ದವಳು ಹಾಯ್-ಹೀಲ್ಸ್ ಮೆಟ್ಟಿದ್ದರಿಂದ ಇನ್ನಷ್ಟು ಎತ್ತರವಾಗಿ ತೋರುತ್ತಿದ್ದಳು: ಮೇರಿ ಇಷ್ಟೊಂದು ಸುಂದರಳೆಂಬ ಕಲ್ಪನೆಯೇ ಇದ್ದಿರಲಿಲ್ಲ ಎನ್ನುವವನ ಹಾಗೆ, ನಾಗಪ್ಪ, ಮೆಚ್ಚಿಕೆ ತುಂಬಿದ ಕಣ್ಣುಗಳಿಂದ ಅವಳನ್ನು ನೋಡಿಯೇ ನೋಡಿದ. ಮರುಗಳಿಗೆ ಇಷ್ಟೊಂದು ಸುಂದರಳಾದ, ಮೋಹಕಳಾದ ಹೆಣ್ಣಿಗೆ ಖೇಮರಾಜಭವನದಂಥ ಹೊಲಸು ಚಾಳು ಒಪ್ಪುವಂತಹದಲ್ಲ ಎಂಬ ಅರಿವಿನಿಂದ ಹಿಂಸೆಯಾಯಿತು. ಚಾಳಿನಲ್ಲಿಯ ಹಲವಾರು ಮನೆಗಳ ಕದಗಳು ತೆರೆದುಕೊಂಡಿದ್ದುವು. ಏನೋ ಗಮ್ಮತ್ತು ನೋಡುವ ಕುತೂಹಲದಿಂದ ಅನೇಕ ಕಣ್ಣುಗಳು ಅರಳಿ ನಿಂತಿದ್ದುವು. ಕೋಣೆಯ ಕದ ತೆರೆದೇ ಇದ್ದದ್ದು ಈಗ ಗಮನಕ್ಕೆ ಬಂತು! ಒಳಗೆ ಬಂದು ದೀಪ ಹಾಕಿದ. ಕಿಡಕಿಯ ಬಳಿಯ ಕುರ್ಚಿಗಳೆರಡನ್ನೂ ತುಸು ಒಳಗೆಳೆದು ಒಂದನ್ನು ಮೇರಿಗೆ ಕೊಟ್ಟ. ಕೂಡ್ರುವ ಮೊದಲು, “Why don’t you shut the door?” ಎಂದಳು. ಲಗುಬಗೆಯಿಂದ ಹೋಗಿ ನಾಗಪ್ಪ ಹಾಗೇ ಮಾಡಿ ಬಂದ. ಅವನು ಅಗಳಿ ಹಾಕದೇ ಇದ್ದುದ್ದನ್ನು ನೋಡಿ ನಗುತ್ತ, ಮೇರಿ ತಾನೇ ಎದ್ದು ಹೋಗಿ ಅಗಳಿ ಹಾಕಿ ಬಂದಳು.

ಕೋಣೆ ದೊಡ್ಡದಲ್ಲವಾಗಿದ್ದರೂ ಹೇರಿಸಿಟ್ಟ ಪುಸ್ತಕಗಳಿಂದಾಗಿ ಅದಕ್ಕೆ ತನ್ನದೇ ಆದ ಗಾಂಭೀರ್ಯ ತುಂಬಿದ ಶೋಭೆ ಬಂದಿತ್ತು. ಕೆಲಹೊತ್ತು ಈ ಪುಸ್ತಕಗಳನ್ನು ಕೌತುಕ ತುಂಬಿದ ಕಣ್ಣುಗಳಿಂದ ನೋಡುತ್ತ ಕುಳಿತುಬಿಟ್ಟಳು ಮೇರಿ. ಅರ್ಧಗಂಟೆಯ ಮೊದಲಷ್ಟೇ ಟೆಲಿಫೋನಿನ ಮೇಲೆ ಮಾತನಾಡುವಾಗ- ’ಬಿಚ್’ ಎಂದುಕೊಂಡದ್ದು ನೆನಪಾಗಿ ನಾಗಪ್ಪನಿಗೆ ನಾಚಿಕೆಯಾಯಿತು. ಅನ್ನಿಸಿಕೆಗಳ, ಭಾವನೆಗಳ ಸ್ವರೂಪವನ್ನೇ ಬದಲಿಸಿಬಿಡುವಂತಹ ರೂಪವಿದು. ಅದರ ಸಾನ್ನಿಧ್ಯದಲ್ಲಿ ಮನಸ್ಸು ತನ್ನ ವಿಮರ್ಶಕಶಕ್ತಿಯನ್ನೇ ಕಳಕೊಳ್ಳುತ್ತದೆ: ತನ್ನನ್ನು ಎವೆಯಿಕ್ಕದೆ ಕೌತುಕದಿಂದ ನೋಡುತ್ತಿದ್ದ ನಾಗಪ್ಪನನ್ನು ತಪ್ಪಾಗಿ ಅಳೆದ ಮೇರಿ:

"Let me warn you Nag! You are going to get ready in the next fifteen minutes! You are coming with me to the MD's house for dinner! The car is waiting downstairs..." ಮೇರಿಯ ಮಾತುಗಳಲ್ಲಿ ಹಿಪ್ನೋಟಿಸ್ಟನ ಆದೇಶದ ಧಾಟಿ ಬಂದಿತ್ತು. ಆದರೆ ಅವುಗಳಲ್ಲಿ ತಾನು ಬಯಸಿದ ಮಾಂತ್ರಿಕ ಬಲ ಬಂದಿರಲಿಲ್ಲ ಎಂಬುದು ಗೊತ್ತಾದದ್ದು ನಾಗಪ್ಪನ ಮೋರೆ ಒಮ್ಮೆಗೆಲೆ ಬದಲಾಗುತ್ತಿದ್ದುದನ್ನು ಗಮನಿಸಿದಾಗ:

"Please Nag, for my sake...Just don't throw away such a golden opportunity." ಎಂದು ಯಾಚಿಸಿದಳು.

ಹಾಗೆ ಹೇಳಿದಾಗಿನ ಅವಳ ಮೋರೆಯನ್ನು ನೋಡಿದ್ದೇ ತಡ, ನಾಗಪ್ಪನಿಗೆ ಅದು ಏನಾಯಿತೋ: ಕೇಳಿಕೇಳುತ್ತಿರುವಂತೆ ತುಂಬ ಮೆತ್ತಗಾದ. ರಮಿಸುವಷ್ಟು ಮೃದುವಾದ ದನಿಯಲ್ಲಿ:

"ಆ ಕ್ಷಮಿಸು ಮೇರೀ, ಈ ಮೊದಲೇ ಬೇರೆ ಕಡೆಗೆ ಊಟಕ್ಕೆ ಬರುವೆನೆಂದು ಹೇಳಿಬಿಟ್ಟಿದ್ದೇನೆ... ನನಗೆ ಏನನ್ನೋ ತಿಳಿಸುವುದಕ್ಕಾಗಿಯೇ MD ನಿನ್ನನ್ನು ಇಲ್ಲಿಗೆ ಈಗ ಕಳಿಸಿರಬೇಕು ಅಲ್ಲವೆ? ಹೇಳು: ಅವರಿಗೆ ನನ್ನಿಂದೇನಾಗಬೇಕಂತೆ ಈಗ?"

ನಾಗಪ್ಪ ಬಾಯಿ ಮುಚ್ಚಿ ಕೂತುಬಿಟ್ಟ: ನೀನೇ ಮಾತನಾಡು ಮೇರೀ- ನಾನು ಬರೇ ಕೇಳಿಸಿಕೊಳ್ಳುತ್ತೇನೆ, ಎನ್ನುವ ರೀತಿ. ತನ್ನನ್ನು ಎವೆಯಿಕ್ಕದೆ ನೋಡುತ್ತಿರುವಾಗಲೂ ತನ್ನಿಂದ ದೂರವಾದ ಪ್ರದೇಶದಲ್ಲಿ ವಿಹರಿಸುತ್ತಿದ್ದವನ ಹಾಗೆ ತೋರುವವನ ಮೋರೆಯ ಮೇಲೆ, ಕಣ್ಣುಗಳಲ್ಲಿ ಕಂಡಂತೆ ಭಾಸವಾದ ವಿಷಾದ ತುಂಬಿದ ಅನಾಸಕ್ತಿ ಮೇರಿಯನ್ನು ಕಲಕಿಬಿಟ್ಟಿತು. ತನಗೆ ಒಪ್ಪಿಸಿ ಕೊಟ್ಟ ಕೆಲಸದಲ್ಲಿ ತಾನೀಗ ಸೋಲುತ್ತಿದ್ದೇನೆ ಎನ್ನುವ ಅನ್ನಿಸಿಕೆಯಿಂದ ಅವಳಿಗೆ ಅಳು ಬರುವಂತಾಯಿತು:

"ಪ್ಲೀಜ್ ನಾಗ್...ನಾನು ಇದಿರಿಗೆ ಕೂತಿರುವಾಗಲೂ ಹೀಗೆ ಒಮ್ಮೆಗೇ ಆಮೆಯ ಹಾಗೆ ನಿನ್ನನ್ನು ನಿನ್ನ ಚಿಪ್ಪಿನೊಳಕ್ಕೆ ಎಳೆದುಕೊಳ್ಳಬೇಡ. ಹೊರಕ್ಕೆ ಬಾ! ಹೊರಗೇ ಇರು: ಕೆಲವೇ ನಿಮಿಷಗಳ ಮಟ್ಟಿಗಾದರೂ ನನ್ನ ಸಹವಾಸದಲ್ಲಿ

ತೆರೆದುಕೋ! ಉದಾರನಾಗು: ಮನಸ್ಸನ್ನು ತೆರೆದೇ ಇಡು! ಇಲ್ಲಿ ಕೇಳು: ಕಳೆದ ಎರಡು ವಾರಗಳಲ್ಲಿ ನೀನು ಅನುಭವಿಸಿದ್ದನ್ನು ಸುಲಭವಾಗಿ ಅರ್ಥಮಾಡಿಕೊಳ್ಳ ಬಲ್ಲೆ. ನಿನ್ನ ಎಲ್ಲ ಯಾತನೆಯನ್ನೂ ಕೊನೆಗೊಳಿಸುವ ಸುದ್ದಿ ತಂದಿದ್ದೇನೆ— the most exciting news you could ever imagine...ಆ ಸುದ್ದಿಯನ್ನು ಒಡೆದ ಕೂಡಲೇ ನಿನಗಾಗುವ ಖುಶಿಯನ್ನು ಕಲ್ಪಿಸಿಕೊಂಡೇ ನಾನು ಇಷ್ಟೊಂದು ಖುಶಿಯಾಗಿದ್ದೇನೆ. ನಾಗ್, ನಂಬು! ಪ್ರತಿಯೊಂದನ್ನೂ ಸಂಶಯದಿಂದ ನೋಡುತ್ತ ನಿನ್ನ ಮನಸ್ಸನ್ನು ಬಾಗಲು ಬಿಡಬೇಡ. ನಿನ್ನನ್ನು ಮರುಳು ಮಾಡಲು ಹೀಗೆ ಸಿಂಗರಿಸಿ ಬಂದಿಲ್ಲ. ಬರೇ ನನಗಾದ ಖುಶಿಯಿಂದಾಗಿ: ಸುದ್ದಿಯನ್ನು ನಿನಗೆ ಒಡೆಒಡೆಯುತ್ತಿರುವಾಗಲೇ ಎಲ್ಲಿ ಅತ್ತುಬಿಟ್ಟೇನೋ ಎಂಬ ಭಯವಾಗಿ ಕದ ಮುಚ್ಚಿಸಿದೆ. ಆದರೆ ನೀನು ಹೀಗೆ ಯಾವುದರಲ್ಲೂ ಈಗ ಆಸ್ಥೆಯೆ ಇಲ್ಲದವನ ಹಾಗೆ ಕೈಕಟ್ಟಿ ಕುಳಿತುಬಿಟ್ಟರೆ ನನ್ನಿಂದ ಮಾತೇ ಹೊರಡಲಾರದು. ನಾಗ್... Please help me-to articulate my joy into words that will make you change your decision...MD ನಮ್ಮಿಬ್ಬರ ಗೆಳೆತನದಲ್ಲಿ ಭರವಸೆ ಇಟ್ಟು ನನಗೆ ವಹಿಸಿಕೊಟ್ಟ ಈ ಕೆಲಸವನ್ನು: ಲವಲವಿಕೆಯಿಂದ ನಾನಾಗಿ ಒಪ್ಪಿಕೊಂಡದ್ದನ್ನು ನಿರ್ವಹಿಸುವುದರಲ್ಲಿ ನೆರವು ನೀಡು. ಈ ಸುಖದ ಸಮಾಚಾರವನ್ನು ಸ್ವತಃ ತಾವೇ ನಿನಗೆ ತಿಳಿಸಬೇಕೆನ್ನುವದು MDಯವರ ಇಚ್ಛೆಯಾಗಿತ್ತು. ಆದರೆ ನನ್ನ ಮೊಂಡುತನವನ್ನು ಅರಿತ ಅವರು ನನ್ನನ್ನು ಕಳಿಸಿದ್ದಾರೆ. ಇಷ್ಟೊಂದು ಹಟದವನಾಗಿಯೂ ನೀನು DMD ಅವರ ಕಪಟ ನಾಟಕಕ್ಕೆ ಇಷ್ಟು ಸುಲಭದಲ್ಲಿ ಮೋಸಹೋದದ್ದು ಅತಿ ಆಶ್ಚರ್ಯ ನಾಗ್, MDಯವರು ನಿನ್ನ ರಾಜೀನಾಮೆಯನ್ನು ಸ್ವೀಕರಿಸಿಲ್ಲ. ಸ್ವೀಕರಿಸಲಾರರು–ಎಂದೆಂದಿಗೂ! ಬದಲು ನಿನ್ನನ್ನು ಕೂಡಲೇ ಮೇಲಿನ ಜಾಗಕ್ಕೆ ಬಡತಿ ಮಾಡಿದ್ದಾರೆ. ಯಾವ ಸ್ಥಾನಕ್ಕೆ ಗೊತ್ತೇ? ಊಹಿಸಬಲ್ಲೆಯಾ? ಕಂಪನಿಯ ಟೆಕ್ನಿಕಲ್ ಡೈರೆಕ್ಟರ್‌ರ ಸ್ಥಾನಕ್ಕೆ ನಿನ್ನ ಪ್ರೊಮೋಶನ್ ನಾಗ್! Congrats Nag and cheer up! ಅಮೇರಿಕನ್ ಕಂಪನಿಯ ವ್ಯಾಸ್-ಪ್ರೆಸಿಡೆಂಟರಾದ ರಟ್ಟರ್ ಅವರೇ ಬೋರ್ಡ್-ಆಫ್-ಡೈರೆಕ್ಟರ್ಸ್ ಸದಸ್ಯತ್ವಕ್ಕೆ ನಿನ್ನ ಹೆಸರನ್ನು ಸೂಚಿಸುತ್ತಾರೆ—ನಂಬುವಿಯಾ? ಮುಂದಿನ ತಿಂಗಳ ಬೋರ್ಡ್ ಮೀಟಿಂಗಿಗೆ ಅವರು ಸ್ವತಃ ಬರುವವರಿದ್ದಾರೆ. ಅನಂತರ—ಕಂಪನಿಯ ಟೆಕ್ನಿಕಲ್-ಡೈರೆಕ್ಟರನಾಗಿಯೇ ಅಮೇರಿಕೆಗೆ ಪ್ರಯಾಣ

ನಿನ್ನದು...ಚಿಯರಪ್ ನಾಗ್—ಚಿಯರಪ್— ನಿನ್ನ ಈ ಮೊಂಡುತನವನ್ನು ಇನ್ನುಬಿಟ್ಟುಬಿಡು ನಾಗ್, ಬಾಗಿಲವರೆಗೆ ಬಂದ ಭಾಗ್ಯವನ್ನು ಬೀಸಾಕಬೇಡ. DMD ಅವರ ಮೋಸವನ್ನೇ ಗೆಲ್ಲಲು ಬಿಡಬೇಡ. DMD ಅವರಿಗೆ ನಿನ್ನ ಈ ಬಡತಿಯ ಸುದ್ದಿ ಇನ್ನೂ ತಿಳಿದಿಲ್ಲ. ರಾತ್ರಿ ನೀನು ಊಟಕ್ಕೆ ಬಂದಾಗಲೇ ಎಲ್ಲರ ಇದಿರು ಈ ಸಂತೋಷದ ಸಂಗತಿಯನ್ನು ಜಾಹೀರು ಪಡಿಸುವುದಿದೆ MD ಅವರಿಗೆ. DMD ಕೂಡ ಊಟಕ್ಕೆ ಬರುತ್ತಾರೆ... please cancel the other engagment and come with me... ನೀನು ರಾಜೀನಾಮೆ ಕೊಟ್ಟ ವರ್ತಮಾನ ತಿಳಿದದ್ದೇ MD ಯವರು ಜರಿದುಹೋದ ರೀತಿ ನೀನು ನೋಡಬೇಕಿತ್ತು ನಾಗ್... ಸ್ವತಃ ತನಿಖೆಗೆ ಮೂಲಕಾರಣರಾದ DMD ಕೂಡ! ನೀನು ರಾಜೀನಾಮೆ ಕೊಡುವಷ್ಟರ ಮಟ್ಟಿಗೆ ಉದ್ರೇಕಗೊಳ್ಳಬಹುದು, ನಾಟಕ ಈ ವಿಕೋಪಕ್ಕೆ ಹೋಗಬಹುದೆಂದು ಅವರೂ ಎಣಿಸಿರಲಿಲ್ಲ; it came as a bolt from the blue by his own admission to the MD...ತಾಜಮಹಲ್ಲಿನಲ್ಲಿತ್ತಂತೆ ತನಿಖೆ ಅಲ್ಲವೆ? ಆಫೀಸಿನಲ್ಲಿ ಯಾರಿಗೂ ಗೊತ್ತಿರಲಿಲ್ಲ. ತನಿಖೆಯಲ್ಲಿ ಏನೇನಾಯಿತು. ಎನ್ನುವದೂ MDಗೆ ಇನ್ನೂ ಸರಿಯಾಗಿ ತಿಳಿದಿಲ್ಲ. ಆದರೆ ಡಾ. ದಸ್ತೂರ್ ಎಂಬವರು ತನಿಖೆಯ ಹೊತ್ತಿಗೆ ಕೈ ತಪ್ಪಿದರಂತೆ—he carried it too far and provoked you too much ಅಂತೆ—ಹೌದೆ? ಅವರೂ ನಿನ್ನಿಂದ ರಾಜೀನಾಮೆಯನ್ನು ಅಪೇಕ್ಷಿಸಿರಲಿಲ್ಲ ಎನ್ನುವದು DMDಯಿಂದಲೇ ತಿಳಿಯಿತು. DMD ಜರ್ಜರಿತವಾದ ರೀತಿ ನೀನು ನೋಡಿಯೇ ನಂಬುವಂತಹದು!..ಮೂಲ ಯೋಜನೆಯ ಪ್ರಕಾರ ತನಿಖೆಯನ್ನು DMD ಒಬ್ಬರೇ ನಡೆಸುವವರಿದ್ದರಂತೆ. ಕಂಪನಿಗೆ ಸಂಬಂಧವೇ ಇಲ್ಲದ ಇನ್ನಿಬ್ಬರನ್ನು ಸೇರಿಸಿಕೊಂಡದ್ದು ಯಾಕೆ? ಯಾವಾಗ? ಎನ್ನುವುದರ ಬಗ್ಗೆ MDR ಇನ್ನೂ ಆಶ್ಚರ್ಯ. DMDಗೆ ಈ ತನಿಖೆಯಿಂದ ಬೇಕಾದದ್ದಾದರೂ ಏನು ಎಂಬುದೂ ಅವರಿಗಿನ್ನೂ ಗೊತ್ತಾಗಿಲ್ಲ... ಆದರೆ ಇದೆಲ್ಲ ಈಗ ನಿರ್ಜೀವ ಇತಿಹಾಸ ನಾಗ್...ಆನಂದಾತಿಶಯದಿಂದ ನೀನು ಉಬ್ಬಬೇಕಾದ ಇಡೀ ಭವಿತವ್ಯ ಮುಂದಿದೆ! ಅಮೇರಿಕನ್ ಡೈರೆಕ್ಟರರಿಗೆ ನಿನ್ನ ಬಗ್ಗೆ ಬಹಳ ಆದರ ಇದೆಯಂತೆ: MDಯವರಿಂದ ತಿಳಿದಾಗ ಎಷ್ಟು ಸಂತೋಷವಾಯಿತು ಗೊತ್ತೇ? “I am proud of you Nag. I am...”

ಈ ವರೆಗೂ ಕಾಡುತ್ತ ಬಂದ ಭಯ ಆತಂಕ ಆಸ ಆಕಾಂಕ್ಷೆ ಮುಂತಾದ ಎಲ್ಲ ಭಾವನೆಗಳನ್ನೂ ಕೆಳಕ್ಕೆ ದೂಡಿ ಬೋರ್ಡಮ್ ತಂತಾನೆ ಮೇಲಕ್ಕೆದ್ದು ಬರಹತ್ತಿದಾಗ ನಾಗಪ್ಪನಿಗೆ ತನಗೆ ಬಂದ ಆಕಳಿಕೆಯನ್ನು ತಡೆಯುವದು ಕಠಿಣವಾಯಿತು:

"ಕ್ಷಮಿಸು ಮೇರೀ, ಕಳೆದ ಎಂಟು ದಿನಗಳಿಂದ ಸರಿಯಾಗಿ ನಿದ್ದೆಯನ್ನೇ ಮಾಡಿಲ್ಲ ನೋಡು. ಈ ಹೊತ್ತು ಗಡದ್ದಾಗಿ ನಿದ್ದೆ ಮಾಡಬೇಕು, ಆಗ ಪರಿಚಯ ಮಾಡಿಕೊಟ್ಟಿದ್ದೆನಲ್ಲ—ಅರ್ಜುನ್‌ರಾವ್—ಅವರ ಮನೆಯಲ್ಲೇ ಊಟಕ್ಕೆ ಕರೆದಿದ್ದಾರೆ. ಬರುತ್ತೇನೆಂದು ಹೇಳಿಯಾಗಿದೆ. ಮೇಲಾಗಿ, ಹೊರಗೆ ಹೋಗುವ ಉತ್ಸಾಹವೇ ಇಲ್ಲವಾಗಿದೆ ನೋಡು... ಈಗ—ನೀನು ತಂದ ಸುದ್ದಿಯಿಂದ ನನಗೆ ಖುಶಿಯಾಗಿಲ್ಲವೆಂದಲ್ಲ ಮೇರೀ—ತುಂಬ ತುಂಬ ಖುಶಿಯಾಗಿದೆ. ಆದರೆ ನೀನು ತಿಳಿದಿರಬಹುದಾದ ಕಾರಣಕ್ಕಾಗಿಯಲ್ಲ. ಯಾವ ಕಾರಣಕ್ಕಾಗಿ ಎನ್ನುವದು ನನಗೂ ಸ್ಪಷ್ಟವಾಗಿಲ್ಲ: ನಾನು ರಾಜೀನಾಮೆಯನ್ನು ಕೊಟ್ಟಿದ್ದು ಬರೀ ನೌಕರಿಗಲ್ಲ ಮೇರೀ. ಹೀಗೆ ಬರಿಯೆ ನಮ್ಮನಮ್ಮ ಸ್ವಾರ್ಥಕ್ಕಾಗಿ, ಭಯಗಳಿಗಾಗಿ ಒಬ್ಬರನ್ನೊಬ್ಬರು ಉಪಯೋಗಿಸಿಕೊಳ್ಳುವಂತೆ ಮಾಡುವ ಈ ವ್ಯಾವಹಾರಿಕ ಲೋಕಕ್ಕೆ! ನೀನು ತಿಳಿದ ಹಾಗೆ, ನಾನು ಈ ನಿರ್ಧಾರವನ್ನು ಒಂದು ಪ್ರಕ್ಷುಬ್ಧಗಳಿಗೆಯಲ್ಲೇ ಮಾಡಿರಬಹುದಾದರೂ ಅದು ಸ್ವತಃ ನಾನೇ ತಿಳಿದದ್ದಕ್ಕಿಂತ ಹೆಚ್ಚು ಗಟ್ಟಿಮುಟ್ಟಾದದ್ದೆಂದು ಗೊತ್ತಾದದ್ದು ಮಾತ್ರ ಇದೀಗ ನೀನು ನನ್ನ ಬಡತಿಯ ಸುದ್ದಿ ಒಡೆದಾಗ! ಅಮೇರಿಕನ್ ಡೈರೆಕ್ಟರರಿಗೆ ನನ್ನ ಬಗ್ಗೆ ಆದರ ಇದ್ದುದನ್ನು ತಿಳಿಸಿದಾಗ! ನನ್ನ ನಿರ್ಧಾರದ ನಿಶ್ಚಲತೆ ಅಹಂಕಾರದಲ್ಲಿ ಬೇರುಬಿಟ್ಟದ್ದಲ್ಲವೆಂದು ನನ್ನ ಪ್ರಾಮಾಣಿಕವಾದ ಅನ್ನಿಸಿಕೆ: ದೀರ್ಘಕಾಲದ ಯಾತನೆಯ ಕೊನೆಯಲ್ಲಿ ಹುಟ್ಟಿದ ಜಾಣತನವಿದು ಎಂದು ನಂಬಲೇ? ನೌಕರಿಯ ಆಮಿಷ ಇಲ್ಲದ್ದರಿಂದಲೇ ಸ್ವಚ್ಛವಾದ, ತಿಳಿಯಾದ ದೃಷ್ಟಿಗೆ, ನಿನ್ನ ಮಾತುಗಳನ್ನು ಕೇಳಕೇಳುತ್ತಿರುವಾಗ ಹೊಳೆದದ್ದು ಹೇಳಲೆ? ಕೇಳು: ಈ ರಾಜಕಾರಣ ನೀನು ತಿಳಿದದ್ದಕ್ಕಿಂತ ಹೆಚ್ಚು ಆಳದ್ದು ಮೇರೀ: ಲಕ್ಷಗಟ್ಟಲೆ ರೂಪಾಯಿಗಳ ಮಾಲು ಕಳವಾಗಿಹೋದದ್ದು, ಹೋದ ರೀತಿ—ಇವು ಯಾರ ಕಿವಿಗೆ ಹೋದರೂ ಅಡ್ಡಿಯಿಲ್ಲ; ಶೇರುದಾರರ ಕಿವಿಗೆ ಮಾತ್ರ ಹೋಗಕೂಡದು: ಹಾಗೆ ಆಗುವದು ಕಂಪನಿಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಹಾನಿಕಾರಕವಾದದ್ದು. ಕಂಪನಿಯ ಆಡಳಿತ ಇಂಥವರ

ಕೈಯಲ್ಲಿದೆ ಎನ್ನುವದು ತಿಳಿಯಿತೆಂದರೆ ಅದರಿಂದಾಗಿ ಡೈರೆಕ್ಟರರಿಗೆ ಕಾದಿರುವ ತೊಂದರೆ ಅಪ್ಪಿಷ್ಟಲ್ಲ. ಸುತ್ತಲಿನ ಪರಿಸರದಲ್ಲಿಯ ತನ್ನ ಕೀರ್ತಿಯನ್ನು ಕಾಯ್ದುಕೊಳ್ಳುವದು ಪ್ರತಿಯೊಂದು ಕಂಪನಿಗೆ ಭವಿತವ್ಯದ ದೃಷ್ಟಿಯಿಂದ ಅತ್ಯವಶ್ಯವಾಗಿರುತ್ತದೆ. ಇದನ್ನು ಅಮೇರಿಕೆಯ ಡೈರೆಕ್ಟರರು ಕಂಡುಕೊಂಡಷ್ಟು ಸ್ಪಷ್ಟವಾಗಿ ನಮ್ಮ MD ಆಗಲೀ DMD ಆಗಲೀ ಕಂಡುಕೊಂಡಂತಿಲ್ಲ. ಇಬ್ಬರಿಗೂ ಒಬ್ಬರನ್ನೊಬ್ಬರು ಕೆಳಗೆಳೆಯುವ ಆಟವೇ ದೊಡ್ಡದಾಗಿಬಿಟ್ಟಿತು! MDಯವರನ್ನು ಕೇಬಲ್ ಮುಖಾಂತರ ಅಮೇರಿಕೆಗೆ ಕರೆಯಿಸಿದ್ದು ಇದನ್ನು ಚರ್ಚಿಸಲು; ನೀನು ತಪ್ಪ ತಿಳಕೊಂಡಂತೆ MDಯವರ ಬಡತಿಯನ್ನಲ್ಲ! ಮೂಕರ್ಜಿಯ ಪ್ರತಿ ಅಮೇರಿಕನ್ ಡೈರೆಕ್ಟರರ ಕೈಸೇರಿದ್ದೇ ಇದಕ್ಕೆಲ್ಲ ಕಾರಣ. They must have wanted him to just hush-up the whole affair! ನನ್ನ ಮತ್ತೊಂದು. ಊಹೆ ಹೇಳಲೆ? ಮೂಕರ್ಜಿಗೆ ಕಾರಣವಾದ ಮಾಹಿತಿಯನ್ನು ಅದು ಸಿಗಬಾರದವರ ಕೈಗೆ ಸಿಗುವಂತೆ ಮಾಡಿದವರು ಸ್ವತಃ MD ಅವರೇ! ಪ್ಲೀಜ್ ಮೇರೀ—ಹಾಗೆ ಒಮ್ಮೆಲೇ ಬಿಳಿಚಿಕೊಳ್ಳಬೇಡ. ನನಗೆ ಹೇಗೆ ಗೊತ್ತು ಎಂದು ಭಯವಾಯಿತು ಅಲ್ಲವೆ?—Simple: the logic of all actions having their roots in selfish motives! ಬಹುಶಃ ನಿನಗೂ ನಾನು ಈಗ ಹೇಳುತ್ತಿದ್ದ ಸಂಗತಿ ಗೊತ್ತಿರಲಿಕ್ಕಿಲ್ಲ: ಆಡಿಟ್-ರಿಪೋರ್ಟಿನಲ್ಲಿದ್ದ ಗುಟ್ಟಿನ ಸಂಗತಿಗಳನ್ನು ಹೊರಗೆಡವಿದ್ದು ಕೂಡ MD ಅವರೇ ಎನ್ನುವದು. ಅಥವಾ ಗೊತ್ತಿರಲೂಬಹುದು. ಆದರೆ ನನ್ನ ಊಹೆ ದಿಟವಾದದ್ದು ಎನ್ನುವುದಕ್ಕೆ ನಾನೀಗ ಒದಗಿಸುವ ಪುರಾವೆ ಸರಿಯಾದದ್ದೋ ಅಲ್ಲವೋ ಎನ್ನುವದನ್ನು ಮಾತ್ರ ನೀನೇ ಖಚಿತಪಡಿಸಬಲ್ಲೆ. ಹೇಳಲೆ?—ನನ್ನನ್ನು ಮುಂಬಯಿಗೆ ವರ್ಗ ಮಾಡಿಸಿಕೊಂಡವರೂ MD ಅವರೇ! ಪ್ಲೀಜ್ ಮೇರೀ, ಅಷ್ಟೊಂದು ಹೆದರಿಕೊಳ್ಳಬೇಡ. ನಾನೇನು ನಿನ್ನ ಮೇಲೆ ಆರೋಪ ಹೊರಿಸಲು ಹೊರಟಿಲ್ಲ—ನಿನಗೆ ಗೊತ್ತಿದ್ದೂ ನೀನು ನನಗೆ ತಿಳಿಸಲಿಲ್ಲವೆಂದು... Please relax and enjoy this game of guessing the motives: DMDಯವರನ್ನು ಪೇಚಿನಲ್ಲಿ ಸಿಕ್ಕಿಸುವ ತಮ್ಮ ಆಟ ಆರಂಭವಾದಾಗ ನಾನು ಹೈದ್ರಾಬಾದಿನಲ್ಲಿದ್ದರೆ ನನ್ನ ಭೋಳೇತನದಿಂದಾಗಿ ಈ ಪೇಚಿನಿಂದ ಹೊರಬೀಳುವ ಉಪಾಯವನ್ನು ನಾನೇ ಏನಾದರೂ DMD ಸೂಚಿಸಿಕೊಟ್ಟೇನೋ ಎಂಬುದು MDಯವರ

ಭಯವಾಗಿತ್ತು. He did not want to take any chances and thought it safer to keep me away from the DMD! ಆದದ್ದೂ ಹಾಗೆಯೇ: ತಾನು ಸಿಕ್ಕಿಕೊಂಡ ಪೇಚಿನಿಂದ ತಪ್ಪಿಸಿಕೊಳ್ಳಲು ನನ್ನಿಂದ ಬೇಕಾದ ಸಹಾಯವೇ DMD ಏರ್ಪಡಿಸಿದ ತನಿಖೆಯ ಉದ್ದೇಶವಾಗಿರಬೇಕು! ಇಷ್ಟೇ, ಸಹಾಯವನ್ನು ಬೇಡಲಿಲ್ಲ. ಹೀಗೇ ಕೇಳಿದರೆ ಅದು ಸಿಗಲಾರದೆಂದು ಬಗೆದ ಹೆದರಿಸುವ ಉಪಾಯ ಹೂಡಿದರು. ಕಾರಣ: ಮೂಕರ್ಜಿಯ ಹಿಂದಿನ ತಲೆ ನನ್ನದೆನ್ನುವ ಗುಮಾನಿ! ತನಿಖೆ ನಡೆದ ರೀತಿ ನೋಡಿದರೆ ಅದರ ಪೂರ್ವ ತಯಾರಿ ಬಹಳ ದಿನಗಳದ್ದೆಂದು ಗೊತ್ತಾಗುತ್ತದೆ. ನಿನ್ನ ಕಣ್ಣುಗಳಲ್ಲಿ ಇದೀಗ ಮಿಂಚಿದ ಹೊಳಪಿನ ಅರ್ಥವಾಗುತ್ತದೆ ಮೇರೀ: MD ನಿನ್ನನ್ನೀಗ ಇಷ್ಟೊಂದು ತರಾತುರಿಯಲ್ಲಿ ಕಳಿಸಿದ್ದೇ ಇದಕ್ಕಾಗಿ—ಕನಿಷ್ಠ ತನಿಖೆಯ ಹೊತ್ತಿಗೆ ಏನೇನಾಯಿತು ಎನ್ನುವುದನ್ನಾದರೂ ತಿಳಿದು ಬರುವುದಕ್ಕಾಗಿ—ಅಲ್ಲವೆ? ನಿನ್ನನ್ನು ತಪ್ಪುತಿಳಿಯಲಾರೆ ಮೇರೀ—ಹೆದರಬೇಡ. it is all in the game. ಈ ಆಟವನ್ನು ಎಷ್ಟು ಚೆನ್ನಾಗಿ ನಾನೀಗಾಗಲೇ ಅರಿತಿದ್ದೇನೆ ಎನ್ನುವುದಾದರೂ ನಿನಗೆ ಗೊತ್ತಾಗಲಿ ಎಂದು ಹೇಳುತ್ತೇನೆ: ಕಾರಖಾನೆಯಲ್ಲಿಯ ಬೆಂಕಿಗೂ ಕಳವಾದ ಮಾಲಿಗೂ ಬಾದರಾಯಣ-ಸಂಬಂಧ ಜೋಡಿಸುವಂತಹ ಸುಳ್ಳು ರಿಪೋರ್ಟಿನ ಮೇಲೆ ನನ್ನ ಸಹಿಬೇಕಿತ್ತು, ತನಿಖೆಯವರಿಗೆ! ಮೂಲ ಯೋಜನೆಯ ಪ್ರಕಾರ DMD ಸ್ವತಃ ಈ ತನಿಖೆ ನಡೆಸುವವರಿದ್ದರು—ಖಂಬಾಟಾನಂತೂ ನನಗೆ ಹಾಗೆಂದು ತಿಳಿಸಿದ್ದ. ತನಿಖೆಗೆ MDಯವರ ಒಪ್ಪಿಗೆ ಪಡೆಯಲು ಏನು ಕಾರಣ ಕೊಟ್ಟಿದ್ದರೋ ನಾನರಿಯೆ, MDಯವರೂ ಧೂರ್ತರೇ: ತನಿಖೆಗೆ ಕಾರಣ ಯಾವುದೇ ಇರಲೊಲ್ಲದೇಕೆ—ಒಮ್ಮೆ ಅದು ಆರಂಭವಾದ ಮೇಲೆ ಮಾತ್ರ DMD ಹಾಗೂ ಅವರ ಚೇಲುರನ್ನೂ ಒಳಗೊಳ್ಳುವಂತೆ ಅದರ ಜಾಲ ಪಸರಿಸಬಹುದು ಎನ್ನುವದು ಅವರ ಯೋಚನೆ ಇದ್ದಿರಬೇಕು. MD ಅಮೇರಿಕೆಗೆ ಹೋದ ಮೇಲೆ ಮಾತ್ರ DMDಗೆ ತನಗೆ ಸಲಹೆ ಇತ್ತ ದಸ್ತೂರ್ ಹಾಗೂ ಪಟೇಲರನ್ನೇ ಈ ತನಿಖೆಯ ಆಯೋಗದಲ್ಲಿ ಸೇರಿಸಿಕೊಳ್ಳುವ ಮನಸ್ಸಾಗಿರಬೇಕು. ತನಿಖೆಯ ಹೊತ್ತಿಗೆ ಆ ದಸ್ತೂರ್ ಬಿಚ್ಚಿದ ಸುಳ್ಳಿನ ಕಂತೆಗೆ ನಾನು ಹೆದರಲಿಲ್ಲ ಮೇರೀ—he made me sick by his lies: ಪಾಪ ಜಲಾಲ್ ಇನ್ನೂ ಆರ್ ಅಂಡ್ ಡೀ ಮ್ಯಾನೇಜರ್ ಆಗದೇ ಇದ್ದದ್ದು ನನಗೆ ಗೊತ್ತಿಲ್ಲ ಎಂದು ತಿಳಿದನೋ! ಬೆಂಕಿ ಹುಟ್ಟಿಸಲು ಶಕ್ಯವೇ ಇಲ್ಲದ ನನ್ನ ಹೊಸ

ಫಾರ್ಮ್ಯುಲೇಶನ್ ಇನ್ನೂ ಉತ್ಪಾದನೆಗೆ ಹೋಗಿಯೇ ಇಲ್ಲ ಎನ್ನುವದು ನನಗೆ ಗೊತ್ತಿದೆ ಎನ್ನುವದನ್ನು ಅರಿಯನೊ! ನಿಜ ಹೇಳಲೇ?— ನಿನಗೆ ನಿನ್ನ ಅಪ್ಪ-ಅಮ್ಮರ ಬಗೆಗೇ ಸರಿಯಾಗಿ ಗೊತ್ತಿಲ್ಲದ್ದೇ ಈ ಬೆಂಕಿಗೆ ನೀನೇ ಕಾರಣ ಎನ್ನುವದನ್ನು ಸ್ಪಷ್ಟಪಡಿಸುತ್ತದೆ. ಎಂದು ಅವನೇನಾದರೂ ಅಂದಿದ್ದರೆ ನಾನು ನಂಬಿಬಿಡುತ್ತಿದ್ದೆನೇನೋ. Of course the MD will be interested to know that I did not sign that report—if that is what you wanted to know…ಆದರೆ ಒಂದು ವಿಚಿತ್ರ ಗಳಿಗೆಯಲ್ಲಿ ನಾನು ರಾಜೀನಾಮೆಯನ್ನು ಬರೆದು ಕೊಡುವುದಕ್ಕೆ ಕಾರಣವಾದದ್ದು ಮಾತ್ರ DMD ಊಹಿಸಿಕೊಂಡದ್ದಲ್ಲ. ಕಾರಣವಾದದ್ದು ಬೇರೆಯೆ: ಈ ತನಿಖೆಗೂ ತಮಗೂ ಎಳ್ಳಷ್ಟೂ ಸಂಬಂಧವಿಲ್ಲದಿದ್ದರೂ ಕೂಡ ನನ್ನ ಬಗ್ಗೆ ತುಂಬ ಆದರ, ಕಾಳಜಿ ವ್ಯಕ್ತಪಡಿಸಿದ ಇಬ್ಬರು ಹುಡುಗಿಯರು ಒಂದು ಸಂದುಕಟ್ಟಿನ ಗಳಿಗೆಯಲ್ಲಿ ಹುಟ್ಟಿಸಿದ ವಿಲಕ್ಷಣ ಭೀತಿ! ಆ ಮೂಕರ್ಜಿಯ ಪ್ರತಿ ನನ್ನ ಕೈಯಲ್ಲೂ ಬಂದಿತ್ತು ಮೇರಿ. ಅದನ್ನು ಓದುವ ಮೊದಲೇ ಹರಿದೊಗೆದಿದ್ದೆ. ನಿನ್ನ ಗೆಳತಿ ಥ್ರೀಟೀ ಇದ್ದಳು ಆಗ ಪ್ಲೇನಿನಲ್ಲಿ. ಮೂಕರ್ಜಿಯನ್ನು ಹರಿದು ಪ್ಲೇನ್ ಸೀಟಿನ ಕಿಸೆಯಲ್ಲಿ ತುರುಕುವಾಗ ಅವಳು ನೋಡಿಲ್ಲ ಎಂದುಕೊಂಡಿದ್ದೆ. ಆದರೆ ನೋಡಿರಬೇಕು. ಬರೇ ಕುತೂಹಲಕ್ಕಾಗಿ ಎತ್ತಿಕೊಂಡಿರಬೇಕು. ತಾನು ನಿಜಕ್ಕೂ ನನ್ನನ್ನು ಭೇಟಿಯಾಗಿ ಮಾತನಾಡಿಸಿದ್ದಳು ಎನ್ನುವುದಕ್ಕೆ ಪುರಾವೆ ಒದಗಿಸಲು ನಿನಗೆ ತೋರಿಸಿರಬೇಕು. ಈಗ ಸ್ಪಷ್ಟವಾಗುತ್ತದೆ: ಫಿರೋಜನ ಕೈಗೆ ನಾನು ಹರಿದೊಗೆದ ಮೂಕರ್ಜಿ ಸೇರಿದ್ದು ನಿನ್ನ ಮುಖಾಂತರ ಎಂದು! ಆದರೆ ಆಗ—ತನಿಖೆಯ ಹೊತ್ತಿಗೆ ಮಾತ್ರ—ಬಂದ ಗುಮಾನಿಯೇ ಹೆಚ್ಚು ಭಯಾನಕವಾಗಿತ್ತು. ಇಷ್ಟೇ: ಆ ಗಳಿಗೆಗೆ ನೀನು DMD ಪರವಾಗಿದ್ದವಳು ಎಂದು ತಿಳಿದಿದ್ದೆ. ಈಗ ಗೊತ್ತಾಯಿತು: ಫಿರೋಜನ ಪಾರ್ಟಿಗೆ ಹೋಗಿ ನಿನಗೆ MDಗಿಂತ DMD ಹೆಚ್ಚು ಸೇರುತ್ತಾರೆ ಎಂದು ನನಗೆ ತೋರಿಸಿಕೊಂಡೆ! ಆ ಕಾಗದದ ತುಂಡುಗಳನ್ನು ಫಿರೋಜನಿಗೆ ಒಪ್ಪಿಸಿ ಮೂಕರ್ಜಿಗೆ ನಾನೇ ಕಾರಣ ಎಂದು ಅವನಿಗಿದ್ದ ಗುಮಾನಿ ಗಟ್ಟಿಯಾಗುವಂತೆ ಮಾಡಿದೆ ! You are doing a marvellous job for the MD. Hope you are paid well, Mary… ಒಂದು ಕಾಲಕ್ಕೆ ನಾನು ನಿನ್ನನ್ನು ಪ್ರೀತಿಸುತ್ತಿದ್ದೆ ಮೇರೀ. ನನ್ನ ಪ್ರೀತಿಯನ್ನು ನಿನ್ನಿದಿರು ಒಪ್ಪಿಕೊಳ್ಳುವ ಧೈರ್ಯ ಮಾತ್ರವಿರಲಿಲ್ಲ. ನೀನೂ ನನ್ನನ್ನು ಪ್ರೀತಿಸುತ್ತೀ

ಎಂದು ಭಾವಿಸಿದ್ದೆ— and that was much before you joined the MD's game of using me for his own benefit...ನಾನು ನನ್ನ ರಾಜೀನಾಮೆಯನ್ನು ಹಿಂತೆಗೆದುಕೊಳ್ಳದಿದ್ದರೆ MDಯವರಿಗೆ ತುಂಬ ಅನಾನಕೂಲವಾಗುತ್ತದೆ ಎನ್ನುವುದನ್ನು ನಾನೂ ಒಪ್ಪುತ್ತೇನೆ. ಅಮೇರಿಕನ್ ಡೈರೆಕ್ಟರರೇ ಖುದ್ದಾಗಿ ಸೂಚಿಸಿದ ಬಡತಿಯನ್ನು ನಾನು ಸ್ವೀಕರಿಸಿಬಿಟ್ಟರೆ ಮಾತ್ರ ಫ್ಯಾಕ್ಟರಿಯಲ್ಲಿ DMDಯವರಿಗೆ ಈಗಿದ್ದ ಪ್ರಭಾವವನ್ನು ಕಡಿಮೆ ಮಾಡಲು ನನ್ನನ್ನು ಉಪಯೋಗಿಸಬಹುದಾಗಿತ್ತು. ಆದರೂ ಕಾಳಜಿಮಾಡಬೇಡ: ನಾನು ಆ ರಿಪೋರ್ಟಿನ ಮೇಲೆ ಕೊನೆಗೂ ಸಹಿ ಮಾಡಿಲ್ಲ ಎನ್ನುವದು ಈಗ ನಿನ್ನಿಂದ ಗೊತ್ತಾಯಿತೆಂದರೆ ತಾವು ಹಾಕಿದ ಕರಾರುಗಳಿಗೆಲ್ಲ DMD ಒಪ್ಪವಂತೆ ಮಾಡಿ ನನ್ನ ರಾಜೀನಾಮೆಯನ್ನು ಸ್ವೀಕರಿಸಲು ತಾವೇ ಮುಂದಾಗುತ್ತಾರೆ, MD! ಅಮೇರಿಕನ್ ಡೈರೆಕ್ಟರರು ಕೇಳಿದರೆ ದಸ್ತೂರ್ ನನ್ನ ಬಗ್ಗೆ ಸಿದ್ಧಪಡಿಸಿದ ರಿಪೋರ್ಟಿನ ಪ್ರತಿಯನ್ನು ಸ್ವತಃ MD ಅವರೇ ಅವರಿಗೆ ಕಳಿಸುತ್ತಾರೆ! ಈ ಘಟನೆಯಿಂದ ತಮಗಾದ ಸಂತಾಪ, ನಿರಾಸೆಗಳ ಜೊತೆಗೆ ನನ್ನ ರಾಜೀನಾಮೆಯನ್ನು ಸ್ವೀಕರಿಸದೇ ಇರುವುದರಲ್ಲಿಯ ತಮ್ಮ ಅಸಹಾಯಕತೆಯನ್ನು ನಯನಾಜೂಕಿನಿಂದಲೇ ವ್ಯಕ್ತಪಡಿಸುತ್ತಾರೆ! ಏನೆಂದರೂ ಇಂತಹ ರಾಜಕೀಯದಲ್ಲಿ DMD ಯಂಥ ಧೂರ್ತನಿಗೆ ಸರಿಸಾಟಿಯಾಗಿ ನಿಲ್ಲಬಲ್ಲ ಗಟ್ಟಿತನ ನನ್ನಲ್ಲಿ ಇಲ್ಲದ್ದನ್ನು MDಯವರೇನು ಅರಿಯದವರೇ! ಆದರೂ ಇಷ್ಟೊಂದನ್ನು ಅವರಿಗೆ ತಪ್ಪದೇ ತಿಳಿಸು: ಅವರು ಬೇರೆ ಏನೇ ತಿಳಿಯಲಿ, ಏನೇ ಮಾಡಲಿ. ಟೆಕ್ನಿಕಲ್-ಡೈರೆಕ್ಟರ್ ಆಗುವ ನನ್ನ ಯೋಗ್ಯತೆಯನ್ನು ಕೊನೆಗೆ ಸಾವಿರಾರು ಮೈಲು ದೂರವಿದ್ದ ಅಮೇರಿಕನ್ನರಾದರೂ ಕಂಡುಹಿಡಿದರಲ್ಲ ಎಂದು ನನಗೆ ತುಂಬ ತುಂಬ ಸಂತೋಷವಾಗಿದೆ. ಎಂದು. Believe me Mary, the experience of the last two weeks has made me an expert in guessing motives behind human behaviour... ಈಗ ನಮ್ಮ ನೆರೆಮನೆಯ ಅರ್ಜುನ್‌ರಾವ್: ರಾತ್ರಿ ಊಟಕ್ಕೆ ಕರೆದಿದ್ದಾರೆ. ಸಂಜೆ ನಿನ್ನ ಫೋನ್ ಬಂದಾಗ ಅಲ್ಲಿಗೇ ಹೋಗಿದ್ದೆ. ಆಗಲೇ ಸಿಹಿಸಿಹಿಯಾಗಿ ಮಾತನಾಡಿಸಿದ್ದಾರೆ. ನಾಳೆ ಬೆಳಗಾಗುವದರೊಳಗೆ ಇಲ್ಲಿ ಒಂದು ದೊಡ್ಡ ನಾಟಕ ನಡೆಯುತ್ತದೆ: ಬದಿಯಲ್ಲಿ ಬಾಗಿಲಿಗೆ ಬೀಗವಿದ್ದ ಮನೆ ಇದೆಯಲ್ಲ. ಅಲ್ಲಿಯ ಒಬ್ಬ ಹೆಣ್ಣಿಗೆ ಈ ನಾಟಕದಲ್ಲಿ ದೊಡ್ಡ ಪಾತ್ರ ಸಿಗುತ್ತದೆ. ನಾಟಕದ ಉದ್ದೇಶ: ನನ್ನನ್ನು ಈ

ಮನೆಯಿಂದ ಓಡಿಸುವದು! ಇನ್ನು ಓಡಲಾರೆ ಮೇರಿ—ನೋಡುತ್ತಿರುವಿಯಂತೆ. ನೀನು ಮಾತ್ರ ಈ ಮನೆಗೆ ಮತ್ತೆ ಬರುತ್ತೀಯೋ ಇಲ್ಲವೋ. ಬಹಳ ಸಣ್ಣಮನೆಯಿದು. ತುಂಬ ಹೊಲಸು ಚಾಳು. ಇಂದಿನಿಂದ ನಾನು ತೀರ ಸಣ್ಣಮನುಷ್ಯ. ನೌಕರಿ ಇಲ್ಲದವನು. ಯಾಕಾದರೂ ಬಂದೀಯಾ?..."

ಏಕೋ ತಾನು ತನ್ನಷ್ಟಕ್ಕೇ ಮಾತನಾಡಿಕೊಳ್ಳುತ್ತಿದ್ದೇನೆ ಎಂಬ ಸಂಶಯ ಬಂದು ಮುಚ್ಚಿಕೊಂಡ ಕಣ್ತೆರೆದರೆ ಮುಂದಿನ ಕುರ್ಚಿ ಖಾಲಿಯಾಗಿತ್ತು! ಆಗಿನಿಂದಲೂ ಹನಿಗೂಡಹತ್ತಿದ ಕಣ್ಣುಗಳಿಂದ ನೀರು ಕೋಡಿವರೆದಿತು. ಮೇರಿ ಯಾವಾಗ ಹೊರಟುಹೋದಳೋ ತಿಳಿಯಲಿಲ್ಲ. ಬಾಗಿಲು ತೆರೆದೇ ಇತ್ತು. ಅರೆ! ಎನ್ನುತ್ತ ಕುರ್ಚಿಯಿಂದ ದಡಬಡಿಸಿ ಎದ್ದ. ಮೋರೆ ತೊಳೆಯಲು ಮೋರಿಗೆ ಹೋಗಬೇಕು ಎನ್ನುವಷ್ಟರಲ್ಲಿ ಅರ್ಜುನ್‌ರಾವ್ ಬಾಗಿಲಲ್ಲಿ ಹಾಜರ್: "ಊಟಕ್ಕೆ ಸಿದ್ಧವಾಗಿದೆ, ನಿಮ್ಮ ಗೆಳತಿ ಬಹಳ ಹೊತ್ತು ಕೂಡ್ರಲೇ ಇಲ್ಲ, ಅಲ್ಲವೆ? ಓಡೋಡಿಯೇ ಎನ್ನುವಂತಹ ಅವಸರದಲ್ಲಿ ಹೊರಟುಹೋದಳಂತೆ— ನಮ್ಮ ಮಗ್ಗಲುಮನೆಯವರು ಹೇಳಿದರು" ಎಂದರು.

## ಅಧ್ಯಾಯ ನಾಲ್ಕು

ಬೆಳಗ್ಗೆ ಎಚ್ಚರವಾದಾಗ ಹೊತ್ತು ಚಲೋ ಏರಿತ್ತು: ಕಿಡಕಿಯ ಕದಗಳೆಲ್ಲವನ್ನು ಮುಚ್ಚಿದ್ದರೂ ಸಂದಿಗಳೊಳಗಿಂದ ತೂರಿ ಬರುತ್ತಿದ್ದ ಕಿರಣಗಳು, ಕಿಡಕಿಯ ಆಚೆಯಜಗತ್ತಿನ ನಿತ್ಯ ಪರಿಚಯದ ಸದ್ದು, ಇವೆಲ್ಲ, ಹೊತ್ತು ಎಂಟು ಗಂಟೆಯಾದರೂ ಆಗಿರಬೇಕು ಎಂಬುದನ್ನು ಸಾರುತ್ತಿದ್ದವು. ಏಳಬೇಕು ಅನ್ನಿಸಲಿಲ್ಲ. ನಿದ್ದೆಯ ಗುಳಿಗೆ ತೆಗೆದುಕೊಳ್ಳದೇ, ಬಿಯರಿನ ಅಮಲಿಗೆ ಮೊರೆಹೋಗದೇ ಇಷ್ಟೊಂದು ಗಾಢವಾಗಿ—ಸದ್ಯಕ್ಕಂತೂ—ನಿದ್ದೆ ಮಾಡಿದ್ದರ ನೆನಪು ನಾಗಪ್ಪನಿಗೆ ಇಲ್ಲವೇ ಇಲ್ಲ. ಎಲ್ಲದರಿಂದ ಬಿಡಿಸಿಕೊಂಡಂಥ ಸಂತ-ಭಾವನೆಯೊಂದು ಅದರ ಹುಟ್ಟಿಗೆ ಕಾರಣವಾದ ಸಂಗತಿಯನ್ನು ನೆನೆಯುವ ಆಸೆಯೊಡ್ಡಿತು. ಮರುಕ್ಷಣ ಅರಿವಿಗೆ ಬಂದಿತು: ತಾನು ತನ್ನ ಬದುಕಿನಲ್ಲೇ ಪ್ರಥಮ ಬಾರಿ ಎಂಬಂತೆ ಅಂಗಿ, ಬನಿಯನ್ ಕಳಚಿ ಬೋಳುಮೈಯಲ್ಲಿ ಮಲಗಿದ್ದೇನೆ ಎನ್ನುವುದು! ಕಳೆದ ಮುವ್ವತ್ತು ವರ್ಷಗಳಿಗೂ ಮಿಕ್ಕಿದ ಕಾಲಾವಧಿಯಿಂದ ತನ್ನನ್ನು ಸುಳ್ಳೇ ಸುಳ್ಳೇ ಹೆದರಿಸಿ ಗಾಸಿಗೊಳ್ಳುತ್ತ ಬಂದ—ತನ್ನ ಭೂತಕಾಲದ ಪ್ರತೀಕದಂತಿದ್ದ— ಬೆತ್ತಲೆ ಎದೆಯನ್ನು ಕಣ್ಣುಬಿಟ್ಟು ನೋಡುವ ಧೈರ್ಯ ಇದೀಗ ಬಂದಿತ್ತು! ಇನ್ನು ಮುಂದೆಯೂ ಅದು ಸಾರುತ್ತಿದ್ದ ಭೀಕರ ಸತ್ಯವನ್ನು ತಾನು ಬಚ್ಚಿಯೇ ಇಡಬಹುದು. ಆದರೆ ಅದಕ್ಕೆ ತಾನೇ ಹೆದರುತ್ತೇನೆ ಎಂಬ ಕಾರಣಕ್ಕಾಗಿ ಅಲ್ಲ; ಉಳಿದವರನ್ನು ಹೆದರಿಸಬಾರದು ಎಂಬ ಉದ್ದೇಶದಿಂದ, ಅಷ್ಟೆ.

ನಿನ್ನೆ ಒಂದು ತೀರ ಅನಿರೀಕ್ಷಿತ ಕ್ಷಣದಲ್ಲಿ, ತೀರ ನಾಟಕೀಯವಾದ ರೀತಿಯಲ್ಲಿ ಅರ್ಜುನ್‌ರಾವ್, ಅವರ ಹೆಂಡತಿ, ತಾಯಿ, ಜಾನಕಿ, ಜಾನಕಿಯ ಗಂಡ, ನೆರೆಮನೆಗಳ ಕೆಲವರು- ಇವರೆಲ್ಲರ ಇದಿರು ಅವರು ಮಾಡಿದ ಒಂದು ದುಷ್ಟ ಆರೋಪಕ್ಕೆ ಉತ್ತರವಾಗಿ ಅಂಗಿ, ಬನಿಯನ್ ತೆಗೆದು ಬೆತ್ತಲೆ ಎದೆ, ಹೊಟ್ಟೆಗಳನ್ನು ತೋರಿಸಿದ್ದರ ರಭಸಕ್ಕೆ ನೆರೆದವರ ಬಾಯಿಂದ 'ಕೀಂ' ಎಂಬ ಚೀತ್ಕಾರ ಮೊಳಗಿತ್ತು. ಆರೋಪಕ್ಕೆ ಮೂಲ ಸ್ಫೂರ್ತಿಯಾದ ಜಾನಕಿಯ ಗಂಡನಂತೂ ಮೂರ್ಛೆ ಹೋಗುವ ಸ್ಥಿತಿಯಲ್ಲಿದ್ದ. ನಾಳೆ ಬೆಳಗಾಗುವುದರೊಳಗೆ ಇಲ್ಲಿ ಒಂದು ನಾಟಕ ನಡೆಯುತ್ತದೆ ಎಂದು ಬರಿಯೆ ಊಹೆಯಿಂದ ಮೇರಿಯ ಇದಿರು ಆಡಿ

ತೋರಿಸಿದ್ದು ಈಗ ವಾಸ್ತವ ಘಟನೆಯಾಗಿ ನಡೆದುಹೋಗಿತ್ತು! ಜಾನಕಿಯ ಚೆಲ್ಲಾಟದ ಮುರಕ ಕೂಡ ಅವನನ್ನು ಈ ಕೋಣೆಗಳಿಂದ ಓಡಿಸುವ ಸಂಚಿನದೇ ಅಂಗವಾಗಿತ್ತೆನ್ನುವದು ಗೊತ್ತಾದದ್ದು ಆಗಲೇ: ಅವಳ ಗಂಡನಿಗೆ ಟೇಲರಿಂಗ್ ಶಾಪ್ ತೆರೆಯಲು ಆ ಕೋಣೆಗಳು ತುಂಬ ಅನಕೂಲವಾಗಿದ್ದುವು! ಈ ಎಲ್ಲ ಸಂಚಿಗೆ ಅರ್ಜುನ್‌ರಾವ್ ಹಾಗೂ ಶ್ರೀನಿವಾಸರ ಬೆಂಬಲವೂ ಇದ್ದರೆ ಆಶ್ಚರ್ಯ ಪಡಬೇಕಾದದ್ದಿಲ್ಲ. ಆದರೆ ಸಿದ್ಧಪಡಿಸಿದ ಆರೋಪ ಮಾತ್ರ ದಂಗುಬಡಿಸುವಂತಹದಾಗಿತ್ತು: ಅವನು ಚಾಳಿನ ಗಂಡಸರೆಲ್ಲ ಕೆಲಸಕ್ಕೆ ಕೈ ಹೋದಾಗ ಮನೆಯಲ್ಲಿ ಒಬ್ಬಳೇ ಇರುತ್ತಿದ್ದ ಜಾನಕಿಯನ್ನು ಸಂಧಿಸಿ ಅವಳಿಗೆ ಇಲ್ಲದ ಲೈಂಗಿಕ ಸನ್ನೆಗಳನ್ನು ಮಾಡುತ್ತಾನಂತೆ! ಇದಕ್ಕೆಲ್ಲ ಹೆದರಿಯೇ ಪಾಪ ಅವಳು ಕಳೆದ ಕೆಲವು ದಿನ ಅಣ್ಣನ ಮನೆಯಲ್ಲಿ ಹೋಗಿ ಉಳಿದಳಂತೆ! ಅವನು ಮಾಡುತ್ತಿದ್ದ ಹೊಲಸು ಸನ್ನೆಗಳನ್ನು ಪಟ್ಟಿಮಾಡಿ ಹೇಳುತ್ತ ಹೋದ ಅರ್ಜುನ್‌ರಾವರ ಮುದಿ ತಾಯಿ ಅವನಿಗೆ ಇನ್ನೂ ಅರ್ಥವಾಗಿರದ ಕ್ರೌರ್ಯದಿಂದ ಮೈ ಮೇಲಿನ ಭಾನ ಮರೆತವಳ ಹಾಗೆ ಅಸಹ್ಯ ಹಾವಭಾವಗಳೊಂದಿಗೆ— 'ಅಂಗಿಯ ಗುಂಡಿಗಳನ್ನು ಬಿಚ್ಚಿ ಬೆತ್ತಲೆ ಛಾತಿಯ ಕೂದಲು ತೋರಿಸುವಷ್ಟರ ಮಟ್ಟಿಗಿನ ಫಾಜೀಲತನ ಕೇಳಿ ಕೂಡ ಗೊತ್ತಿಲ್ಲದ್ದವ್ವ, "ಇದೇನು ಫೋರಾಸ್ ರೋಡ್ ಎಂದು ತಿಳಿದನೋ... ಒಂದೇ ಮದುವೆಯಾಗಲಿ, ಇಲ್ಲ ಚಾಳು ಬಿಟ್ಟು ಹೋಗಲೀ' ಎಂದಿದ್ದಳು! ಮಾತಿಗಿಂತ ಹೆಚ್ಚಾಗಿ ಅವುಗಳ ಹಿಂದಿನ ಕೂರೂಪ ಮನಸ್ಸು, ಅದಕ್ಕೆ ಪ್ರತಿಸ್ಪಂದಿಯಾದವರ ಕಣ್ಣುಗಳಲ್ಲಿ ವ್ಯಕ್ತವಾದ — ವಿಚಿತ್ರ ರೀತಿಯಿಂದ ಬಾಯಿ ಚಪ್ಪರಿಸುವಂತಹ-ಕ್ರೂರ್ ಸಮಾಧಾನ ಇವು ನಾಗಪ್ಪನ ಕ್ಷೋಭೆಗೆ ಕಾರಣವಾಗಿದ್ದಾವು... ಕಳಚಿದ ಅಂಗಿ ಬನಿಯನ್ನುಗಳನ್ನು ಕೈಯಲ್ಲಿ ಹಿಡಿದೇ ಅರ್ಜುನ್‌ರಾವ್ ಅವರ ಮನೆ ಬಿಟ್ಟಾಗ ನೆರೆದವರಲ್ಲೊಬ್ಬರೂ ಚಕಾರ ಶಬ್ದ ಎತ್ತಿರಲಿಲ್ಲ. ಸೀದ ಮನೆಗೆ ಬಂದು ಹಾಸಿಗೆಯಲ್ಲಿ ಅಡ್ಡವಾದವನಿಗೆ ಬಹಳ ಹೊತ್ತಿನವರೆಗೆ ಬಾಧಿಸಿದ್ದು ಆ ನಿಃಶಬ್ದತೆಯೇ. ಮೌನ ತುಂಬಿದ ಕೋಣೆಯ ಕತ್ತಲೆಯಲ್ಲಿ ಮೂಡಿಬಂದ ಜಾನಕಿಯ ಮಾದಕ ದೇಹದ ನೆನಪು ಕೂಡ ಮೊದಲ ಬಾರಿ ಒಂದು ಬಗೆಯ ಭಯತುಂಬಿದ ವಿಷಾದಕ್ಕೆ ಕಾರಣವಾಯಿತು. ಮರುಗಳಿಗೆ ಗೊತ್ತಾಗದ ರೀತಿಯಲ್ಲಿ ಒಂದು ಬಗೆಯ ಕೃತಜ್ಞತಾ ಭಾವಕ್ಕೆ ಕೂಡ! ತನ್ನನ್ನು ತನ್ನಿಂದಲೇ ಪರಾರಿಯಾಗುವಂತೆ ಮಾಡಿದ, ಎಲ್ಲವನ್ನೂ ಸ್ವೀಕರಿಸುವ ಧೈರ್ಯ ಕೊಟ್ಟ—ಕಳೆದ ಹದಿನಾಲ್ಕು ದಿನಗಳ— ನಾಟಕದ ಉಚ್ಚಾಂಕವೇ ನಿನ್ನೆ ರಾತ್ರಿಯ

ಘಟನೆಯಾಗಿತ್ತು! ತನ್ನ ಸೋದರತ್ತೆಗೆ ಸೇರಿದ ಈ ಕೋಣೆಗಳು; ಗುಣವಾಗದ ರೋಗದ ಚಿಕಿತ್ಸಗೆಂದು ಮುಂಬಯಿಗೆ ಬಂದಾಗ ಇವೇ ಕೋಣೆಗಳಲ್ಲಿ ಒದಗಿದ ಅಮ್ಮನ ಸಾವು; ತಂಗಿ ಇಲ್ಲಿಯದೇ ಜನಜಂಗುಳಿಯಲ್ಲಿ ಕಾಣೆಯಾದದ್ದು; ಊರಿಗೆ ಹಿಂತಿರುಗಿದ ನಂತರ ಆದ ಬೆಂಕಿಯ ಅಪಘಾತ; ಅಪ್ಪನ ಆತ್ಮಹತ್ಯೆ, ಸೋದರತ್ತೆಯ ಮರಣ... ಎಲ್ಲ ಎಲ್ಲವನ್ನು ಸರಿಯಾದ ಬೆಳಕಿನಲ್ಲಿ ನೆನೆಯುವ ಧೈರ್ಯ ಮೊಳೆಯುತ್ತಿದ್ದಂತೆಯೇ ನಿರಾತಂಕವಾದ ಗಾಢ ನಿದ್ದೆ ಸೇರಿದ್ದ... ಈಗ ಎಲ್ಲ ನೆನಪಾಗತೊಡಗಿತು...

ಮೈಮೇಲಿನ ಹೊದಿಕೆಯನ್ನು ಕಿತ್ತೊಗೆದವನೇ ಎರಡೂ ಕೈಗಳನ್ನು ಎದೆಯ ಮೇಲೆ, ಹೊಟ್ಟೆಯ ಮೇಲೆ ಆಡಿಸಿಕೊಂಡ: ಕಣ್ಣು ತಮ್ಮಿಂದ ತಾವೇ ಮುಚ್ಚಿಕೊಂಡವು. ಹೊತ್ತು ಹೋದ ಹಾಗೆ ತಮ್ಮಿಂದ ತಾವೇ ತುಂಬಿಕೊಳ್ಳಹತ್ತಿದುವು: ತಾನೇ ನೋಡಿಕೊಳ್ಳಲು ಹೆದರುತ್ತಿದ್ದುದನ್ನು ಒಂದೇ ಒಂದು ಹೆಣ್ಣುಜೀವ ಮಾತ್ರ ಅತ್ಯಂತ ಸಹಜವಾದ ಕೈಯ ಸ್ಪರ್ಶದಿಂದಲೇ ಸಹಾನುಭೂತಿ ಪ್ರೀತಿಗಳನ್ನು ವ್ಯಕ್ತಪಡಿಸುತ್ತಿತ್ತು—ರಾಣಿ: ಕೂಡಲೇ ಏಳುವುದಕ್ಕೆ ಕಾರಣವಾದವಳು ಅವಳೇ! ಮಾತನ್ನೇ ಬೇಡದ ಈ ಸಂಬಂಧ ಕೊಡುತ್ತಿದ್ದ ಸುಖವನ್ನು ಮಾತಿನಲ್ಲಿ ವಿಶ್ಲೇಷಿಸಿ ಹಾಳುಮಾಡುವ ಮನಸ್ಸಾಗಲಿಲ್ಲ. ಯಾಕೆ ಎಂದು ಕೇಳುವದು ಕೂಡ ಅಪ್ರಸ್ತುತವೆನಿಸಿತು. ಈಗಿಂದೀಗ ಹೋಗಿ ತನ್ನ ರಾಣಿಯನ್ನು ಕಾಣಬೇಕು ಅನ್ನಿಸುತ್ತದೆ; ಆದ್ದರಿಂದಲೇ ಆದಷ್ಟು ಬೇಗ ಸಿದ್ಧನಾಗಿ ಹೊರಡಬೇಕು ಅನ್ನಿಸುತ್ತದೆ, ಎಂದುಕೊಂಡ. ಎಲ್ಲದಕ್ಕೂ ಕಾರಣ ಬೇಡುವ, ಎಲ್ಲದರ ಉದ್ದೇಶ ಅರಿಯುವ ಮನಸ್ಸಿನ ದುಷ್ಟಹವ್ಯಾಸಕ್ಕೆ ಉತ್ತರವೆಂಬಂತೆ: ಎರಡೂ ಗಲ್ಲಗಳಲ್ಲಿ ಕುಳಿ ಮೂಡಿಸಿ, ಮೊದಲೇ ಸಣ್ಣ ಸಣ್ಣವಾದ ಕಣ್ಣುಗಳನ್ನು ಇನ್ನಷ್ಟು ಸಣ್ಣವಾಗಿಸಿ ಸುಂದರವಾಗಿ ನಗುವ ಅವಳ ಮೋರೆಯನ್ನು ನೋಡದೇ ಎಷ್ಟು ದಿನಗಳಾದುವು... ಹಾಗೇಂದೇ ಈಗಿಂದೀಗ ಹೊರಡಬೇಕು...

ಪ್ರಾತರ್ವಿಧಿಗಳನ್ನು ಮುಗಿಸಿದ್ದೇ ಮೇರಿಗೆ ತುಂಬ ಪ್ರಿಯವಾದ, ಚೇತನಾ ಮೆಚ್ಚಿಕೊಂಡ ಕ್ರೀಮ್ -ಕಲರ್ - ಪ್ಯಾಂಟು. ನೀಲೀ ಬಣ್ಣದ ಬುಶ್ ಶರ್ಟುಗಳನ್ನು ಧರಿಸಿದ. ನಿನ್ನೆ ಶ್ರೀನಿವಾಸ ಹಿಂತಿರುಗಿಸಿದ ಕರಿಯ ಬೂಟುಗಳನ್ನೇ ಹಾಕಿಕೊಂಡ. ಕನ್ನಡಿಯಲ್ಲೊಮ್ಮೆ ಮೋರೆ ನೋಡಿಕೊಂಡ: ತಾನಿದೀಗ ತುಂಬ ಖುಶಿಯಲ್ಲಿದ್ದೇನೆ ಅನ್ನಿಸಿ ಖುಶಿಯಾಯಿತು. ಕೊನೆಗೂ, ಬದುಕಿನ ಸುಖ ಇಂತಹ ಈ ಖುಶಿಯ

ಕ್ಷಣಗಳಲ್ಲಷ್ಟೇ ನೆಲೆಸಿದ್ದೇನೋ ಎಂದು ಅದೇ ಹುಟ್ಟಿದ ವಿಚಾರವನ್ನು ಅರಿವಿಗೆ ತಂದಹೊಳ್ಳುವ ಮನಸ್ಸಾಗಲಿಲ್ಲ. ನೇರವಾಗಿ ಸಂತೋಷಭವನಕ್ಕೆ ಹೋಗಿ ನಾಸ್ತಾ ಮುಗಿಸುವದು ಹಾಗೂ ಅಲ್ಲಿಂದಲೇ ರಾಣಿಯ ಮನೆಗೆ ಹೋಗುವದು ಎಂದು ನಿಶ್ಚಯಿಸಿದ. ರಾಣಿಯ ಮನೆಗೆ ಹೀಗೆಂದೂ ಬೆಳಗ್ಗಿನ ಹೊತ್ತಿಗೆ ಹೋದವನಲ್ಲ. ಇಂದು ಮಾತ್ರ ಈಗಿಂದೀಗ ಹೋಗಿ ಅವಳನ್ನು ಕಾಣದೇ ಇರುವದು ಅಸಾಧ್ಯ ಅನ್ನಿಸಿತು...

ಬೆನ್‌ಹ್ಯಾಮ್‌ಹಾಲ್‌ಲೇನ್ ಸೇರಿದೊಡನೆ ತನ್ನನ್ನು ದಾದಾ ಎಂದು ಕರೆದು ತನಗೆ ಹೂವು ಮಾರಿದ ಹುಡುಗಿಯನ್ನು ಹುಡುಕ ಹತ್ತಿದ. ಕಾಣಲಿಲ್ಲವಾದ್ದರಿಂದ ನಿರಾಸೆಯಾಯಿತು. ಆದರೆ ಅದೇ ಜಾಗದಲ್ಲಿ ಕೂತ ಹುಡುಗನಿಂದ ಎರಡು ಮಲ್ಲಿಗೆ ಹೂವಿನ ಜಡೆಗಳನ್ನು ಕೊಂಡುಕೊಂಡ. 'ಯಾರಿಗಾಗಿ?' ಎಂಬ ನವಿರೆಬ್ಬಿಸುವ ಅರಿವೇ 'ಯಾತಕ್ಕಾಗಿ?' ಎಂಬ ಪ್ರಶ್ನೆಯನ್ನು ಅಪ್ರಸ್ತುತಗೊಳಿಸಿತ್ತು! ಹೂಜಡೆಗಳ ಆಹ್ಲಾದದಾಯಕ ಸುಗಂಧ ಆದಾಗಲೇ ಸ್ಥಾಯಿಯಾದ ಗೆಲುವಿಗೆ ಇನ್ನಷ್ಟು ಕಳೆ ತಂದಿತು. ಸಂತೋಷಭವನ ಸೇರಿದ್ದೇ ತಡ, ಇದಿರಾದ ನಾಯಕ ವಿಚಿತ್ರ ರೀತಿಯಿಂದ ಹಲ್ಲು ಕಿಸಿದು ಬಾ ಎಂದ. 'ನಿನ್ನೆ ಶ್ರೀನಿವಾಸನೇ ಎಲ್ಲ ಹೇಳಿದ,' ಎಂದು ಆರಂಭಿಸುತ್ತಾನೆ ಒಂದೂ ಮಗ ಎಂದು ಊಹಿಸಿಕೊಂಡ ರೀತಿಯಲ್ಲೇ ನಾಯಕ ಆರಂಭಿಸಿದ್ದರಿಂದ ಮೋರೆಯ ಮೇಲೆ ನಗು ಮೂಡಿ—"ಹೌದೆ? ಹಾಗಾದರೆ ನನ್ನ ಕೆಲಸ ಅಷ್ಟರ ಮಟ್ಟಿಗೆ ಹಗುರವಾಯಿತು," ಎನ್ನುತ್ತ ಅಲ್ಲಿ ನಿಲ್ಲದೇ ಸೀದ ಒಳಗೆ ಹೋಗಿ ತಾನು ಯಾವಾಗಲೂ ಕೂಡ್ರುತ್ತಿದ್ದ ಕೋಣೆಗೇ ನಡೆದ. ಎಂದಿನ ಮಾಣಿ ಇವನನ್ನು ನೋಡಿಯೂ ನೋಡದವನ ಹಾಗೆ ಇನ್ನೊಬ್ಬ ಗಿರಾಕಿಯತ್ತ ನಡೆದ: ಇವನಿಗೂ ಅದು ಗೊತ್ತಾಗಿರಬೇಕು. ಶ್ರೀನಿವಾಸ ಹಂಚುತ್ತ ನಡೆದ 'ಹ್ಯಾಂಡ್ ಬಿಲ್' ಇವರೆಲ್ಲರ ಕೈಸೇರಿರಬೇಕು ಎಂದುಕೊಂಡು ಕಣ್ಣಮುಂದೆ ನಿಂತ ಮಾಣಿಗೆ— 'ಗೋಪಾಲನನ್ನು ಕಳಿಸು,' ಎಂದಾಗ ಗೋಪಾಲನೇ ಅಳುಕುತ್ತ ಬಂದು ಮೋರೆ ಸಣ್ಣದು ಮಾಡಿ ನಿಂತ. ನಾಗಪ್ಪ ಮಾತನಾಡಿಸುವ ಮೊದಲೇ— “ನಿಮ್ಮನ್ನು ಕೆಲಸದಿಂದ ತೆಗೆದುಹಾಕಿದರಂತೆ, ಹೌದೆ ಸರ್?” ಎಂದು ಕೇಳಿದ. ನಾಗಪ್ಪ ಉತ್ತರವನ್ನು ಹೇಳುವ ಗೋಜಿಗೆ ಹೋಗಲಿಲ್ಲ. ಈಗ ಏನನ್ನೂ ಹೇಳಿ ಯಾವ ಪ್ರಯೋಜನವೂ ಇಲ್ಲ. ಸತ್ಯವನ್ನು ಅರಿಯುವ ಕುಶೂಹಲದಿಂದ ಹುಟ್ಟುವ

ಪ್ರಶ್ನೆಗಳೇ ಅಲ್ಲ ಇವು. ಈ ಪ್ರಶ್ನೆಗಳಿಗೆ ಒಳಗಾದ ಸನ್ನಿವೇಶದಲ್ಲಿ ಸಿಕ್ಕಿಕೊಂಡವನು ತಾನಲ್ಲವಲ್ಲ ಎಂಬುದೇ ಅವನ್ನು ಕೇಳುವುದರ ಹಿಂದಿನ ಧೈರ್ಯ: ಮನೆ ಕುಸಿದುಬಿದ್ದು ಜನ ಸತ್ತದ್ದು, ಬೆಂಕಿ ಹತ್ತಿ ನರಳಿದ್ದು, ಕೊಲೆಯಾದದ್ದು —ಎಲ್ಲ ಒಂದೇ: ಮಾತಿನಲ್ಲಿ ಮೂಡುವ ಸಹಾನುಭೂತಿಯ ಅಡಿಗೆ ನಾಲಗೆ ಚಪ್ಪರಿಸುತ್ತಿದ್ದದ್ದು ದುಷ್ಟ ಕುತೂಹಲ! ಹಿಂದೆ ಹಲವು ಸರತಿ ಅಂದುಕೊಂಡದ್ದನ್ನೇ ಇನ್ನೊಮ್ಮೆ ಅಂದುಕೊಂಡು—"ಇಡ್ಲಿ ಬಿಸಿ ಇದ್ದರೆ ಒಂದು ಪ್ಲೇಟ್ ಇಡ್ಲೀ ಹಾಗೂ ಬಿಸಿ ಬಿಸಿ ಕಾಫಿ ತಗೊಂಡು ಬಾ," ಎಂದ. ತನ್ನ ಪ್ರಶ್ನೆಗೆ ಉತ್ತರ ಬರದಿದ್ದುದನ್ನು ಕಂಡು ತುಸ ಕಿರಿಕಿರಿಯಾದ ಮಾಣಿ — "ಮಾಲಕರೇ ಹೇಳಿದರು." ಎಂದ. ಇದಕ್ಕೂ ನಾಗಪ್ಪ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ಕಾಫಿ ಇಡ್ಲೀ ಬಂದ ಕೂಡಲೇ ತೀರ ಯಾಂತ್ರಿಕವಾಗಿ ಎನ್ನುವಂತೆ ಎರಡನ್ನೂ ಮುಗಿಸಿ ಬಿಲ್ಲಿನ ಹಣ ಕೊಟ್ಟು ಹೊರಗೆ ಬಿದ್ದ. ನಾಯಕ ಯಾರಿಗೋ ತನ್ನ ಬಗ್ಗೆ ಹೇಳುತ್ತಿದ್ದದ್ದು ಕೇಳಿಸಿದರೂ ಅದರತ್ತ ಲಕ್ಷ್ಯವನ್ನೇ ಕೊಡದೇನೇ ನೇರವಾಗಿ ಆಪೆರಾ-ಹೌಸಿನತ್ತ ನಡೆಯಹತ್ತಿದ. ಅಲ್ಲಿ ತಲುಪಿದ ಕೂಡಲೇ ಆ ವರೆಗೂ ಅನ್ನಿಸಿರದ ಆತುರದಿಂದ ರಾಣಿಯ ಮನೆಯಿದ್ದ ಕೆನಡೀ ಬ್ರಿಜ್ ಕಡೆಗೆ ಹೆಜ್ಜೆ ಇಡಹತ್ತಿದ.

ಕೈಯಲ್ಲಿ ಹೂವಿನ ಜಡೆಗಳಿದ್ದ ಎಲೆಗಳ ಪೊಟ್ಟಣವಿತ್ತು. ರಾಣಿಯ ಮನೆ ಹತ್ತಿರವಾಗುತ್ತಿದ್ದ ಹಾಗೆ ಎದೆ ಡವಗುಟ್ಟಹತ್ತಿತು: ಅನೇಕ ದಿನಗಳ ಗೈರುಹಾಜರಿಯ ನಂತರ ಬಂದ ಮನೆ, ವಿಲಕ್ಷಣ ರೀತಿಯಿಂದ, ಕಣ್ಣು ಆರ್ದ್ರಗೊಳ್ಳಲು ಕಾರಣವಾಯಿತು. ತೀರ ಪರಿಚಯದ ಕಬ್ಬಿಣದ ಸ್ಪೈರಲ್ ನಿಚ್ಚಣಿಕೆಯಿಂದ ಮೂರನೇ ಮಜಲಿಗೆ ಹೋಗುತ್ತಿರುವಾಗಂತೂ ಮನಸ್ಸನ್ನು ಮುತ್ತಿ ನಿಂತ ಭಾವನೆಗಳಿಗೆ ಮಾತು ಹುಡುಕುವದು ಕಠಿಣವಾಯಿತು.

ಭಾವನೆಗಳ ಗುಂಗಿನಲ್ಲಿದ್ದಾಗಲೇ ಮನೆಯನ್ನು ತಲುಪಿಯಾಗಿತ್ತು. ಅಲ್ಲಿ ಬಂದು ಮಟ್ಟಿದ ನಂತರವೇ ಈ ಹೊತ್ತಿಗೆ ಬರಬಾರದಾಗಿತ್ತೆಂದು ಅನ್ನಿಸ ಹತ್ತಿತು: ಕಾರ್‍ರಿಡಾರಿನ ಮೇಲೆ ಕೂತ ಇಬ್ಬರು ಹುಡುಗಿಯರು, ಇವನನ್ನು ಕಂಡವರೇ, ಸರಿಯಾದ ವೇಷ-ಭೂಷೆಯಲ್ಲಿ ಇಲ್ಲದ ಕಾರಣ ಗಾಬರಿ ತುಂಬಿದ ನಾಚಿಕೆಯಿಂದ ಒಳಕ್ಕೆ ಓಟ ಕಿತ್ತರು. ಆವರಲ್ಲೊಬ್ಬಳು ನಾಗಪ್ಪನ ಪರಿಚಯದವಳೇ—ರಾಣಿಯ ಗೆಳತಿ. ಹೆಸರು ಗೊತ್ತಿರಲಿಲ್ಲ. ರಾಣಿಯ ಮನೆಗೆ ಬೀಗವಿತ್ತು. ಬೀಗವನ್ನು ನೋಡುತ್ತಿದ್ದಂತೆಯೇ, ತನ್ನಿಂದ ಅವಳಿಗಾದ ಅನ್ಯಾಯದ ಅರಿವಾಯಿತೆನ್ನುವಂತೆ

ಮನಸ್ಸು ಖಿನ್ನಗೊಂಡಿತು. ಹಾಗೆ, ಬೀಗವಿದ್ದ ಮನೆಯ ಇದಿರು ಖಿನ್ನಮನಸ್ಕನಾಗಿ ನಿಂತಿರುವಾಗಲೇ ಈ ಮೊದಲು ಒಳಗೆ ಓಡಿಹೋದ ಗೆಳತಿ ಸರಿಯಾಗಿ ಬಾಚಿಕೊಂಡ ಕೂದಲನ್ನು ಹೆಗಲ ಮೇಲೆ ಬಿಟ್ಟು, ಬೇರೆ ಸೀರೆ ಉಟ್ಟು, ನಗುತ್ತ ಹೊರಗೆ ಬಂದಳು. ಇವನನ್ನು ಸಮೀಪಿಸಿ—"ಇಷ್ಟು ದಿನ ಬರಲೇ ಇಲ್ಲ?" ಎಂದು ಲವಲವಿಕೆಯ ಆತ್ಮೀಯತೆ ಪ್ರಕಟಿಸುತ್ತ ಕೇಳಿದಳು. 'ರಾಣಿ ನಿಮ್ಮ ಹಾದಿ ಕಾದಳು,' ಎನ್ನುವದಿತ್ತೇ? ಅವಳು ಸ್ಪಷ್ಟಪಡಿಸಲಿಲ್ಲ. ಅವಳ ಮುಂದಿನ ಮಾತಿನ ಹಾದಿ ಕಾಯುತ್ತಿದ್ದಾಗ,. "ಈ ಮನೆಯಲ್ಲೀಗ ರಾಣಿ ಇರುವುದಿಲ್ಲ... ಬೇರೊಬ್ಬಳು ಬರುವವಳಿದ್ದಾಳೆ," ಎಂದಳು. ತುಸು ತಡೆದು, "ರಾಣಿ ಮುಂಬಯಿ ಬಿಡುವವಳಿದ್ದಾಳೆ." ಎಂದಳು. ಆ ಹೊತ್ತಿಗೆ ಇನ್ನಿಬ್ಬರು ಹುಡುಗಿಯರು ಬಂದು ನಾಗಪ್ಪನನ್ನು ಸುತ್ತುವರಿದು ನಿಂತು, "ಒಬ್ಬ ಶ್ರೀಮಂತ ಶೇಠಜೀ ಅವಳನ್ನು ಅಹಮ್ಮದಾಬಾದಿಗೆ ಕರೆದೊಯ್ಯುತ್ತಾನಂತೆ ಇನ್ನೆರಡು ದಿನಗಳಲ್ಲಿ. ನಿನ್ನೆ ಸಂಜೆ ಅಣ್ಣನ ಮನೆಗೆ ಹೋಗಿದ್ದಾಳೆ. ಅಣ್ಣನೇ ಬಂದಿದ್ದ ಅವಳನ್ನು ಕರೆದೊಯ್ಯಲು..." ಎಂದು ಒಬ್ಬಳು ಹೇಳುತ್ತಿರುವಾಗಲೇ ಇನ್ನೊಬ್ಬಳು ಗಂಡು-ದನಿಯನ್ನು ಹೋಲುವ ಗೊಗ್ಗರುದನಿಯಲ್ಲಿ, "ನಿಮ್ಮ ನೌಕರಿ ಹೋಯಿತಂತೆ, ಪಾಪ. ನಿನ್ನೆ ರಾಣಿಯ ಅಣ್ಣನೇ ಹೇಳಿದ" ಎಂದಳು. ಇಲ್ಲವಾದರೆ ರಾಣಿ ಇಲ್ಲಿಂದ ಹೋಗುತ್ತಿರಲೇ ಇಲ್ಲವೆಂದು ಅವಳಿಗೆ ಹೇಳುವದಿತ್ತೇ? ನಾಗಪ್ಪನಿಗೆ ಇದಾವುದರ ಅರ್ಥವೇ ಆಗುತ್ತಿರಲಿಲ್ಲ! ಶಬ್ದ ಸೂಚಿಸುವ ಅರ್ಥಪ್ರಪಂಚದಾಚೆ ಎಲ್ಲೋ ಸುತ್ತಾಡುತ್ತಿದ್ದ ಅವನ ಮನಸ್ಸು ಈ ಹುಡುಗಿಯರು, ಅವರು ತನ್ನತ್ತ ನೋಡುವ ವಿಚಿತ್ರ ರೀತಿ, ಅವರಾಡುತ್ತಿದ್ದ ವಿಚಿತ್ರ ಮಾತುಗಳು—ಇವಾವುಗಳನ್ನೂ ಗ್ರಹಿಸುವ ಸ್ಥಿತಿಯಲ್ಲೇ ಇದ್ದಂತಿರಲಿಲ್ಲ! ತಾನು ಎಲ್ಲಿ ಬಂದಿದ್ದೇನೆ? ಯಾಕೆ ಬಂದಿದ್ದೇನೆ? ಎನ್ನುವುದರ ಬಗೆಗೇ ದಿಗಿಲುಗೊಂಡಿದ್ದ. ನಿದ್ದೆಯಲ್ಲೆದ್ದು ನಡೆಯುವವನ ರೀತಿ ನಿಚ್ಚಣಿಕೆಯ ಕಡೆಗೆ ಹೆಜ್ಜೆ ಇಡುತ್ತಿದ್ದವನ ದೃಷ್ಟಿ ಶೂನ್ಯವಾಗಿತ್ತು. ರಾಣಿಯ ಗೆಳತಿ ಅವನ ಜೊತೆಗೆ ನಡೆಯುತ್ತ ನಿಚ್ಚಣಿಕೆಯ ವರಗೆ ಬಂದು—" ಈವತ್ತು, ರಾತ್ರಿ ಬರುತ್ತೀರಾ? ನಿಮ್ಮ ಹಾದಿ ಕಾಯುತ್ತೇನೆ," ಎಂದಳು. ಶೂನ್ಯಮನಸ್ಕನಾಗಿಯೇ ರಾಣಿಗಾಗಿ ತಂದ ಹೂವಿನ ಜಡೆಗಳನ್ನು ಅವಳ ಕೈಯಲ್ಲಿಟ್ಟ. ಮಾತನಾಡಲಿಲ್ಲ: ಕಣ್ಣಿನಲ್ಲಿ ಮೂಡಿದವಳು ಅವಳಾಗಿಯೇ ಇರಲಿಲ್ಲ! ಯಾರೂ ಆಗಿರಲಿಲ್ಲ!

ನಿಚ್ಚಣಿಕೆಯ ಮೊಟ್ಟ ಮೊದಲ ಮೆಟ್ಟಿಲ ಮೇಲೆ ನಿಂತು ಕೆಳಗೆ ನೋಡುತ್ತಿರುವಾಗ ಜೊತೆಗೆ ಬಂದ ಹುಡುಗಿ, "ನನ್ನ ಹೆಸರು ವತ್ಸಲಾ," ಎಂದಳು: ಹೂವಿನ ಜಡೆಗಳನ್ನು ಅವಳು ತಪ್ಪಾಗಿ ತಿಳಿದಳೆ? ಸರಿಯಾಗಿ ತಿಳಿಯುವುದೆಂದರೇನೆಂಬುದರ ಅರ್ಥ ಮೊದಲು ಆಗುತ್ತಿದ್ದರಲ್ಲವೆ? ಕಣ್ಣುಗಳಲ್ಲಿ ಪರದೆಯಾಗುತ್ತಿದ್ದುದರ ಒಳಗಿನಿಂದ ಕಾಣುತ್ತಿದ್ದ ಮೂರು ಮಜಲು ಕೆಳಗಿನ ನೆಲ ಅಸ್ಪಷ್ಟವಾಗಿತ್ತು. ಆದರೆ ಅದರತ್ತ ಒಂದೊಂದೇ ಮೆಟ್ಟಿಲು ಇಳಿಯುತ್ತ ಕೆಳಗೆ ಸಾಗಿದ ನಾಗಪ್ಪನಿಗೆ ಜನ್ಮದಲ್ಲೇ ಮೊದಲು ಬಾರಿ ಎನ್ನುವಂತೆ ತನ್ನ ಹೆಜ್ಜೆಯ ಸದ್ದು ತನಗೇ ಸ್ಪಷ್ಟವಾಗಿ ಕೇಳಿಸುತ್ತಿತ್ತು! ಮನಸ್ಸಿನ ಆಳದಲ್ಲೆಲ್ಲೋ ಗಟ್ಟಿಯಾಗಹತ್ತಿದ ನಿಶ್ಚಯವೊಂದು ಮಾತನ್ನು ಹುಡುಕುತ್ತಿತ್ತು: "ನನ್ನ... ಮಟ್ಟಿಗೆ... ಇನ್ನೂ... ಕಂಡಿರದ... ಅಣ್ಣನನ್ನು... ಕಾಣೆಯಾದ... ತಂಗಿಯನ್ನು ಹುಡುಕಿ ತೆಗೆಯುವದೇ... ನನ್ನ... ಇನ್ನು... ಮುಂದಿನ... ಆಯುಷ್ಯದ... ಗುರಿಯಾಗಬೇಕು..." ನೆಲ ಇನ್ನೂ ಹತ್ತಿರವಾಗುತ್ತಿದ್ದ ಹಾಗೆ ಅದರ ಕೆಲವು ವಿವರಗಳು ಸ್ಪಷ್ಟವಾಗಹತ್ತಿದುವು: ಅದಾಗಲೇ ಬೆಚ್ಚಗಾಗಹತ್ತಿದ ಬಿಸಿಲಲ್ಲಿ ಉದ್ದನ್ನ ನೆರಳು ಚಾಚಿ ನಿಂತ ದೊಡ್ಡ ಆಲದ ಮರ. ಅದರಡಿಯಲ್ಲಿ ಬಿಳಿಯ ಧೋತರ, ಕಪ್ಪಕೋಟು, ಕೆಂಪು ರುಮಾಲು ಧರಿಸಿ ಕೂತ ಮುದುಕ ಇಲ್ಲಿ ಬರುವ ಮೊದಲು ನೋಡಿದವನೇ: ಹಸಿರು ಹಳದೀ ಬಣ್ಣಗಳ ಜೋಡಿ ಹಕ್ಕಿಗಳು ಕೂತ ಪಂಜರದ ಇದಿರು ಭವಿಷ್ಯ ಹೇಳುವ ಕಾಗದದ ಹಾಳೆಗಳನ್ನು ಹರಡಿ ಕೂತವನಿಗೆ ಈಗ ಇದ್ದಕ್ಕಿದ್ದ ಹಾಗೆ ಮಂತ್ರವಾದಿಯ ಕಳೆ ಬಂದಿತ್ತು. ಅವನನ್ನು ನೋಡನೋಡುತ್ತಿದ್ದ ಹಾಗೆ ವೋಮು ಮನಃಪಟಲವನ್ನು ವ್ಯಾಪಿಸಿ ನಿಂತ: ತಾನು ಈ ಮುಂದೆ ಹಿಡಿಯಬಹುದಾದ ಇನ್ನೊಂದೇ ದಾರಿಯ ಪ್ರತೀಕನೀತ! ಆಗೀಗ ಇದಿರಾಗಿ ಆಹ್ವಾನಿಸುತ್ತಾನೆ ಅನ್ನಿಸಿತು. ಅವನು ಸಂಕೇತಿಸುವ ದಾರಿಯನ್ನು ತುಳಿಯುವ ಧೈರ್ಯ ಮಾತ್ರ ಇನ್ನೂ ಬಂದಿಲ್ಲ. ಬಂದೇ ಬಂದೀತು ಒಂದು ದಿನ—'ಯಾರೋ' ಆಗಿ ಮೆರೆದವನು. 'ಯಾರೂ ಅಲ್ಲ'ವಾಗುವ ಧೈರ್ಯ ಬಂದಾಗ! ವನವಾಸ ಈಗಷ್ಟೇ ಮುಗಿದಿದೆ. ಅಜ್ಞಾತ ವಾಸವಿನ್ನೂ ತೊಡಗಲಿದೆ. ಆಗ ಬರುತ್ತೇನೆ, ವೋಮೂ ನಿನ್ನ ಕಡೆಗೆ ನಾನಾಗಿ ಸದ್ಯ, ಇನ್ನೂ ಸಿಕ್ಕಿರದ ಅಣ್ಣ -ತಂಗಿಯರನ್ನು ಹುಡುಕಿ ಹೊರಟಿದ್ದೇನೆ. ಇದೋ...

ನಿಚ್ಚಣಿಕೆಯ ಅಡಿಯಲ್ಲಿ ಅವರು ಆಗಿನಿಂದಲೂ ತನ್ನ ದಾರಿ ಕಾಯುತ್ತ ನಿಂತಿದ್ದಾರೆ ಎಂಬ ತವಕದಿಂದ ಎಂಬಂತೆ ಕೊನೆಕೊನೆಯ ಮೆಟ್ಟಿಲುಗಳನ್ನು ಓಡೋಡಿಯೇ ಇಳಿದು ನಾಗಪ್ಪ, ನೆಲ ಮುಟ್ಟಿದ.